# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ವನಪರ್ವ

ಸಂಪುಟ ೫

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 5**

*ಮುದ್ರಕರು:*
**ಭಾರತ ದರ್ಶನ ಮುದ್ರಣಾಲಯ**
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ|| ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ|| ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್, M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

**ಆಪಾದಮೌಲಿಪರ್ಯನ್ತಂ ಗುರೂಣಾಮಾಕೃತಿಂ ಸ್ಮರೇತ್ ।**
**ತೇನ ವಿಘ್ನಾಃ ಪ್ರಣಶ್ಯನ್ತಿ ಸಿಧ್ಯನ್ತಿ ಚ ಮನೋರಥಾಃ ॥**

ಭಗವತ್ಸ್ವರೂಪರಾದ, ದಯಾಮಯರಾದ ಪರಮಗುರುಗಳನ್ನು ಹೃತ್ಕಮಲದಲ್ಲಿ ಸ್ಮರಿಸಿ, ಪುಷ್ಪರೂಪವಾದ ಈ ಐದನೆಯ ಸಂಪುಟವನ್ನು ಅವರ ಅಡಿದಾವರೆಗಳಲ್ಲರ್ಪಿಸಿ, ಪ್ರಸಾದರೂಪವಾದ ಈ ಪುಷ್ಪವನ್ನು ನಮ್ಮ ಪ್ರಿಯವಾಚಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ.

ಪರಮಾತ್ಮನ ದಯೆಯಿಂದ 5ನೆಯ ಸಂಪುಟವು ಯಾವ ವಿಧವಾದ ಎಡರು-ತೊಡರುಗಳೂ ಇಲ್ಲದೆ ಹೊರಬಂದಿತೆಂದು ತಿಳಿಸಲು ಹರ್ಷಿಸುತ್ತೇವೆ.

ಮುಗಿದುದಕ್ಕೆ ಸಂತೋಷಪಡಬೇಕಾಗಿದೆಯೇ ಹೊರತು ಮುಗಿಯಬೇಕಾದುದನ್ನು ಸ್ಮರಿಸಿದರೆ ಭಯವೇ ಆಗುತ್ತದೆ. ಇನ್ನೂ ಇಪ್ಪತ್ತೈದು ಸಂಪುಟಗಳನ್ನು ಮುಗಿಸಬೇಕಾಗಿದೆ. ಮೊದಲನೆಯ ಸಂಪುಟದಿಂದ ಐದನೆಯ ಸಂಪುಟದ ವೇಳೆಗೆ ಬೆಲೆಗಳೆಲ್ಲವೂ ಸಾಮಾನ್ಯವಾಗಿ ಒಂದಕ್ಕೆ ಎರಡರಷ್ಟೇ ಆಗಿರುತ್ತದೆ. ಮೂವತ್ತನೆಯ ಸಂಪುಟದ ವೇಳೆಗೆ ಏನಾಗುವುದೆಂಬುದನ್ನು ಊಹಿಸುವ ಸಾಧ್ಯತೆಯೂ ಇಲ್ಲ. ಇವೆಲ್ಲವನ್ನೂ ಯೋಚಿಸುತ್ತಾ ಹೋದರೆ ಕೆಲಸಮಾಡುವ ಉತ್ಸಾಹವೇ ಕುಗ್ಗಿಹೋಗುತ್ತದೆ. ಆದುದರಿಂದ ಭಯಕೃದ್ಭಯನಾಶಕನಾದ ದಯಾಮಯನಾದ ಪರಮಾತ್ಮನನ್ನೇ ಸಂಪೂರ್ಣವಾಗಿ ಅವಲಂಬಿಸಿ ಮಾರ್ಜಾರಕಿಶೋರನ್ಯಾಯದಂತೆ ಈ ಮಹಾಕಾರ್ಯವನ್ನು ಮಾಡುತ್ತಾ ಹೋಗಬೇಕೆಂದು ನಿಶ್ಚಯಿಸಿದ್ದೇವೆ. ದಯಾಮಯನು ಈ ಮಹಾಕಾರ್ಯವನ್ನು ಅಕಿಂಚನರಾದ ನಮ್ಮಿಂದ ಆಗುಮಾಡಿಸಿ ತನ್ನ ಪಾದಾರವಿಂದಗಳಲ್ಲರ್ಪಿಸಿಕೊಳ್ಳುತ್ತಾನೆಂಬುದರಲ್ಲಿ ನಮಗೆ ಸಂಶಯವೇ ಇಲ್ಲ. ಮಹಾನುಭಾವನ ಅಘಟಿತಘಟನಾಸಾಮರ್ಥ್ಯಕ್ಕೆ ಇದೊಂದು ನಿದರ್ಶನವೇ ಆಗಿದೆ.

ನಾವು ಹಿಂದಿನ ಸಂಪುಟದಲ್ಲಿ ಪ್ರಕಟಿಸಿದ್ದಂತೆ ನಮ್ಮ ಹಿತಚಿಂತಕರಾದ ಶ್ರೀ ಕೆ. ಭೀಮೇಗೌಡರ ಮತ್ತು ಅವರ ಸ್ನೇಹಿತರಾದ ಭದ್ರಾವತಿ ಪೇಪರ್ ಮಿಲ್ಸ್‌ನ ಕಮರ್ಷಿಯಲ್ ಸೇಲ್ಸ್ ಮ್ಯಾನೇಜರ್ ಆಗಿರುವ ಶ್ರೀ ಪ್ರಸನ್ನ ಕುಮಾರ್ ಅವರ ಸಹಕಾರದಿಂದ ನಮಗೆ ಬೇಕಾದಷ್ಟು ಕಾಗದವನ್ನು

ಭದ್ರಾವತಿ ಪೇಪರ್ ಮಿಲ್ಸ್‌ನಿಂದಲೇ ನೇರವಾಗಿ ಪಡೆಯುತ್ತಿದ್ದೇವೆ. ಆದರೆ ಕಾರ್ಖಾನೆಯಲ್ಲಿಯೇ ಕಾಗದದ ಬೆಲೆಯು ಸುಮಾರು ಶೇ.30ರಷ್ಟು ಹೆಚ್ಚಿದೆ. ಈ ಕಾರಣದಿಂದಾಗಿ ನಾಲ್ಕನೆಯ ಸಂಪುಟಕ್ಕಿಂತ ಐದನೆಯ ಸಂಪುಟಕ್ಕೆ ಸುಮಾರು ಶೇ.30ರಷ್ಟು ವೆಚ್ಚವೂ ಅಧಿಕವಾಗಿದೆ. ಈ ಕಾರಣದಿಂದಾಗಿ ಈ ಸಂಪುಟದ ಬೆಲೆಯನ್ನೂ ಸ್ವಲ್ಪ ಹೆಚ್ಚಿಸುವುದು ಅನಿವಾರ್ಯವಾಗಿದೆ. ಎಲ್ಲ ಪದಾರ್ಥಗಳಿಗೂ ಹೆಚ್ಚಿನ ಬೆಲೆಯನ್ನು ಕೊಡುತ್ತಿರುವ ಪ್ರಿಯವಾಚಕರಿಗೆ ಈ ವಿಷಯವೂ ಮನವರಿಕೆಯಾಗದೇ ಇಲ್ಲ. ಬೆಲೆಯನ್ನು ಹೆಚ್ಚಿಸುವ ವಿಷಯ ದಲ್ಲಿ ನಮಗೆ ಹೆಚ್ಚು ಆತಂಕವಾಗುತ್ತಿದೆ. ಮನಸ್ಸಿಗೆ ಬಹಳ ಕಷ್ಟವಾಗಿದೆ. ನಮಗೆ ಪರಮಾತ್ಮನು ನಿಸ್ಪೃಹತೆಯಿಂದಲೂ ಮತ್ತು ಶ್ರದ್ಧೆಯಿಂದಲೂ ಕೆಲಸಮಾಡುವ ಸಂಪಾದಕರನ್ನು ಒದಗಿಸಿಕೊಟ್ಟಿದ್ದಾನೆ. ನಿಸ್ಪೃಹತೆಯಿಂದ ಪ್ರಚಾರ ಕಾರ್ಯಮಾಡುವ ನೂರಾರು ಮಂದಿಯನ್ನು ಒದಗಿಸಿಕೊಟ್ಟಿದ್ದಾನೆ. ಈ ಕಾರಣದಿಂದ ಅವರ ಪೂರ್ಣಪ್ರಯೋಜನವನ್ನೂ ನಮ್ಮ ವಾಚಕರಿಗೆ ಹಂಚಿಕೊಡಬೇಕೆಂಬುದು ನಮ್ಮ ಆಶಯವಾಗಿದೆ. ಆದರೂ ಕಾಗದದ ಬೆಲೆ, ಚಿತ್ರಗಳ ಅಚ್ಚುಗಳ ಬೆಲೆ, ಬೈಂಡಿಗೆ ಬೇಕಾದ ಪದಾರ್ಥಗಳ ಬೆಲೆ-ಎಲ್ಲವೂ ಶೇ.30 ರಿಂದ ಶೇ. 100 ರಷ್ಟು ಹೆಚ್ಚಿಹೋಗಿರುವುದರಿಂದ ನಮ್ಮ ಪುಸ್ತಕದ ಬೆಲೆಯನ್ನೂ ಸ್ವಲ್ಪಮಾತ್ರ ಹೆಚ್ಚಿಸಲು ನಿರ್ಧರಿಸಿದ್ದೇವೆ. ಸಾಧಾರಣ ಪ್ರತಿಯ ಬೆಲೆ ಹತ್ತು ರೂಪಾಯಿಗಳೂ, ಕ್ಯಾಲಿಕೋ ಪ್ರತಿಯ ಬೆಲೆ ಹನ್ನೆರಡು ರೂಪಾಯಿಗಳೂ ಆಗುತ್ತವೆ. ಸಹೃದಯರಾದ ವಾಚಕರು ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ.

ಸರ್ಕಾರದವರ ಮಂಜೂರಾತಿ (625 ಪ್ರತಿಗಳನ್ನು ಪುಕ್ಕಟೆಯಾಗಿ ಪಡೆದುಕೊಂಡು 5,000 ರೂ.ಗಳ ಸಹಾಯಧನ ನೀಡುವುದು) ಈ ಸಂಪು ಟಕ್ಕೆ ಮುಗಿಯುತ್ತದೆ. ಮುಂದಿನ ಇಪ್ಪತ್ತೈದು ಸಂಪುಟಗಳಿಗೂ ಮಂಜೂ ರಾತಿಯನ್ನು ನೀಡಬೇಕೆಂದೂ, ಕಡೆಯ ಪಕ್ಷ ಎರಡು ಸಾವಿರ ಪ್ರತಿಗಳನ್ನಾ ದರೂ ತೆಗೆದುಕೊಳ್ಳಬೇಕೆಂದೂ ಸರ್ಕಾರವನ್ನು ಪ್ರಾರ್ಥಿಸಿದ್ದೇವೆ. ಸಹೃದ ಯತೆಯಿಂದ ಪರಿಶೀಲಿಸುವುದಾಗಿ ಅಧಿಕಾರಿಗಳು ಆಶ್ವಾಸನೆ ನೀಡಿದ್ದಾರೆ. ಮಹಾಭಾರತವು ಸರ್ವತ್ರ ಪ್ರಚಾರವಾಗಬೇಕಾದರೆ ಇದೊಂದು ಉತ್ತಮ ಮಾರ್ಗ. ನಮ್ಮ ಕರ್ನಾಟಕದಲ್ಲಿ 3 ಸಾವಿರಕ್ಕಿಂತಲೂ ಹೆಚ್ಚು ಪ್ರೌಢಶಾಲೆ ಗಳಿವೆ. ಈ ಎಲ್ಲ ಶಾಲೆಗಳಿಗೂ ಮಹಾಭಾರತದ ಸಂಪುಟಗಳು ತಲುಪು

ವಂತಾಗಬೇಕು. ಈ ಮೂಲಕವಾಗಿ ನಮ್ಮ ಕರ್ನಾಟಕದ ನಾಲ್ಕು ಮೂಲೆಗಳಿಗೂ ಮಹಾಭಾರತವು ತಲುಪಿದಂತಾಗುವುದು. ಇದು ಸರ್ಕಾರದ ನೆರವಿನಿಂದ ಮಾತ್ರವೇ ಸಾಧ್ಯ. ಈ ಕಾರ್ಯವಾದರೂ ಪರಮಾತ್ಮನ ದಯೆಯಿಂದಲೇ ಆಗಬೇಕಾಗಿದೆ.

ಮಹಾಭಾರತದ ಪ್ರಕಟನೆಯು ಮಹಾಕಾರ್ಯವೆಂಬುದನ್ನೂ, ಅತ್ಯಾವಶ್ಯಕವೆಂಬುದನ್ನೂ ಮನಗಂಡು ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆಯವರು ಭಾರತ ದರ್ಶನ ಪ್ರಕಾಶನ ಸಂಸ್ಥೆಗೆ ಪೋಷಕರಾಗಲು ಒಪ್ಪಿ 1001 ರೂ.ಗಳನ್ನು ದಯಪಾಲಿಸಿದ್ದಾರೆ. ಇವರು ಮುಂದೆ ಮಹಾಪೋಷಕರೂ ಆಗುವರೆಂಬ ಆಶಯದಿಂದಿರುತ್ತೇವೆ. ಇವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳನ್ನು ಅರ್ಪಿಸುತ್ತೇವೆ.

ನಾಲ್ಕನೆಯ ಸಂಪುಟದ ಪ್ರಕಾಶನಸಮಾರಂಭವು ರಾಜಾಜಿನಗರದ ಕುಮಾರವ್ಯಾಸಮಂಟಪದಲ್ಲಿ ಬಹುವಿಜೃಂಭಣೆಯಿಂದ ನಡೆಯಿತು. ಹೃಷೀಕೇಶದ ಶ್ರೀ ಶ್ರೀ ಸ್ವಾಮೀ ಸಹಜಾನಂದಜೀ ಅವರ ಅಧ್ಯಕ್ಷತೆಯಲ್ಲಿ ಪಠ್ಯ ಪುಸ್ತಕಗಳ ಡೈರೆಕ್ಟರಾಗಿರುವ ಶ್ರೀ ಶ್ರೀರಂಗರಾಜುರವರು ಸಂಪುಟವನ್ನು ಪ್ರಕಾಶನಗೊಳಿಸಿದರು. ಭಾರತ ದರ್ಶನ ಪ್ರಕಾಶನದ ಅಧ್ಯಕ್ಷರಾದ ವೇ|| ಬ್ರಂ|| ಶ್ರೀ|| ವಿದ್ವಾನ್ ಎಚ್. ಎಸ್. ವರದದೇಶಿಕಾಚಾರ್ಯ, ಅವರು ಗ್ರಂಥವನ್ನು ಪರಿಚಯಮಾಡಿಕೊಟ್ಟರು. ವಿದ್ಯಾಮಂತ್ರಿಗಳಾದ ಶ್ರೀಮಲ್ಲಿಕಾರ್ಜುನಸ್ವಾಮಿ ಮತ್ತು ಇತರ ಅಭಿಮಾನಿಗಳಿಂದ ಶುಭಸಂದೇಶಗಳು ಬಂದಿದ್ದುವು. ಪಂಡಿತರ ವೇದಘೋಷದೊಡನೆ ಪ್ರಾರಂಭವಾದ ಶುಭಸಮಾರಂಭವು ಶಾಂತಿಪಾಠದೊಡನೆ ಮುಕ್ತಾಯವಾಯಿತು.

ರಾಮಾಯಣದ ಪ್ರಕಟಣೆಯನ್ನು ಮುಂದುವರಿಸಬೇಕೆಂದು ಅನೇಕ ಮಂದಿ ಒತ್ತಾಯಮಾಡುತ್ತಿದ್ದಾರೆ. ಪರಮಾತ್ಮನ ದಿವ್ಯಾನುಗ್ರಹದಿಂದ ಪ್ರಾರಂಭವಾಗಿರುವ ರಾಮಾಯಣಪ್ರಕಾಶನವೂ ಮುಂದುವರಿಯುವುದರಲ್ಲಿ ಸಂಶಯವಿಲ್ಲ. ಆದರೆ ಈಗಿರುವ ಮುದ್ರಣಯಂತ್ರದಲ್ಲಿ ಹೆಚ್ಚಿನ ಕಾರ್ಯ ಮಾಡಲು ಸಾಧ್ಯವಿಲ್ಲವಾಗಿದೆ. ಹೊಸ ಮುದ್ರಣಯಂತ್ರವನ್ನು ಕೊಳ್ಳುವ ಪ್ರಯತ್ನದಲ್ಲಿದ್ದೇವೆ. ಇದಕ್ಕೆ ನಮ್ಮ ಖಜಾಂಚಿಗಳಾದ ಶ್ರೀ ವಿ. ಸೂರ್ಯನಾರಾಯಣ್‌ರವರು ಬಹುವಾಗಿ ಪ್ರಯತ್ನಿಸುತ್ತಿದ್ದಾರೆ. ಸತ್ಪುರುಷರ ಸಹಕಾರದಿಂದಲೂ, ಪರಮಾತ್ಮನ ದಯೆಯಿಂದಲೂ ಇದು ಕಾರ್ಯಗತವಾಗಬೇಕಾಗಿದೆ.

ಭಾರತದ ಮತ್ತು ವಿಶ್ವದ ಅದ್ವಿತೀಯವಾದ ಇತಿಹಾಸವೆನಿಸಿದ ಮಹಾಭಾರತವು ಕರ್ನಾಟಕದ ಮೂಲೆ-ಮೂಲೆಗೂ ಹರಡಬೇಕೆಂಬುದು ನಮ್ಮ ಮತ್ತು ಮಾನ್ಯಸಂಪಾದಕರುಗಳ ಹೆಬ್ಬಯಕೆಯಾಗಿದೆ. ಲಕ್ಷೋಪಲಕ್ಷ ಕನ್ನಡಿಗರು ಇದನ್ನು ಓದಬೇಕು. ಇದರಲ್ಲಡಗಿರುವ ತತ್ತ್ವರಾಶಿಯನ್ನು ಮನನ ಮಾಡಿಕೊಂಡು ಸುಸಂಸ್ಕೃತರಾಗಬೇಕು. ಈ ಮಹಾನ್ ಇತಿಹಾಸವು ವಿದೇಶಭಾಷೆಗಳಲ್ಲಿ ಭಾಷಾಂತರವಾಗಿದೆಯೆಂಬುದಷ್ಟೇ ನಮ್ಮ ಹೆಮ್ಮೆಗೆ ಕಾರಣವಾಗಿರಬಾರದು. ನಾವೂ ಆಮೂಲಾಗ್ರವಾಗಿ ಇದನ್ನು ಓದಿ ಮನನ ಮಾಡಿಕೊಂಡು ಸಂಪೂರ್ಣಪ್ರಯೋಜನವನ್ನು ಪಡೆದುಕೊಳ್ಳಬೇಕು. ಈ ಮಹಾಗ್ರಂಥವು ಕೇವಲ ಮನೋರಂಜಕವಾಗಿರುವುದು ಮಾತ್ರವಲ್ಲ ; ನೀತಿ ಬೋಧಕವಾದುದು ; ತತ್ತ್ವಬೋಧಕವಾದುದು ಮತ್ತು ವ್ಯವಹಾರಬೋಧಕ ವಾದುದೂ ಆಗಿರುತ್ತದೆ. ಆದುದರಿಂದ ಇದರ ಪ್ರಚಾರದಲ್ಲಿ ನಮ್ಮ ವಾಚಕರೂ ಹೆಚ್ಚು-ಹೆಚ್ಚಾಗಿ ಸಹಕರಿಸಬೇಕು. ತಮ್ಮ ಬಂಧು-ಮಿತ್ರರ ಮನೆಗಳಲ್ಲಿಯೂ ಈ ಜ್ಞಾನಭಂಡಾರವಿರುವಂತೆ ಪ್ರಯತ್ನಿಸಬೇಕು.

ಈ ಐದನೆಯ ಸಂಪುಟಕ್ಕೆ ನಮ್ಮ ಹಿತಚಿಂತಕರೂ ಪ್ರೋತ್ಸಾಹಕರೂ ಆದ–ವಿದ್ಯಾಲಂಕಾರ, ಪ್ರೊಫೆಸರ್ ಶ್ರೀ ಎಸ್. ಕೆ. ರಾಮಚಂದ್ರರಾವ್ ಅವರು ಮುನ್ನುಡಿಯನ್ನು ಬರೆದುಕೊಟ್ಟು ಉಪಕರಿಸಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕವಂದನೆಗಳು.

ನಮ್ಮ ಹಿತಚಿಂತಕರ ಸಂಖ್ಯೆಯು ದಿನ-ದಿನಕ್ಕೂ ವೃದ್ಧಿಹೊಂದುತ್ತಿದೆ. ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ನೆರವುನೀಡುತ್ತಿದ್ದಾರೆ. ನೂರಾರು ಮಂದಿಯ ಆಕಾಂಕ್ಷೆಯ ಫಲವಾಗಿ ಮತ್ತು ನೆರವಿನ ಫಲವಾಗಿ ಈ ಕುಸುಮಗಳು ಕಾಲಕ್ಕೆ ಸರಿಯಾಗಿ ಕಣ್ಮನಗಳಿಗೆ ಆನಂದವನ್ನುಂಟುಮಾಡುತ್ತಾ ಹೊರಬರುತ್ತವೆಯೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಈ ಎಲ್ಲ ಹಿತಚಿಂತಕರಿಗೂ ಸಾಮೂಹಿಕವಾಗಿಯೂ, ಪ್ರತ್ಯೇಕವಾಗಿಯೂ ಕೃತಜ್ಞತೆಗಳನ್ನು ಸಮರ್ಪಿಸುತ್ತೇವೆ. ಎಲ್ಲರಿಗೂ ದಯಾಮಯನಾದ ಪರಮಾತ್ಮನು ಅನಂತಾನಂತಮಂಗಳವನ್ನು ದಯಪಾಲಿಸಲೆಂದು ತ್ರಿಸಂಧ್ಯೆಗಳಲ್ಲಿಯೂ ಪ್ರಾರ್ಥಿಸುತ್ತೇವೆ.

ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು. ಸಮಸ್ತ ಸನ್ಮಂಗಲಾನಿ ಭವನ್ತು.

–ಪ್ರಕಾಶಕರು.

# ಮುನ್ನುಡಿ

ನಮ್ಮ ನಾಡಿನ ಸಂಸ್ಕೃತಿಯ ಆಳವನ್ನು ಅರಿತುಕೊಳ್ಳಬೇಕೆನ್ನುವವರು, ಅದರ ಹಿರಿಮೆಯನ್ನು ಮನದಟ್ಟುಮಾಡಿಕೊಳ್ಳಬೇಕೆನ್ನುವವರು, ಹಿಂದಿನ ವರು ಬದುಕಿದ ಬಗೆಯನ್ನೂ ಆ ಬಗೆಗೆ ಬುನಾದಿಯಾಗಿದ್ದ ಕಾಣ್ಕೆಯನ್ನೂ ಪರಿಚಯಮಾಡಿಕೊಳ್ಳಬೇಕೆನ್ನುವವರು–ಮಹಾಭಾರತವನ್ನು ಓದಬೇಕು. 'ಇಲ್ಲಿರುವುದು ಬೇರೆಡೆಯಿದೆ ; ಇಲ್ಲಿ ಇಲ್ಲದುದು ಬೇರೆಲ್ಲಿಯೂ ಇರದು'– ಎನ್ನುವ ಮಾತು ಮಹಾಭಾರತಕ್ಕೆ ಅನ್ವಯಿಸುವ ಹಾಗೆ ನಮ್ಮ ಇತರ ಯಾವ ಗ್ರಂಥಕ್ಕೂ ಅನ್ವಯಿಸದು. ಈ ಮಾತು ಸಂಪೂರ್ಣವಾಗಿ ಯಥಾರ್ಥವೂ ಹೌದು. ಈ ಗ್ರಂಥದ ಮಹತ್ತ್ವವೂ–ಭಾರವತ್ತ್ವವೂ ಅಷ್ಟು; ವಿಸ್ತಾರವೂ ಸ್ವಾರಸ್ಯವೂ ಅಷ್ಟು. ಕಾವ್ಯಗುಣವೇ, ತಾತ್ತ್ವಿಕಗಾಂಭೀರ್ಯವೇ, ವ್ಯವಹಾರ ಕೌಶಲ್ಯವೇ, ಕಥನಸಾಮರ್ಥ್ಯವೇ–ನಾವು ಏನನ್ನು ನಿರೀಕ್ಷಿಸಿದರೂ ಅದು ಇಲ್ಲಿ ಸಮೃದ್ಧಿಯಾಗಿ ದೊರಕುತ್ತದೆ.

ಆದರೆ ಪೀಳಿಗೆಗಳು ಸಾಗಿದಂತೆಲ್ಲ ಬುನಾದಿಯು ದೂರವಾಗುತ್ತ ಹೋಗುವುದು ಸಹಜವೇ. ನಮ್ಮ ಸದ್ಯದ ತಲೆಮಾರಿನ ತರುಣರಿಗೆ ಮೂಲ ಮಹಾಭಾರತದ ಪರಿಚಯ ಸಾಕಷ್ಟು ಇರದೆಂದರೆ ಆಶ್ಚರ್ಯವೇನಿಲ್ಲ. ಬದುಕಿನ ಜಂಜಾಟ, ಮೌಲ್ಯಗಳ ಏರು-ಪೇರು, ಹೊರಗಿನವರ ಸಂಪರ್ಕ, ಯುಗಧರ್ಮದ ಬವಣೆ, ದೇಶಪರಿಸ್ಥಿತಿಯಲ್ಲಿ ಆತಂಕ–ಹೀಗೆ ಹತ್ತಾರು ಕಾರಣಗಳನ್ನು ಹೇಳಬಹುದು. ಜಾಗ್ರತಪ್ರಜ್ಞೆಯಲ್ಲಿ ಪರಿಚಯವಿರದಿದ್ದರೂ ಅಂತಃಸ್ತರಗಳಲ್ಲಿ ಅದರ ಪ್ರಭಾವವಿದ್ದೇ ಇರುತ್ತದೆ–ಎಂಬುದನ್ನು ನಾವು ಮರೆಯಬಾರದು. ಹಿರಿಯರಾಗಲೀ, ಕಿರಿಯರಾಗಲೀ, ಯಾವ ಭಾಷೆಯನ್ನೇ ಆಡಲಿ, ಯಾವ ಉಡುಗೆಯನ್ನೇ ಉಡಲಿ, ಯಾವ ತಿನಿಸನ್ನೇ ತಿನ್ನಲಿ, ಯಾವ ಉದ್ಯೋಗವನ್ನೇ ಹಿಡಿಯಲಿ–ಮಹಾಭಾರತದ ತಾತ್ಪರ್ಯ ಅಂತರ್ಗತವಾಗಿ ಇದ್ದೇ ಇರುತ್ತದೆ. ನಮ್ಮ ದೇಶದವರಾಗಿದ್ದರೆ ಸಾಕು. ಪ್ರಯತ್ನಪೂರ್ವಕ

ವಾಗಿ ಮಹಾಭಾರತವನ್ನು ಓದುವವರೆಲ್ಲರೂ ಯಾವುದೋ ಒಳಗಿನ ತಿಳಿವಳಿಕೆಯನ್ನೇ ತಿವಿದೆಬ್ಬಿಸಿದಂತೆ ಅನುಭವಿಸುತ್ತಾರೆ ; ಇದು ತೀರ ಹೊಸ ವಿಷಯ ಎಂದೆನಿಸುವುದಿಲ್ಲ. ಮಹಾಭಾರತದ ಜನಪ್ರಿಯತೆಯ ರಹಸ್ಯ ಇದು.

ಜಾಗ್ರತಸ್ತರದಲ್ಲಿಯೂ ಪರಿಚಯವಿದ್ದರೆ ಅದರ ಪ್ರಭಾವ ಮತ್ತಷ್ಟು ಸ್ಪಷ್ಟವಾಗಿ, ನಿರ್ದಿಷ್ಟವಾಗಿ, ನಿರ್ದುಷ್ಟವಾಗಿ ಒದಗಬಹುದಲ್ಲವೇ? ಲೋಕ ವ್ಯವಹಾರಕ್ಕೆ, ಶೀಲಸಂಪಾದನೆಗೆ, ಪುರುಷಾರ್ಥಸಾಧನೆಗೆ ನೆರವಾಗುವುದೇ ಮಹಾಭಾರತದ ಉದ್ದೇಶ, ಸಾರ್ಥಕ್ಯ. ಇದರ ಮಾರ್ಗದರ್ಶನವನ್ನು ಪಡೆದುಕೊಂಡರೆ ಬದುಕು ಹಸನಾದೀತು ; ಲೋಕದಿಂದ ನಾವೂ–ನಮ್ಮಿಂದ ಲೋಕವೂ ಉದ್ವೇಗಗೊಳ್ಳದೇ ಇರುವುದು ಸಾಧ್ಯವಾದೀತು. ಕೈಕೊಂಡ ಕೆಲಸದಲ್ಲಿ ಸದುತ್ಸಾಹವೂ, ಸಮಾಧಾನವೂ ಒದಗಿಯಾವು. ಆದುದರಿಂದ ಪ್ರಭಾವವನ್ನು ಬರಿದೇ ಸುಪ್ತವಾಗಿರಿಸದಂತೆ, ಕಾಲ-ಕಾಲಕ್ಕೆ ಪರಿಚಯವನ್ನು ಮೇಲರಿವಿನ ನೆಲೆಗೂ ತರಬೇಕಾದ ಅಗತ್ಯವಿದೆ.

ಕಾಲ-ಕಾಲಕ್ಕೆ ಮಹಾಭಾರತದಂಥ ಪ್ರಭಾವಶಾಲಿಗ್ರಂಥಗಳು ಆಯಾ ಯುಗಧರ್ಮ–ದೇಶಧರ್ಮಗಳನ್ನನುಸರಿಸಿ ಜನತೆಯ ಕೈಸೇರಬೇಕು. ರಾಷ್ಟ್ರ ನಿರ್ಮಾಣಕಾರ್ಯದಲ್ಲಿ ವಿಶಿಷ್ಟವಾದ ಪ್ರಕಾರ ಇದು. ಇದನ್ನು ಆಡಳಿತ ವಾಗಲೀ, ಜನತೆಯಾಗಲೀ ಕಡೆಗಾಣಿಸುವಂತಿಲ್ಲ. ಜನರ ಹೃದಯಸಂಸ್ಕಾರ ವಾಗದೇ, ಮನಃಪರಿಪಾಕವಿಲ್ಲದೇ ದೇಶದ ಅಭ್ಯುದಯ ಹಗಲುಗನಸಷ್ಟೆ. ನೀತಿಯ ನೆಲೆಯಿಲ್ಲದೆ ಯಾವ ಆರ್ಥಿಕಯೋಜನೆಯೂ ಗುರಿಮುಟ್ಟು ವುದಿಲ್ಲ. ಆಧ್ಯಾತ್ಮಿಕ ಹಂದರವಿಲ್ಲದೆ ಯಾವ ಸಾಮಾಜಿಕಕಾರ್ಯಕ್ರಮವೂ ಕೈಗೂಡುವುದಿಲ್ಲ. ಭೌತಿಕವಾಗಿ ಸಮೃದ್ಧವಾದ ಜನಾಂಗವಾದರೂ ಪರಮಾರ್ಥಪ್ರಸಕ್ತಿಯಿಲ್ಲದಿದ್ದರೆ ಸಮಾಧಾನವನ್ನು ಪಡೆಯಲಾರದು ; ಸಮಾಧಾನವಿಲ್ಲದೇ ಸುಖವೆಲ್ಲಿ? ಜನರನ್ನು ಆಂತರಿಕವಾಗಿ ಹುರಿದುಂಬಿಸುವ, ಅವರ ಚೇತನಗಳನ್ನು ಎತ್ತಿನಿಲ್ಲಿಸುವ ಕೆಲಸ ಎಲ್ಲ ಕಾಲದಲ್ಲಿಯೂ, ಎಲ್ಲ ದೇಶಗಳಲ್ಲಿಯೂ ಮುಖ್ಯವಾದುದೇ. ಆದರೆ ಕೆಲವೆಡೆ, ಕೆಲವೊಮ್ಮೆ ಅಗತ್ಯದ ಕಾತರ ಹೆಚ್ಚುತ್ತದೆ.

ನಮ್ಮ ದೇಶದಲ್ಲಿ, ನಮ್ಮ ಕಾಲದಲ್ಲಿ ಈ ಅಗತ್ಯದ ಕಾತರ ಅಧಿಕ ವಾಗಿಯೇ ಇದೆಯೆನಿಸುತ್ತದೆ. ನೈತಿಕಪುನರುತ್ಥಾನ, ಆಧ್ಯಾತ್ಮಿಕಜೀರ್ಣೋ

ದ್ಧಾರ–ಈಗ ಆಗಬೇಕಾಗಿದೆ. ದೇಶ ಉಳಿಯುವ ಸಲುವಾಗಿ, ನಾವು ನೆಮ್ಮದಿಯಿಂದಿರುವ ಸಲುವಾಗಿ ಇಂಥದೊಂದು ಅಗತ್ಯವನ್ನು ತುಂಬಿಸಲು ಪ್ರಸ್ತುತ ಪ್ರಯತ್ನ ನೆರವಾಗುತ್ತದೆ.

ಮಹಾಭಾರತವನ್ನು ತಿಳಿಗನ್ನಡದಲ್ಲಿ ಮೂಲಭಾವಕ್ಕಾಗಲೀ, ಭಾಷೆಗಾಗಲೀ, ವಿಸ್ತಾರಕ್ಕಾಗಲೀ, ಸ್ವಾರಸ್ಯಕ್ಕಾಗಲೀ, ಉದ್ದೇಶಕ್ಕಾಗಲೀ ಸಂವಿಧಾನಕ್ಕಾಗಲೀ–ಕುಂದುಬರದಂತೆ ಮೂವತ್ತು ಸಂಪುಟಗಳಲ್ಲಿ ಇಳಿಸುವ ಭಗೀರಥಪ್ರಯತ್ನವನ್ನು ಶ್ರೀ ಕೆ. ಸುಬ್ರಹ್ಮಣ್ಯ ಕೌಶಿಕರೂ ಅವರ ಸಹೃದಯ ಬಂಧುಗಳೂ ಕೈಗೊಂಡು 1957ರಿಂದಲೂ, ಇದನ್ನೇ ತಪಸ್ಸಿನಂತೆ ಹಗಲಿರುಳೂ, ಮೈಯಿಂದಲೂ, ಮನಸ್ಸಿನಿಂದಲೂ, ಆಶೆಯಿಂದಲೂ, ಉತ್ಸಾಹದಿಂದಲೂ ಸಾಧಿಸಿಕೊಂಡು ಬಂದಿದ್ದಾರೆ. 'ಶ್ರೇಯಾಂಸಿ ಬಹು ವಿಘ್ನಾನಿ' ; ಇವರಿಗೆ ಎಡರು-ತೊಡರುಗಳೂ, ಅಡ್ಡಿ-ಆತಂಕಗಳೂ ಬರದೇ ಹೋಗಿದ್ದರೆ ಸುಭಾಷಿತ ದಿಟವಾಗುವುದು ಹೇಗೆ? ಅಡ್ಡಿಯೂ ಇರಬೇಕು; ಕಡೆಯಲ್ಲಿ ಗೆಲುವೂ ಬರಬೇಕು–ಎನ್ನುವುದು ನಮ್ಮವರ ದೃಷ್ಟಿ. ಸಂಕಲ್ಪ ಒಳ್ಳೆಯದಾದರೆ, ಉತ್ಸಾಹ ದೃಢವಾದರೆ, ಸ್ವಾರ್ಥಕಾಮನೆ ಇಲ್ಲವಾದರೆ–ಗೆಲುವು ಕಟ್ಟಿಟ್ಟದ್ದೇ. ಇದು 'ಭಾರತ ದರ್ಶನ ಪ್ರಕಾಶನ'ದ ಹಿರಿಯರ ಅನುಭವದಲ್ಲಿಯೂ ಬಂದಿದೆ.

ಹದಿನೈದು ವರ್ಷ ಹೆಣಗಾಡಿದ ಮೇಲೆ 1972ರಲ್ಲಿ, ಮಹಾಭಾರತದ ಮೊದಲಭಾಗ ಬೆಳಕು ಕಂಡಿತು. ಕನ್ನಡಿಗರ ಕೈಸೇರಿತು. ಗ್ರಂಥವೇನೋ ಹೊರಬಂದೊಡನೆ ರಸಿಕರ ಮನಸ್ಸನ್ನು ಸೂರೆಗೊಂಡಿತು ; ಪಂಡಿತರೂ ತಲೆದೂಗಿದರು ; ನಾಡಹಿರಿಯರು ಮೆಚ್ಚಿಕೊಂಡರು ; ವಿವೇಕಿಗಳು ಸಂತೋಷಪಟ್ಟರು. ಆದರೆ ಈ ಸಮಾಧಾನದ ಹಿನ್ನೆಲೆಯಲ್ಲಿ ಶ್ರೀ ಕೌಶಿಕರೂ ಅವರ ಸಂಗಡಿಗರೂ ಪಟ್ಟ ಪಾಡು ಅಷ್ಟಿಷ್ಟಲ್ಲ. ಆಗ ಅವರು ತೋರಿಸಬೇಕಾಗಿ ಬಂದ ಸಂಯಮ-ಸಾಹಸಗಳು ಸಾಮಾನ್ಯವಾದುವೇನಲ್ಲ. ಆದರೆ ಕವಿಯು ಹೇಳುವಂತೆ–'ಕ್ಲೇಶಃ ಫಲೇನ ಹಿ ಪುನರ್ನವತಾಂ ವಿಧತ್ತೇ'. ಆಶ್ಚರ್ಯದ ಸಂತೋಷದ ಸಂಗತಿಯೆಂದರೆ ಇವರ ಸಾಹಸವನ್ನೂ ಉದ್ಯಮವನ್ನೂ ಮೆಚ್ಚಿಕೊಂಡು ಸರಕಾರವೂ ನೆರವಿಗೆ ಬಂದಿತು. ಐದು ಭಾಗಗಳಿಗೆಂದು ಇಪ್ಪತ್ತೈದುಸಾವಿರ ರೂಪಾಯಿಗಳನ್ನು ಕೊಡಲೊಪ್ಪಿದುದು ಪ್ರಕಾ

ಶಕರಿಗೆಷ್ಟೋ ಭಾರ ಹಗುರಾಯಿತು. ಸರಕಾರದ ಸಾಮರ್ಥ್ಯಕ್ಕಾಗಲೀ, ಕೆಲಸದ ಅಗತ್ಯಕ್ಕಾಗಲೀ ಇಷ್ಟೇ ಹಣ ತಕ್ಕುದೆಂದಲ್ಲ; ಆದರೆ ಸರ್ಕಾರ ಇಷ್ಟು ಮಾಡಿದುದೂ ದೊಡ್ಡ ಉಪಕಾರವಾಯಿತು.

ಯೋಜನೆಯಂತೆ, ಈವರೆಗೆ ನಾಲ್ಕು ಭಾಗಗಳು ಜನರ ಕೈಸೇರಿದ್ದು ಈಗ ಐದನೆಯದು ಹೊರಬರುತ್ತಿದೆ. ಈಗ ಪ್ರಕಟವಾಗಿರುವ ಭಾಗಗಳ ಗುಣಾಂಶಗಳನ್ನು ಜನರು ಈಗಾಗಲೇ ಗಮನಿಸಿದ್ದಾರೆ. ವನಪರ್ವದ ನಲೋಪಾಖ್ಯಾನದಲ್ಲಿ ನಲ ಕಣ್ಮರೆಯಾದ ಘಟ್ಟದವರೆಗೆ ನಿಂತಿದ್ದ ಕಥೆ ಈ ಐದನೆಯ ಭಾಗದಲ್ಲಿ ಮುಂದುವರಿದು ತೀರ್ಥಯಾತ್ರಾಪರ್ವದಲ್ಲಿ ನಿಂತಿದೆ. ಮೊದಲ ನಾಲ್ಕು ಭಾಗಗಳಲ್ಲಿ ಅನುಸರಿಸಿದ ಸಂವಿಧಾನವನ್ನೇ ಇಲ್ಲಿಯೂ ಅನುಸರಿಸಿದ್ದಾರೆ. ಕಥೆಯ ಓಟಕ್ಕೆ ತಡೆಯಾಗದಂತೆ, ಸ್ವಾರಸ್ಯವಾದ ಪ್ರಸಂಗಗಳಲ್ಲಿ ಮನಮುಟ್ಟುವ ಮಾತುಗಳನ್ನು ಮೂಲದಿಂದ ಉದ್ಧರಿಸಿ, ಅಗತ್ಯ ತೋರಿದಾಗ ವಿವರಣೆಗಳನ್ನೂ ಒದಗಿಸಿ–ಆದರೆ ಮೂಲದ ಜಾಡನ್ನು ಬಿಡದೆ–ತಿಳಿಯಾದ ಕನ್ನಡದಲ್ಲಿ ಮೂಡಿಸಿರುವ ಈ ಸಂವಿಧಾನ ಸಾರ್ಥಕವಾಗಿದೆಯೆಂದು, ಉಪಕಾರವಾಗಿದೆಯೆಂದು, ಯಶಸ್ವಿಯಾಗಿದೆಯೆಂದು ಓದುವವರಿಗೆಲ್ಲ ಮನವರಿಕೆಯಾಗದೆ ಇರದು. ಕಥೆಯನ್ನು ಬಯಸುವವರಿಗೆ ಕಥೆಯಿದೆ ; ವರ್ಣನೆಯನ್ನು ಬಯಸುವವರಿಗೆ ವರ್ಣನೆಯಿದೆ ; ನೀತಿಯನ್ನು ಕಾಣಬಯಸುವವರಿಗೆ ನೀತಿಯಿದೆ ; ಅಧ್ಯಾತ್ಮವಿವರಗಳಲ್ಲಿ ಕಾತುರರಾದವರಿಗೆ ಅವೂ ಇವೆ.

ತೀರ್ಥಯಾತ್ರಾಪರ್ವ ಸ್ವಾರಸ್ಯವಾದ ಭಾಗ. ನಮ್ಮ ದೇಶದ ಪುಣ್ಯಕ್ಷೇತ್ರಗಳ, ನದೀ-ತಟಾಕಗಳ, ವಾಪೀ-ಕೂಪಗಳ ಐತಿಹ್ಯ, ಹಿರಿಮೆ, ಕಥೆಗಳ ಪರಿಚಯವನ್ನು ಒದಗಿಸುವ ಭಾಗ ಇದು. ಪ್ರಾಸಂಗಿಕವಾಗಿ ಬರುವ ಯಾತ್ರಾಕ್ರಮ, ಅಗಸ್ತ್ಯಚರಿತ್ರೆ, ದಧೀಚವೃತ್ತಾಂತ, ಪರಶುರಾಮಪ್ರಸಂಗ, ನಹುಷ-ಮಾಂಧಾತೃ-ಜಂತು-ಉಶೀನರ (ಶಿಬಿ)-ಅಷ್ಟಾವಕ್ರ ಇವರ ಉಪಾಖ್ಯಾನಗಳು ಮೊದಲಾದುವು ಈ ಭಾಗದ ಸ್ವಾರಸ್ಯವನ್ನು ಹೆಚ್ಚಿಸಿವೆ. ನಮ್ಮ ದೇಶದಲ್ಲಿ ಸ್ಥಳಪುರಾಣಗಳ ಸಂಪ್ರದಾಯ ತುಂಬ ಹುಲುಸಾಗಿ ಬೆಳೆದು ನಿಂತಿದೆಯಷ್ಟೆ ; ಇದರ ಉಗಮವನ್ನು ಇಲ್ಲಿ ಕಾಣಬಹುದು. ದೇಶದ ಇತಿಹಾಸವನ್ನೂ ಜನರ ಮನೋಧರ್ಮವನ್ನೂ ಅಭ್ಯಾಸಮಾಡುವವರಿಗೆ ಇಲ್ಲಿ ದೊರೆಯುವ ಸಾಮಗ್ರಿ ಅಪೂರ್ವವಾದುದು.

'ಭಾರತ ದರ್ಶನ ಪ್ರಕಾಶನ'ದ ಇತಿಹಾಸದಲ್ಲಿ ಇದೊಂದು ಮೈಲಿಗಲ್ಲು. ನಿರೀಕ್ಷಿಸಿರುವ ಮೂವತ್ತು ಸಂಪುಟಗಳಲ್ಲಿ ಐದು ಸಂಪುಟಗಳು ನಮ್ಮ ಕೈಸೇರಿರುವುದೂ ಒಂದು ಪರ್ವಸಂದರ್ಭವೇ. ಇನ್ನೂ ಇಪ್ಪತ್ತೈದು ಸಂಪುಟಗಳೂ ಸಾಧ್ಯವಾದಷ್ಟು ಬೇಗನೆ ಬೆಳಕು ಕಾಣಬೇಕೆಂಬ ಹಿರಿಯಾಸೆ ಸಂಪಾದಕರಿಗಿರುವಂತೆ ಓದುಗರಿಗೂ ಗ್ರಾಹಕರಿಗೂ ರಸಿಕರಿಗೂ ಇದೆ. ಇದಕ್ಕೆ ವ್ಯವಸ್ಥಾಪಕ-ಸಂಪಾದಕರ ಸಾಹಸದೊಂದಿಗೆ, ಸಂಪಾದಕಮಂಡಲಿಯ ಶ್ರಮದೊಂದಿಗೆ ನಮ್ಮೆಲ್ಲರ ಔದಾರ್ಯ-ಉತ್ಸಾಹಗಳೂ ಸೇರಬೇಕು; ಸರಕಾರದ ಉದಾರ ನೆರವೂ ಇರಬೇಕು. ನಾಲ್ಕು ಕಾಲ ನಿಲ್ಲುವಂಥ, ನೂರು ಮಂದಿಯನ್ನು ಮೇಲಕ್ಕೆತ್ತುವಂಥ ಈ ಕೆಲಸದಲ್ಲಿ ಎಲ್ಲರ ಪಾಲೂ ಇರಬೇಕು ; ಇದು ನಮ್ಮೆಲ್ಲರ ಕೆಲಸವಾಗಬೇಕು. ಕನ್ನಡಕುಲಕೋಟಿಗೆ ಸಲ್ಲುತ್ತಿರುವ ಈ ಕೊಡುಗೆ ಇನ್ನಷ್ಟು ಸಂಭ್ರಮದಿಂದ, ಇನ್ನಷ್ಟು ನಿರಾತಂಕವಾಗಿ, ಇನ್ನಷ್ಟು ಶೀಘ್ರವಾಗಿ ಮೈದುಂಬಿಬರಲೆಂದೂ, ಸತ್ಸಂಕಲ್ಪವನ್ನೂ ಸತ್ಸಾಹಸವನ್ನೂ ಅಳವಡಿಸಿಕೊಂಡಿರುವ ಶ್ರೀ ಕೌಶಿಕರ ಮತ್ತು ಅವರ ಸಂಗಡಿಗರ ಸಾರ್ಥಕ ಶ್ರಮ ಎಲ್ಲರ ನೆರವಿನಿಂದ ಸುಲಭವಾಗಲೆಂದೂ ಸಂತೋಷಕರವಾಗಲೆಂದೂ ಮನಸಾರೆ ಹಾರೈಸುತ್ತೇನೆ.

308, ಮೊದಲ ಬ್ಲಾಕ್
ಜಯನಗರ, ಬೆಂಗಳೂರು-11 ಎಸ್. ಕೆ. ರಾಮಚಂದ್ರರಾವ್
ಆನಂದ ಸಂ॥ ಚೈತ್ರಶುದ್ಧ ನವಮಿ

---

ಆರನೆಯ ಮುದ್ರಣದ ಪ್ರಸ್ತಾವನೆ

ಮಹಾಭಾರತದ 5ನೇ ಸಂಪುಟದ 6ನೇ ಮುದ್ರಣವನ್ನು ಮಾಡುತ್ತಿದ್ದೇವೆ. ಮಾರಾಟವು ಸ್ವಲ್ಪ ನಿಧಾನವಾದರೂ ಪರಮಾತ್ಮನ ದಯೆಯಿಂದ ಯಾವ ಕೊಂಡಿಯೂ ಕಳಚಿಕೊಂಡಿಲ್ಲ. ಎಲ್ಲಾ 58 ಸಂಪುಟಗಳು ಸಿಕ್ಕುತ್ತವೆ. ಕಾಲಾನುಕಾಲಕ್ಕೆ ಸಂಪುಟಗಳು ಮುಗಿದು ಹೋದರೂ ಪುನರ್ಮುದ್ರಣ ಮಾಡುವ ಸಾಮರ್ಥ್ಯವನ್ನು ಪರಮಾತ್ಮನು ಒದಗಿಸಿಕೊಟ್ಟಿದ್ದಾನೆ. ಆದರೆ ಮಹಾಗ್ರಂಥಗಳ ಪುನರ್ಮುದ್ರಣವಾಗಿ ಎಲ್ಲಾ ಕಾಲಗಳಲ್ಲಿಯೂ ಎಲ್ಲಾ ಸಂಪುಟಗಳು ಸಿಕ್ಕುತ್ತವೆಯೆಂದು ಗ್ರಾಹಕರು ಭರವಸೆಯನ್ನು ಇಟ್ಟುಕೊಳ್ಳಕೂಡದು. ಸಂಪುಟಗಳು ಸಿಕ್ಕುವಾಗ ಸಂಗ್ರಹಿಸಿ ಇಟ್ಟುಕೊಳ್ಳುವುದು ಶ್ರೇಯಸ್ಕರ.

ಶಾಂತಿಃಪುಷ್ಟಿಸ್ತುಷ್ಟಿಶ್ಚಾಸ್ತು । ಸಮಸ್ತಸನ್ಮಙ್ಗಲಾನಿ ಭವನ್ತು —ಪ್ರಕಾಶಕರು.

# ಮಹಾಭಾರತ-ವನಪರ್ವ: ಐದನೆಯ ಸಂಪುಟದ
# ವಿಷಯಾನುಕ್ರಮಣಿಕೆ

## ಎರಡನೆಯ ಮುದ್ರಣದ ಪ್ರಸ್ತಾವನೆ

ಆರನೆಯ ಸಂಪುಟದ ಪುನರ್ಮುದ್ರಣವು ಮುಗಿಯುವ ವೇಳೆಗೆ ಐದನೆಯ ಸಂಪುಟದ ಪ್ರತಿಗಳೂ ಮುಗಿದಿತ್ತಾದ್ದರಿಂದ, ಹನ್ನೆರಡನೆಯ ಸಂಪುಟವನ್ನು ಮುದ್ರಣಕ್ಕೆ ತೆಗೆದುಕೊಳ್ಳುವ ಮೊದಲು ನಮ್ಮ ಹಿತೈಷಿಗಳ ಸಲಹೆಯಂತೆ ಐದನೆಯ ಸಂಪುಟದ ಪುನರ್ಮುದ್ರಣವನ್ನೇ ತೆಗೆದುಕೊಳ್ಳಲಾಯಿತು. ಸಂಪಾದಕ ಮಂಡಲಿಯವರ ಅವಿರತಶ್ರಮದಿಂದಾಗಿ ಬಹುಬೇಗ ಐದನೆಯ ಸಂಪುಟದ ಪುನರ್ಮುದ್ರಣಕಾರ್ಯವು ಮುಗಿದಿದೆಯೆಂದು ತಿಳಿಸಲು ಹರ್ಷಿಸುತ್ತೇವೆ. ಪ್ರಸಕ್ತ ಎಲ್ಲ ಸಂಪುಟಗಳೂ ಸಾಕಷ್ಟು ಇರುವುದರಿಂದ ನಮ್ಮ ಈ ವರ್ಷದ ಕಾರ್ಯಕ್ರಮದಂತೆ 12, 13 ಮತ್ತು 14ನೆಯ ಸಂಪುಟಗಳನ್ನು ಹೊರತರಲು ಯಾವ ತೊಂದರೆಯೂ ಆಗಲಾರದೆಂದು ಭಾವಿಸಿದ್ದೇವೆ. ಬೆನ್ನಹಿಂದೆ ನಿಂತು ಎಲ್ಲ ಕಾರ್ಯಗಳನ್ನೂ ಸುಗಮವಾಗಿ ಆಗುಮಾಡಿಸುತ್ತಿರುವ ದಯಾಮಯನಾದ, ಸಚ್ಚಿದಾನಂದಸ್ವರೂಪನಾದ, ಸದ್ಗುರುರೂಪಿಯಾದ ಚಿನ್ಮಯರೂಪನಾದ ಪರಮಾತ್ಮನ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕವಾಗಿ ನಮಿಸಿ ವಿರಮಿಸುವೆವು.

ಪಿಂಗಳ ಚೈತ್ರ ಶುಕ್ಲ ತ್ರಯೋದಶೀ
ಶನಿವಾರ 2-4-1977 —ಪ್ರಕಾಶಕರು.

## ಮೂರನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಐದನೆಯ ಸಂಪುಟದ ಮೂರನೆಯ ಮುದ್ರಣದ ಕಾರ್ಯವು ಸುಗಮವಾಗಿ ಮುಗಿದಿದೆ. ಆದರೆ ಇದಕ್ಕೆ ತಗುಲಿರುವ ಖರ್ಚು-ವೆಚ್ಚಗಳನ್ನು ನೆನೆಸಿಕೊಂಡಾಗ ಮನಸ್ಸಿಗೆ ಭಯವೇ ಆಗುತ್ತದೆ. ಹಿಂದೆ 1977ರಲ್ಲಿ ಈ ಸಂಪುಟದ ಎರಡನೆಯ ಮುದ್ರಣವನ್ನು ಮಾಡಿದಾಗ ಕಾಗದಕ್ಕೆ ಹನ್ನೆರಡು ಸಾವಿರ ರೂ.ಗಳನ್ನು ಕೊಟ್ಟಿದ್ದೆವು. ಇಂದು ಅದೇ ಕಾಗದಕ್ಕೆ ಇಪ್ಪತ್ತೈದು ಸಾವಿರ ರೂ.ಗಳನ್ನು ಕೊಡಬೇಕಾಯಿತು. ಇದರಂತೆಯೇ ಉಳಿದ ಬೈಂಡಿಂಗ್ ವಗೈರೆ ವಸ್ತುಗಳಿಗೂ ಬೆಲೆ ಅಧಿಕವಾಗಿದೆ. ಸಂಪುಟದ ಒಂದೊಂದು ಪ್ರತಿಗೂ ಹನ್ನೆರಡು ರೂ.ಗಳಷ್ಟು ವೆಚ್ಚವೇ ಬೀಳುತ್ತದೆ. ಏನು ಮಾಡಲೂ ತೋಚುತ್ತಿಲ್ಲ. ಹಾದಿ ತೋರುವಂತೆ ಪರಮಾತ್ಮ ನನ್ನು ಪ್ರಾರ್ಥಿಸುತ್ತಿದ್ದೇವೆ. ನಮ್ಮ ಗ್ರಾಹಕರೂ ಅನನ್ಯಭಕ್ತಿಯಿಂದ ಮಹಾ ಭಾರತದ ಪ್ರಕಟಣೆಗೆ ಯಾವ ವಿಘ್ನವೂ ಬರದಿರಲೆಂದು ಪ್ರಾರ್ಥಿಸಬೇಕಾಗಿದೆ. ರಿಯಾಯಿತಿ ಕಾಗದಕ್ಕಾಗಿ ಸತತವಾಗಿ ಪ್ರಯತ್ನಿಸುತ್ತಿದ್ದೇವೆ. ದಯಾಮಯ ನಾದ ಪರಮಾತ್ಮನ ದಯೆಯಿಂದ ಸಿಕ್ಕಬೇಕಾಗಿದೆ. ಪ್ರಸಕ್ತ ಸಂದರ್ಭದಲ್ಲಿ ಇನ್ನೂ ಒಂಬತ್ತು ಸಂಪುಟಗಳನ್ನು ಪುನರ್ಮುದ್ರಿಸಬೇಕಾಗಿದೆ. ಮುದ್ರಣಮಾಡಿಕೊಡುತ್ತೇವೆ. ನಮಗೆ ಎಷ್ಟೇ ತೊಂದರೆಗಳು ಬಂದರೂ ಗ್ರಾಹಕರು ನಿರಾಶರಾಗುವ ಕಾರಣವಿಲ್ಲ. ಹೆಚ್ಚು ಗ್ರಾಹಕರನ್ನು ಮಾಡಿಕೊಟ್ಟು ಒತ್ತಾಸೆ ನೀಡಬೇಕಾಗಿ ವಿನಂತಿಸುತ್ತೇವೆ.

ಸಂಪಾದಕಮಂಡಲಿಯ ವಿದ್ವಾಂಸರು ಶ್ರಮವಹಿಸಿ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. 28ನೆಯ ಸಂಪುಟದ ಮುದ್ರಣವನ್ನು ತೆಗೆದುಕೊಳ್ಳಲಾಗಿದೆ. 1984ನೆಯ ಜನವರಿಯಲ್ಲಿ ಹೊರಬೀಳುವ ನಿರೀಕ್ಷೆಯಿದೆ.

1-11-83 —ಪ್ರಕಾಶಕರು.

## ನಾಲ್ಕನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಐದನೆಯ ಸಂಪುಟದ ನಾಲ್ಕನೆಯ ಮುದ್ರಣವನ್ನು ಮುಗಿಸಿರುತ್ತೇವೆ. ಇದರಿಂದ ಪುನರ್ಮುದ್ರಣದ ಸಮಸ್ಯೆ ಪರಿಹಾರವಾಯಿತೆಂದೇನೂ ಅಲ್ಲ. ಈಗ ನಮ್ಮಲ್ಲಿ ಈ ಸಂಪುಟವೂ ಸೇರಿದರೆ

32 ಸಂಪುಟಗಳ ಪೈಕಿ 14 ಸಂಪುಟಗಳು ಸಿಕ್ಕುತ್ತವೆ. ಒಂದು ಸಂಪುಟವನ್ನು ಪುನರ್ಮುದ್ರಣ ಮಾಡುವ ವೇಳೆಗೆ 2-3 ಸಂಪುಟಗಳು ಮುಗಿದುಹೋಗು ತ್ತವೆ. ಇದಕ್ಕಿಂತಲೂ ಶೀಘ್ರವಾಗಿ ಪುನರ್ಮುದ್ರಣಮಾಡಲು ನಮಗೂ ಸಾಧ್ಯವಾಗುವಂತೆ ತೋರುವುದಿಲ್ಲ. ವಿದ್ಯುಚ್ಛಕ್ತಿಯ ಅಭಾವ ತೀವ್ರವಾಗಿದೆ. ಯಾವಾಗ ಹೋಗುತ್ತದೆ ; ಯಾವಾಗ ಬರುತ್ತದೆ?–ಎಂಬುದೇ ತಿಳಿಯು ವುದಿಲ್ಲ . ಕೆಲಸದ ವೇಳೆಯಲ್ಲಿ ಹೋಗಿ ವಿರಾಮದ ವೇಳೆಯಲ್ಲಿ ಬರಬಹುದು. ಇದೇ ಮುಂತಾದ ಕಾರಣಗಳಿಂದ ನಿಯಮಿತ ಕಾಲಕ್ಕೆ ಸಂಪುಟಗಳನ್ನು ಹೊರತರಲು ಸಾಧ್ಯವಾಗುತ್ತಿಲ್ಲ. ಇದಕ್ಕಾಗಿ ವಾಚಕರ ಕ್ಷಮೆ ಬೇಡುತ್ತೇವೆ.

ಈಗ ವಾಲ್ಮೀಕಿರಾಮಾಯಣದ ಮೊದಲಸಂಪುಟದ ಪುನರ್ಮುದ್ರಣ ವಾಗುತ್ತಿದೆ. ಎಲ್ಲ ಮಹಾಭಾರತದ ಗ್ರಾಹಕರೂ ರಾಮಾಯಣಕ್ಕೂ ಗ್ರಾಹಕ ರಾಗಬೇಕೆಂದೂ ಭಾರತ ದರ್ಶನಕ್ಕೆ ಸದಸ್ಯರಾಗಿ 20/-ರೂ.ಗಳ ಚಂದಾಶುಲ್ಕ ವನ್ನು ಕಳುಹಿಸಿಕೊಡುವಂತೆಯೂ ಪ್ರಾರ್ಥಿಸಲಾಗಿದೆ. ಅನೇಕ ಗ್ರಾಹಕರು ರಾಮಾಯಣಕ್ಕೂ ಗ್ರಾಹಕರಾಗಿ ಸದಸ್ಯಶುಲ್ಕವನ್ನು ಕಳುಹಿಸಿರುತ್ತಾರೆ. ಉಳಿದವರೂ ಗ್ರಾಹಕರಾಗಿ ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ. ಭಾರತ ದರ್ಶನಕ್ಕೆ ಗ್ರಾಹಕರಾಗಿರುವವರೂ ಸ್ಮರಣಸಂಚಿಕೆಯನ್ನು ಪಡೆದು ಕೊಂಡಿರುವವರೂ ಸದಸ್ಯಶುಲ್ಕವನ್ನು ಕಳುಹಿಸಬೇಕಾಗಿಲ್ಲ.

ಸಂಪಾದಕಮಂಡಲಿಯ ವಿದ್ವಾಂಸರು ಈ ಮುದ್ರಣದ ತಪ್ಪು-ಒಪ್ಪು ಗಳನ್ನು ನೋಡಿಕೊಟ್ಟು ಉಪಕರಿಸಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. ನಮ್ಮ ಗ್ರಾಹಕರೆಲ್ಲರೂ ಹೊಸಬರೊಬ್ಬರನ್ನು ಗ್ರಾಹಕರನ್ನಾಗಿ ಮಾಡಿಕೊಟ್ಟು ನಮ್ಮ ಪ್ರಚಾರಕಾರ್ಯಕ್ಕೆ ಒತ್ತಾಸೆ ನೀಡಬೇಕಾಗಿ ಕೇಳಿಕೊಳ್ಳು ತ್ತೇವೆ.

ಮಹಾಭಾರತ-ರಾಮಾಯಣಗಳ ಪಠನ-ಶ್ರವಣ-ಮನನಗಳಿಂದ ಎಲ್ಲರಿಗೂ ಶಾಂತಿ-ತುಷ್ಟಿ-ಪುಷ್ಟಿಗಳು ದೊರೆಯುವಂತಾಗಲಿ. ಜನಗಳು ಸುಪ್ರಜೆಗಳಾಗಲಿ ; ದೇಶವು ಸುಭಿಕ್ಷವಾಗಲಿ.

–ಪ್ರಕಾಶಕರು.

ಐದನೆಯ ಮುದ್ರಣ ಪ್ರಸ್ತಾವನೆಯು ಸಂಪುಟದ ಕಡೆಯ ಪುಟದಲ್ಲಿದೆ.

# ಪರಿಶಿಷ್ಟ

ಮಹಾಭಾರತದಲ್ಲಿ ಬರುತ್ತಿರುವ ಕಥೆಗಳ ವಿಷಯವಾಗಿ ಹಲವಾರು ಮಂದಿ ಹಲವಾರು ಪ್ರಶ್ನೆಗಳನ್ನು ಕೇಳುತ್ತಿದ್ದಾರೆ. ಎಲ್ಲಕ್ಕೂ ನಾವು ಉತ್ತರ ಕೊಡುತ್ತೇವೆಂದು ಹೇಳುವ ಸಾಧ್ಯತೆಯಿಲ್ಲ. ಕೆಲವಕ್ಕೆ ಉತ್ತರಕೊಡಲು ಪ್ರಯತ್ನಿಸಿದ್ದೇವೆ. ಪ್ರಶ್ನೆಗಳ ಸ್ವರೂಪ, ಸ್ಥಳಾವಕಾಶ–ಇವುಗಳನ್ನು ಪರಿಶೀಲಿಸಿ ಸಾಧ್ಯವಾದಷ್ಟು ಪ್ರಶ್ನೆಗಳಿಗೆ ಉತ್ತರಿಸುತ್ತೇವೆ. ತಮ್ಮ ಪ್ರಶ್ನೆಗಳಿಗೆ ಉತ್ತರ ಕೊಡಲಿಲ್ಲವೆಂದು ಉತ್ತರಪಡೆಯದವರು ಬೇಸರಪಟ್ಟುಕೊಳ್ಳಬಾರದಾಗಿ ಪ್ರಾರ್ಥಿಸುತ್ತೇವೆ. (ಸಂ)

ಪ್ರಶ್ನೆ :- ಸಂಜಯನ ಪೂರ್ವವೃತ್ತಾಂತದಲ್ಲಿ ಸಂಜಯನೆಂಬುವನೊಬ್ಬನು ಹುಟ್ಟಿದ ಪ್ರಸಂಗವು ಬಂದಿರುವುದೇ ಹೊರತು ಅವನು ಯಾರು? ಅವನ ತಂದೆ-ತಾಯಿಗಳು ಯಾರು? ಕೌರವರೊಂದಿಗೆ ಸೇರಿಕೊಳ್ಳಲು ಕಾರಣವೇನು?–ಇತ್ಯಾದಿ ಅವನ ಪೂರ್ವವೃತ್ತಾಂತವನ್ನು ಎಲ್ಲಿಯೂ ನಿಮ್ಮ ಪುಸ್ತಕದಲ್ಲಿ ಹೇಳಿಲ್ಲ. ಏಕೆ? ತಿಳಿಸಿ :

ಉತ್ತರ :- ಆದಿಪರ್ವದ 63ನೆಯ ಅಧ್ಯಾಯದ 97ನೇ ಶ್ಲೋಕದ ಉತ್ತರಾರ್ಧದಲ್ಲಿ ಸಂಜಯನ ವಿಷಯವು ಹೀಗೆ ಹೇಳಲ್ಪಟ್ಟಿದೆ.

**ಸಂಜಯೋ ಮುನಿಕಲ್ಪಸ್ತು ಜಜ್ಞೇ ಸೂತೋ ಗವಲ್ಗಣಾತ್ ॥**

ಇದಕ್ಕೆ ನಾವು ಮೊದಲನೆಯ ಸಂಪುಟದ 391ನೆಯ ಪುಟದಲ್ಲಿ 'ಇದೇ ಸಮಯದಲ್ಲಿ (ವಿದುರನು ಹುಟ್ಟಿದ ಸಮಯದಲ್ಲಿ) ಧೃತರಾಷ್ಟ್ರನ ಮಂತ್ರಿಯೂ–ಸಾರಥಿಯೂ ಆಗಿದ್ದ ಗವಲ್ಗಣನಿಂದ ಋಷಿಸದೃಶನಾದ ಸಂಜಯನೆಂಬ ಸೂತನು ಹುಟ್ಟಿದನು'–ಎಂಬುದಾಗಿ ಅರ್ಥದ ವಿವರಣೆಯನ್ನು ಕೊಟ್ಟಿದ್ದೇವೆ. ಮಹಾಭಾರತದಲ್ಲಿ ಸಂಜಯನ ಪೂರ್ವಿಕರ ವಿಷಯವಾಗಿ ಇದಕ್ಕಿಂತಲೂ ಹೆಚ್ಚಿನ ವಿವರಣೆಯು ಸಿಕ್ಕುವುದಿಲ್ಲ. ಸಂಜಯನ ತಂದೆ ಗವಲ್ಗಣ. ತಾಯಿಯ ಹೆಸರು ಬಂದಿರುವುದಿಲ್ಲ. ಇವನು ಧೃತರಾಷ್ಟ್ರನ ಮಂತ್ರಿಯೂ, ಸಾರಥಿಯೂ ಆಗಿದ್ದುದರಿಂದ ಕೌರವರ ಕಡೆಯೇ ಇರಬೇಕಾದುದು ಅನಿವಾರ್ಯವಾಗಿದ್ದಿರಬಹುದು. ಗ್ರಂಥದಲ್ಲಿ ವಿಶೇಷವಾದ ಕಾರಣಗಳೇನೂ ಕಂಡುಬರುವುದಿಲ್ಲ.

ಪ್ರಶ್ನೆ :- ಶಂಬರಾಸುರನ ಮತ್ತು ಕಿರ್ಮೀರನ ವಧೆಗಳು ನಿಮ್ಮ ಮಹಾಭಾರತದಲ್ಲೇಕೆ ಬಂದಿಲ್ಲ?

2) ಅಂಬೆಯ ವೃತ್ತಾಂತ ತಿಳಿಸಿ.

3) ಕರ್ಣನ ವಿದ್ಯಾಭ್ಯಾಸ ಮತ್ತು ಪರಶುರಾಮನ ಶಾಪದ ಬಗ್ಗೆ ಬಂದಿಲ್ಲವೇಕೆ?

4) ಗಜಗೌರೀವ್ರತದ ಪ್ರಸ್ತಾಪವೇ ಇಲ್ಲ. ಕಾರಣವೇನು?

5) ಶಕುನಿ ಮತ್ತು ಸುಯೋಧನರ ಅಂತರ್ದ್ವೇಷ ಏಕೆಂಬುದನ್ನು ತಿಳಿಸಿ.

ಉತ್ತರ :- 1) ಶಂಬರಾಸುರ ವಧೆ : ಇದು ಭಾಗವತದಲ್ಲಿ ಮತ್ತು ಮಹಾಭಾರತದ ಹರಿವಂಶದಲ್ಲಿ ಬರುವ ಕಥೆ.

ಕಿರ್ಮೀರವಧೆಯ ಕಥಾಭಾಗವು ವನಪರ್ವದ 11ನೆಯ ಅಧ್ಯಾಯ ದಲ್ಲಿ 4ನೆಯ ಸಂಪುಟದ 1939ನೇ ಪುಟದಲ್ಲಿದೆ.

2) ಅಂಬೆಯು ಕಾಶೀರಾಜನ ಮಗಳೆಂಬ ಜನ್ಮವೃತ್ತಾಂತವು ಈಗಾಗಲೇ ಆದಿಪರ್ವದಲ್ಲಿ ಬಂದಿರುತ್ತದೆ. ಅಧ್ಯಾಯ 102 ಪುಟ 696. ಅವಳ ಮುಂದಿನ ಜನ್ಮದ ವೃತ್ತಾಂತವನ್ನು ಉದ್ಯೋಗಪರ್ವದ 187 ಮತ್ತು 188ನೆಯ ಅಧ್ಯಾಯಗಳಲ್ಲಿ ಕೊಡಲಾಗಿದೆ.

3) ಪರಶುರಾಮನಲ್ಲಿ ಕರ್ಣನ ವಿದ್ಯಾಭ್ಯಾಸ ಮತ್ತು ಪರಶುರಾಮನ ಶಾಪ–ಈ ಕಥಾಭಾಗವು ಕರ್ಣಪರ್ವ, ಶಾಂತಿಪರ್ವ ಮತ್ತು ಸ್ತ್ರೀಪರ್ವಗಳಲ್ಲಿ ಬರುತ್ತದೆ.

4) ಗಜಗೌರೀವ್ರತಕಥೆಯು ಮಹಾಭಾರತದಲ್ಲಿ ಉಕ್ತವಾಗಿಲ್ಲ.

5) ಶಕುನಿಗೂ–ದುರ್ಯೋಧನನಿಗೂ ಆಂತರ್ಯದಲ್ಲಿ ದ್ವೇಷ ವಿತ್ತೆಂಬುದರ ವಿಷಯ ಮಹಾಭಾರತದಲ್ಲಿ ಉಕ್ತವಾಗಿಲ್ಲ.

ಪ್ರಶ್ನೆ :- ವೇದಪುರುಷನ ಸುತನ ಸುತನ
ಮಾತುಳನನತುಳಭುಜಬಲದಿ ಕಾದಿ
ಗೆಲಿದನಣ್ಣನವ್ವೆಯ ನಾದಿನಿಯ
ಜಠರದಲ್ಲಿ ಜನಿಸಿದನಾದಿಮೂರುತಿ
ಸಲಹೋ ಗದುಗಿನ ವೀರನಾರಾಯಣ ||

ಇದರ ಅರ್ಥ ಬೇಕಾಗಿದೆ.

ಉತ್ತರ :- ವ್ಯಾಸಮಹಾಭಾರತವಲ್ಲದೇ ಇತರ ಗ್ರಂಥಗಳ ವಿಷಯ

ವಾಗಿ ಪ್ರಶ್ನೆಗಳನ್ನು ದಯೆಯಿಟ್ಟು ಕೇಳಬೇಡಿರಿ. ಈ ಬಾರಿಗೆ ಈ ಪ್ರಶ್ನೆಯನ್ನು ಗೌರವಿಸಲಾಗಿದೆ.

ಶ್ರೀ ಮಾಸ್ತಿ ವೆಂಕಟೇಶಅಯ್ಯಂಗಾರ್ಯರು ಮತ್ತು ಕುವೆಂಪು ಇವರು ಸಂಪಾದಿಸಿರುವ ಕುಮಾರವ್ಯಾಸಮಹಾಕವಿಯ ಕರ್ನಾಟಕಭಾರತಕಥಾ ಮಂಜರಿಯಲ್ಲಿ ಈ ಪದ್ಯವು ಈ ರೀತಿಯಾಗಿದೆ.

ವೇದಪುರುಷನ ಸುತನ ಸುತನ ಸ-
ಹೋದರನ ಹೆಮ್ಮಗನ ಮಗನ ತ-
ಳೋದರಿಯ ಮಾತುಳನ ರೂಪನನತುಳಭುಜಬಲದಿ ।
ಕಾದಿ ಗೆಲಿದನನಣ್ಣನನವ್ವೆಯ
ನಾದಿನಿಯ ಜಠರದಲ್ಲಿ ಜನಿಸಿದ
ನಾದಿಮೂರುತಿ ಸಲಹೋ ಗದುಗಿನ ವೀರನಾರಾಯಣ ॥

ವೇದಪುರುಷನ–ಶ್ರೀಮನ್ನಾರಾಯಣನ, ಸುತನ– ನಾಭಿಕಮಲದಿಂದ ಹುಟ್ಟಿದ ಬ್ರಹ್ಮನ, ಸುತನ–ಬ್ರಹ್ಮಮಾನಸಪುತ್ರನಾದ ನಾರದನ, ಸಹೋ ದರನ-ನಾರದನ ತಮ್ಮನಾದ ಕಶ್ಯಪನ, ಹೆಮ್ಮಗನ–ಕಶ್ಯಪನ ಹಿರಿಯಮಗ ನಾದ ಇಂದ್ರನ, ಮಗನ-ಪುತ್ರನಾದ ಅರ್ಜುನನ, ತಳೋದರಿಯ - ಅವನ ಪತ್ನಿಯಾದ ಸುಭದ್ರೆಯ, ಮಾತುಳನ–ಆಕೆಯ ಮಾವನಾದ ಕಂಸನ- ರೂಪನ-ಸದೃಶಪರಾಕ್ರಮಿಯಾದ ಜರಾಸಂಧನನ್ನು, (ಪಾಠಾಂತರದ ಪ್ರಕಾರ ಮಾವನಂ ಕಂಸನ ಮಾವನಾದ ಜರಾಸಂಧನನ್ನು) ಅತುಳಭುಜಬಲದಿ- ಅಧಿಕತೋಳ್ಬಲದಿಂದ ಕಾದಿ-ಯುದ್ಧಮಾಡಿ, ಗೆಲಿದನ–ಗೆದ್ದ ಭೀಮನ, ಅಣ್ಣನ–ಅಣ್ಣನಾದ ಧರ್ಮಜನ, ಅವ್ವೆಯ–ತಾಯಿಯಾದ ಕುಂತಿಯ, ನಾದಿನಿಯ–ತಮ್ಮನ (ವಸುದೇವನ) ಹೆಂಡತಿಯಾದ ದೇವಕಿಯ, ಜಠರದಲ್ಲಿ–ಗರ್ಭದಲ್ಲಿ ಜನಿಸಿದ–ಹುಟ್ಟಿದ, ಆದಿಮೂರುತಿ ಅಥವಾ ಅನಾದಿಮೂರುತಿ–ಆದ್ಯಂತ ರಹಿತನಾದ ಗದುಗಿನ ವೀರನಾರಾಯಣ– ಗದುಗಿನ ವೀರನಾರಾಯಣಸ್ವಾಮಿಯೇ ಸಲಹೋ–ರಕ್ಷಿಸು.

(ಈ ಪರಿಶಿಷ್ಟವು ಸಂಪುಟದ ಕಡೆಯಲ್ಲಿ
25ನೆಯ ಪುಟದಿಂದ ಮುಂದುವರಿದಿದೆ.)

ಶ್ರೀಮಹಾಗಣಪತಯೇ ನಮಃ   ಶ್ರೀಮಹಾಸರಸ್ವತ್ಯೈ ನಮಃ   ಶ್ರೀಸದ್ಗುರವೇ ನಮಃ



**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥**

# ಮಹಾಭಾರತ-ವನಪರ್ವ; ಐದನೆಯ ಸಂಪುಟ

೬೯ನೆಯ ಅಧ್ಯಾಯ     ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ದಮಯಂತಿಯು ತನ್ನ ತಂದೆಯ ಮನೆಗೆ ಹಿಂದಿರುಗಿದುದು : ನಲನನ್ನು ಹುಡುಕಲು ಬ್ರಾಹ್ಮಣರನ್ನು ನಾನಾದೇಶಗಳಿಗೆ ಕಳುಹಿಸಿದುದು

ಸುದೇವನು ರಾಜಮಾತೆಯನ್ನು ಕುರಿತು ಹೇಳುತ್ತಾನೆ :

**ವಿದರ್ಭರಾಜೋ ಧರ್ಮಾತ್ಮಾ ಭೀಮೋ ನಾಮ ಮಹಾದ್ಯುತಿಃ ।**
**ಸುತೇಯಂ ತಸ್ಯ ಕಲ್ಯಾಣೀ ದಮಯನ್ತೀತಿ ವಿಶ್ರುತಾ ॥೧॥**

“ರಾಜಮಾತೆಯೇ! ಮಹಾತೇಜಸ್ವಿಯಾದ, ಧರ್ಮಾತ್ಮನಾದ, ವಿದರ್ಭಕ್ಕೊಡೆಯನಾದ ರಾಜನೊಬ್ಬನಿದ್ದಾನೆ. ಭೀಮನೆಂದು ಅವನ ಹೆಸರು. ಇವಳ ಹೆಸರು ದಮಯಂತೀ. ವೀರಸೇನನ ಮಗನಾದ ನಲನೆಂಬ ಹೆಸರಿನ ರಾಜನಿದ್ದಾನೆ. ಅವನು ನಿಷಧಾಧಿಪತಿಯು. ಈ ಮಂಗಳಾಂಗಿಯು ಧರ್ಮಾತ್ಮನಾದ, ಪುಣ್ಯಶ್ಲೋಕನಾದ ಆ ನಲರಾಜನ ಭಾರ್ಯೆಯು.

ಧರ್ಮಾತ್ಮನಾದ ಆ ನಲನು ತನ್ನ ಸೋದರನೊಡನೆ ಆಡಿದ ಪಗಡೆಯಾಟದಲ್ಲಿ ರಾಜ್ಯ-ಕೋಶಾದಿಗಳೆಲ್ಲವನ್ನೂ ಕಳೆದುಕೊಂಡು, ಭಾರ್ಯೆಯಾದ ದಮಯಂತಿಯೊಡನೆ ಯಾರಿಗೂ ತಿಳಿಯದಂತೆ ಎಲ್ಲಿಗೋ ಹೊರಟುಹೋದನು. ಭೀಮರಾಜನಿಂದ ಪ್ರೇಷಿತರಾದ ನಾವು ದಮಯಂತಿಯನ್ನು ಹುಡುಕುವ ಸಲುವಾಗಿ ಈ ಭೂಮಿಯಲ್ಲಿ ಸುತ್ತಾಡುತ್ತಿದ್ದೇವೆ. ಹೀಗೆಯೇ ದಮಯಂತಿಯನ್ನು ಅರಸುತ್ತಿದ್ದಾಗ ನಾನು ಇವಳನ್ನು ನಿನ್ನ ಮಗನ ಅರಮನೆಯಲ್ಲಿ, ನಿನ್ನ ಮಗಳ ಜೊತೆಯಲ್ಲಿ ಕಂಡೆನು.

**ಅಸ್ಯಾ ರೂಪೇಣ ಸದೃಶೀ ಮಾನುಷೀ ನ ಹಿ ವಿದ್ಯತೇ ।**
**ಅಸ್ಯಾ ಹ್ಯೇಷ ಭ್ರುವೋರ್ಮಧ್ಯೇ ಸಹಜಃ ಪಿಪ್ಲುರುತ್ತಮಃ ॥೫॥**

**ಶ್ಯಾಮಾಯಾಃ ಪದ್ಮಸಂಕಾಶೋ ಲಕ್ಷಿತೋಽನ್ತರ್ಹಿತೋ ಮಯಾ ।**
**ಮಲೇನ ಸಂವೃತೋ ಹ್ಯಸ್ಯಾಶ್ಛನ್ನೋಽಭ್ರೇಣೇವ ಚನ್ದ್ರಮಾಃ ॥೬॥**



ರೂಪದಲ್ಲಿ ಇವಳಿಗೆ ಸದೃಶಳಾದ ಮಾನವಸ್ತ್ರೀಯು ಮತ್ತೊಬ್ಬಳಿಲ್ಲ. ಮೇಲಾಗಿ ಇವಳ ಹುಬ್ಬುಗಳ ನಡುವೆ ಕಮಲಕ್ಕೆ ಸದೃಶವಾದ ಶುಭಕರವಾದ ಕಪ್ಪಾದ ಒಂದು ಮಚ್ಚೆಯಿದೆ. ಇವಳು ಹುಟ್ಟುವಾಗಲೇ ಇದ್ದ ಮಚ್ಚೆಯಿದು. ಮೋಡದಿಂದ ಆಚ್ಛಾದಿತನಾದ ಚಂದ್ರನಂತೆ–ಇವಳ ಹುಬ್ಬುಗಳ ನಡುವೆ ಇರುವ ಮಚ್ಚೆಯು ಧೂಳಿನಿಂದ ಮುಚ್ಚಿಹೋಗಿದೆ. ಇದನ್ನು ನಾನು

ಗಮನಿಸಿದೆನು. ಇವಳ ಸೌಭಾಗ್ಯದ ಪ್ರಾದುರ್ಭಾವಸೂಚನೆಯಾಗಿ ಬ್ರಹ್ಮ ಕಲ್ಪಿತವಾಗಿರುವ (ಭಾಗ್ಯಸೂಚಕವಾದ) ಮಚ್ಚೆಯಿಂದು–ಶುಕ್ಲಪ್ರತಿಪತ್ತಿನ ಚಂದ್ರರೇಖೆಯಂತೆ–ಬಹಳ ಸೂಕ್ಷ್ಮರೀತಿಯಲ್ಲಿ ಗೋಚರವಾಗುತ್ತಿದೆ. ಇವಳ ಶರೀರವು ಧೂಳಿನಿಂದ ಮುಚ್ಚಿಹೋಗಿದ್ದರೂ ಇವಳ ರೂಪಲಾವಣ್ಯವು ಮಾತ್ರ ನಾಶಹೊಂದಿರುವುದಿಲ್ಲ. ಯದ್ಯಪಿ ಇವಳಿಗೆ ತನ್ನ ಶರೀರವನ್ನು ಸಿಂಗರಿಸಿಕೊಳ್ಳಬೇಕೆಂಬ ಆಶಯವಿಲ್ಲದಿದ್ದರೂ, ಶರೀರಸೌಖ್ಯದ ಮೇಲೆ ಮತ್ತು ಸೌಂದರ್ಯದ ಮೇಲೆ ನಿರ್ಲಕ್ಷ್ಯವಿದ್ದರೂ, ಇವಳ ಶರೀರವು ಸ್ವಾಭಾವಿಕ ವಾಗಿಯೇ ಚಿನ್ನದಂತೆ ಕಾಂತಿಯುಕ್ತವಾಗಿದೆ. ಸಾಕ್ಷಾತ್ ಲಕ್ಷ್ಮಿಗೆ ಸಮಾನ ಳಾಗಿರುವ ಇವಳು ವಿಶೇಷಲಾವಣ್ಯವತಿಯಾಗಿರುವುದರಿಂದಲೂ ಮತ್ತು ನಾನು ಹಿಂದೆ ನೋಡಿದ್ದ ಮಚ್ಚೆಯು ಇವಳ ಹುಬ್ಬುಗಳ ನಡುವೆ ಬಹಳ ಸೂಕ್ಷ್ಮ ಪರಿಶೀಲನೆಯಿಂದ ಕಾಣಿಸಿದ್ದರಿಂದಲೂ–ಬೂದಿ ಮುಚ್ಚಿದ ಕೆಂಡವನ್ನು ಶಾಖದಿಂದ ಮನಗಾಣುವಂತೆ–ನಾನು ಇವಳನ್ನು ಗುರುತಿಸಿದೆನು."

ಸುದೇವನ ಮಾತುಗಳನ್ನು ಕೇಳಿದೊಡನೆಯೇ ರಾಜಮಾತೆಯು ದಮ ಯಂತಿಯನ್ನು ಹತ್ತಿರಕ್ಕೆ ಕರೆದು, ಅವಳ ಮುಖಾರವಿಂದವನ್ನು ತೊಳೆದು, ಹುಬ್ಬುಗಳ ಮಧ್ಯಭಾಗವನ್ನು ದಿಟ್ಟಿಸಿ ನೋಡಿದಳು. ಮೋಡವಿಲ್ಲದ ಆಕಾಶ ದಲ್ಲಿ ಶೋಭಿಸುವ ಚಂದ್ರನಂತೆ–ಹುಬ್ಬುಗಳ ನಡುವೆಯಿದ್ದ ಕಮಲಸದೃಶ ವಾದ ಮಚ್ಚೆಯು ರಾಜಮಾತೆಗೆ ಸ್ಪಷ್ಟವಾಗಿ ಗೋಚರಿಸಿತು. ಆ ಮಚ್ಚೆಯನ್ನು ನೋಡಿದೊಡನೆಯೇ ಸುನಂದೆಗೂ ಮತ್ತು ರಾಜಮಾತೆಗೂ ಅವಳೇ ದಮ ಯಂತಿಯೆಂಬುದು ಖಚಿತವಾಯಿತು. ರಾಜಕುಮಾರಿಯ ಅಂದಿನ ಪರಿಸ್ಥಿತಿ ಯನ್ನು ನೆನೆದು ಇಬ್ಬರೂ ಸ್ವಲ್ಪಕಾಲ ಬಿಕ್ಕಿ-ಬಿಕ್ಕಿ ಅತ್ತರು. ದಮಯಂತಿಯನ್ನು ಬಾಚಿತಬ್ಬಿಕೊಂಡರು. ರಾಜಮಾತೆಯು ಕಣ್ಣೀರುಸುರಿಸುತ್ತಾ ಗದ್ಗದಧ್ವನಿಯಿಂದ ದಮಯಂತಿಯನ್ನು ಕುರಿತು ಹೇಳಿದಳು : "ಮಗಳೇ! ಈ ಮಚ್ಚೆಯಿಂದ ನೀನು ನನ್ನ ಅಕ್ಕನ ಮಗಳೆಂಬುದು ನಿರ್ಧಾರವಾಯಿತು. ಶುಭಾಂಗಿಯೇ! ನಾನೂ ಮತ್ತು ನಿನ್ನ ತಾಯಿಯೂ ಅಕ್ಕ-ತಂಗಿಯರು. ದಶಾರ್ಣದೇಶಕ್ಕೆ ರಾಜನಾದ ಮಹಾತ್ಮನಾದ ಸುದಾಮನ ಮಕ್ಕಳು. ನಿನ್ನ ತಾಯಿಯನ್ನು ಭೀಮರಾಜನಿಗೆ ಕೊಟ್ಟು ಮದುವೆಮಾಡಿದರು. ನಾನು ಮಹಾತ್ಮನಾದ ವೀರಬಾಹುವನ್ನು ಮದುವೆಯಾದೆನು. ನಾನು ನನ್ನ ತಂದೆಯ

ಮನೆಯಲ್ಲಿದ್ದಾಗ ನನ್ನಕ್ಕನು ನಿನ್ನ ಪ್ರಸವಕ್ಕಾಗಿ ತವರುಮನೆಗೆ ಬಂದಿದ್ದಳು. ಆಗ ಹುಟ್ಟಿದ ನಿನ್ನನ್ನು ನಾನು ಚೆನ್ನಾಗಿ ನೋಡಿದ್ದೆನು. ಹಾಗೂ ನಿನ್ನ ಹುಬ್ಬುಗಳ ನಡುವೆ ಮಚ್ಚೆಯಿದ್ದುದನ್ನೂ ನಾನು ಬಲ್ಲೆನು. ಮಗಳೇ! ನಿಮ್ಮ ತಂದೆಯ ಮನೆಯಂತೆಯೇ ಈ ಮನೆಯನ್ನೂ ನಿನ್ನದೆಂದೇ ಭಾವಿಸು. ದಮಯಂತೀ! ಇಲ್ಲಿರುವ ಸಕಲೈಶ್ವರ್ಯವೂ ನನ್ನದಾಗಿರುವಂತೆಯೇ ನಿನ್ನದೂ ಆಗಿರುವುದು. ಸ್ವಲ್ಪವೂ ಸಂಕೋಚಪಡಬೇಡ."

ರಾಜಮಾತೆಯ ಮಾತುಗಳನ್ನು ಕೇಳಿ, ದಮಯಂತಿಯು ಸಂತೋಷ ಭರಿತಳಾಗಿ ತನ್ನ ಚಿಕ್ಕಮ್ಮನ ಕಾಲುಮುಟ್ಟಿ ನಮಸ್ಕರಿಸಿ ಹೇಳಿದಳು :

"ಅಮ್ಮ! ನಾನಾರೆಂದು ನಿನಗೆ ತಿಳಿಯದಿದ್ದರೂ ಇಷ್ಟು ದಿನಗಳನ್ನೂ ನಿನ್ನ ದಯೆಯಿಂದಾಗಿ ಈ ಅರಮನೆಯಲ್ಲಿ ಸುಖದಿಂದಲೇ ಕಳೆದೆನು. ನಾನಿಚ್ಛಿಸಿದ ವಸ್ತುಗಳೆಲ್ಲವೂ ನನಗೆ ಸಿಕ್ಕುತ್ತಿದ್ದುವು. ಯಾವ ವಿಧವಾದ ತೊಂದರೆಯೂ ಇಲ್ಲದೇ ಸರ್ವದಾ ನಿನ್ನಿಂದ ಸಂರಕ್ಷಿತಳಾಗಿದ್ದೆನು. ಆದುದರಿಂದ ನಿನ್ನೊಡನೆ ನನಗೆ ಇಷ್ಟು ದಿನಗಳೂ ಬಹಳ ಸುಖದಿಂದಲೇ ಕಳೆದುವು. ನಾನಾರೆಂದು ತಿಳಿದನಂತರ ಇನ್ನೂ ಹೆಚ್ಚಿನ ಸುಖವು ನನಗೆ ಸಿಕ್ಕುವುದರಲ್ಲಿ ಯಾವ ಸಂಶಯವೂ ಇಲ್ಲ. ಚಿಕ್ಕಮ್ಮ! ಆದರೆ, ನಾನು ನನ್ನ ತಂದೆ-ತಾಯಿಗಳನ್ನಗಲಿ ಬಹಳ ದಿನಗಳಾದುವು. ಆದುದರಿಂದ ನಾನಿಲ್ಲಿಂದ ಹೊರಡಲು ನನಗೆ ಅನುಜ್ಞೆಯನ್ನು ನೀಡುವುದು ಯುಕ್ತವಾಗಿದೆ. ನಾನು ನನ್ನ ಪತಿಯೊಡನೆ ಅರಣ್ಯಕ್ಕೆ ಹೊರಡುವ ಮೊದಲು ನನ್ನ ಮಕ್ಕಳನ್ನು ನನ್ನ ತಾಯಿಯ ಮನೆಗೆ ಕಳುಹಿಸಿಕೊಟ್ಟಿದ್ದೆನು. ಈಗಲೂ ಅವರಲ್ಲಿಯೇ ವಾಸಮಾಡುತ್ತಿದ್ದಾರೆ. ತಂದೆ-ತಾಯಿಗಳನ್ನಗಲಿದ ಆ ಮಕ್ಕಳು ಎಷ್ಟು ದುಃಖದಿಂದ ಕಾಲಕಳೆಯುತ್ತಿವೆಯೋ ತಿಳಿಯದಾಗಿದೆ. ಚಿಕ್ಕಮ್ಮ! ನಾನು ನನ್ನ ಪುಟ್ಟಮಕ್ಕಳನ್ನು ನೋಡಲೇಬೇಕಾಗಿದೆ. ನನ್ನ ಆಶಯವನ್ನು ಪೂರೈಸಿ ಕೊಡುವುದಾದರೆ (ನನಗೆ ಒಳ್ಳೆಯದನ್ನು ಮಾಡಲು ಇಚ್ಛಿಸುವೆಯಾದರೆ) ಈಗಲೇ ನನ್ನ ಪ್ರಯಾಣಕ್ಕಾಗಿ ಯಾನವೊಂದನ್ನು ಸಿದ್ಧಪಡಿಸು. ನಾನು ಈ ಕೂಡಲೇ ವಿದರ್ಭಕ್ಕೆ ಹೋಗಲು ನಿಶ್ಚಯಿಸಿರುತ್ತೇನೆ."

ಯುಧಿಷ್ಠಿರ! ದಮಯಂತಿಯ ಆ ಮಾತಿಗೆ ಅವಳ ಚಿಕ್ಕಮ್ಮನು

ಹಾಗೆಯೇ ಆಗಲೆಂದಳು. ಒಡನೆಯೇ ತನ್ನ ಮಗನ ಅನುಮತಿಯನ್ನೂ ಪಡೆದವಳಾಗಿ, ದಮಯಂತಿಯನ್ನು ಕರೆದೊಯ್ಯಲು ಒಂದು ಪಲ್ಲಕ್ಕಿಯನ್ನು ಸಿದ್ಧಪಡಿಸಿದಳು. ರಾಜನ ಆಜ್ಞೆಯಂತೆ ಪಲ್ಲಕ್ಕಿಯ ರಕ್ಷಣೆಗೆ ಅನೇಕ ರಾಜ ಭಟರು ಹೊರಟರು. ಪಲ್ಲಕ್ಕಿಯ ಜೊತೆಯಲ್ಲಿ ರಾಜಮಾತೆಯು ಸಾಕಷ್ಟು ಆಹಾರಪದಾರ್ಥಗಳನ್ನೂ, ಪಾನೀಯಗಳನ್ನೂ ಕಳುಹಿಸಿದಳಲ್ಲದೇ–ದಮಯಂತಿಗೆ ಅನೇಕವಿಧವಾದ, ನಯನಮನೋಹರವಾದ ವಸ್ತ್ರಾಭರಣ ಗಳನ್ನೂ ಉಡುಗೊರೆಯಾಗಿ ಕೊಟ್ಟು ಕಳುಹಿಸಿದಳು. ಪಲ್ಲಕ್ಕಿಯನ್ನು ಹೊತ್ತ ರಾಜಭಟರು ಬಹುಶೀಘ್ರವಾಗಿಯೇ ಅವಳನ್ನು ವಿದರ್ಭದೇಶಕ್ಕೆ ಕರೆ ದೊಯ್ದರು. ದಮಯಂತಿಯು ಬಂದಳೆಂಬ ವಾರ್ತೆಯನ್ನು ಕೇಳಿದೊಡ ನೆಯೇ ನಾಗರಿಕರೇ ಮೊದಲಾಗಿ ಬಂಧುಜನರೆಲ್ಲರೂ ಸಂತೋಷಭರಿತ ರಾದರು ಮತ್ತು ಅವಳನ್ನು ಗೌರವಿಸಿದರು.

ವಿದರ್ಭರಾಜನಾದ ಭೀಮನು ಮಗಳನ್ನು ಆದರದಿಂದ ಬರಮಾಡಿ ಕೊಂಡು ಅರಮನೆಗೆ ಕರೆದುಕೊಂಡುಹೋದನು. ತನ್ನ ಬಂಧುಗಳೂ, ತಾಯಿ-ತಂದೆಗಳೂ, ಸಖೀಜನರೂ ಮತ್ತು ಇಬ್ಬರು ಮಕ್ಕಳೂ ಕ್ಷೇಮ ದಿಂದಿರುವುದನ್ನು ಕಂಡು ದಮಯಂತಿಯು ಸಂತಸಗೊಂಡವಳಾಗಿ ದೇವ-ಬ್ರಾಹ್ಮಣರನ್ನು ಭಕ್ತಿಪೂರ್ವಕವಾಗಿ ಪೂಜಿಸಿದಳು. ತಂದೆಯಾದ ಭೀಮ ರಾಜನಿಗೆ ಮಗಳನ್ನು ನೋಡಿದುದರಿಂದ ಉಂಟಾದ ಸಂತೋಷಕ್ಕೆ ಪಾರವೇ ಇಲ್ಲವಾಯಿತು. ಮಗಳನ್ನು ಹುಡುಕಿ ಕರೆತಂದ ಸುದೇವನಿಗೆ ತಾನು ಆ ಮೊದಲೇ ಹೇಳಿದ್ದಂತೆ ಒಂದು ಸಾವಿರ ಗೋವುಗಳನ್ನೂ, ಅತುಲೈಶ್ವರ್ಯ ವನ್ನೂ ಮತ್ತು ಒಂದು ಗ್ರಾಮವನ್ನೂ ಬಹುಮಾನವಾಗಿ ಕೊಟ್ಟನು.

ದಮಯಂತಿಯು ಆ ರಾತ್ರಿ ತಂದೆಯ ಮನೆಯಲ್ಲಿ ಸುಖದಿಂದ ಕಳೆದು, ಮಾರ್ಗಾಯಾಸವನ್ನು ಪರಿಹಾರಮಾಡಿಕೊಂಡನಂತರ ಮರುದಿನ ತನ್ನ ತಾಯಿಯೊಡನೆ ಈ ಮಾತುಗಳನ್ನು ಹೇಳಿದಳು :

"ಅಮ್ಮ! ನಾನು ಜೀವಿಸಿರಬೇಕೆಂದು ಇಚ್ಛಿಸುವುದಾದರೆ–ನಿಶ್ಚಯವಾಗಿ ಹೇಳುತ್ತೇನೆ. ಈ ಕೂಡಲೇ ನರೋತ್ತಮನಾದ ನನ್ನ ಪತಿಯನ್ನು ಹುಡುಕಿಸಿ ಕರೆತರಲು ಯತ್ನಿಸು."

ಮಗಳ ಮಾತುಗಳನ್ನು ಕೇಳಿ ಮಹಾರಾಣಿಯು ಅತಿದುಃಖಿತೆಯಾದಳು.

ಕಣ್ಣುಗಳಲ್ಲಿ ನೀರು ತುಂಬಿತು. ಏನೊಂದು ಉತ್ತರವನ್ನು ಹೇಳಲು ಕೂಡ ರಾಣಿಯ ಬಾಯಿಂದ ಮಾತುಗಳೇ ಹೊರಡದಾದುವು. ರಾಣಿಯ ಆ ಸ್ಥಿತಿಯನ್ನು ಕಂಡು ಅಂತಃಪುರದಲ್ಲಿದ್ದ ದಾಸಿಯರೆಲ್ಲರೂ ಗಟ್ಟಿಯಾಗಿ ಅಳತೊಡಗಿದರು. ಸ್ವಲ್ಪಹೊತ್ತಿನಲ್ಲಿಯೇ ರಾಣಿಯು ಸಮಾಧಾನವನ್ನು ತಂದುಕೊಂಡು ತನ್ನ ದಾಸಿಯರಿಗೂ ಸಮಾಧಾನಹೇಳಿ, ತನ್ನ ಪತಿಯಾದ ಭೀಮನಿದ್ದಲ್ಲಿಗೆ ಹೋಗಿ ಅವನನ್ನು ಕುರಿತು ಹೇಳಿದಳು :

"ಪತಿದೇವ! ನಮ್ಮ ಮಗಳಾದ ದಮಯಂತಿಯು ತನ್ನ ಪತಿಯ ವಿಷಯವಾಗಿ ಬಹಳ ದುಃಖಪಡುತ್ತಿದ್ದಾಳೆ. ಸ್ತ್ರೀಸಹಜವಾದ ನಾಚಿಕೆಯನ್ನೂ ತೊರೆದು ಅವಳು ತನ್ನ ಹೃದಯದಲ್ಲಿದ್ದ ದುಃಖವನ್ನು ನನ್ನೊಡನೆ ಹೇಳಿಕೊಂಡಳು. ಆದುದರಿಂದ ಮಹಾತ್ಮನಾದ ನಲನನ್ನು ಹುಡುಕುವುದಕ್ಕಾಗಿ, ರಾಜಭಟರು ಈ ಕೂಡಲೇ ದೇಶ-ವಿದೇಶಗಳಿಗೆ ಕಳುಹಿಸಲ್ಪಡಲಿ."

ತನ್ನ ಪತ್ನಿಯು ಹೇಳಿದ ಮಾತುಗಳಿಗೆ ಭೀಮರಾಜನು ಸಮ್ಮತಿಸಿ, ಗೂಢಚರ್ಯೆಯಲ್ಲಿ ನಿಪುಣರಾದ ಬ್ರಾಹ್ಮಣರನ್ನು ದೇಶ-ವಿದೇಶಗಳಿಗೆ ಕಳುಹಿಸಲು ನಿಶ್ಚಯಿಸಿ, ಅವರನ್ನು ಅರಮನೆಗೆ ಕರೆಯಿಸಿ ಹೇಳಿದನು :

"ಬ್ರಾಹ್ಮಣೋತ್ತಮರೇ! ನೀವು ಈಗಲೇ ಎಲ್ಲ ದೇಶಗಳಿಗೂ ಹೋಗಿ, ಪೂರ್ಣಪ್ರಯತ್ನಮಾಡಿ, ನಲನೆಲ್ಲಿರುವನೆಂಬುದನ್ನು ತಿಳಿದು ಬನ್ನಿರಿ."

ಭೀಮರಾಜನಿಂದ ಆಜ್ಞಪ್ತರಾದ ಬ್ರಾಹ್ಮಣರು ದಮಯಂತಿಯನ್ನೂ ಸಂಧಿಸಿ ತಮ್ಮ ಪ್ರಯಾಣದ ವಿಷಯವನ್ನು ಅವಳಿಗೆ ತಿಳಿಸಿದರು. ದಮಯಂತಿಯು ನಲನನ್ನು ಪತ್ತೆಹಚ್ಚಲು ಒಂದೆರಡು ಸಲಹೆಗಳನ್ನು ಬ್ರಾಹ್ಮಣರ ಮುಂದಿಟ್ಟಳು.

"ಪೂಜ್ಯರೇ! ನೀವು ಹೋದೆಡೆಗಳಲ್ಲೆಲ್ಲಾ ಹೀಗೆಂದು ಕೂಗಿ ಹೇಳಿರಿ :

**ಕ್ವ ನು ತ್ವಂ ಕಿತವಚ್ಛಿತ್ತ್ವಾ ವಸ್ತ್ರಾರ್ಧಂ ಪ್ರಸ್ಥಿತೋ ಮಮ ।**
**ಉತ್ಸೃಜ್ಯ ವಿಪಿನೇ ಸುಪ್ತಾಮನುರಕ್ತಾಂ ಪ್ರಿಯಾಂ ಪ್ರಿಯ ॥೩೭॥**

**ಸಾ ವೈ ಯಥಾ ತ್ವಯಾ ದೃಷ್ಟಾ ತಥಾಸ್ತೇ ತ್ವತ್ಪ್ರತೀಕ್ಷಿಣೀ ।**
**ದಹ್ಯಮಾನಾ ಭೃಶಂ ಬಾಲಾ ವಸ್ತ್ರಾರ್ಧೇನಾಭಿಸಂವೃತಾ ॥೩೮॥**

**ತಸ್ಯಾ ರುದನ್ತ್ಯಾಃ ಸತತಂ ತೇನ ಶೋಕೇನ ಪಾರ್ಥಿವ ।**
**ಪ್ರಸಾದಂ ಕುರು ವೈ ವೀರ ಪ್ರತಿವಾಕ್ಯಂ ವದಸ್ವ ಚ ॥೬॥**



"ಎಲೈ ಜೂಜುಕೋರನೇ! ನನ್ನ ವಸ್ತ್ರಾರ್ಧವನ್ನು ಕತ್ತರಿಸಿಕೊಂಡು ಎಲ್ಲಿಗೆ ಹೊರಟುಹೋದೆ? ಪ್ರಿಯನೇ! ನಿನ್ನ ಪ್ರಿಯಳಾದ, ನಿನ್ನಲ್ಲಿಯೇ ಅನುರಕ್ತಳಾದ, ಮೇಲಾಗಿ ದಾರಿನಡೆದ ಆಯಾಸದಿಂದ ಬಳಲಿ-ಬೆಂಡಾಗಿ ಮಲಗಿ ನಿದ್ರಿಸುತ್ತಿದ್ದ ಅಬಲೆಯನ್ನು ಘೋರಾರಣ್ಯದಲ್ಲಿ ಬಿಟ್ಟು ಎಲ್ಲಿಗೆ ಹೊರಟುಹೋದೆ? ನೀನವಳನ್ನು ಹಿಂದೆ ನೋಡಿದ್ದಾಗ ಯಾವ ರೀತಿಯಲ್ಲಿ ಅರ್ಧವಸ್ತ್ರವನ್ನು ಧರಿಸಿದ್ದಳೋ–ಈಗಲೂ ಹಾಗೆಯೇ ಇದ್ದು ನಿನ್ನ ಪ್ರತೀಕ್ಷೆಯಲ್ಲಿಯೇ ಕಾಲಕಳೆಯುತ್ತಿದ್ದಾಳೆ. ಅವಳು ನಿನ್ನನ್ನಗಲಿದ ವಿರಹಾಗ್ನಿ

ಯಿಂದ ಬೆಂದುಹೋಗಿದ್ದಾಳೆ. ನಿನ್ನನ್ನಗಲಿ ಶೋಕದಿಂದ ಸದಾ ದುಃಖಿಸುತ್ತಿರುವ ನಿನ್ನ ಪ್ರಿಯತಮೆಗೆ ಪ್ರಸನ್ನನಾಗು. ವೀರನೇ! ಅವಳ ಪ್ರಶ್ನೆಗೆ ಉತ್ತರವನ್ನು ಕೊಡುವ ಕೃಪೆಮಾಡು."

ಬ್ರಾಹ್ಮಣೋತ್ತಮರೇ! ಈ ಮಾತುಗಳನ್ನು ನೀವು ನಾಲ್ಕಾರುಜನರು ಸೇರುವೆಡೆಗಳಲ್ಲಿ ನಾಲ್ಕಾರುಬಾರಿ ಹೇಳಿರಿ. ನಲನೇ ಈ ಮಾತನ್ನು ಕೇಳಿದನಾದರೆ–ಅಗ್ನಿಯು ವಾಯುವಿನಿಂದ ಪ್ರೇರಿಸಲ್ಪಟ್ಟು ಜ್ವಲಿಸುವಂತೆ–ಈ ವಾಕ್ಯಗಳಿಂದ ಪ್ರಚೋದಿತನಾಗಿ ಅವನು ನನ್ನ ಮೇಲೆ ದಯೆತೋರಬಹುದು. ಬ್ರಾಹ್ಮಣೋತ್ತಮರೇ! ಇನ್ನೂ ಕೆಲವು ಮಾತುಗಳನ್ನು ಹೇಳುತ್ತೇನೆ. ಅವುಗಳನ್ನೂ ಸಮಯಗಳಲ್ಲಿ ಹೇಳಿರಿ.

**ವಾಯುನಾ ಧೂಯಮಾನೋ ಹಿ ವನಂ ದಹತಿ ಪಾವಕಃ ।**
**ಭರ್ತವ್ಯಾ ರಕ್ಷಣೀಯಾ ಚ ಪತ್ನೀ ಹಿ ಪತಿನಾ ಸದಾ ।**
**ತನ್ನಷ್ಟಮುಭಯಂ ಕಸ್ಮಾದ್ಧರ್ಮಜ್ಞಸ್ಯ ಸತಸ್ತವ ॥೪೧॥**

**ಖ್ಯಾತಃ ಪ್ರಾಜ್ಞಃ ಕುಲೀನಶ್ಚ ಸಾನುಕ್ರೋಶೋ ಭವಾನ್ಸದಾ ।**
**ಸಂವೃತ್ತೋ ನಿರನುಕ್ರೋಶಃ ಶಙ್ಕೇ ಮದ್ಭಾಗ್ಯಸಂಕ್ಷಯಾತ್ ॥೪೨॥**

**ತತ್ಕುರುಷ್ವ ನರವ್ಯಾಘ್ರ ದಯಾಂ ಮಯಿ ನರರ್ಷಭ ।**
**ಆನೃಶಂಸ್ಯಂ ಪರೋ ಧರ್ಮಸ್ತ್ವತ್ತ ಏವ ಹಿ ಮೇ ಶ್ರುತಃ ॥೪೩॥**

"ಅಗ್ನಿಯು ವಾಯುವಿನಿಂದ ಪ್ರಜ್ವಲಿತನಾಗಿ ಅರಣ್ಯವನ್ನೇ ದಹಿಸಿಬಿಡುವುದೆಂಬುದನ್ನು ಕೇಳಿರುವೆಯಲ್ಲವೇ, ನಲರಾಜ? (ನನ್ನ ಶೋಕಾಗ್ನಿಗೆ ಕಾಲವೆಂಬುದೇ ವಾಯುಪ್ರಾಯವಾಗಿದೆ. ದಿನಗಳು ಕಳೆದಂತೆಲ್ಲಾ ದಿನರೂಪವಾದ ವಾಯುವಿನ ಹೊಡೆತದಿಂದ ಶೋಕಾಗ್ನಿಯು ವೃದ್ಧಿಹೊಂದುತ್ತಿದೆ. ಕೆಲವು ದಿನಗಳಲ್ಲಿಯೇ ಶೋಕಾಗ್ನಿಯು ಶಮನವಾಗದಿದ್ದರೆ ಈ ಶೋಕಾಗ್ನಿಗೆ ಆಶ್ರಯಭೂತವಾಗಿರುವ ನನ್ನ ಶರೀರವನ್ನೇ ಇದು ದಹಿಸಿಬಿಡಬಹುದು.) ಪತ್ನಿಯು ಯಾವಾಗಲೂ ಪತಿಯಿಂದ ರಕ್ಷಣೀಯಳು ಮತ್ತು ಭರಣೀಯಳು. ಸತ್ಪುರುಷನೂ, ಧರ್ಮಜ್ಞನೂ ಆಗಿರುವ ನೀನು ಈ ಎರಡು ಮುಖ್ಯಧರ್ಮಗಳನ್ನೂ ಪರಿತ್ಯಜಿಸಿರುವುದೇಕೆ? ನೀನು ಪ್ರಾಜ್ಞನೆಂದೂ, ಸದ್ವಂಶೀಯನೆಂದೂ, ಸದಾ ದಯಾಪರನೆಂದೂ ಪ್ರಸಿದ್ಧನಾಗಿರುವೆ. ಆದರೆ

ಈಗ ಮಾತ್ರ ನೀನು ನನ್ನ ವಿಷಯದಲ್ಲಿ ನಿರ್ದಯನಾಗಿರುವೆ. ನನ್ನ ದೌರ್ಭಾಗ್ಯದಿಂದಾಗಿ ನೀನು ನಿರ್ದಯನಾಗಿರುವೆಯೆಂದು ಭಾವಿಸುತ್ತೇನೆ. ನರೋತ್ತಮನೇ! ನಿರ್ದಯನಾಗಬೇಡ. ನನ್ನ ಮೇಲೆ ದಯೆತೋರು. ಪ್ರಾಣಿದಯೆಯೇ ಪರಮೋತ್ಕೃಷ್ಟವಾದ ಧರ್ಮವೆಂದು ನೀನೇ ಹೇಳಿರುವುದನ್ನು ನಾನು ಕೇಳಿರುವೆನು. ಆದುದರಿಂದ ನಿನ್ನ ಸಹಧರ್ಮಿಣಿಗೆ ದಯೆ ತೋರುವುದು ಖಂಡಿತವಾಗಿಯೂ ಸಾಧುವಾಗಿದೆ."

ಪೂಜ್ಯರೇ! ಈ ನಿಮ್ಮ ಮಾತುಗಳಿಗೆ ಯಾರಾದರೂ ಉತ್ತರಿಸಲು ಮುಂದೆ ಬಂದಲ್ಲಿ–ಅವನಾರು? ಎಲ್ಲಿರುವನು? ಏನು ಮಾಡುತ್ತಿರುವನು?–ಇವುಗಳೆಲ್ಲವನ್ನೂ ವಿಶದವಾಗಿ ತಿಳಿದುಬನ್ನಿರಿ. ಅವನೇನು ಹೇಳುವನೋ ಅದನ್ನು ಯಥಾವತ್ತಾಗಿಯೇ ನನಗೆ ತಿಳಿಸಿರಿ. ನೀವು ಹೇಳುವ ಈ ಮಾತುಗಳು ನಾನು (ದಮಯಂತಿಯು) ಹೇಳಿ ಕಳುಹಿಸಿರುವ ಮಾತುಗಳೆಂದಾಗಲೀ ಇದಕ್ಕೆ ಕೊಡಲಿರುವ ಉತ್ತರವನ್ನು ಪುನಃ ನೀವು ನನಗೆ ತಿಳಿಸುವಿರೆಂದಾಗಲೀ ಯಾರಿಗೂ ತಿಳಿಯದಂತೆ ಎಚ್ಚರದಿಂದಿರಬೇಕು. ಈ ನಿಮ್ಮ ಮಾತುಗಳಿಗೆ ಉತ್ತರವನ್ನು ಕೊಡುವವನು ಬಡವನೇ? ಬಲ್ಲಿದನೇ? ನಿರ್ಗತಿಕನೇ? ಪದಚ್ಯುತನಾದವನೇ? ಅವನು ಮಾಡಬೇಕೆಂದಿರುವುದೇನು?–ಇತ್ಯಾದಿ ಅವನಿಗೆ ಸಂಬಂಧಿಸಿದ ಸಕಲವಿಷಯಗಳನ್ನೂ ನೀವು ತಿಳಿದುಕೊಂಡು ಬಂದು ನನಗೆ ಹೇಳಬೇಕು."

ಈ ರೀತಿಯಾಗಿ ದಮಯಂತಿಯಿಂದ ಸಲಹೆಪಡೆದ ಬ್ರಾಹ್ಮಣರು ನಿರ್ಭಾಗ್ಯನಾದ ನಲನನ್ನರಸಲು ನಾನಾದಿಕ್ಕುಗಳಿಗೆ ಪ್ರಯಾಣಮಾಡಿದರು. ಪಟ್ಟಣಗಳಲ್ಲಿ, ಊರು-ಕೇರಿಗಳಲ್ಲಿ, ಋಷಿಗಳ ಆಶ್ರಮಗಳಲ್ಲಿ, ಘೋಷ (ಗೊಲ್ಲರಹಳ್ಳಿ )ಗಳಲ್ಲಿ–ಇವೇ ಮುಂತಾದೆಡೆಗಳಲ್ಲೆಲ್ಲಾ ಬ್ರಾಹ್ಮಣರು ದಮಯಂತಿಯು ಹೇಳಿದ ಮಾತುಗಳನ್ನು ಪುನಃ ಪುನಃ ಹೇಳುತ್ತಾ ನಲನನ್ನು ಹುಡುಕಿಕೊಂಡು ಅಲೆಯುತ್ತಿದ್ದರು.

ಅಧ್ಯಾಯವು ಮುಗಿಯಿತು.

೭೦ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ಪರ್ಣಾದನು ದಮಯಂತಿಯೊಡನೆ ಬಾಹುಕನ ವಿಷಯವನ್ನು ಹೇಳಿದುದು : ದಮಯಂತಿಯು ಋತುಪರ್ಣನಿಗೆ ಸುದೇವನ ಮೂಲಕವಾಗಿ ತನ್ನ ಸ್ವಯಂವರವಾರ್ತೆಯನ್ನು ಹೇಳಿಕಳುಹಿಸಿದುದು

ಧರ್ಮಜ! ಅನೇಕದಿನಗಳು ಕಳೆದುವು. ಗೂಢಚಾರರು ಅನೇಕ ಕಡೆಗಳಲ್ಲಿ ಸಂಚರಿಸಿ ತಮ್ಮ ದೇಶಕ್ಕೆ ಹಿಂತಿರುಗಿದರು. ಅವರಲ್ಲಿ ಪರ್ಣಾದ ನೆಂಬ ಬ್ರಾಹ್ಮಣನು ಭೀಮರಾಜನ ಪುತ್ರಿಯಾದ ದಮಯಂತಿಯನ್ನು ಕಂಡು ತನ್ನ ಪ್ರವಾಸಕಾಲದಲ್ಲಿ ನಡೆದ ಒಂದು ಘಟನೆಯನ್ನು ವಿವರಿಸಿ ಹೇಳತೊಡಗಿದನು :

"ರಾಜಪುತ್ರಿ! ನಿನ್ನ ಅನುಜ್ಞೆಯನ್ನೂ ಮತ್ತು ಸಲಹೆಯನ್ನೂ ಪಡೆದ ನಾನು ಅನೇಕಾನೇಕ ಪಟ್ಟಣಗಳನ್ನೂ, ಊರುಗಳನ್ನೂ, ಹಳ್ಳಿಗಳನ್ನೂ ಸುತ್ತಾಡಿ ನಲನ ವಿಷಯವಾಗಿ ಯಾವುದೊಂದು ವಿಷಯವೂ ತಿಳಿಯದೇ ಕಟ್ಟಕಡೆಗೆ ಅಯೋಧ್ಯೆಗೆ ಹೋಗಿ ಅಲ್ಲಿನ ರಾಜನಾದ ಭಾಂಗಾಸುರಿಯ (ಋತುಪರ್ಣನ) ಆಸ್ಥಾನಕ್ಕೆ ಹೋದೆನು. ನೀನು ಹೇಳಿದ ಮಾತುಗಳನ್ನು ಋತುಪರ್ಣನ ಮುಂದೆ ಹೇಳಿದೆನು. ಒಮ್ಮೆಯಲ್ಲ ; ನಾಲ್ಕಾರು ಬಾರಿ ಹೇಳಿದೆನು. ನಾಲ್ಕಾರು ಬಾರಿ ಹೇಳಿದರೂ ಋತುಪರ್ಣನಾಗಲೀ, ಅವನ ಸಭೆಯಲ್ಲಿದ್ದವರಾಗಲೀ, ಅವನ ಪರಿವಾರದವರಾಗಲೀ–ಯಾವ ವಿಧವಾದ ಉತ್ತರವನ್ನೂ ಕೊಡಲಿಲ್ಲ. ಋತುಪರ್ಣನ ಅನುಜ್ಞೆಯನ್ನು ಪಡೆದು ನಾನು ಅರಮನೆಯಿಂದ ಹೊರಗೆ ಬರುತ್ತಿರುವಾಗ ಋತುಪರ್ಣನ ಅಶ್ವಶಾಲೆಯ ಅಧ್ಯಕ್ಷನಾದ ಬಾಹುಕನೆಂಬುವನು ಏಕಾಂತದಲ್ಲಿ ನನ್ನನ್ನು ಸಂಧಿಸಿ ನನ್ನೊಡನೆ ಮಾತನಾಡಿದನು. ಆ ಬಾಹುಕನು ಋತುಪರ್ಣನ ಸಾರಥಿ ಯಾಗಿದ್ದಾನೆ. ಅವನು ಕುರೂಪಿಯು. ಮೋಟಾದ ಕೈಗಳುಳ್ಳವನು. ಅಶ್ವ ಶಾಸ್ತ್ರದಲ್ಲಿ ಮಹಾನಿಪುಣನೆನಿಸಿಕೊಂಡಿರುತ್ತಾನೆ. ಅತಿವೇಗವಾಗಿ ಕುದುರೆ ಗಳನ್ನು ಓಡಿಸುವ ವಿಶೇಷನೈಪುಣ್ಯವನ್ನು ಪಡೆದಿರುತ್ತಾನೆ. ಮೇಲಾಗಿ ಅವನು ಪಾಕಶಾಸ್ತ್ರದಲ್ಲಿಯೂ ಅದ್ವಿತೀಯನೆನಿಸಿದ್ದಾನೆ. ಅವನು ನನ್ನೊಡನೆ

ಮಾತನಾಡಲು ಬಂದಾಗ ಅವನ ಕಣ್ಣುಗಳಲ್ಲಿ ನೀರು ತುಂಬಿತ್ತು. ಕ್ಷಣ-ಕ್ಷಣಕ್ಕೂ ನಿಟ್ಟುಸಿರುಬಿಡುತ್ತಿದ್ದನು. ಅವನು ಮೊದಲು ನನ್ನ ಯೋಗಕ್ಷೇಮ ವನ್ನು ವಿಚಾರಿಸಿ ಅನಂತರ ಹೀಗೆ ಹೇಳಿದನು :

"ಬ್ರಾಹ್ಮಣೋತ್ತಮರೇ! ನೀವು ಹೇಳಿದುದೆಲ್ಲವನ್ನೂ ನಾನೂ ಕೇಳಿದೆನು. ಈ ವಿಷಯದಲ್ಲಿ ನಾನು ಒಂದೆರಡು ಮಾತುಗಳನ್ನಾಡಲು ಇಚ್ಛಿಸುತ್ತೇನೆ.

**ವೈಷಮ್ಯಮಪಿ ಸಮ್ಪ್ರಾಪ್ತಾ ಗೋಪಾಯನ್ತಿ ಕುಲಸ್ತ್ರಿಯಃ ।**
**ಆತ್ಮಾನಮಾತ್ಮನಾ ಸತ್ಯೋ ಜಿತಃ ಸ್ವರ್ಗೋ ನ ಸಂಶಯಃ ॥೮॥**

**ರಹಿತಾ ಭರ್ತೃಭಿಶ್ಚೈವ ನ ಕುಪ್ಯನ್ತಿ ಕದಾಚನ ।**
**ಪ್ರಾಣಾಂಶ್ಚಾರಿತ್ರಕವಚಾನ್ಧಾರಯನ್ತಿ ವರಸ್ತ್ರಿಯಃ ॥೯॥**

ಪತಿವ್ರತೆಯರಾದ ಸ್ತ್ರೀಯರು ಎಂತಹ ಕಠಿನಪರಿಸ್ಥಿತಿಯಲ್ಲಿಯೂ ಕೂಡ ತಮ್ಮ ಪಾತಿವ್ರತ್ಯದ ಶಕ್ತಿಯಿಂದಲೇ ತಮ್ಮನ್ನು ತಾವೇ ರಕ್ಷಿಸಿಕೊಳ್ಳಲು ಸಮರ್ಥರಾಗುತ್ತಾರೆ ಮತ್ತು ಅಂತಹವರಿಂದ ಸ್ವರ್ಗವೂ ಜಯಿಸಲ್ಪಡುತ್ತದೆ. ಉತ್ತಮಸ್ತ್ರೀಯರು ಪತಿಯಿಂದ ಪರಿತ್ಯಜಿಸಲ್ಪಟ್ಟರೂ ಪತಿಯ ವಿಷಯವಾಗಿ ಕೋಪಿಸಿಕೊಳ್ಳುವುದಿಲ್ಲ. ಪತಿವ್ರತೆಯರಾದ ಸ್ತ್ರೀಯರು ತಮ್ಮ ಪ್ರಾಣರಕ್ಷಣೆಗೆ ಸದಾಚಾರವೆಂಬ ವಜ್ರಕವಚವನ್ನು ಧರಿಸಿದವರಾಗಿರುತ್ತಾರೆ.

**ವಿಷಮಸ್ಥೇನ ಮೂಢೇನ ಪರಿಭ್ರಷ್ಟಸುಖೇನ ಚ ।**
**ಯತ್ಸಾ ತೇನ ಪರಿತ್ಯಕ್ತಾ ತತ್ರ ನ ಕ್ರೋದ್ಧುಮರ್ಹತಿ ॥೧೦॥**

ತನ್ನನ್ನು ಬಿಟ್ಟುಹೋದ ಗಂಡನ ವಿಷಯದಲ್ಲಿಯೂ ಅವಳು ಖಂಡಿತ ವಾಗಿಯೂ ಕುಪಿತಳಾಗಕೂಡದು. ಏಕೆಂದರೆ : ಕಿಂಕರ್ತವ್ಯತಾಮೂಢನಾದ ಪತಿಯು ವಿಷಮಪರಿಸ್ಥಿತಿಯಲ್ಲಿದ್ದನು. ರಾಜ್ಯಭ್ರಷ್ಟನಾಗಿದ್ದನು. ಸುಖ ವೆಂಬುದೇ ಅವನಿಗಿರಲಿಲ್ಲ.

**ಪ್ರಾಣಯಾತ್ರಾಂ ಪರಿಪ್ರೇಪ್ಸೋಃ ಶಕುನೈರ್ಹೃತವಾಸಸಃ ।**
**ಆಧಿಭಿರ್ದಹ್ಯಮಾನಸ್ಯ ಶ್ಯಾಮಾ ನ ಕ್ರೋದ್ಧುಮರ್ಹತಿ ॥೧೧॥**

ಆಹಾರಕ್ಕೆಂದು ಪಕ್ಷಿಗಳನ್ನು ಹಿಡಿಯಲು ಹೋಗಿ ಪಕ್ಷಿಗಳಿಂದ ವಂಚಿತ ನಾಗಿ ತನ್ನ ವಸ್ತ್ರವನ್ನೂ ಕಳೆದುಕೊಂಡು–ಮನೋರೋಗಪೀಡಿತನಾದ,

ನಿರ್ಭಾಗ್ಯನೊಬ್ಬನ (ಗಂಡನ) ವಿಷಯದಲ್ಲಿ ಸಾಧ್ವಿಯಾದವಳು ಖಂಡಿತ ವಾಗಿಯೂ ಕುಪಿತಳಾಗಬಾರದು.

**ಸತ್ಕೃತಾಸತ್ಕೃತಾ ವಾಪಿ ಪತಿಂ ದೃಷ್ಟ್ವಾ ತಥಾಗತಮ್ ।**
**ಭ್ರಷ್ಟರಾಜ್ಯಂ ಶ್ರಿಯಾ ಹೀನಂ ಕ್ಷುಧಿತಂ ವ್ಯಸನಾಪ್ಲುತಮ್ ॥೧೨॥**

ಗಂಡನು ರಾಜ್ಯಭ್ರಷ್ಟನಾಗಿರುವಾಗ, ಸಕಲೈಶ್ವರ್ಯಗಳನ್ನೂ ಕಳೆದು ಕೊಂಡಿರುವಾಗ, ಹಸಿವು-ಬಾಯಾರಿಕೆಗಳಿಂದ ಬಳಲಿ ಬೆಂಡಾಗಿರುವಾಗ, ವ್ಯಸನಸಾಗರದಲ್ಲಿ ಮುಳುಗಿರುವಾಗ–ಆತನು ತನ್ನ ಹೆಂಡತಿಯ ವಿಷಯದಲ್ಲಿ ಒಳ್ಳೆಯದನ್ನೇ ಮಾಡಿರಲಿ ; ಅಥವಾ ಕೆಟ್ಟುದನ್ನೇ ಮಾಡಿರಲಿ– ಸಾಧ್ವಿಯಾದ, ಪತಿವ್ರತೆಯಾದ ಸ್ತ್ರೀಯು ಅಂತಹ ನಿರ್ಭಾಗ್ಯನ ವಿಷಯದಲ್ಲಿ ಖಂಡಿತವಾಗಿಯೂ ಕುಪಿತಳಾಗಬಾರದು.”

ಮಂಗಳಾಂಗಿಯೇ! ಬಾಹುಕನ ಆ ಮಾತುಗಳನ್ನು ಕೇಳಿ ನಾನು ಇದನ್ನು ನಿನಗೆ ತಿಳಿಸುವ ಸಲುವಾಗಿ ಒಡನೆಯೇ ನಮ್ಮ ದೇಶಕ್ಕೆ ಹಿಂದಿರುಗಿದೆನು. ನೀನಿನ್ನು ಯಥೋಚಿತವಾಗಿ ಕಾರ್ಯಮಾಡಬಹುದಾಗಿದೆ ಮತ್ತು ರಾಜನಿಗೂ ಯಥೋಚಿತವಾಗಿ ಈ ವಿಷಯವನ್ನು ತಿಳಿಸಬಹುದಾಗಿದೆ.”

ಯುಧಿಷ್ಠಿರ! ಪರ್ಣಾದನ ಮಾತುಗಳನ್ನು ಕೇಳಿದನಂತರ ದಮ ಯಂತಿಯು ಕಂಬನಿಗರೆಯುತ್ತಾ ತನ್ನ ತಾಯಿಯಿದ್ದೆಡೆಗೆ ಹೋಗಿ ಏಕಾಂತದಲ್ಲಿ ಅವಳೊಡನೆ ಹೇಳಿದಳು :

“ಅಮ್ಮ! ನನ್ನ ಉದ್ದೇಶವೇನೆಂಬುದು ನಮ್ಮ ತಂದೆಯಾದ ಭೀಮ ರಾಜನಿಗೆ ಖಂಡಿತವಾಗಿಯೂ ತಿಳಿಯಕೂಡದು. ಬ್ರಾಹ್ಮಣಶ್ರೇಷ್ಠನಾದ ಸುದೇವನನ್ನು ಕರೆಯಿಸಿ, ಅವನನ್ನು ನಿನ್ನ ಸಮ್ಮುಖದಲ್ಲಿಯೇ ಒಂದು ಮಹತ್ತ್ವಪೂರಿತವಾದ ಕಾರ್ಯಕ್ಕೆ ನಿಯೋಜಿಸುತ್ತೇನೆ. ನೀನು ನನ್ನ ಶುಭಾಕಾಂಕ್ಷಿಣಿಯಾಗಿದ್ದರೆ ನನ್ನ ಉದ್ದೇಶವೇನೆಂಬುದು ರಾಜನಿಗೆ ತಿಳಿಯದ ರೀತಿಯಲ್ಲಿ ನನ್ನೊಡನೆ ಸಹಕರಿಸು. ಸುದೇವನು ಈ ಕೂಡಲೇ ನಲನನ್ನು ಇಲ್ಲಿಗೆ ಕರೆತರುವ ಸಲುವಾಗಿ ಅಯೋಧ್ಯೆಗೆ ಪ್ರಯಾಣಮಾಡಲಿ.

**ಯಥಾ ಚಾಹಂ ಸಮಾನೀತಾ ಸುದೇವೇನಾಶು ಬಾನ್ಧವಾನ್ ।**

**ತೇನೈವ ಮಙ್ಗಲೇನಾಶು ಸುದೇವೋ ಯಾತು ಮಾ ಚಿರಮ್ ।**
**ಸಮಾನೇತುಂ ನಲಂ ಮಾತರಯೋಧ್ಯಾಂ ನಗರೀಮಿತಃ ॥೧೭॥**



ಯಾವ ಮಂಗಳಮುಹೂರ್ತದಲ್ಲಿ ವಿದರ್ಭದೇಶದಿಂದ ಹೊರಟ ಸುದೇವನು ನನ್ನನ್ನು ಹುಡುಕಿ ಕರೆತಂದು ನನ್ನ ಬಾಂಧವರೊಡನೆ ಸೇರುವಂತೆ ಮಾಡಿದನೋ–ಅದೇ ಮಂಗಳಮುಹೂರ್ತದಲ್ಲಿಯೇ ಹೊರಟು ನಲನನ್ನೂ ಅಯೋಧ್ಯೆಯಿಂದ ಇವನು ಕರೆತರಲಿ." ದಮಯಂತಿಯು ತಾಯಿಯೊಡನೆ ಹೀಗೆ ಹೇಳಿ ತನ್ನ ನಿವಾಸದಲ್ಲಿ ವಿಶ್ರಾಂತಿಯನ್ನು ಪಡೆಯುತ್ತಿದ್ದ ಪರ್ಣಾದನಿಗೆ ಯಥೋಚಿತವಾದ ಬಹುಮಾನವನ್ನಿತ್ತು ಹೇಳಿದಳು :

"ಪೂಜ್ಯರೇ! ನೀವು ನನಗಾಗಿ ಬಹಳ ಶ್ರಮಿಸಿರುವಿರಿ. ನಲನು

ಇಲ್ಲಿಗೆ ಆಗಮಿಸಿದನಂತರ ನಿಮಗೆ ಇನ್ನೂ ಹೆಚ್ಚಿನ ಬಹುಮಾನವನ್ನು ಕೊಡುತ್ತೇನೆ. ಬೇರೆ ಯಾರಿಂದಲೂ ಮಾಡಲಾಗದ ಕಾರ್ಯವನ್ನು ನೀವು ಮಾಡಿರುವಿರಿ. ನಿಶ್ಚಯವಾಗಿಯೂ ನಿಮ್ಮ ಸುವಾರ್ತೆಯಿಂದಾಗಿ ನಾನು ಪತಿಯೊಡನೆ ಬಹುಶೀಘ್ರವಾಗಿ ಸೇರುವೆನೆಂಬ ಭರವಸೆಯಿಂದಿರುತ್ತೇನೆ."

ಹೀಗೆಂದು ಹೇಳಿದ ರಾಜಕುಮಾರಿಗೆ ಯಥೋಚಿತವಾದ ಉತ್ತರವನ್ನಿತ್ತು ಅವಳನ್ನು ಆಶೀರ್ವದಿಸಿ, ತನ್ನ ಕಾರ್ಯವು ಫಲಿತವಾಯಿತೆಂಬ ಸಂತೋಷದಿಂದ ಪರ್ಣಾದನು ತನ್ನ ಮನೆಗೆ ಹಿಂದಿರುಗಿದನು.

ಪರ್ಣಾದನು ಪಾರಿತೋಷಕಗಳನ್ನು ಪಡೆದು ಹೊರಟುಹೋದ ಬಳಿಕ ಅತಿದುಃಖಿತೆಯಾಗಿದ್ದ ದಮಯಂತಿಯು ಸುದೇವನನ್ನು ಅರಮನೆಗೆ ಕರೆಯಿಸಿ ತನ್ನ ತಾಯಿಯ ಸಮ್ಮುಖದಲ್ಲಿ ಅವನೊಡನೆ ಹೇಳಿದಳು :

"ಪೂಜ್ಯರೇ! ನೀವಿಂದೇ ಇಲ್ಲಿಂದ ಹೊರಟು ಪಕ್ಷಿಯು ಹೋಗುವಷ್ಟು ಶೀಘ್ರವಾಗಿ ಅಯೋಧ್ಯಾಪಟ್ಟಣಕ್ಕೆ ಹೋಗಿ, ಅಯೋಧ್ಯೆಯ ರಾಜನಾದ ಋತುಪರ್ಣನನ್ನು ಸಂಧಿಸಿ ಅವನೊಡನೆ ಹೀಗೆ ಹೇಳಬೇಕು :

**ಆಸ್ಥಾಸ್ಯತಿ ಪುನರ್ಭೈಮೀ ದಮಯನ್ತೀ ಸ್ವಯಂವರಮ್ ।**
**ತತ್ರ ಗಚ್ಛನ್ತಿ ರಾಜಾನೋ ರಾಜಪುತ್ರಾಶ್ಚ ಸರ್ವಶಃ ॥೨೪॥**

**ತಥಾ ಚ ಗಣಿತಃ ಕಾಲಃ ಶ್ವೋಭೂತೇ ಸ ಭವಿಷ್ಯತಿ ।**
**ಯದಿ ಸಮ್ಭಾವನೀಯಂ ತೇ ಗಚ್ಛ ಶೀಘ್ರಮರಿಂದಮ ॥೨೫॥**

**ಸೂರ್ಯೋದಯೇ ದ್ವಿತೀಯಂ ಸಾ ಭರ್ತಾರಂ ವರಯಿಷ್ಯತಿ ।**
**ನ ಹಿ ಸ ಜ್ಞಾಯತೇ ವೀರೋ ನಲೋ ಜೀವತಿ ವಾ ನ ವಾ ॥೨೬॥**

'ಮಹಾರಾಜ! ಭೀಮರಾಜನ ಮಗಳಾದ ದಮಯಂತಿಯು ಪುನಃ ಸ್ವಯಂವರಮಾಡಿಕೊಳ್ಳುವವಳಾಗಿದ್ದಾಳೆ. ಈ ಸ್ವಯಂವರವಾರ್ತೆಯನ್ನು ಕೇಳಿ ನಾನಾದೇಶಗಳಿಂದ ರಾಜರೂ-ರಾಜಪುತ್ರರೂ ವಿದರ್ಭಕ್ಕೆ ಈಗಾಗಲೇ ಆಗಮಿಸುತ್ತಿದ್ದಾರೆ. ತಿಥಿ-ಕಾಲ-ಮುಹೂರ್ತಗಳ ಗಣನೆಯ ಪ್ರಕಾರ ಸ್ವಯಂವರಸಮಾರಂಭವು ನಾಳೆಯೇ ನಡೆಯುವುದಾಗಿದೆ. ನಿನಗೆ ನಾಳೆಯೊಳಗಾಗಿ ವಿದರ್ಭಕ್ಕೆ ಹೋಗುವ ಸಾಧ್ಯತೆಯಿದ್ದರೆ ಕಾಲವು ಸ್ವಲ್ಪವೂ

ಅತಿಕ್ರಮಿಸದಂತೆ ಒಡನೆಯೇ ಪ್ರಯಾಣಮಾಡುವವನಾಗು. ನಾಳೆ ಬೆಳಗಾಯಿತೆಂದರೆ ಅವಳು ಬೇರೆಯ ಪತಿಯನ್ನು ವರಿಸುತ್ತಾಳೆ. ಮಹಾಪರಾಕ್ರಮಿಯಾದ ನಲನು ಜೀವಿಸಿರುವನೋ ಇಲ್ಲವೋ–ಎಂಬ ವಾರ್ತೆಯು ಇದುವರೆಗೂ ತಿಳಿಯದಿರುವುದೇ ಅವಳ ಈ ನಿರ್ಧಾರಕ್ಕೆ ಕಾರಣವಾಗಿದೆ'– ಹೀಗೆಂದು ಹೇಳಿರಿ."

ದಮಯಂತಿಯ ಆ ಮಾತುಗಳನ್ನು ಕೇಳಿ ಸುದೇವನು ರಾಜಮಾತೆಯ ಅನುಮತಿಯನ್ನು ಪಡೆದು ಅತಿಶೀಘ್ರವಾಗಿ ಅಯೋಧ್ಯೆಗೆ ಹೋಗಿ ಸೇರಿದನು. ಅರಮನೆಯ ಸಭಾಂಗಣದಲ್ಲಿ ಸಿಂಹಾಸನಾರೂಢನಾಗಿದ್ದ ಋತುಪರ್ಣನನ್ನು ಸಂದರ್ಶಿಸಿ, ದಮಯಂತಿಯ ಮಾತುಗಳನ್ನು ಯಥಾವತ್ತಾಗಿ ಋತುಪರ್ಣನಿಗೆ ನಿವೇದಿಸಿದನು.

೭೦ನೆಯ ಅಧ್ಯಾಯವು ಮುಗಿಯಿತು.

೭೧ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ವಿದರ್ಭದೇಶಕ್ಕೆ ಋತುಪರ್ಣನ ಪ್ರಯಾಣ: ಬಾಹುಕನ ಅಶ್ವಸಂಚಲನನೈಪುಣ್ಯವನ್ನು ನೋಡಿ ವಾರ್ಷ್ಣೇಯ–ಋತುಪರ್ಣರ ಪ್ರಶಂಸೆ

ಯುಧಿಷ್ಠಿರ! ಸುದೇವನ ಮಾತುಗಳನ್ನು ಕೇಳಿ ಋತುಪರ್ಣನು ಕ್ಷಣಕಾಲ ಯೋಚಿಸಿ ತಾನು ಒಂದೇ ದಿನದಲ್ಲಿ ವಿದರ್ಭಕ್ಕೆ ಹೋಗಬೇಕಾದರೆ ಅಶ್ವಶಾಸ್ತ್ರದಲ್ಲಿ ನಿಪುಣನಾದ ಬಾಹುಕನ ಸಹಾಯದಿಂದ ಮಾತ್ರವೇ ಸಾಧ್ಯವೆಂದು ನಿರ್ಧರಿಸಿದವನಾಗಿ, ಬಾಹುಕನನ್ನು ಕರೆಯಿಸಿ ಅವನನ್ನು ಸುಮಧುರವಾದ ಮಾತುಗಳಿಂದ ಸಂತೈಸುತ್ತಾ ಹೇಳಿದನು :

"ಬಾಹುಕ! ನೀನು ಒಪ್ಪಿ ಒಂದೇ ದಿನದ ಅವಧಿಯಲ್ಲಿ ಒಯ್ಯುವೆಯಾದರೆ–ನಾಳೆಯೇ ನಡೆಯಲಿರುವ ದಮಯಂತಿಯ ಸ್ವಯಂವರಕ್ಕಾಗಿ ವಿದರ್ಭದೇಶಕ್ಕೆ ನಾನು ಹೋಗಲಿಚ್ಛಿಸಿದ್ದೇನೆ."

ಋತುಪರ್ಣನ ಆ ಮಾತುಗಳನ್ನು ಕೇಳಿದೊಡನೆಯೇ ನಲನ ಹೃದಯಕ್ಕೆ ಶೂಲದಿಂದಿರಿದಂತಾಯಿತು. ಬಹುವಾಗಿ ಸಂಕಟಪಟ್ಟನು. ಸಂಕಟವೆಂಬ ಕಿಚ್ಚಿನಿಂದ ಬೆಂದುಹೋದನು.

(ಆದರೆ ತನ್ನ ದುಃಖವನ್ನು ಹೊರಗೆ ಹೇಳುವಂತಿರಲಿಲ್ಲ. ತನ್ನೊಳಗೇ ಅನುಭವಿಸಬೇಕು. ಇದು ಇನ್ನೂ ಹೆಚ್ಚಿನ ತಾಪವನ್ನುಂಟುಮಾಡುತ್ತದೆ. ಏಕೆಂದರೆ : ಮನುಷ್ಯನು ತನಗೊದಗಿದ ಕಷ್ಟವನ್ನು ಮತ್ತೊಬ್ಬರಲ್ಲಿ ಹೇಳಿ ಕೊಂಡು ತನ್ನ ಮನಸ್ಸಿನ ಆತಂಕವನ್ನು ಕಡಿಮೆಮಾಡಿಕೊಳ್ಳಲು ಯತ್ನಿಸುತ್ತಾನೆ. ವಾಸ್ತವವಾಗಿಯೂ ತನ್ನ ಕಷ್ಟವನ್ನು ಇತರರೊಡನೆ ಹೇಳಿಕೊಳ್ಳುವುದರಿಂದ ಹೃದಯದ ಭಾರವು ಕಡಿಮೆಯಾದಂತಾಗುತ್ತದೆ. ಆದರೆ ನಲನಿಗೆ ತನ್ನ ದುಃಖವನ್ನು ಇತರರಲ್ಲಿ ಹೇಳಿಕೊಳ್ಳುವ ಅದೃಷ್ಟವೂ ಇರಲಿಲ್ಲ.)

ತನ್ನ ಹೃದಯದ ದುಃಖವನ್ನು ಹೃದಯದಲ್ಲಿಯೇ ಅಡಗಿಸಿಕೊಂಡು ಒಮ್ಮೆ ದೀರ್ಘವಾಗಿ ನಿಟ್ಟುಸಿರುಬಿಟ್ಟು ಹೀಗೆ ಯೋಚಿಸಿದನು : 'ದಮ ಯಂತಿಗೆ ಪುನಃ ಸ್ವಯಂವರವೇ? ಇರಬಹುದು. ಏಕಾಗಬಾರದು? ದುಃಖ ವೆಂಬ ಸಾಗರದಲ್ಲಿ ಮುಳುಗಿಹೋಗಿರುವ ಅವಳು ದಿಕ್ಕುಕಾಣದೇ ಹತಾಶ ಳಾಗಿ ಪುನರ್ವಿವಾಹಕ್ಕೂ ನಿರ್ಧರಿಸಿಬಿಟ್ಟಿರಬಹುದು. ಅಥವಾ ಹಾಗಿರ ಲಾರದು. ನನ್ನನ್ನು ಪಡೆಯುವ ಸಲುವಾಗಿ ದೇವತೆಗಳನ್ನೂ ತಿರಸ್ಕರಿಸಿದ ಆ ಸಾಧ್ವಿಯು ಪುನರ್ವಿವಾಹಕ್ಕೆ ನಿಶ್ಚಯಿಸಿರಲಾರಳು. ಈ ವಿನೂತನವಾದ ಯೋಜನೆಯನ್ನು ನನಗಾಗಿಯೇ ಕಲ್ಪಿಸಿರಬಹುದೇ? ನನ್ನನ್ನು ಕರೆಯಿಸಿ ಕೊಳ್ಳುವ ಸಲುವಾಗಿಯೇ ಹೀಗೆ ಮಾಡಿರಬಹುದೇ? ಒಂದು ವೇಳೆ ಅವಳು ತನ್ನ ಪುನರ್ವಿವಾಹವನ್ನೇ ನಿಶ್ಚಯಿಸಿರುವುದಾದರೆ ಅವಳ ಈ ನಿಶ್ಚಯವು ಬಹಳ ಕ್ರೂರವಾದುದೆಂದೇ ಹೇಳಬೇಕಾಗಿದೆ. ತಪಸ್ವಿನಿಯಾದ, ಪತಿವ್ರತೆ ಯಾದ, ಸಾಧ್ವಿಯಾದ ಅವಳು ಪಾಪಬುದ್ಧಿಯುಳ್ಳ, ಅಲ್ಪನಾದ ನನ್ನಿಂದ ವಂಚಿತಳಾದುದೇನೋ ನಿಜ.

**ಸ್ತ್ರೀಸ್ವಭಾವಶ್ಚಲೋ ಲೋಕೇ ಮಮ ದೋಷಶ್ಚ ದಾರುಣಃ ।**
**ಸ್ಯಾದೇವಮಪಿ ಕುರ್ಯಾತ್ಸಾ ವಿವಾಸಾದ್ಗತಸೌಹೃದಾ ॥೬॥**

ಪ್ರಪಂಚದಲ್ಲಿ ಸ್ತ್ರೀಯರು ಚಂಚಲಸ್ವಭಾವದವರು. ಅವರ ಮನಸ್ಸೆಂಬ ಪಕ್ಷಿಯು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಾರುತ್ತಲೇ ಇರುತ್ತದೆ. ಅವರ ಮನಸ್ಸಿನ ಇಂಗಿತವನ್ನು ಯಾರಿಂದಲೂ ತಿಳಿಯಲು ಸಾಧ್ಯವಾಗುವು ದಿಲ್ಲ. ಇದೂ ಅಲ್ಲದೇ ದಮಯಂತಿಯ ವಿಷಯದಲ್ಲಿ ನಾನೂ ಮಹಾಪರಾಧ ವನ್ನೇ ಮಾಡಿರುವೆನು. ಘೋರಾರಣ್ಯದಲ್ಲಿ ಅವಳನ್ನು ಏಕಾಕಿನಿಯನ್ನಾಗಿ

ಬಿಟ್ಟು ಹೊರಟುಬಂದೆನು. ನಾವಿಬ್ಬರೂ ಬೇರೆಯಾಗಿ ಬಹಳ ದಿನಗಳೇ ಕಳೆದುಹೋಗಿರುವುದರಿಂದ ದಮಯಂತಿಯು ನನ್ನ ಮೇಲಿಟ್ಟಿದ್ದ ಪ್ರೇಮವೂ ಬಹುಶಃ ಲುಪ್ತವಾಗಿಯೇ ಹೋಗಿರಬಹುದು. ಆದುದರಿಂದಲೇ ಪುನರ್ವಿವಾಹಮಾಡಿಕೊಳ್ಳಲೂ ನಿಶ್ಚಯಿಸಿರಬಹುದು. ಇಲ್ಲ ; ಹೀಗೆ ನಿಶ್ಚಯಿಸಲಾರಳೆಂದು ನನಗೆ ಮತ್ತೊಮ್ಮೆ ಭಾಸವಾಗುತ್ತದೆ. ಏಕೆಂದರೆ : ಸೂಕ್ಷ್ಮವಾದ ನಡುವಿನಿಂದ ಕೂಡಿರುವ ಅವಳು ನನ್ನನ್ನು ಬಹಳ ದಿನಗಳಿಂದ ಕಾಣದೇ ನಿರಾಶಳಾಗಿರಬಹುದು. ಆದರೆ ಪುನಃ ಸ್ವಯಂವರವನ್ನು ಮಾಡಿಕೊಳ್ಳುವ ನಿರ್ಧಾರಮಾಡಿರಲಾರಳು. ಮೇಲಾಗಿ ಅವಳು ಪುತ್ರವತಿ ಯಾಗಿದ್ದಾಳೆ. ನನ್ನಿಂದಲೇ ಇಬ್ಬರು ಮಕ್ಕಳನ್ನು ಪಡೆದಿರುತ್ತಾಳೆ. ಮಕ್ಕಳೊಡನೆಯೇ ಇರುತ್ತಾಳೆ. ಇದರ ಸತ್ಯಾಸತ್ಯತೆಗಳನ್ನು ಅಲ್ಲಿಗೇ ಹೋಗಿ ಪ್ರತ್ಯಕ್ಷವಾಗಿಯೇ ನೋಡಿ ನಿಶ್ಚಯಿಸುತ್ತೇನೆ. ಈಗ ನಾನು ಋತುಪರ್ಣನ ಇಚ್ಛಾನುಸಾರವಾಗಿ ನಡೆದು ಅವನ ಆಶಯವನ್ನೂ ಪೂರೈಸುತ್ತೇನೆ. ನನಗಾಗಿಯೂ ಈ ಕಾರ್ಯವನ್ನು ಮಾಡುತ್ತೇನೆ. ನನ್ನ ಮನಸ್ಸಿನ ದುಗುಡ ವನ್ನೂ ಪರಿಹಾರಮಾಡಿಕೊಳ್ಳುತ್ತೇನೆ.”

ಹೀಗೆಂದು ಬಾಹುಕನು (ನಲನು) ನಿಶ್ಚಯಿಸಿದವನಾಗಿ ಋತುಪರ್ಣನ ಮುಂದೆ ದೀನಭಾವದಿಂದ ನಿಂತು ಹೇಳಿದನು :

“ಮಹಾರಾಜ! ನಾನು ನಿನ್ನ ಆಜ್ಞೆಯನ್ನು ನಡೆಸಿಕೊಡುವುದಾಗಿ ಪ್ರತಿಜ್ಞೆಮಾಡುತ್ತೇನೆ. ವಿದರ್ಭರಾಜ್ಯಕ್ಕೆ ಒಂದೇ ಒಂದು ದಿನದಲ್ಲಿ ನಿನ್ನನ್ನು ಕರೆದೊಯ್ಯುತ್ತೇನೆ.”

ಯುಧಿಷ್ಠಿರ! ನಲನ ಆ ಮಾತುಗಳನ್ನು ಕೇಳಿ ಋತುಪರ್ಣನಿಗೆ ಅಮಿತಾನಂದವಾಯಿತು. ರಥಕ್ಕೆ ಕಟ್ಟಲು ಉತ್ತಮವಾದ ಕುದುರೆಗಳನ್ನು ಅಶ್ವಶಾಲೆಯಲ್ಲಿ ಆರಿಸಿಕೊಳ್ಳುವಂತೆ ಬಾಹುಕನಿಗೆ ಋತುಪರ್ಣನು ಆಜ್ಞೆ ಯನ್ನಿತ್ತನು. ಋತುಪರ್ಣನ ಆಜ್ಞಾನುಸಾರವಾಗಿ ಬಾಹುಕನು ಅಶ್ವಶಾಲೆಗೆ ಹೋಗಿ ಒಂದೇ ದಿನದಲ್ಲಿ ಬಹುದೂರ ಪ್ರಯಾಣಮಾಡುವ ಸಾಮರ್ಥ್ಯ ವುಳ್ಳ ಕುದುರೆಗಳನ್ನು ಪರೀಕ್ಷಿಸತೊಡಗಿದನು. ಬಾಹುಕನು ಕುದುರೆಗಳ ಪ್ರತಿ

ಯೊಂದು ಅವಯವಗಳು, ಅವುಗಳ ಬಣ್ಣ, ಕಾಲುಗಳು-ಮುಂತಾದುವು ಗಳನ್ನು ಸೂಕ್ಷ್ಮವಾಗಿ–ಸಾವಧಾನವಾಗಿ ಪರೀಕ್ಷಿಸುತ್ತಿರುವುದನ್ನು ನೋಡಿ ಋತುಪರ್ಣನಿಗೆ ಬೇಸರವಾಯಿತು. ಶೀಘ್ರವಾಗಿ ಕುದುರೆಗಳನ್ನು ತಂದು ರಥಕ್ಕೆ ಕಟ್ಟುವಂತೆ ಬಾಹುಕನನ್ನು ಅವಸರಪಡಿಸಿದನು.

(ಆದರೆ ಕುದುರೆಗಳ ಪರೀಕ್ಷೆಯು ಅವಸರದಿಂದ ಮಾಡುವ ಕಾರ್ಯ ವಲ್ಲ. ಬಹುದೂರದ ಪ್ರಯಾಣಕ್ಕೆ ಮತ್ತು ಬಹುವೇಗದ ಪ್ರಯಾಣಕ್ಕೆ ಅವು ಯೋಗ್ಯವಾಗಿವೆಯೆಂದು ನಲನಿಗೆ ಮನದಟ್ಟಾಗಬೇಕು. ಶೀಘ್ರವಾಗಿ ಕುದುರೆಗಳನ್ನೋಡಿಸಬೇಕಾದರೆ ಅಶ್ವಚಾಲಕನಿಗೆ ಕೌಶಲ್ಯವೊಂದಿದ್ದರೆ ಸಾಲದು. ಕುದುರೆಗಳಲ್ಲಿ ಓಡುವ ಸಾಮರ್ಥ್ಯವೂ ಇರಬೇಕು.)

ಋತುಪರ್ಣನು ಎಷ್ಟೇ ಅವಸರಪಡಿಸಿದರೂ ಬಾಹುಕನು ಕುದುರೆ ಗಳೆಲ್ಲವನ್ನೂ ಬಹುಸೂಕ್ಷ್ಮವಾಗಿ ಪರೀಕ್ಷಿಸಿದನಂತರವೇ ಉತ್ತಮವಾದ ತೇಜಿಗಳನ್ನು ಆಯ್ದು ರಥದ ಸಮೀಪಕ್ಕೆ ತಂದನು. ಅವನು ತಂದ ಕುದುರೆ ಗಳು ನೋಡಲು ಬಡಕಲು ಕುದುರೆಗಳಂತೆ ಕಾಣುತ್ತಿದ್ದುವು. ಆದರೂ ಸಹ ಬಹುದೂರ ಪ್ರಯಾಣಮಾಡುವ ಮತ್ತು ಬಹುವೇಗವಾಗಿ ಪ್ರಯಾಣ ಮಾಡುವ ಸಾಮರ್ಥ್ಯವನ್ನು ಪಡೆದಿದ್ದುವು. ಆ ಕುದುರೆಗಳ ಮುಖದಲ್ಲಿ ಒಳ್ಳೆಯ ತೇಜಸ್ಸಿದ್ದಿತು. ಅವುಗಳು ಒಳ್ಳೆಯ ಜಾತಿಯ ಕುದುರೆಗಳಾಗಿದ್ದುವು. ಉತ್ತಮತೇಜಿಗಳಿಗಿರಬೇಕಾದ ಸಕಲಗುಣಗಳೂ ಅವುಗಳಲ್ಲಿದ್ದುವು. ಉತ್ತಮವಾದ ಲಕ್ಷಣಗಳಿಂದ ಕೂಡಿದ್ದುವು. ಹೀನಸುಳಿಗಳಾಗಲೀ, ಕೆಟ್ಟ ಲಕ್ಷಣಗಳಾಗಲೀ ಅವುಗಳಲ್ಲಿರಲಿಲ್ಲ. ಮೂಗುಗಳು ಅಗಲವಾಗಿದ್ದುವು. ಅವು ಗಳಿಗೆ ದೊಡ್ಡ ಕೆನ್ನೆಗಳಿದ್ದುವು. ಆ ಕುದುರೆಗಳು ಸಿಂಧೂದೇಶದಲ್ಲಿ ಹುಟ್ಟಿದುವುಗಳಾಗಿದ್ದುವು. ಗಾಳಿಯ ವೇಗದಂತೆ ಬಹುವೇಗವಾಗಿ ಹೋಗಲು ಸಮರ್ಥವಾಗಿದ್ದುವು.

ಕೃಶಗಳಾಗಿದ್ದ ಆ ಕುದುರೆಗಳನ್ನು ಕಂಡು ಋತುಪರ್ಣನಿಗೆ ಸ್ವಲ್ಪ ಕೋಪವೇ ಬಂದಿತು. ಋತುಪರ್ಣನು ಬಾಹುಕನನ್ನು ಕೇಳಿದನು : "ಈ ಕುದುರೆಗಳಿಂದ ನೀನೇನು ಮಾಡಲು ಇಚ್ಛಿಸಿರುವೆ? ನಮ್ಮನ್ನು ಮೋಸ ಗೊಳಿಸುವುದು ಸರಿಯಲ್ಲ. ನಮ್ಮೊಡನೆ ಹಾಸ್ಯಮಾಡುವ ಸಮಯವೂ ಇದಲ್ಲ. ನೀನು ಆರಿಸಿ ತಂದಿರುವ ಈ ಕುದುರೆಗಳು ಬಡಕಲಾಗಿಯೂ,

ದುರ್ಬಲವಾಗಿಯೂ, ಭಾರಹೊರಲು ಅಸಮರ್ಥವಾಗಿಯೂ ಇವೆ. ಜೋರಾಗಿ ಉಸಿರಾಡಲು ಕೂಡ ಇವುಗಳಿಗೆ ಸಾಧ್ಯವಾಗುತ್ತಿಲ್ಲ. ಆದುದರಿಂದ ಇವು ಖಂಡಿತವಾಗಿಯೂ ವೇಗವಾಗಿ ಓಡಲಾರವು. ಇಂತಹ ಕುದುರೆಗಳು ನಮ್ಮನ್ನು ವಿದರ್ಭದೇಶಕ್ಕೆ ಹೇಗೆತಾನೇ ಒಂದೇ ದಿನದಲ್ಲಿ ಒಯ್ಯಲು ಸಮರ್ಥವಾದಾವು? ಇವುಗಳನ್ನು ಅವಲಂಬಿಸಿ ನಾವು ಅಷ್ಟು ದೂರಪ್ರಯಾಣವನ್ನು ಅದೂ ಮಹತ್ತ್ವಪೂರಿತವಾದ ಪ್ರಯಾಣವನ್ನು ಕೈಗೊಳ್ಳಲು ಸಾಧ್ಯವಿದೆಯೇ?"

ಅಶ್ವಪರೀಕ್ಷೆಯನ್ನರಿಯದ ಋತುಪರ್ಣನು ಕೇಳಿದ ಆ ಪ್ರಶ್ನೆಗಳಿಗೆ ಬಾಹುಕನು ಸಮಾಧಾನದಿಂದಲೇ ಉತ್ತರಿಸಿದನು :

"ಮಹಾರಾಜ!

**ಏಕೋ ಲಲಾಟೇ ದ್ವೌ ಮೂರ್ಧ್ನಿ ದ್ವೌ ದ್ವೌ ಪಾರ್ಶ್ವೋಪ-**
**ಪಾರ್ಶ್ವಯೋಃ ।**
**ದ್ವೌ ದ್ವೌ ವಕ್ಷಸಿ ವಿಜ್ಞೇಯೌ ಪ್ರಯಾಣೇ ಚೈಕ ಏವ ತು ॥೧೬॥**

**ಏತೇ ಹಯಾ ಗಮಿಷ್ಯನ್ತಿ ವಿದರ್ಭಾನ್ನಾತ್ರ ಸಂಶಯಃ ।**
**ಯಾನನ್ಯಾನ್ಮನ್ಯಸೇ ರಾಜನ್ಬ್ರೂಹಿ ತಾನ್ಯೋಜಯಾಮಿ ತೇ ॥೧೭॥**

ನಾನು ಆರಿಸಿಕೊಂಡಿರುವ ಈ ಎಲ್ಲ ಕುದುರೆಗಳಿಗೂ ಹಣೆಯ ಮೇಲೆ ಒಂದೊಂದು ಸುಳಿಯಿದೆ. ತಲೆಯಲ್ಲಿ ಎರಡೆರಡು ಸುಳಿಗಳಿವೆ. ಎರಡು ಪಾರ್ಶ್ವಗಳಲ್ಲಿಯೂ, ಉಪಪಾರ್ಶ್ವಗಳಲ್ಲಿಯೂ ಎರಡೆರಡು ಸುಳಿಗಳಂತೆ ನಾಲ್ಕು ಸುಳಿಗಳಿವೆ. ಇವುಗಳ ವಕ್ಷಸ್ಥಳದಲ್ಲಿ ಎರಡೆರಡು ಸುಳಿಗಳಿವೆ. ಮತ್ತು ಹಿಂಭಾಗದಲ್ಲಿ (ಬೆನ್ನಿನಲ್ಲಿ) ಒಂದೊಂದು ಸುಳಿಯಿದೆ. ಈ ರೀತಿಯಲ್ಲಿ ಹತ್ತು-ಹತ್ತು ಸುಳಿಗಳಿಂದ ಕೂಡಿರುವ ಈ ಕುದುರೆಗಳು ವಿದರ್ಭದೇಶಕ್ಕೆ ಒಂದೇ ದಿನದ ಅವಧಿಯಲ್ಲಿ ಪ್ರಯಾಣಮಾಡಲು ಖಂಡಿತವಾಗಿಯೂ ಸಮರ್ಥವಾಗಿವೆ. ಒಂದು ವೇಳೆ ನೀನು ಈ ಕುದುರೆಗಳು ಪ್ರಯೋಜನವಿಲ್ಲ ವೆಂದು ನಿರ್ಧರಿಸಿದರೆ ಬೇರಾವ ಕುದುರೆಗಳನ್ನು ರಥಕ್ಕೆ ಕಟ್ಟಬೇಕೆಂಬುದನ್ನು ನೀನೇ ಸೂಚಿಸು. ನೀನು ಹೇಳಿದ ಕುದುರೆಗಳನ್ನೇ ರಥಕ್ಕೆ ಕಟ್ಟುವೆನು."

ಬಾಹುಕನು ಅಶ್ವಶಾಸ್ತ್ರದಲ್ಲಿ ನಿಷ್ಣಾತನೆಂಬುದು ಋತುಪರ್ಣನಿಗೆ ತಿಳಿದಿದ್ದುದರಿಂದ ಬಾಹುಕನು ಆರಿಸಿದ ಕುದುರೆಗಳನ್ನು ರಥಕ್ಕೆ ಕಟ್ಟಬೇಡವೆಂದು

ಹೇಳುವ ಧೈರ್ಯವು ರಾಜನಿಗೆ ಬರಲಿಲ್ಲ. ಬಾಹುಕನನ್ನೇ ಸಂತೈಸುತ್ತಾ ಅವನನ್ನು ಕುರಿತು ಹೇಳಿದನು : "ಬಾಹುಕ! ನೀನು ಅಶ್ವಪರೀಕ್ಷೆಯಲ್ಲಿಯೂ ಮತ್ತು ಅಶ್ವಚಾಲನೆಯಲ್ಲಿಯೂ ನಿಷ್ಣಾತನಾಗಿರುವೆ. ಅಶ್ವಶಾಸ್ತ್ರದಲ್ಲಿಯೂ ನಿಪುಣನು. ಆದುದರಿಂದ ನೀನು ಆರಿಸಿರುವ ಈ ಕುದುರೆಗಳನ್ನೇ ತಡಮಾಡದೇ ರಥಕ್ಕೆ ಕಟ್ಟುವವನಾಗು."



ರಾಜನು ಹೀಗೆ ಹೇಳಿದನಂತರ ಬಾಹುಕನು ಕುಲ-ಶೀಲಸಮನ್ವಿತಗಳಾದ, ವೇಗಗತಿಯುಳ್ಳ ಆ ನಾಲ್ಕು ಕುದುರೆಗಳನ್ನು ರಥಕ್ಕೆ ಕಟ್ಟಿದನು. ಕುದುರೆಗಳು ರಥಕ್ಕೆ ನಲನಿಂದ ಹೂಡಲ್ಪಟ್ಟೊಡನೆಯೇ ಋತುಪರ್ಣರಾಜನು ರಥವನ್ನು ಹತ್ತಿದನು. ರಾಜನು ರಥಾರೋಹಣಮಾಡಿದೊಡನೆಯೇ ಕುದುರೆಗಳು ಮುಗ್ಗರಿಸಿ ಕೆಳಗೆ ಬಿದ್ದು ತಮ್ಮ ಮೊಳಕಾಲುಗಳನ್ನೂರಿ ನಿಂತು

ಕೊಂಡುವು. ಒಡನೆಯೇ ನರಶ್ರೇಷ್ಠನಾದ ಶ್ರೀಮಂತನಾದ ನಲನು ರಥದಿಂದ ಕೆಳಗಿಳಿದು, ಕುದುರೆಗಳ ಮೈದಡವಿ ಸಂತೈಸುತ್ತಾ ಅವುಗಳನ್ನು ಮೇಲಕ್ಕೆಬ್ಬಿಸಿ ಸಹಸಾರಥಿಯಾದ ವಾರ್ಷ್ಣೇಯನನ್ನು ರಥದಲ್ಲಿ ಕುಳಿತುಕೊಳ್ಳುವಂತೆ ಹೇಳಿ, ತಾನೂ ರಥಾರೋಹಣಮಾಡಿ, ಕುದುರೆಗಳ ಕಡಿವಾಣಗಳನ್ನು ಹಿಡಿದು ಒಮ್ಮೆ ಚಾವಟಿಯ ದನಿಮಾಡಿದನು. ಒಡನೆಯೇ ಕುದುರೆಗಳು ಬಹುವೇಗವಾಗಿ ಹೊರಟುವು. ಉತ್ತಮಜಾತಿಯ ಮತ್ತು ಶ್ರೇಷ್ಠವಾದ ಆ ಕುದುರೆಗಳು–ಬಾಹುಕನೊಮ್ಮೆ ತಮ್ಮ ಮೇಲೆ ಚಾವಟಿಯಾಡಿಸಿದೊಡನೆಯೇ–ಅಂತರಿಕ್ಷದಲ್ಲಿ ಹಾರಿಹೋಗುತ್ತಿವೆಯೋ ಎಂಬ ಭ್ರಾಂತಿಯನ್ನು ರಥದೊಳಗೆ ಕುಳಿತಿದ್ದವರಿಗೆ ಉಂಟುಮಾಡಿದುವು. ವಾಯುವೇಗದಿಂದ ಪ್ರಯಾಣಮಾಡುತ್ತಿದ್ದ ಆ ಕುದುರೆಗಳು ರಥವನ್ನು ಅಂತರಿಕ್ಷದಲ್ಲಿ ಹಾರಿಸಿಕೊಂಡು ಹೋಗುತ್ತಿರುವುದನ್ನು ಕಂಡು ಋತುಪರ್ಣರಾಜನು ಆಶ್ಚರ್ಯಭರಿತನಾದನು. ರಥದ ಚಕ್ರಗಳ ಘೋಷ, ಬಾಹುಕನು ಕುದುರೆಗಳನ್ನು ನಡೆಸುತ್ತಿದ್ದ ಧಾಟಿ–ಇವುಗಳನ್ನು ಕಂಡು ವಾರ್ಷ್ಣೇಯನು ಬಾಹುಕನಿಗಿರುವ ಅಶ್ವವಿದ್ಯಾಪರಿಶ್ರಮದ ವಿಷಯವಾಗಿ ಆಲೋಚಿಸುತ್ತಾ ತನ್ನಲ್ಲಿಯೇ ತಾನು ಹೇಳಿಕೊಂಡನು :

"ಇವನೇನು ದೇವೇಂದ್ರನ ಸಾರಥಿಯಾದ ಮಾತಲಿಯೇ? ವೇಷ ಮರೆಯಿಸಿಕೊಂಡು ಬಾಹುಕನಾಗಿ ಬಂದಿರುವನೇ? ಮಾತಲಿಗಿರುವ ಅಶ್ವಚಾಲನ ವಿದ್ಯಾಪ್ರೌಢಿಮೆಯನ್ನು ನಾನು ಈ ಬಾಹುಕನಲ್ಲಿಯೂ ಕಾಣುತ್ತಿದ್ದೇನೆ. ಅವನಿಗಿರುವ ಲಕ್ಷಣಗಳೆಲ್ಲವೂ ಇವನಲ್ಲಿಯೂ ಇವೆ. ಅಥವಾ ಕುದುರೆಗಳ ವಿಜ್ಞಾನವನ್ನು ಸಂಪೂರ್ಣವಾಗಿ ತಿಳಿದಿರುವ ಶಾಲಿಹೋತ್ರನೇ ಇವನಿರಬಹುದೇ? ಅಥವಾ ಶಾಲಿಹೋತ್ರನೇ ಪುನಃ ಭೂಮಿಯಲ್ಲಿ ಬಾಹುಕನಾಗಿ ಅವತರಿಸಿರುವನೇ? ಅಥವಾ ಶತ್ರುನಿಬರ್ಹಣನಾದ ನಲನೇ ಇಲ್ಲಿಗೆ ಬಂದುಬಿಟ್ಟಿರಬಹುದೇ? ಹಾಗಿಲ್ಲದಿದ್ದರೆ ನಲನು ತಿಳಿದಿರುವ ಅಶ್ವಶಾಸ್ತ್ರದ ಪೂರ್ಣಪರಿಚಯವು ಬಾಹುಕನಿಗೂ ಇರಬಹುದೇ? ಏಕೆಂದರೆ : ಅಶ್ವವಿದ್ಯೆಯಲ್ಲಿ ನಲ ಮತ್ತು ಬಾಹುಕರು ಸಮಾನರೆಂದೇ ಭಾವಿಸುತ್ತೇನೆ. ನನ್ನ ಸ್ಮರಣೆಯಲ್ಲಿರುವಂತೆ ನಲನಿಗೂ ಈ ಬಾಹುಕನಷ್ಟೇ ವಯಸ್ಸಾಗಿದೆ. ಈ ಬಾಹುಕನು ಪುರುಷಶ್ರೇಷ್ಠನಾದ ನಲನೇ ಆಗಿಲ್ಲದಿರಬಹುದು. ಆದರೂ ನಲನಿಗೆ ಸಮ

ನಾದ ಅಶ್ವಶಾಸ್ತ್ರಪ್ರಾವೀಣ್ಯವುಳ್ಳವನಂತೂ ಆಗಿದ್ದಾನೆಂಬುದರಲ್ಲಿ ಸಂಶಯವೇ ಇಲ್ಲ. ದೈವೇಚ್ಛೆಯಿಂದಲೋ, ದುರದೃಷ್ಟದಿಂದಲೋ ಅಥವಾ ಶಾಸ್ತ್ರವಿಧಿ ನಿಯಮದಂತೆ ನಡೆಯುವ ಆಶಯದಿಂದಲೋ ಮಹಾತ್ಮರು ಈ ಪೃಥ್ವಿಯಲ್ಲಿ ವೇಷಗಳನ್ನು ಮರೆಸಿಕೊಂಡು ತಿರುಗುತ್ತಿರುತ್ತಾರೆ. ಈ ಬಾಹುಕನೇನೋ ವಿಕಾರವಾದ ರೂಪವುಳ್ಳವನಾಗಿದ್ದಾನೆ. ಆದರೂ ನಲನೇಕೆ ತನ್ನ ಸುಂದರಾ ಕಾರವನ್ನು ಈ ವಿಧವಾಗಿ ಪರಿವರ್ತಿಸಿಕೊಂಡಿರಬಾರದೆಂದು ನನಗನಿಸುತ್ತದೆ. ಆದುದರಿಂದ ಈ ಬಾಹುಕನು ವೇಷಮರೆಯಿಸಿಕೊಂಡಿರುವ ಮಹಾತ್ಮ ನೊಬ್ಬನಾಗಿರಬಹುದೆಂದೇ ನನ್ನ ನಿರ್ಧಾರವಾಗಿದೆ. ಇವನ ಆಕಾರದಲ್ಲಿ ವೈರೂಪ್ಯವಿರುವ ಮಾತ್ರದಿಂದ ನನ್ನ ಬುದ್ಧಿಯು ವ್ಯತ್ಯಾಸಹೊಂದಲಾರದು. ನಲನೇ ಇವನೆಂದು ನಿರ್ಧರಿಸಲು ನನಗಿರುವ ಕಷ್ಟವೆಂದರೆ–ಇವನಿಗಿರುವ ವಿರೂಪವಾದ ಆಕಾರವು ಮಾತ್ರ. ನಲನಾದರೋ ಅತಿಸುಂದರನಾಗಿದ್ದನು. ಇದೊಂದು ವ್ಯತ್ಯಾಸವನ್ನು ಬಿಟ್ಟರೆ ಉಳಿದ ವಿಷಯಗಳಲ್ಲಿ ನಲನೇ ಬಾಹುಕ ನೆಂದು ಹೇಳುವ ಸಾಧ್ಯತೆಯಿದೆ. ಇಬ್ಬರ ವಯಸ್ಸೂ ಒಂದೇ ಆಗಿರುವುದು. ಅಶ್ವವಿದ್ಯಾಪ್ರಾವೀಣ್ಯದಲ್ಲಿ ಇಬ್ಬರಿಗೂ ಸ್ವಲ್ಪವಾದರೂ ತಾರತಮ್ಯವೇ ಇರು ವುದಿಲ್ಲ. ನಲನಂತೆಯೇ ಬಾಹುಕನೂ ಸರ್ವಲಕ್ಷಣಗಳಿಂದಲೂ ಕೂಡಿರು ವನು. (ಶರೀರವು ವಿರೂಪವಾದರೂ ರಾಜಲಕ್ಷಣಗಳು ಮಾತ್ರ ಅಚ್ಚಳಿಯದೇ ಇವೆ.) ಆದುದರಿಂದ ನಾನು ಇವನನ್ನು ನಲನೆಂದೇ ನಿರ್ಧರಿಸಿದ್ದೇನೆ.”

ಯುಧಿಷ್ಠಿರ! ನಲನ ಸಾರಥಿಯಾಗಿದ್ದ ವಾರ್ಷ್ಣೇಯನು ಇವೇ ಮುಂತಾಗಿ ಯೋಚಿಸುತ್ತಾ ಆ ಯೋಚನೆಯಲ್ಲಿಯೇ ಮಗ್ನನಾಗಿಹೋದನು. ಋತುಪರ್ಣರಾಜನೂ ಬಾಹುಕನ ಅಶ್ವಶಾಸ್ತ್ರದ ನೈಪುಣ್ಯವನ್ನು ನೋಡಿ ಪ್ರಶಂಸಾರೂಪವಾಗಿ ತಲೆದೂಗುತ್ತಾ, ವೇಗಯುಕ್ತವಾದ ಮತ್ತು ಆನಂದ ದಾಯಕವಾದ ಆ ಸುಖಪ್ರಯಾಣದಿಂದ ಮಹಾನಂದವನ್ನು ಅನುಭವಿ ಸಿದನು. ಅಶ್ವಗಳ ನಡಿಗೆಯಲ್ಲಿಯೇ ಬಾಹುಕನಿಗಿರುವ ನೆಟ್ಟ ಮನಸ್ಸು, ಕುದುರೆಗಳನ್ನು ನಡೆಸುವುದರಲ್ಲಿ ಅವನಿಗಿರುವ ಉತ್ಸಾಹ, ಅವನು ಕಡಿವಾಣಗಳನ್ನು ಹಿಡಿದಿರುವ ಧಾಟಿ–ಇವುಗಳನ್ನು ನೋಡಿ ಋತುಪರ್ಣನು ಆನಂದಪರವಶನಾದನು.

೭೧ನೆಯ ಅಧ್ಯಾಯವು ಮುಗಿಯಿತು.

೭೨ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ಪ್ರಯಾಣಕಾಲದಲ್ಲಿ ಋತುಪರ್ಣನ ಅಂಗವಸ್ತ್ರವು ಕೆಳಗೆ ಬಿದ್ದುದು : ವಿಭೀತಕವೃಕ್ಷದ ಪರ್ಣ-ಫಲಗಳ ಸಂಖ್ಯಾ ವಿಷಯದಲ್ಲಿ ನಲ-ಋತುಪರ್ಣರ ಸಂಭಾಷಣೆ : ನಲನು ಋತುಪರ್ಣನಿಂದ ದ್ಯೂತವಿದ್ಯೆಯನ್ನು ಕಲಿತುದು : ನಲನ ಶರೀರದಿಂದ ಕಲಿಯ ನಿರ್ಗಮನ

ಯುಧಿಷ್ಠಿರ! ನಲನು ನಿಶ್ಚಯವಾಗಿಯೂ ಪಕ್ಷಿಯು ಹಾರುವಂತೆಯೇ ರಥವನ್ನು ಆಕಾಶದಲ್ಲಿ ಹಾರಿಸಿಕೊಂಡೇ ನದೀ-ನದಗಳನ್ನೂ, ಗಿರಿ-ದುರ್ಗ-ಪರ್ವತಗಳನ್ನೂ, ಸರೋವರಗಳನ್ನೂ, ಅರಣ್ಯಗಳನ್ನೂ ದಾಟಿ ಮುಂದುವರಿದನು. ರಥವು ಅಷ್ಟೊಂದು ವೇಗದಲ್ಲಿ ಓಡುತ್ತಿರುವಾಗ ಶತ್ರುಹಂತಕನಾದ ಋತುಪರ್ಣನು ತನ್ನ ಅಂಗವಸ್ತ್ರವು ಜಾರಿ ರಥದಿಂದ ಕೆಳಗೆ ಬಿದ್ದುದನ್ನು ಕಂಡನು. ಉತ್ತರೀಯವು ರಥದಿಂದ ಬಿದ್ದುಹೋದೊಡನೆಯೇ ಒಂದು ಕ್ಷಣವಾದರೂ ಕಾಲವಿಳಂಬಮಾಡದೇ ಮಹಾತ್ಮನಾದ ಋತುಪರ್ಣನು ಬಾಹುಕನಿಗೆ ಹೇಳಿದನು : "ಬಾಹುಕ! ನನ್ನ ಅಂಗವಸ್ತ್ರವು ರಥದ ವೇಗದಿಂದಾಗಿ ಹಾರಿ ಕೆಳಗೆ ಬಿದ್ದುಹೋಯಿತು. ನನ್ನ ಅಂಗವಸ್ತ್ರವನ್ನು ನಾನು ಪುನಃ ಪಡೆಯಬೇಕೆಂದಿದ್ದೇನೆ. ಅಶ್ವವಿದ್ಯೆಯಲ್ಲಿ ಪಾರಂಗತನಾಗಿರುವ ನೀನು ಈ ಕುದುರೆಗಳ ಕಡಿವಾಣಗಳನ್ನು ಬಿಗಿಯಾಗಿ ಹಿಡಿದು ನಿಲ್ಲಿಸು. ವಾರ್ಷ್ಣೇಯನು ಈ ಕೂಡಲೇ ಹೋಗಿ ಬಿದ್ದುಹೋದ ಅಂಗವಸ್ತ್ರವನ್ನು ತರಲಿ. ಅವನು ಅಂಗವಸ್ತ್ರವನ್ನು ತರುವವರೆಗೂ ರಥವು ಇಲ್ಲಿಯೇ ಇರಲಿ."

"ಮಹಾರಾಜ! ನಿನ್ನ ಅಂಗವಸ್ತ್ರವು ಬಹಳ ದೂರದಲ್ಲಿ ಬಿದ್ದಿದೆ. ಅದು ಬಿದ್ದ ಜಾಗದಿಂದ ಒಂದು ಯೋಜನದಷ್ಟು ದೂರ ನಾವೀಗ ಪ್ರಯಾಣ ಮಾಡಿಬಿಟ್ಟಿದ್ದೇವೆ. ಆದುದರಿಂದ ವಾರ್ಷ್ಣೇಯನು ಹೋಗಿ ಅಂಗವಸ್ತ್ರವನ್ನು ತರುವ ಸಾಧ್ಯತೆಯೇ ಇಲ್ಲ."

ನಲನ ಆ ಮಾತನ್ನು ಕೇಳಿ ಋತುಪರ್ಣನು ಅಂಗವಸ್ತ್ರದ ಆಸೆಯನ್ನು ಬಿಟ್ಟುಬಿಟ್ಟನು.

ರಥವು ಯಥಾಪೂರ್ವವೇಗದಿಂದಲೇ ಮುಂದೆ ಓಡುತ್ತಿದ್ದಿತು. ರಥವು

ಓಡುತ್ತಿದ್ದ ಹಾದಿಯಲ್ಲಿ ಕಾಡಿನ ಮಧ್ಯದಲ್ಲಿ ಫಲ-ಪುಷ್ಪಭರಿತವಾಗಿದ್ದ ವಿಭೀತಕವೃಕ್ಷವನ್ನು ಋತುಪರ್ಣನು ಕಂಡನು. ಆ ವೃಕ್ಷವನ್ನು ನೋಡಿದೊಡನೆಯೇ ಋತುಪರ್ಣನು ಬಾಹುಕನನ್ನು ಕುರಿತು ಹೇಳಿದನು : "ಬಾಹುಕ! ನನಗೆ ಗಣಿತಶಾಸ್ತ್ರದಲ್ಲಿರುವ ಪ್ರಾವೀಣ್ಯವನ್ನಾದರೂ ನೋಡು. ಯಾವ ಮನುಷ್ಯನೂ ಎಲ್ಲವನ್ನೂ ತಿಳಿದಿರುವುದಿಲ್ಲ.

**ಸರ್ವಃ ಸರ್ವಂ ನ ಜಾನಾತಿ ಸರ್ವಜ್ಞೋ ನಾಸ್ತಿ ಕಶ್ಚನ ।**
**ನೈಕತ್ರ ಪರಿನಿಷ್ಠಾಸ್ತಿ ಜ್ಞಾನಸ್ಯ ಪುರುಷೇ ಕ್ವಚಿತ್ ॥೮॥**

ಎಂಬ ಆರ್ಯೋಕ್ತಿಯನ್ನು ನೀನೂ ಕೇಳಿರುವೆಯಲ್ಲವೇ? ಬಾಹುಕ! ಸರ್ವಜ್ಞನಾದವನು, ಪ್ರಪಂಚದಲ್ಲಿರುವ ಎಲ್ಲ ಶಾಸ್ತ್ರಗಳಲ್ಲಿಯೂ ಪ್ರವೀಣನಾದವನು–ಎಲ್ಲಿಯೂ ಇರಲಾರನು. ಅಥವಾ ಇರಲು ಸಾಧ್ಯವೂ ಇಲ್ಲ. ಸಕಲಶಾಸ್ತ್ರಗಳೂ, ಸಕಲವಿಜ್ಞಾನಗಳೂ ಒಬ್ಬನಲ್ಲಿಯೇ ಮೂರ್ತಿಮತ್ತಾಗಿ ನೆಲೆಸಿರಲಾರವು. ಒಬ್ಬೊಬ್ಬನಿಗೆ ಒಂದೊಂದು ವಿದ್ಯೆಯಲ್ಲಿ ಪ್ರಾವೀಣ್ಯವಿರುತ್ತದೆ. ಹಾಗೆಯೇ ನನಗೆ ಗಣಿತಶಾಸ್ತ್ರದಲ್ಲಿ ಪ್ರಾವೀಣ್ಯವಿದೆಯೆಂದರೆ ಆತ್ಮಪ್ರಶಂಸೆಯಾಗಲಾರದು. ಬಾಹುಕ! ನಮಗೆ ಮಾರ್ಗದಲ್ಲಿ ಕಾಣುತ್ತಿರುವ ಈ ವಿಭೀತಕವೃಕ್ಷವನ್ನು ನೀನೂ ನೋಡುತ್ತಿರುವೆಯಲ್ಲವೇ?

**ವೃಕ್ಷೇಽಸ್ಮಿನ್ಯಾನಿ ಪರ್ಣಾನಿ ಫಲಾನ್ಯಪಿ ಚ ಬಾಹುಕ ।**
**ಪತಿತಾನ್ಯಪಿ ಯಾನ್ಯತ್ರ ತತ್ರೈಕಮಧಿಕಂ ಶತಮ್ ॥೯॥**

**ಏಕಪತ್ರಾಧಿಕಂ ಚಾತ್ರ ಫಲಮೇಕಂ ಚ ಬಾಹುಕ ।**
**ಪಞ್ಚಕೋಟ್ಯೋಽಥ ಪತ್ರಾಣಾಂ ದ್ವಯೋರಪಿ ಚ ಶಾಖಯೋಃ ॥೧೦॥**

**ಪ್ರಚಿನುಹ್ಯಸ್ಯ ಶಾಖೇ ದ್ವೇ ಯಾಶ್ಚಾಪ್ಯನ್ಯಾಃ ಪ್ರಶಾಖಿಕಾಃ ।**
**ಆಭ್ಯಾಂ ಫಲಸಹಸ್ರೇ ದ್ವೇ ಪಞ್ಚೋನಂ ಶತಮೇವ ಚ ॥೧೧॥**

ಈ ವೃಕ್ಷದಲ್ಲಿ ಕೆಳಗುದುರಿರುವ ಎಲೆಗಳೂ ಮತ್ತು ಫಲಗಳೂ ವೃಕ್ಷದ ಮೇಲಿರುವ ಎಲೆಗಳಿಗಿಂತಲೂ ಮತ್ತು ಫಲಗಳಿಗಿಂತಲೂ ಅನುಕ್ರಮವಾಗಿ ನೂರೊಂದು ಹೆಚ್ಚಾಗಿವೆ. ಈ ವೃಕ್ಷದ ಎರಡು ದೊಡ್ಡ ರೆಂಬೆಗಳಲ್ಲಿ ಐದು ಕೋಟಿ ಎಲೆಗಳಿವೆ. ಪೂರ್ವದಿಕ್ಕಿನಲ್ಲಿರುವ ಎರಡು ಕೊಂಬೆಗಳಲ್ಲಿಯೂ ಮತ್ತು ಅವುಗಳ ಉಪಶಾಖೆಗಳಲ್ಲಿಯೂ ಒಟ್ಟು ಎರಡು ಸಾವಿರದ ತೊಂಬತ್ತೈದು

ಹಣ್ಣುಗಳಿವೆ. ನೀನು ಬೇಕಾದರೆ ಈ ಮರದ ಎರಡು ಶಾಖೆಗಳನ್ನೂ ಮತ್ತು ಉಪಶಾಖೆಗಳನ್ನೂ ಪರೀಕ್ಷಿಸಿದೆಯಾದರೆ ನಾನು ಹೇಳಿದ ಫಲಿತಾಂಶವು ಸಿಕ್ಕುವುದು."

ಋತುಪರ್ಣನ ಮಾತುಗಳನ್ನು ಕೇಳಿದೊಡನೆಯೇ ಬಾಹುಕನು ನಸುನಕ್ಕು ರಥವನ್ನು ನಿಲ್ಲಿಸಿ ಭಾಂಗಾಸುರಿಯೊಡನೆ ಹೇಳಿದನು :

"ಮಹಾರಾಜ! ನಾನೀಗ ಈ ರೆಂಬೆಗಳನ್ನು ಕತ್ತರಿಸಿ, ಎಲೆಗಳನ್ನು ಎಣಿಸುವುದು ಅಸಾಧ್ಯವೆಂದೆಣಿಸಿ ಪ್ರಮಾಣೀಕರಿಸಲು ಸಾಧ್ಯವಾಗದ ನಿನ್ನ ವಿದ್ಯಾಪ್ರೌಢಿಮೆಯನ್ನು ಹೇಳುತ್ತಿರುವೆಯಲ್ಲವೇ? ನಿನ್ನ ವಿದ್ಯಾಪ್ರೌಢಿಮೆಯನ್ನು ಪ್ರತ್ಯಕ್ಷವಾಗಿ ಕಾಣಲು ನಾನೀಗ ಈ ರೆಂಬೆಗಳನ್ನು ಕತ್ತರಿಸಿ ಎಣಿಕೆ ಮಾಡಿಯೇ ನಿನ್ನ ವಿದ್ಯಾಪ್ರೌಢಿಮೆಯನ್ನು ನಿರ್ಧರಿಸಿಬಿಡುವೆನು. ನಾನು ಈ ಹಣ್ಣುಗಳನ್ನೂ ಎಣಿಸಿಬಿಟ್ಟರೆ ನೀನು ಹೇಳಿರುವುದು ಕೇವಲ ಊಹೆಯೋ? ಅಥವಾ ನಿಶ್ಚಯವಾಗಿಯೂ ಗಣಿತಶಾಸ್ತ್ರಾಭ್ಯಾಸದಿಂದ ಪ್ರಾಪ್ತವಾದ ಜ್ಞಾನವೋ?–ಎಂಬುದು ನಿರ್ಧಾರವಾಗುತ್ತದೆ. ಸಂಶಯಕ್ಕೆ ಅವಕಾಶವೇ ಇರುವುದಿಲ್ಲ. ಮಹಾರಾಜ! ಆದುದರಿಂದ ನಿನ್ನೆದುರಿನಲ್ಲಿಯೇ ನಾನೀ ವಿಭೀತಕವೃಕ್ಷವನ್ನು ಕಡಿದುಹಾಕುವೆನು. ಈ ಮರವನ್ನು ಕಡಿದು ಹಣ್ಣು ಗಳನ್ನು ಎಣಿಕೆಮಾಡಿದ ಹೊರತು ನೀನು ಹೇಳಿದುದು ನಿಜವೇ ಅಥವಾ ಸುಳ್ಳೇ–ಎಂಬುದನ್ನು ನಾನು ನಿಶ್ಚಯಮಾಡಲಾರೆನು. ಎಣಿಕೆಯು ಮುಗಿಯುವವರೆಗೂ ವಾರ್ಷ್ಣೇಯನು ಕುದುರೆಗಳ ಕಡಿವಾಣಗಳನ್ನು ಹಿಡಿದುಕೊಂಡಿರಲಿ."

ಬಾಹುಕನು ಇಂತಹ ನಿರ್ಧಾರವನ್ನು ತೆಗೆದುಕೊಳ್ಳುವನೆಂದು ಋತುಪರ್ಣನು ಭಾವಿಸದೇ ಇದ್ದಿರಬಹುದು. ಆದರೆ ಋತುಪರ್ಣನಿಗೆ ತನ್ನ ವಿದ್ಯೆಯ ವಿಷಯದಲ್ಲಿ ಅಪನಂಬಿಕೆಯಿರಲಿಲ್ಲ. ತಾನು ಹೇಳಿರುವುದು ಅಕ್ಷರಶಃ ಸತ್ಯವೆಂಬ ದೃಢವಿಶ್ವಾಸವು ಋತುಪರ್ಣನಿಗಿದ್ದಿತು. ಆದರೆ ಬಾಹುಕನು ಹಣ್ಣುಗಳನ್ನೆಣಿಸಲು ಕಾಲವೆಷ್ಟಾಗಬಹುದು? ಒಂದು ದಿನದ ಅವಧಿಯಲ್ಲಿ ವಿದರ್ಭವನ್ನು ಸೇರುವುದೆಂತು?–ಈ ಸಮಸ್ಯೆಗಳು ರಾಜನ ಮುಂದೆ ಬಂದುವು. ಬಾಹುಕನನ್ನು ಕುರಿತು ಹೇಳಿದನು :

"ಬಾಹುಕ! ಇದು ಕಾಲಯಾಪನೆಮಾಡುವ ಸಮಯವಲ್ಲ. ನಾವು ವಿದರ್ಭಕ್ಕೆ ಶೀಘ್ರವಾಗಿ ಹೋಗಲೇಬೇಕಾಗಿದೆ."

"ಮಹಾರಾಜ! ಅತ್ಯಲ್ಪಕಾಲದಲ್ಲಿಯೇ ಹಣ್ಣುಗಳನ್ನು ಎಣಿಕೆಮಾಡಿ ಬಿಡುವೆನು. ಅಲ್ಲಿಯವರೆಗೂ ಸ್ವಲ್ಪ ಕಾದಿರು. ಒಂದು ವೇಳೆ–'ಕಾಯಲು ಸಾಧ್ಯವೇ ಇಲ್ಲ ; ವೇಳೆಯಾಗುವುದು'–ಎನ್ನುವುದಾದರೆ ವಾರ್ಷ್ಣೇಯನನ್ನೇ ಸಾರಥಿಯನ್ನಾಗಿ ಮಾಡಿಕೊಂಡು ಪ್ರಯಾಣಮಾಡಲೂಬಹುದು. ಮುಂದಿನ ಮಾರ್ಗವು ಸುಗಮವಾಗಿಯೇ ಇರುವುದು. ಆದರೆ ನಾನು ಮಾತ್ರ ಹಣ್ಣುಗಳನ್ನು ಎಣಿಕೆಮಾಡದೇ ಮುಂದೆ ಹೊರಡಲಾರೆನು."

ಋತುಪರ್ಣನು ಬಾಹುಕನನ್ನು ಸಮಾಧಾನಪಡಿಸುತ್ತಾ ಹೇಳಿದನು :

"ರಥದ ಸಾರಥ್ಯಕ್ಕೆ ಯೋಗ್ಯನಾಗಿರುವವನು ಈ ವಿಶ್ವದಲ್ಲಿ ನೀನೊಬ್ಬನೇ ಆಗಿರುವೆ. ಅಶ್ವಶಾಸ್ತ್ರಪ್ರವೀಣನಾದ ನಿನ್ನ ಸಹಕಾರದಿಂದ ಮಾತ್ರವೇ ನಾನು ವಿದರ್ಭದೇಶಕ್ಕೆ ಒಂದೇ ದಿನದ ಅವಧಿಯಲ್ಲಿ ಹೋಗುವ ಭರವಸೆಯಿಂದಿರುತ್ತೇನೆ. ನಾನು ಸಕಾಲಕ್ಕೆ ವಿದರ್ಭಕ್ಕೆ ಹೋಗಲು ತೊಂದರೆ ಯಾಗದಂತೆ ವರ್ತಿಸುವುದು ನಿನಗೆ ಸೂಕ್ತವಾಗಿದೆ. ನಾಳೆಯ ದಿನ ಪ್ರಾತಃ ಕಾಲದಲ್ಲಿ ಉದಯಿಸುವ ಸೂರ್ಯನನ್ನು ನಾನು ವಿದರ್ಭದಲ್ಲಿಯೇ ನೋಡುವಂತೆ ನೀನು ಮಾಡಿದೆಯಾದರೆ ನೀನು ಕೇಳಲಿರುವ ಇಷ್ಟಾರ್ಥ ಗಳೆಲ್ಲವನ್ನೂ ನೆರವೇರಿಸಿ ಕೊಡುವೆನು."

ರಾಜನ ಈ ಮಾತುಗಳಿಗೂ ಬಾಹುಕನು ಕಿವಿಗೊಡಲಿಲ್ಲ. ತನ್ನ ನಿರ್ಧಾರವನ್ನು ಪುನಃ ಪ್ರತಿಪಾದಿಸಿದನು :

"ಮಹಾರಾಜ! ನಾನು ಈ ಮರದ ಹಣ್ಣುಗಳನ್ನು ಎಣಿಕೆಮಾಡಿದ ನಂತರವೇ ವಿದರ್ಭಕ್ಕೆ ಹೊರಡುವೆನು. ಇದಕ್ಕೆ ನೀನು ಮೊದಲು ಅನುಮತಿ ಯನ್ನು ಕೊಡು."

ಋತುಪರ್ಣನಿಗೆ ಮುಂದೇನು ಮಾಡಬೇಕೆಂದು ತೋರದಾಯಿತು. ಬಾಹುಕನ ಮಾತಿಗೆ ಒಪ್ಪದೇ ವಿಧಿಯಿಲ್ಲ. ಉದಾಸೀನಮನೋಭಾವ ದಿಂದಲೇ ಬಾಹುಕನಿಗೆ ಹೇಳಿದನು :

"ಹಾಗೆಯೇ ಆಗಲಿ, ಬಾಹುಕ! ನೀನು ಎಣಿಕೆಮಾಡು. ಒಂದು

ರೆಂಬೆಯನ್ನು ಕತ್ತರಿಸಿ ಎಣಿಕೆಮಾಡಿದರೆ ನಾನು ಹೇಳಿದುದರ ನಿಜಾಂಶವು ನಿನಗೆ ವ್ಯಕ್ತವಾಗುವುದು."

ರಾಜನು ತನ್ನ ಅನುಮತಿಯನ್ನು ಕೊಟ್ಟೊಡನೆಯೇ ಬಾಹುಕನು ಕಡಿವಾಣಗಳನ್ನು ವಾರ್ಷ್ಣೇಯನ ಕೈಯಲ್ಲಿ ಕೊಟ್ಟು, ರಥದಿಂದಿಳಿದು ವಿಭೀತಕ ವೃಕ್ಷವನ್ನು ಕತ್ತರಿಸಿ, ರೆಂಬೆಗಳಲ್ಲಿದ್ದ ಹಣ್ಣುಗಳನ್ನು ಎಣಿಕೆಮಾಡಿದನು. ರಾಜನು ಹೇಳಿದ್ದ ಸಂಖ್ಯೆಗೆ ಒಂದು ಹಣ್ಣೂ ವ್ಯತ್ಯಾಸವಾಗಿರಲಿಲ್ಲ. ನಲನಿಗೆ ಅತ್ಯಾಶ್ಚರ್ಯವಾಯಿತು. ರಾಜನನ್ನು ಕುರಿತು ಹೇಳಿದನು :

"ಮಹಾರಾಜ! ನಿನ್ನ ಈ ಗಣಿತಶಾಸ್ತ್ರಪಾಂಡಿತ್ಯವು ನಿಶ್ಚಯವಾಗಿಯೂ ಅತಿ ಮಹತ್ತ್ವದ್ದಾಗಿದೆ ಮತ್ತು ಅತ್ಯಾಶ್ಚರ್ಯಕರವಾಗಿದೆ. ನಾನು ಈ ಶಾಸ್ತ್ರವನ್ನು ನಿನ್ನಿಂದ ತಿಳಿದುಕೊಳ್ಳುವ ಇಚ್ಛೆಯಿಂದಿರುತ್ತೇನೆ."

ರಾಜನಿಗೆ ಸದ್ಯಃ ತನ್ನ ಪಾಂಡಿತ್ಯದ ಪ್ರಶಂಸೆಯು ಬೇಕಾಗಿರಲಿಲ್ಲ. ವಿದರ್ಭನಗರಿಗೆ ಶೀಘ್ರವಾಗಿ ಹೋಗುವುದೇ ರಾಜನ ಆಶಯವಾಗಿದ್ದಿತು. ಬಾಹುಕನನ್ನು ಕುರಿತು ಹೇಳಿದನು :

"ಬಾಹುಕ! ನನಗೆ ಸಂಖ್ಯಾಶಾಸ್ತ್ರವು ಮಾತ್ರವಲ್ಲ ; ಅಕ್ಷವಿದ್ಯೆಯೂ ಪೂರ್ಣವಾಗಿ ತಿಳಿದಿರುವುದು."

ಋತುಪರ್ಣನಿಗೆ ಅಕ್ಷವಿದ್ಯೆಯ ಪ್ರಾವೀಣ್ಯವೂ ಇದೆಯೆಂದು ತಿಳಿದೊಡನೆಯೇ ಬಾಹುಕನ ಹೃದಯವು ವಿಕಸಿತವಾಯಿತು. ರಾಜನನ್ನು ಕುರಿತು ಹೇಳಿದನು :

"ಮಹಾರಾಜ! ನಿನಗೆ ಅಕ್ಷವಿದ್ಯೆಯೂ ತಿಳಿದಿರುವುದಾದರೆ ನೀನು ನನಗೆ ಈ ಸಂಖ್ಯಾಶಾಸ್ತ್ರಸಹಿತವಾದ ಅಕ್ಷವಿದ್ಯೆಯನ್ನು ನನ್ನಲ್ಲಿರುವ ಅಶ್ವಶಾಸ್ತ್ರಕ್ಕೆ ವಿನಿಮಯರೂಪವಾಗಿ ನನಗೆ ಉಪದೇಶಿಸು."

ಋತುಪರ್ಣನು ಬಾಹುಕನ ಪ್ರಾರ್ಥನೆಯನ್ನು ನಿರಾಕರಿಸುವ ಸಾಧ್ಯತೆಯಿರಲಿಲ್ಲ. ಏಕೆಂದರೆ : ಬಾಹುಕನ ಸಹಾಯದಿಂದ ಮಾತ್ರವೇ ಋತುಪರ್ಣನು ವಿದರ್ಭಕ್ಕೆ ಹೋಗುವ ಸಾಧ್ಯತೆಯಿದ್ದಿತು. ಮೇಲಾಗಿ ಋತುಪರ್ಣನಿಗೂ ಅಶ್ವಶಾಸ್ತ್ರವನ್ನು ತಿಳಿದುಕೊಳ್ಳಬೇಕೆನ್ನುವ ಅಪೇಕ್ಷೆಯೂ ಇದ್ದಿತು. ಆದುದರಿಂದ ಬಾಹುಕನ ಪ್ರಾರ್ಥನೆಗೆ ಋತುಪರ್ಣನು ಒಡನೆಯೇ ಸಮ್ಮತಿಸಿ ಬಾಹುಕನನ್ನು ಕುರಿತು ಹೇಳಿದನು :

"ಬಾಹುಕ! ನಿನ್ನ ಪ್ರಾರ್ಥನೆಯಂತೆ ಈ ಅಕ್ಷವಿದ್ಯೆಯನ್ನು ನನ್ನಿಂದ ಪಡೆಯುವವನಾಗು. ನೀನು ನನಗೆ ವಿನಿಮಯರೂಪವಾಗಿ ಕೊಡಬೇಕಾಗಿರುವ ಅಶ್ವಹೃದಯವು ನಿನ್ನಲ್ಲಿಯೇ ನಿಕ್ಷೇಪಭೂತವಾಗಿರಲಿ"–ಎಂದು ಹೇಳಿ ಋತುಪರ್ಣನು ಬಾಹುಕನಿಗೆ ಅವನು ಆಶಿಸಿದ ಅಕ್ಷಹೃದಯವನ್ನು ಉಪದೇಶಿಸಿದನು.

ನಲನು ಅಕ್ಷಶಾಸ್ತ್ರದ ಉಪದೇಶವನ್ನು ಋತುಪರ್ಣನಿಂದ ಪಡೆದೊಡನೆಯೇ ನಲನಲ್ಲಿ ಅಂತರ್ಗತನಾಗಿದ್ದ ಕಲಿಯು ಕಾರ್ಕೋಟಕನ ವಿಷವನ್ನು ಕಕ್ಕುತ್ತಾ ಅವನ ಶರೀರವನ್ನು ಬಿಟ್ಟು ಹೊರಕ್ಕೆ ಬಂದನು. ನಲನ ದೇಹದಲ್ಲಿ ಸೇರಿಕೊಂಡಿದ್ದಾಗ ದಮಯಂತಿಯ ಶಾಪದಿಂದ ಪರಿತಪಿಸುತ್ತಿದ್ದ ಕಲಿಯು ನಲನನ್ನು ಬಿಟ್ಟು ಹೊರಹೊರಟೊಡನೆಯೇ ಶಾಪದಿಂದ ವಿಮುಕ್ತನಾದನು.

ಯುಧಿಷ್ಠಿರ! ನಿಶ್ಚಯವಾಗಿಯೂ ಕಲಿಯಿಂದ ನಲನು ಬಹಳ ಕಾಲ ಪೀಡಿತನಾಗಿದ್ದನು. ಕಾರ್ಕೋಟಕನ ವಿಷದಿಂದಲೂ, ದಮಯಂತಿಯ ಶಾಪದಿಂದಲೂ ವಿಮುಕ್ತನಾದ ಕಲಿಯು ತನ್ನ ನಿಜಸ್ವರೂಪವನ್ನು ಪಡೆದನು. ತನಗೆ ಅಷ್ಟು ದಿನಗಳವರೆಗೆ ದಾರುಣವಾದ ಕಷ್ಟವನ್ನು ಕೊಟ್ಟ ಕಲಿಯನ್ನು ಪರಮಕ್ರುದ್ಧನಾದ ನಲನು ಶಪಿಸುವುದರಲ್ಲಿದ್ದಾಗ ಕಲಿಯು ತರ-ತರನೆ ನಡುಗುತ್ತಾ, ಕೈಜೋಡಿಸಿ ನಿಂತು ಹೇಳಿದನು :

**ಕೋಪಂ ಸಂಯಚ್ಛ ನೃಪತೇ ಕೀರ್ತಿಂ ದಾಸ್ಯಾಮಿ ತೇ ಪರಾಮ್ ।**
**ಇನ್ದ್ರಸೇನಸ್ಯ ಜನನೀ ಕುಪಿತಾ ಮಾಶಪತ್ಪುರಾ ।**
**ಯದಾ ತ್ವಯಾ ಪರಿತ್ಯಕ್ತಾ ತತೋಽಹಂ ಭೃಶಪೀಡಿತಃ ॥೩೪॥**

**ಅವಸಂ ತ್ವಯಿ ರಾಜೇನ್ದ್ರ ಸುದುಃಖಮಪರಾಜಿತ ।**
**ವಿಷೇಣ ನಾಗರಾಜಸ್ಯ ದಹ್ಯಮಾನೋ ದಿವಾನಿಶಮ್ ॥೩೫॥**

**ಶರಣಂ ತ್ವಾಂ ಪ್ರಪನ್ನೋಽಸ್ಮಿ ಶೃಣು ಚೇದಂ ವಚೋ ಮಮ ।**
**ಯೇ ಚ ತ್ವಾಂ ಮನುಜಾ ಲೋಕೇ ಕೀರ್ತಯಿಷ್ಯನ್ತ್ಯತನ್ದ್ರಿತಾಃ ॥೩೬॥**
**ಮತ್ಪ್ರಸೂತಂ ಭಯಂ ತೇಷಾಂ ನ ಕದಾಚಿದ್ಭವಿಷ್ಯತಿ ।**
**ಭಯಾರ್ತಂ ಶರಣಂ ಯಾತಂ ಯದಿ ಮಾಂ ತ್ವಂ ನ ಶಪ್ಸ್ಯಸೇ॥॥೩೭॥**

"ಮಹಾರಾಜ! ನಿನ್ನ ಕೋಪವನ್ನು ಸಂಯಮಿಸು. ನಿನಗೆ ಅಪಾರವಾದ ಕೀರ್ತಿಯು ಲಭಿಸುವಂತೆ ನಾನು ಮಾಡುವೆನು. ಇಂದ್ರಸೇನನ

ತಾಯಿಯಾದ ದಮಯಂತಿಯನ್ನು ನೀನು ಕಾಡಿನಲ್ಲಿ ಏಕಾಕಿನಿಯನ್ನಾಗಿ ಬಿಟ್ಟು ತೆರಳಿದಾಗ–ನನ್ನ ಮೇಲೆ ಅವಳು ಕೋಪಗೊಂಡು ನನ್ನನ್ನು ಶಪಿಸಿದಳು. ಅಂದಿನಿಂದ ನಾನು ದಾರುಣವಾದ ಆ ಶಾಪದ ತಾಪವನ್ನನುಭವಿಸುತ್ತಾ ನಿನ್ನಲ್ಲಿದ್ದೆನು. ಅಲ್ಲಿಂದ ಮುಂದೆ ನಿನಗೆ ಕಾರ್ಕೋಟಕದಂಶವಾದ ನಂತರವಂತೂ ನನ್ನ ಕಷ್ಟವು ಹೇಳತೀರದಾಗಿದೆ. ಹಗಲಿನಲ್ಲಿಯೂ-ರಾತ್ರಿ ಯಲ್ಲಿಯೂ ಅರ್ಥಾತ್ ಸರ್ವಕಾಲಗಳಲ್ಲಿಯೂ ಕಾರ್ಕೋಟಕನ ವಿಷದ ಬೇಗೆಯಿಂದ ನಾನು ಬೆಂದುಹೋಗುತ್ತಿದ್ದೆನು. ನಿನ್ನಿಂದ ಹೊರಹೊರಟ ನಂತರವೇ ನಾನೀ ವಿಷದಿಂದಲೂ ಮತ್ತು ದಮಯಂತಿಯ ಶಾಪದಿಂದಲೂ ಮುಕ್ತಿಯನ್ನು ಪಡೆದಿರುವೆನು. ಈಗಲಾದರೂ ನೀನು ನನ್ನನ್ನು ಪುನಃ ಶಪಿಸಿ ದುಃಖಕ್ಕೊಳಗುಮಾಡದೇ ನನ್ನನ್ನು ದಯೆಯಿಟ್ಟು ರಕ್ಷಿಸುವವನಾಗು. ನಾನು ನಿನ್ನಿಂದ ರಕ್ಷಣೆಯನ್ನು ಕೇಳುತ್ತಿದ್ದೇನೆ. ನನ್ನ ಪ್ರಾರ್ಥನೆಗೆ ಮನ್ನಣೆಯನ್ನಿತ್ತು ಭಯಗ್ರಸ್ತನಾದ ಮತ್ತು ನಿನ್ನ ಆಶ್ರಯಾಭಿಲಾಷಿಯಾದ ನನ್ನನ್ನು ಶಪಿಸದೇ ಬಿಟ್ಟೆಯಾದರೆ–ಯಾರು ನಿನ್ನ ಈ ಕಥೆಯನ್ನು ಏಕಾಗ್ರತೆಯಿಂದ ಓದುವರೋ ಅಥವಾ ಶ್ರವಣಮಾಡುವರೋ–ಅವರ ಸಮೀಪದಲ್ಲಿಯೂ ಕೂಡ ನಾನು ಸುಳಿಯೆನು. ಅವರು ನನ್ನ ವಿಷಯವಾಗಿ ಸ್ವಲ್ಪವೂ ಭಯಪಡಬೇಕಾಗಿಲ್ಲ. ನಿನ್ನ ಕೀರ್ತಿಯೂ ಭೂಮಿಯಲ್ಲಿ ಚಿರಕಾಲ ಉಳಿಯುವುದು."

ಕಲಿಯ ಆ ಮಾತುಗಳನ್ನು ಕೇಳಿ ನಲನು ತನ್ನ ಕೋಪವನ್ನು ತಡೆದು ಕೊಂಡನು. ಕಲಿಗೆ ಶಾಪಕೊಡಲಿಲ್ಲ. ನಲನು ಸ್ವಲ್ಪ ಶಾಂತನಾದುದನ್ನು ಕಂಡೊಡನೆಯೇ ಕಲಿಯು ಭೀತ-ಭೀತನಾಗಿ ಸಮೀಪದಲ್ಲಿಯೇ ಇದ್ದ ವಿಭೀತಕವೃಕ್ಷದೊಳಗೆ ಸೇರಿಕೊಂಡನು.

ಯುಧಿಷ್ಠಿರ! ಕಲಿಯು ನಲನೊಡನೆ ಹೀಗೆಲ್ಲಾ ಮಾತನಾಡುತ್ತಿದ್ದರೂ ಅವನು ಇತರರಿಗೆ ಅಗೋಚರನಾಗಿಯೇ ಇದ್ದನು. ಆದುದರಿಂದ ಋತುಪರ್ಣನಿಗೆ ಈ ವಿಷಯಗಳೊಂದೂ ತಿಳಿಯಲೇ ಇಲ್ಲ.

ನಲನು ವಿಭೀತಕವೃಕ್ಷದ ಎಲೆ-ಹಣ್ಣುಗಳನ್ನು ಎಣಿಕೆಮಾಡಿ, ಕಲಿಯಿಂದ ವಿಮುಕ್ತನಾಗಿ ಋತುಪರ್ಣನ ಸಂಖ್ಯಾವಿದ್ಯೆಯ ವಿಷಯವಾಗಿ ಪರಮಸಂತುಷ್ಟ ನಾಗಿ ಮಹಾನಂದದಿಂದ ರಥವೇರಿ ಕುಳಿತು, ವಾರ್ಷ್ಣೇಯನಿಂದ ಕಡಿವಾಣ

ಗಳನ್ನು ತೆಗೆದುಕೊಂಡು ಕುದುರೆಗಳ ಮೇಲೆ ಕೈಯಾಡಿಸಿ ಮುಂದೆ ನಡೆಯುವಂತೆ ಸಂಜ್ಞೆಮಾಡಿದನು.

**ವಿಭೀತಕಶ್ಚಾಪ್ರಶಸ್ತಃ ಸಂವೃತ್ತಃ ಕಲಿಸಂಶ್ರಯಾತ್ ॥೪೧॥**

ಕಲಿಯ ಪ್ರವೇಶದಿಂದ ವಿಭೀತಕವೃಕ್ಷವು (ತಾರೇ ಮರವು) ಮುಂದೆ ಯಾವ ಕೆಲಸಕ್ಕೂ ಬರದಂತೆ ಅಪ್ರಶಸ್ತವಾಯಿತು.

ನಲನಿಂದ ಪ್ರೇರಿತವಾದ ಕುದುರೆಗಳು ಒಡನೆಯೇ ರೆಕ್ಕೆಗಳಿರುವ ಪಕ್ಷಿಗಳಂತೆಯೇ ಆಕಾಶಕ್ಕೆ ಹಾರಿ ವಾಯುವೇಗದಿಂದ ಓಡತೊಡಗಿದುವು. ಮಹಾತ್ಮನಾದ ನಲರಾಜನು ವಿದರ್ಭದೇಶದೆಡೆಗೆ ರಥವನ್ನು ಓಡಿಸುತ್ತಿದ್ದನು. ನಲನು ಬಹಳ ದೂರ ಪ್ರಯಾಣಮಾಡಿದನೆಂದು ತಿಳಿದನಂತರವೇ ನಲನ ಭಯದಿಂದಾಗಿ ವಿಭೀತಕವೃಕ್ಷದಲ್ಲಡಗಿದ್ದ ಕಲಿಯು ಮೆಲ್ಲನೆ ಹೊರಗೆ ಬಂದು ತನ್ನ ಮನೆಯನ್ನು ಸೇರಿಕೊಂಡನು.

ಯುಧಿಷ್ಠಿರ! ಕಲಿಯಿಂದ ವಿಮುಕ್ತನಾದ ಪೃಥ್ವೀಪತಿಯಾದ ನಲರಾಜನು ಸರ್ವಸಂಕಷ್ಟಗಳಿಂದಲೂ ವಿಮುಕ್ತನಾದರೂ ತನ್ನ ಸಹಜವಾದ ರೂಪವನ್ನು ಪಡೆಯಲಿಲ್ಲ ಮತ್ತು ತನ್ನ ಶರೀರದ ವೈರೂಪ್ಯದಿಂದ ವಿಮುಕ್ತನೂ ಆಗಲಿಲ್ಲ.”

೭೨ನೆಯ ಅಧ್ಯಾಯವು ಮುಗಿಯಿತು.

೭೩ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ಋತುಪರ್ಣನಿಂದ ಕುಂಡಿನಪುರಪ್ರವೇಶ : ದಮಯಂತಿಯ ಆಲೋಚನೆ : ಭೀಮರಾಜನಿಂದ ಋತುಪರ್ಣನಿಗೆ ಸ್ವಾಗತ

ಬೃಹದಶ್ವರು ಕಥೆಯನ್ನು ಮುಂದುವರಿಸುತ್ತಾ ಹೇಳುತ್ತಾರೆ :

“ಯುಧಿಷ್ಠಿರ! ಸತ್ಯಪರಾಕ್ರಮಿಯಾದ ಋತುಪರ್ಣನು ಸಾಯಂಕಾಲದ ವೇಳೆಗೆ ವಿದರ್ಭದೇಶವನ್ನು ತಲುಪಿದನು. ಕುಂಡಿನಪಟ್ಟಣದ ನಿವಾಸಿಗಳು ಋತುಪರ್ಣನು ತಮ್ಮ ಪಟ್ಟಣಕ್ಕೆ ಆಗಮಿಸುತ್ತಿರುವ ವಾರ್ತೆಯನ್ನು ಭೀಮ ರಾಜನಿಗೆ ತಿಳಿಸಿದರು. ಭೀಮರಾಜನು ಒಡನೆಯೇ ಸಂದರ್ಭೋಚಿತವಾಗಿ ತನ್ನ

ಅಧಿಕಾರಿಗಳನ್ನು ಕರೆಯಿಸಿ, ರಥದಲ್ಲಿ ಬರುತ್ತಿರುವ ಋತುಪರ್ಣನನ್ನು ಎದುರುಗೊಂಡು ರಾಜಮರ್ಯಾದೆಗಳೊಡನೆ ಅರಮನೆಗೆ ಕರೆತರುವಂತೆ ಹೇಳಿಕಳುಹಿಸಿದನು. ಅಧಿಕಾರಿಗಳು ಕುಂಡಿನನಗರದ ಮಹಾದ್ವಾರದಲ್ಲಿ ನಿಂತು ಋತುಪರ್ಣರಾಜನನ್ನು ಆದರದಿಂದ ಸ್ವಾಗತಿಸಿದರು. ಋತುಪರ್ಣನ ರಥವು ಪಟ್ಟಣದೊಳಗೆ ಪ್ರವೇಶಿಸಿತು. ರಥಚಕ್ರಗಳ ನಿನಾದವು ದಿಕ್ಕುಗಳಲ್ಲಿಯೂ, ಉಪದಿಕ್ಕುಗಳಲ್ಲಿಯೂ ಪ್ರತಿಧ್ವನಿಸಿತು. ರಥಚಕ್ರಗಳ ಧ್ವನಿಯನ್ನು ಕೇಳಿದೊಡನೆಯೇ ಭೀಮರಾಜನ ಅಶ್ವಶಾಲೆಯಲ್ಲಿದ್ದ ನಲನ ಕುದುರೆಗಳು ತಮ್ಮೊಡೆಯನಾದ ನಲನು ತಮ್ಮ ಸಮೀಪದಲ್ಲಿರುವನೆಂದೇ ಭಾವಿಸಿ ಸಂತೋಷಾಧಿಕ್ಯದಿಂದ ಕೆನೆಯಲು ಮೊದಲಿಟ್ಟುವು.

ಮಳೆಗಾಲದಲ್ಲಿ ಮೋಡಗಳಿಂದ ಪ್ರಾದುರ್ಭೂತವಾಗುವ ಗುಡುಗಿನ ಶಬ್ದಕ್ಕೆ ಅನುರೂಪವಾದ ಋತುಪರ್ಣರಾಜನ ರಥಚಕ್ರಗಳ ನಿನಾದವನ್ನು ದಮಯಂತಿಯೂ ಕೇಳಿದಳು. ಆ ಧ್ವನಿಯು ಅವಳಿಗೆ ಹಿಂದಿನ ಸ್ಮರಣೆಯನ್ನುಂಟುಮಾಡಿತು. ಕುದುರೆಗಳೇ ರಥಚಕ್ರಗಳ ಧ್ವನಿಯನ್ನು ಕೇಳಿ ನಲನೇ ತಮ್ಮ ಸಮೀಪದಲ್ಲಿರುವನೆಂದು ಭಾವಿಸಿ ಕೆನೆಯಲು ಮೊದಲಿಟ್ಟವೆಂದರೆ ದಮಯಂತಿಯು ರಥಚಕ್ರದ ಧ್ವನಿಯನ್ನು ಕೇಳಿ ತನ್ನ ಪತಿಯಾದ ನಲನೇ ರಥವನ್ನು ನಡೆಸುತ್ತಿರುವನೆಂದು ನಿಶ್ಚಯಮಾಡಿದುದರಲ್ಲಿ ಆಶ್ಚರ್ಯವೇನಿದೆ? ಆ ರಥಚಕ್ರಗಳ ಶಬ್ದವನ್ನು ಕೇಳಿದೊಡನೆಯೇ ದಮಯಂತಿಗೆ ರೋಮಾಂಚನವಾಯಿತು. ಆಶ್ಚರ್ಯಚಕಿತಳಾದಳು. ಭೀಮರಾಜನ ಅಶ್ವಶಾಲೆಯಲ್ಲಿದ್ದ ನಲರಾಜನ ಕುದುರೆಗಳು ಋತುಪರ್ಣನ ರಥಚಕ್ರಗಳ ನಿನಾದವನ್ನು ಕೇಳಿದೊಡನೆಯೇ–ಹಿಂದೆ ನಲನು ರಥವನ್ನು ನಡೆಸುತ್ತಿದ್ದಾಗ ಆಗುತ್ತಿದ್ದ ನಿನಾದವನ್ನು ಸ್ಮರಿಸಿ–ಆ ಶಬ್ದಕ್ಕೂ ಮತ್ತು ಇಂದಿನ ಋತುಪರ್ಣನ ರಥಚಕ್ರಗಳ ನಿನಾದಕ್ಕೂ ಏಕರೂಪತೆಯಿರುವುದೆಂದು ನಿರ್ಧರಿಸಿದುವು. ದಮಯಂತಿಯೂ ಹೀಗೆಯೇ ನಿರ್ಧಾರಮಾಡಿದಳು.

ಅರಮನೆಯ ಪ್ರಾಕಾರದಲ್ಲಿದ್ದ ನವಿಲುಗಳು ಋತುಪರ್ಣರಾಜನ ರಥ ಚಕ್ರಗಳ (ಗುಡುಗಿನ ರೂಪವಾದ) ಧ್ವನಿಯನ್ನು ಕೇಳಿ ಮಳೆಗಾಲದ ಗುಡು ಗೆಂದೇ ಭ್ರಮಿಸಿ ಸಂತೋಷಾಧಿಕ್ಯದಿಂದ ಜಾಗರವಾಡತೊಡಗಿದುವು. ಭೀಮ

ರಾಜನ ಗಜಶಾಲೆಯಲ್ಲಿದ್ದ ಆನೆಗಳೂ ಆ ನಿನಾದವನ್ನು ಕೇಳಿ ನಿನಾದವು ಬರುತ್ತಿದ್ದೆಡೆಗೆ ಸೊಂಡಿಲುಗಳನ್ನು ತಿರುಗಿಸಿಕೊಂಡು ಘೀಂಕಾರಮಾಡ ತೊಡಗಿದುವು.

ರಥಚಕ್ರಗಳ ಶಬ್ದವನ್ನು ಕೇಳುತ್ತಿದ್ದಂತೆಲ್ಲಾ ದಮಯಂತಿಗೆ ಅನಿರ್ವಾಚ್ಯ ವಾದ ಆನಂದವುಂಟಾಯಿತು. ತನ್ನಲ್ಲಿಯೇ ಮಾತನಾಡಿಕೊಂಡಳು :

"ಗುಡುಗಿಗೆ ಸಮಾನವಾದ ಈ ಋತುಪರ್ಣರಾಜನ ರಥಚಕ್ರಗಳ ಧ್ವನಿಯನ್ನು ಕೇಳುತ್ತಿದ್ದಂತೆ ನನಗೆ ಏನೋ ಒಂದು ವಿಧವಾದ ಆನಂದ ವುಂಟಾಗುತ್ತಿದೆ. ಆದುದರಿಂದ ಈ ರಥದಲ್ಲಿ ನಲನೇ ಇದ್ದಿರಬೇಕೆಂದು ನಾನು ನಿಶ್ಚಯಿಸುತ್ತೇನೆ. ಚಂದ್ರವದನನಾದ, ವೀರನಾದ, ಧರ್ಮಾತ್ಮನಾದ ನಲನನ್ನು ನಾನು ಇಂದೂ ಕಾಣದಿದ್ದರೆ ಖಂಡಿತವಾಗಿಯೂ ಸಾಯುತ್ತೇನೆ. ಇಂದವನ ಬಾಹುಪಾಶದಲ್ಲಿ ಸಿಕ್ಕಿ ರೋಮಾಂಚಕಾರಕವಾದ ಆಲಿಂಗನಸುಖ ವನ್ನು ಅನುಭವಿಸದಿದ್ದರೆ ನಾನಿನ್ನು ಖಂಡಿತವಾಗಿಯೂ ಉಳಿಯಲಾರೆನು. ಮೇಘನಿನಾದಕ್ಕೆ ಸಮಾನವಾದ ಧ್ವನಿಯಿಂದ ಕೂಡಿರುವ ನನ್ನ ಪ್ರಿಯಸಖನು ಇಂದು ನನ್ನೆಡೆಗೆ ಬಾರದಿದ್ದರೆ ಖಂಡಿತವಾಗಿಯೂ ನಾನು ಸುವರ್ಣಕ್ಕೆ ಸದೃಶ ವಾದ ಜ್ವಾಲೆಗಳಿಂದ ಕೂಡಿರುವ, ಧಗ-ಧಗಿಸುತ್ತಿರುವ ಬೆಂಕಿಯಲ್ಲಿ ಬೀಳು ವುದಂತೂ ಖಂಡಿತ. ಸಿಂಹವಿಕ್ರಮನಾದ, ಮದ್ದಾನೆಯಂತೆ ಗಮನವುಳ್ಳ, ರಾಜಶ್ರೇಷ್ಠನಾದ ನನ್ನಿನಿಯನು ಇಂದು ಬಾರದಿದ್ದರೆ ಖಂಡಿತವಾಗಿಯೂ ನನ್ನ ಜೀವವನ್ನು ತೊರೆಯುವೆನು. ಸತ್ಯಪ್ರಿಯನಾದ ನನ್ನ ನಲನು ಇದುವರೆಗೂ ಒಂದು ಸುಳ್ಳುಮಾತನ್ನಾಡಿರುವುದನ್ನೂ ನಾನು ಕೇಳಿರುವುದಿಲ್ಲ ; ಯಾರೊಬ್ಬರ ವಿಷಯದಲ್ಲಿಯೂ ಅವನು ಅಪಕಾರಮಾಡಿರುವುದನ್ನೂ ನಾನು ಕೇಳಿರುವುದಿಲ್ಲ ; ಪರಿಹಾಸಕ್ಕಾದರೂ ಸುಳ್ಳಾಡಿದವನಲ್ಲ. ನನ್ನ ಪ್ರಭುವು ಅಪಾರಗುಣಸಂಪನ್ನನು, ಕ್ಷಮಾವಂತನು, ವೀರನು, ಮಹಾದಾನಿಯು. ಅವನು ತನ್ನ ಸದ್ಗುಣಗಳಿಂದ ಸರ್ವರಾಜರಲ್ಲೂ ಶ್ರೇಷ್ಠನೆನಿಸಿದ್ದಾನೆ. ನೀಚಪುರುಷರು ಮಾಡುವಂತೆ ರಹಸ್ಯದಲ್ಲಿ 'ಪರಸ್ತ್ರೀಸಂಗವನ್ನು' ಮಾಡುವವನಲ್ಲ. ಪರಸ್ತ್ರೀಯರ ವಿಷಯದಲ್ಲಿ ನಪುಂಸಕನಂತೆಯೇ ವರ್ತಿಸು ವವನು. ಅವನು ತನ್ನ ವಿವಾಹಕಾಲದಲ್ಲಿ ನನಗಿತ್ತಿದ್ದ ಭಾಷೆಯನ್ನು ಎಂದಿಗೂ ಉಲ್ಲಂಘಿಸುವವನಲ್ಲ. ಮಹಾಪುರುಷನಾದ ನಲನ ಈ ಸದ್ಗುಣ ಗಳನ್ನೆಲ್ಲಾ ಹಗಲಿರುಳೂ ನೆನೆಯುತ್ತಿರುವ ನನಗೆ ಅವನು ನನ್ನ ಸಮೀಪ

ದಲ್ಲಿಲ್ಲವೆಂದು ಭಾಸವಾದೊಡನೆಯೇ ನನ್ನ ಹೃದಯವು ದುಃಖದಿಂದ ನುಚ್ಚು ನೂರಾದಂತಾಗುತ್ತಿದೆ. ಅವನ ವಿರಹವನ್ನು ಮುಂದೆ ಒಂದು ಕ್ಷಣವೂ ಸಹಿಸಲು ಸಾಧ್ಯವೇ ಇಲ್ಲವೇನೋ ಎನ್ನಿಸುತ್ತಿದೆ."

ಹೀಗೆ ಹೇಳಿಕೊಂಡು ವಿಲಾಪಮಾಡುತ್ತಿದ್ದ ದಮಯಂತಿಯು ತನ್ನ ಪ್ರೇಮಮೂರ್ತಿಯಾದ ನಲನನ್ನು ನೋಡುವ ಕಾತರತೆಯಿಂದ ಅರಮನೆಯ ಮಹಡಿಯ ಮೇಲಿನ ಬಿಸಿಲುಮಚ್ಚಿನಲ್ಲಿ ಹೋಗಿ ನಿಂತಳು. ಆದರೆ ದಮಯಂತಿಯು ಅರಮನೆಯ ಪ್ರಾಂಗಣದಲ್ಲಿ ನಿಂತಿದ್ದ ರಥದಲ್ಲಿ ಋತುಪರ್ಣನು–ವಾರ್ಷ್ಣೇಯ ಮತ್ತು ಬಾಹುಕರೊಡನೆ ಮಾತ್ರ ಕುಳಿತಿರುವುದನ್ನು ನೋಡಿದಳು. ರಥವು ನಿಂತೊಡನೆಯೇ ವಾರ್ಷ್ಣೇಯ-ಬಾಹುಕರು ರಥದಿಂದಿಳಿದು, ಕುದುರೆಗಳನ್ನು ರಥದಿಂದ ಬಿಚ್ಚಿ, ರಥವನ್ನು ಮಹಾದ್ವಾರಕ್ಕೆ ಎದುರಾಗಿ ನಿಲ್ಲಿಸಿದರು. ಋತುಪರ್ಣರಾಜನು ರಥದಿಂದಿಳಿದು ಮಹಾದ್ವಾರದ ಬಳಿ ತನಗಾಗಿ ಕಾದಿದ್ದ ಭೀಮರಾಜನನ್ನು ಮುಗುಳ್ನಗೆಯಿಂದ ಅಭಿನಂದಿಸಿದನು. ಭೀಮನೂ ಋತುಪರ್ಣನನ್ನು ಸ್ವಾಗತಿಸಿ ಆದರಪೂರ್ವಕವಾಗಿ ಅರಮನೆಯೊಳಕ್ಕೆ ಕರೆದೊಯ್ದು ಯಥೋಚಿತವಾಗಿ ಸತ್ಕರಿಸಿದನು. ಕುಶಲಪ್ರಶ್ನೆಗಳಾದುವು.

ಋತುಪರ್ಣರಾಜನ ಆಕಸ್ಮಿಕವಾದ ಆಗಮನವು ಭೀಮರಾಜನಿಗೆ ಆಶ್ಚರ್ಯವೆನಿಸಿತು. "ಋತುಪರ್ಣನಾದರೋ ಬಹಳ ದೂರದಿಂದ ಆಗಮಿಸಿರುವನು. ಕಾರಣವಿಲ್ಲದೇ ಬಂದಿರಲಾರನು. ಅಂತಹ ಮಹತ್ವದ ಕಾರಣವಾದರೂ ಏನಿರಬಹುದು?"–ಎಂದು ಚಿಂತಿಸಿದನು. ಇದೊಂದು ಸ್ತ್ರೀತಂತ್ರವೆಂಬುದನ್ನು ಭೀಮನು ಅರಿಯಲಿಲ್ಲ. ತಾನು ದಮಯಂತಿಯ ಸ್ವಯಂವರಕ್ಕಾಗಿ ಬಂದಿರುವೆನೆಂಬುದನ್ನು ಋತುಪರ್ಣನೂ ಹೇಳಲಿಲ್ಲ. ಸನ್ನಿವೇಶವನ್ನು ನೋಡಿ (ಸ್ವಯಂವರಸಂಬಂಧವಾದ ಸೂಚನೆಗಳು ಇಲ್ಲದಿರುವುದನ್ನು ನೋಡಿ) ಕೇಳಲೂ ಹಿಂಜರಿದಿರಬಹುದು. ಇಬ್ಬರ ನಡುವೆ ಇದೊಂದು ಸಮಸ್ಯೆಯಾಗಿ ಬಿಟ್ಟಿತು. ಕಟ್ಟಕಡೆಗೆ ಭೀಮನೇ ಋತುಪರ್ಣನು ಬಂದ ಕಾರ್ಯವೇನೆಂಬುದನ್ನು ತಿಳಿಯಬೇಕೆಂದು ನಿರ್ಧರಿಸಿ ಋತುಪರ್ಣರಾಜನನ್ನು ಸ್ಪಷ್ಟವಾಗಿಯೇ ಕೇಳಿದನು :

"ಭಾಂಗಾಸುರಿಯೇ! ನಿನ್ನ ಆಕಸ್ಮಿಕವಾದ ಆಗಮನಕ್ಕೆ ಕಾರಣವಾದರೂ ಏನೆಂಬುದನ್ನು ತಿಳಿಯಬಹುದೇ?"

ಆ ಪ್ರಶ್ನೆಗೆ ಏನೆಂದು ಉತ್ತರಿಸುವುದು? ಮಹಾಮೇಧಾವಿಯಾದ, ಪರಾಕ್ರಮಿಯಾದ ಋತುಪರ್ಣನು ಕ್ಷಣಕಾಲ ತನ್ನಲ್ಲಿಯೇ ಯೋಚಿಸಿದನು: "ನನ್ನನ್ನುಳಿದು ಬೇರಾವ ರಾಜಪುತ್ರರಾಗಲೀ, ರಾಜಾಧಿರಾಜರಾಗಲೀ ಇಲ್ಲಿಗೆ ಆಗಮಿಸಿಲ್ಲ. ಸ್ವಯಂವರಕ್ಕೆ ಸಂಬಂಧಿಸಿದಂತೆ ಯಾವ ವಿಧವಾದ ಸಂಭ್ರಮಗಳೂ ಕಾಣುತ್ತಿಲ್ಲ. ಇಂತಹ ಸಂದರ್ಭದಲ್ಲಿ ಇರಬೇಕಾದ ಬ್ರಾಹ್ಮಣ ಸಮೂಹವನ್ನೂ ನಾನು ಕಾಣುತ್ತಿಲ್ಲ. ಆದುದರಿಂದ ನನಗೆ ತಿಳಿದುಬಂದಿರುವ ಸ್ವಯಂವರವಾರ್ತೆಯಲ್ಲಿ ಏನೋ ರಹಸ್ಯವಿರಬಹುದು. ಆದುದರಿಂದ ನಾನು ಇಲ್ಲಿಗೆ ಬಂದುದಕ್ಕೆ ಕಾರಣವನ್ನು ಯಥಾವತ್ತಾಗಿಯೇ ಭೀಮನಿಗೆ ತಿಳಿಸುವುದು ಉಚಿತವೆನಿಸಲಾರದು"–ಎಂದು ನಿಶ್ಚಯಿಸಿದವನಾಗಿ ಋತುಪರ್ಣನು ಭೀಮರಾಜನನ್ನು ಕುರಿತು ಹೇಳಿದನು :

"ಭೀಮರಾಜ! ನಾನು ನಿನಗೆ ಗೌರವವನ್ನು ಸಲ್ಲಿಸುವ ಸಲುವಾಗಿಯೇ ಆಗಮಿಸಿದ್ದೇನೆ."

ಆದರೆ ಋತುಪರ್ಣನ ಆ ಉತ್ತರವು ಭೀಮರಾಜನಿಗೆ ಅತ್ಯಾಶ್ಚರ್ಯವನ್ನುಂಟುಮಾಡಿತು. ಋತುಪರ್ಣನು ಭೀಮರಾಜನಿಗೆ ಸಾಮಂತರಾಜನಾಗಿರಲಿಲ್ಲ. ಅಥವಾ ಭೀಮರಾಜನಿಂದ ಋತುಪರ್ಣನಿಗೆ ಯಾವ ವಿಧವಾದ ಭಯವೂ ಇರಲಿಲ್ಲ. ವಸ್ತುಸ್ಥಿತಿಯು ಹೀಗಿರುವಾಗ ನೂರು ಯೋಜನಗಳ ದೂರವಿರುವ ಅಯೋಧ್ಯೆಯಿಂದ ಹೊರಟು ದುರ್ಗಮಗಳಾದ ಗಿರಿ-ದುರ್ಗ-ಪರ್ವತಗಳನ್ನೂ, ಅನೇಕ ಮಹಾರಣ್ಯಗಳನ್ನೂ, ನದೀ-ನದ-ಸರೋವರಗಳನ್ನೂ ದಾಟಿ, ಮಾರ್ಗದಲ್ಲಿ ಸಿಕ್ಕುವ ಅನೇಕಾನೇಕ ರಾಜಧಾನಿಗಳಿಗೂ ಪ್ರವೇಶಿಸದೇ ನೇರವಾಗಿ ತನ್ನ ಬಳಿಗೆ ಋತುಪರ್ಣನು ಆಗಮಿಸಿರುವುದು ಕೇವಲ ತನ್ನನ್ನು ಗೌರವಿಸುವ ಸಲುವಾಗಿಯೇ? ಎಂದಿಗೂ ಇರಲಾರದು. ತನ್ನನ್ನು ಗೌರವಿಸುವ ಸಲುವಾಗಿ ಋತುಪರ್ಣನು ಖಂಡಿತವಾಗಿಯೂ ಕುಂಡಿನಕ್ಕೆ ಬಂದಿರಲಾರನು. ಇವನು ಬಂದಿರುವ ಕಾರ್ಯವು ಮಹತ್ವದ್ದೇ ಆಗಿರಬೇಕು. ಆದರೆ ಇಂದು ಮಾತ್ರ ಇವನು ಯಾವುದೋ ಕಾರಣದಿಂದಾಗಿ ಈ ಅಲ್ಪವಾದ 'ಗೌರವಿಸುವ ಸಲುವಾಗಿ'–ಎಂಬ ಕಾರಣವನ್ನು ನನ್ನ ಮುಂದಿಟ್ಟಿ

ರುವನು. ಇದರ ಸತ್ಯಾಂಶವು ಮುಂದೆ ತನಗೆ ತಿಳಿಯದೇ ಇರಲಾರದು. ಸ್ವಲ್ಪ ವಿಚಾರಮಾಡಿ ಇವನು ಬಂದಿರುವ ಕಾರಣವನ್ನು ತಿಳಿಯಬೇಕು– ಹೀಗೆಂಬುದಾಗಿ ಭೀಮರಾಜನು ನಿರ್ಧರಿಸಿದನು. ಆ ಕಾರಣದಿಂದಲೇ ರಾಜನು ಋತುಪರ್ಣನಿಗೆ ಒಡನೆಯೇ ಅಯೋಧ್ಯೆಗೆ ಪ್ರಯಾಣಮಾಡಲು ಅನುಮತಿಯನ್ನು ಕೊಡಲಿಲ್ಲ. ಭಾಂಗಾಸುರಿಯನ್ನು ಕುರಿತು ಒತ್ತಾಯ ಪೂರ್ವಕವಾಗಿಯೇ ಭೀಮನು ಹೇಳಿದನು :

"ಭಾಂಗಾಸುರಿಯೇ! ನೀನು ನೂರು ಯೋಜನಗಳ ದೂರ ಪ್ರಯಾಣಮಾಡಿ ಬಹಳವಾಗಿ ಬಳಲಿರುವೆ. ಆದುದರಿಂದ ಇನ್ನೂ ಕೆಲವು ದಿನಗಳು ನನ್ನ ಆತಿಥ್ಯವನ್ನು ಸ್ವೀಕರಿಸುತ್ತಾ ವಿಶ್ರಾಂತಿಯನ್ನು ಪಡೆಯುವುದು ಸಾಧುವಾಗಿದೆ."

ಋತುಪರ್ಣನೂ ಅದನ್ನೇ ಆಶಿಸಿದ್ದನು. ಇಲ್ಲಿಯ ರಹಸ್ಯವೇನೆಂಬು ದನ್ನು ಪೂರ್ಣವಾಗಿ ತಿಳಿದುಕೊಳ್ಳದೇ ಅಯೋಧ್ಯೆಗೆ ಹಿಂದಿರುಗುವ ಆಶಯವು ಋತುಪರ್ಣನಿಗೂ ಇರಲಿಲ್ಲ. ನಾಲ್ಕಾರು ದಿನಗಳಲ್ಲಿ ಸ್ವಯಂವರದ ರಹಸ್ಯವು ತಿಳಿಯಬಹುದೆಂಬ ಆಶಯದಿಂದ ಭಾಂಗಾಸುರಿಯು ಭೀಮರಾಜನು ಹೇಳಿದ ಮಾತುಗಳನ್ನು ಸಂತೋಷದಿಂದಲೇ ಅಂಗೀಕರಿಸಿದವನಾಗಿ, ಅಮಿತಾನಂದದಿಂದ ತನಗಾಗಿ ಸಿದ್ಧಪಡಿಸಿದ್ದ ಬಿಡಾರಕ್ಕೆ ರಾಜಸೇವಕರೊಡನೆ ತೆರಳಿದನು.

ಯುಧಿಷ್ಠಿರ! ಇತ್ತಲಾಗಿ ಋತುಪರ್ಣನು ರಥದಿಂದಿಳಿದು ವಾರ್ಷ್ಣೇಯನಿಂದೊಡಗೂಡಿ ಹೊರಟುಹೋದನಂತರ ಬಾಹುಕನು ಪುನಃ ರಥಕ್ಕೆ ಕುದುರೆಗಳನ್ನು ಕಟ್ಟಿ, ಭೀಮರಾಜನ ರಥಶಾಲೆಯೆಡೆಗೆ ರಥವನ್ನು ಒಯ್ದು, ಅದರ ಬಳಿಯಲ್ಲಿ ರಥವನ್ನು ನಿಲ್ಲಿಸಿ, ಕುದುರೆಗಳನ್ನು ಬಿಚ್ಚಿ, ಅವುಗಳನ್ನು ಯಥಾವಿಧಿಯಾಗಿ ಉಪಚರಿಸಿ-ಸಂತೈಸಿ, ರಥದ ಒಂದು ಭಾಗದಲ್ಲಿ ತನ್ನ ಮಾರ್ಗಾಯಾಸವನ್ನು ಪರಿಹರಿಸಿಕೊಳ್ಳುತ್ತಾ ಕುಳಿತನು.

ರಥಚಕ್ರದ ನಿನಾದಮಾತ್ರದಿಂದಲೇ ನಲನು ಬಂದಿರುವನೆಂದು ನಿರ್ಧ ರಿಸಿ ಕಾತರಳಾಗಿದ್ದ ದಮಯಂತಿಯು ಅರಮನೆಯ ಉಪ್ಪರಿಗೆಯಲ್ಲಿ ನಿಂತು ಋತುಪರ್ಣ-ವಾರ್ಷ್ಣೇಯ-ಬಾಹುಕರನ್ನು ಮಾತ್ರವೇ ಕಂಡು, ಸ್ಫುರದ್ರೂಪಿ

ಯಾದ ತನ್ನ ಇನಿಯನನ್ನು ಕಾಣದೇ ಹತಾಶಳಾಗಿ ದುಃಖಿಸುತ್ತಾ ತನ್ನಲ್ಲಿ ತಾನೇ ಮಾತನಾಡಿಕೊಂಡಳು.

"ದುರ್ವಿಧಿಯೇ! ನಲನ ರಥಚಕ್ರದ ನಿನಾದಕ್ಕೆ ಅನುರೂಪವಾಗಿದ್ದ ಈ ರಥದ ನಿನಾದವನ್ನು ಕೇಳಿ ನಲನೇ ಬಂದಿರುವನೆಂದು ಭ್ರಮಿಸಿದ್ದೆನಲ್ಲಾ? ನಿಶ್ಚಯವಾಗಿಯೂ ಈ ರಥದ ಧ್ವನಿಯೂ ನನ್ನ ಪ್ರಾಣಪತಿಯ ರಥದ ನಿನಾದವನ್ನೇ ಅನುಕರಿಸಿತ್ತು. ಆದರೆ ನಲನನ್ನು ಮಾತ್ರ ನಾನಿಲ್ಲಿ ಕಾಣಲಿಲ್ಲ. ವಾರ್ಷ್ಣೇಯನು ನಲನಿಂದ ರಥದ ಸಾರಥ್ಯವನ್ನು ಪೂರ್ಣವಾಗಿ ತಿಳಿದು ಕೊಂಡಿರಬಹುದು. ಆದುದರಿಂದಲೇ ವಾರ್ಷ್ಣೇಯನಿಂದ ನಿಯಂತ್ರಿಸಲ್ಪಟ್ಟಿ ರುವ ಈ ರಥವು ನಲನ ರಥದ ನಿನಾದವನ್ನೇ ಅನುಕರಿಸಿರಲೂಬಹುದು. ಒಂದು ವೇಳೆ ಋತುಪರ್ಣನೇ ಅಶ್ವಸಂಚಲನೆಯಲ್ಲಿ ನಲನಿಗೆ ಸಮಾನನಿದ್ದು ಅವನ ರಥನಿಯಂತ್ರಣದಿಂದಲೇ ಈ ವಿಧವಾದ ನಿನಾದವುಂಟಾಗಲೂ ಅವಕಾಶವಿದೆ"–ಹೀಗೆಂದು ದಮಯಂತಿಯು ಯೋಚಿಸಿದರೂ ಅಧೀರ ಳಾಗಲಿಲ್ಲ. ಮಂಗಳಾಂಗಿಯಾದ ಮತ್ತು ಸುಂದರಾಂಗಿಯಾದ ದಮ ಯಂತಿಯು ನಲನನ್ನು ಪತ್ತೆಹಚ್ಚುವ ಸಲುವಾಗಿ ತನ್ನ ಸಖಿಯೊಬ್ಬಳನ್ನು ಕಳುಹಿಸಿಕೊಡಲು ನಿಶ್ಚಯಿಸಿ, ಕೇಶಿನೀ ಎಂಬುವಳನ್ನು ಕರೆಸಿದಳು."

೭೩ನೆಯ ಅಧ್ಯಾಯವು ಮುಗಿಯಿತು.

೭೪ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ದಮಯಂತಿಯಿಂದ ಬಾಹುಕನ ಪರೀಕ್ಷೆ : ಬಾಹುಕ–ಕೇಶಿನಿಯರ ಸಂಭಾಷಣೆ

ಬೃಹದಶ್ವರು ಹೇಳುತ್ತಾರೆ :

"ಯುಧಿಷ್ಠಿರ! ಕೇಶಿನಿಯು ಬಂದೊಡನೆಯೇ ದಮಯಂತಿಯು ಅವಳೊಡನೆ ಹೇಳಿದಳು :

"ಕೇಶಿನಿ! ನೀನು ಕೂಡಲೇ ಅಯೋಧ್ಯೆಯಿಂದ ಈಗ ತಾನೇ ಬಂದಿ ರುವ ರಥದ ಬಳಿಗೆ ಹೋಗಿ, ರಥದಲ್ಲಿ ಕುಳಿತು ವಿಶ್ರಾಂತಿಯನ್ನು ಪಡೆಯು ತ್ತಿರುವ, ಕುರೂಪಿಯಾದ ಮತ್ತು ಮೋಟಾದ ಕೈಗಳುಳ್ಳ ಆ ಮನುಷ್ಯನು ಯಾರೆಂಬುದನ್ನು ತಿಳಿದುಕೊಂಡು ಬರಬೇಕು. ಮಂಗಳಾಂಗಿಯೇ! ಅವನು

ಕುರೂಪಿಯಾಗಿದ್ದರೂ ಅವನೊಡನೆ ಕಟುವಾದ ಮಾತುಗಳನ್ನಾಡಬೇಡ. ಅವನ ಬಳಿಗೆ ಹೋಗಿ ಮೃದುವಚನಗಳಿಂದ ಕುಶಲಪ್ರಶ್ನೆಮಾಡು. ಅವನಾ ರೆಂಬುದನ್ನೂ–ಅವನ ಹಿಂದಿನ ವೃತ್ತಾಂತವೇನೆಂಬುದನ್ನೂ ಪರ್ಯಾಯ ವಾಗಿ ಪ್ರಶ್ನಿಸಿ ತಿಳಿದುಕೋ. ಪ್ರಿಯಸಖಿಯೇ! ನನ್ನ ಮನಸ್ಸಿನಲ್ಲಿ ಇಂದು ಉದ್ಭೂತವಾಗಿರುವ ಅನಿರ್ವಾಚ್ಯವಾದ ಒಂದು ಆನಂದ, ನನ್ನ ಹೃದಯದ ಪ್ರಸನ್ನತೆ–ಇವುಗಳನ್ನು ನೋಡಿದರೆ ಆ ಮನುಷ್ಯನೇ ನಲನಿರಬಹುದೆಂಬ ಸಂಶಯವುಂಟಾಗಿದೆ. ಅವನ ಕುಶಲವನ್ನು ಕೇಳಿದನಂತರ ಅವನ ಪೂರ್ವೇತಿಹಾಸವನ್ನು ತಿಳಿಯಬೇಕಾದರೆ–ಪರ್ಣಾದನು ಅಯೋಧ್ಯೆಗೆ ಹೋಗಿ ಅಲ್ಲಿ ಆಡಿದ್ದ ಮಾತುಗಳನ್ನೇ ಅವನ ಮುಂದೆಯೂ ಪುನಃ ಹೇಳಬೇಕಾಗುತ್ತದೆ. ಆ ಮಾತುಗಳಿಗೆ ಅವನು ಕೊಡುವ ಉತ್ತರವನ್ನು ಚೆನ್ನಾಗಿ ಗ್ರಹಿಸು ಮತ್ತು ನನಗೆ ಯಥಾವತ್ತಾಗಿ ತಿಳಿಸುವವಳಾಗು."

ಕೇಶಿನಿಯು ದಮಯಂತಿಯ ಆಣತಿಯಂತೆ ಋತುಪರ್ಣನ ರಥದ ಬಳಿಗೆ ಒಡನೆಯೇ ಹೋಗಿ, ರಥದ ಬಳಿಯಲ್ಲಿ ಕುಳಿತಿದ್ದ ಬಾಹುಕನನ್ನು ಕುರಿತು ಹೇಳಿದಳು. ಅವರಿಬ್ಬರೂ ಮಾತನಾಡುತ್ತಿರುವುದನ್ನು ದಮ ಯಂತಿಯು ಉಪ್ಪರಿಗೆಯ ಮೇಲೆ ನಿಂತು ವೀಕ್ಷಿಸುತ್ತಿದ್ದಳು.

"ಮಹಾನುಭಾವನೇ! ನಿನಗೆ ಆದರದ ಸ್ವಾಗತವನ್ನು ಬಯಸುತ್ತೇನೆ. ನೀನು ಸುಖವಾಗಿರು. ಪುರುಷಶ್ರೇಷ್ಠನೇ! ದಮಯಂತಿಯು ನನ್ನೊಡನೆ ಹೇಳಿರುವ ಒಂದೆರಡು ಮಾತುಗಳನ್ನು ನಿನ್ನ ಮುಂದೆ ಹೇಳಲು ಬಯಸಿರು ವೆನು. ಅವುಗಳನ್ನು ಸಾವಧಾನದಿಂದ ಕೇಳಿ ಉತ್ತರಿಸುವವನಾಗು. ನೀವು ಯಾವಾಗ ಅಯೋಧ್ಯೆಯಿಂದ ಹೊರಟಿರಿ? ಯಾವ ಉದ್ದೇಶದಿಂದಾಗಿ ನೀವಿಲ್ಲಿಗೆ ಬಂದಿರುವಿರಿ?–ಈ ಎರಡು ಪ್ರಶ್ನೆಗಳಿಗೆ ಸತ್ಯವಾದ ಉತ್ತರವನ್ನು ಕೊಡು. ನಮ್ಮೊಡತಿಯಾದ ವಿದರ್ಭರಾಜಕುಮಾರಿಯು ಈ ಪ್ರಶ್ನೆಗಳಿಗೆ ಉತ್ತರವನ್ನು ಅಪೇಕ್ಷಿಸಿದ್ದಾಳೆ."

ಬಾಹುಕನು ಉತ್ತರಿಸುತ್ತಾ ಹೇಳಿದನು :

"ಮಹಾತ್ಮನಾದ ಋತುಪರ್ಣರಾಜನು ಬ್ರಾಹ್ಮಣನೊಬ್ಬನ ಮೂಲಕ ದಮಯಂತಿಗೆ ದ್ವಿತೀಯಸ್ವಯಂವರವು ನಡೆಯುವುದೆಂಬ ವಾರ್ತೆಯನ್ನು

ಕೇಳಿದನು. ಆ ವಾರ್ತೆಯನ್ನು ಕೇಳುತ್ತಲೇ ನಮ್ಮ ರಾಜನು ವಾಯುವೇಗಕ್ಕೆ ಸಮಾನವಾದ ವೇಗವುಳ್ಳ, ನೂರು ಯೋಜನದೂರದ ಪ್ರಯಾಣವನ್ನು ಅವಿಚ್ಛಿನ್ನವಾಗಿ ಮಾಡಲು ಸಮರ್ಥವಾಗಿರುವ ಈ ಕುದುರೆಗಳ ಸಹಾಯದಿಂದ ಕುಂಡಿನಪಟ್ಟಣಕ್ಕೆ ಬಂದಿರುವನು. ನಾನು ಮಹಾತ್ಮನಾದ ಋತುಪರ್ಣನ ಸಾರಥಿಯಾಗಿದ್ದೇನೆ."



ಅದಕ್ಕೆ ಕೇಶಿನಿಯು ಹೇಳಿದಳು :

"ನಿಮ್ಮ ಮೂವರಲ್ಲಿ ಋತುಪರ್ಣನಾರೆಂಬುದೇನೋ ತಿಳಿಯಿತು. ಅವನೊಡನಿದ್ದ ಮತ್ತೊಬ್ಬನ ಕುಲ-ಗೋತ್ರಗಳೇನು? ಅವನು ಯಾರ ಮಗ?

ನಿನ್ನ ಕುಲ-ಗೋತ್ರಗಳನ್ನು ಕೇಳಬಹುದೇ? ನೀನು ಯಾವ ಪುಣ್ಯಪುರುಷನ ಸುಪುತ್ರನಾಗಿರುವೆ? ನೀನು ಮೊದಲಿನಿಂದಲೂ ಋತುಪರ್ಣನ ಸಾರಥ್ಯ ಮಾಡುತ್ತಾ ಅಯೋಧ್ಯೆಯಲ್ಲಿಯೇ ಇರುವೆಯಾ? ಅಥವಾ ಇತ್ತೀಚೆಗೆ ಬಂದು ಸೇರಿಕೊಂಡಿದ್ದರೆ ಅವನಲ್ಲಿ ಕೆಲಸಕ್ಕೆ ಸೇರಿಕೊಂಡ ಕಾರಣವಾದರೂ ಏನು? ಅವನಲ್ಲಿ ಹೋಗುವುದಕ್ಕೂ ಮೊದಲಿನ ನಿನ್ನ ಪೂರ್ವೇತಿಹಾಸವೇನೆಂಬುದನ್ನು ಕೇಳಿ ತಿಳಿಯಬಹುದೇ?"

ಬಾಹುಕನು ಉತ್ತರಿಸಿದನು :

"ನೀನು ಮೊದಲು ಕೇಳಿದೆಯಲ್ಲಾ! ಅವನ ವಿಷಯವಾಗಿ ಮೊದಲು ಉತ್ತರಿಸುತ್ತೇನೆ. ಅವನು ಹಿಂದೆ ಧರ್ಮಾತ್ಮನಾದ ನಲನ ಸಾರಥಿಯಾಗಿದ್ದನು. ವಾರ್ಷ್ಣೇಯನೆಂದು ಸರ್ವತ್ರ ಪ್ರಸಿದ್ಧನಾಗಿರುವನು. ನಲನು ರಾಜ್ಯಭ್ರಷ್ಟನಾಗಿ ಹೊರಟುಹೋದನಂತರ ಅವನು ತನ್ನ ಜೀವಿಕೆಗಾಗಿ ಭಾಂಗಾಸುರಿಯಲ್ಲಿ ಬಂದು ಸೇರಿಕೊಂಡಿರುವನು. ನಾನು ಮೊದಲಿನಿಂದಲೂ ಅಶ್ವಶಾಸ್ತ್ರದಲ್ಲಿ ಪ್ರವೀಣನಾಗಿರುವೆನು. ಇದನ್ನು ತಿಳಿದ ಋತುಪರ್ಣನು ನನ್ನನ್ನು ಅಶ್ವಶಾಲೆಯ ಅಧ್ಯಕ್ಷನನ್ನಾಗಿ ನಿಯಮಿಸಿಕೊಂಡಿರುವನು. ನಿಶ್ಚಯವಾಗಿಯೂ ಋತುಪರ್ಣನೇ ನನ್ನನ್ನು ಸಾರಥಿಯನ್ನಾಗಿಯೂ ಮತ್ತು ಅಡಿಗೆಯವನನ್ನಾಗಿಯೂ ನಿಯಮಿಸಿಕೊಂಡಿರುವನು. ನನ್ನನ್ನು ಬಾಹುಕ ನೆಂದು ಕರೆಯುವರು."

"ಬಾಹುಕ! ನಲನೆಲ್ಲಿಗೆ ಹೋಗಿರುವನೆಂಬ ವಿಷಯವು ಬಹುಶಃ ವಾರ್ಷ್ಣೇಯನಿಗೆ ತಿಳಿದಿರಬಹುದಲ್ಲವೇ? ತನ್ನ ಸ್ವಾಮಿಯ ವಿಷಯವಾಗಿ ವಾರ್ಷ್ಣೇಯನು ನಿನ್ನೊಡನೆ ಕೆಲವು ಮಾತುಗಳನ್ನಾದರೂ ಆಡಿರಬಹು ದಲ್ಲವೇ?"

"ಶುಭಾಂಗಿಯೇ! ಸುಚರಿತನಾದ ನಲನ ಇಬ್ಬರು ಮಕ್ಕಳನ್ನೂ ಕುಂಡಿನನಗರಕ್ಕೆ ಕರೆದುಕೊಂಡುಬಂದು ಬಿಟ್ಟಬಳಿಕ ವಾರ್ಷ್ಣೇಯನು ಅವನಿ ಗಿಚ್ಛೆಬಂದಂತೆ ಹೊರಟುಹೋದನು. ಅಲ್ಲಿಂದ ಮುಂದೆ ಅವನಿಗೆ ನಲನ ಸಮಾಚಾರವು ತಿಳಿಯುವ ಸಾಧ್ಯತೆಯೇ ಇರಲಿಲ್ಲ ; ತಿಳಿದೂ ಇಲ್ಲ. ನಲನು ಎಲ್ಲಿರುವನೆಂಬ ವಿಷಯವಾಗಿ ಅವನಿಗೇನೂ ತಿಳಿಯದು. ಅವನಿಗೆ ಮಾತ್ರ

ವೇಕೆ? ಈ ಪ್ರಪಂಚದಲ್ಲಿಯೇ ಯಾರೊಬ್ಬರೂ ನಲನು ಎಲ್ಲಿರುವನೆಂಬುದನ್ನು ಅರಿಯರು. ಏಕೆಂದರೆ : ಅವನು ಮಹತ್ತರವಾದ ಆಪತ್ತಿನಲ್ಲಿ ಸಿಕ್ಕಿಕೊಂಡವನಾಗಿ ವೇಷಮರೆಯಿಸಿಕೊಂಡು ಈ ಪ್ರಪಂಚದಲ್ಲಿ ಅಲೆಯುತ್ತಿದ್ದಾನೆ. ಈ ಸಮಯದಲ್ಲಿ :

**ಆತ್ಮೈವ ತು ನಲಂ ವೇದ ನ ಚೈವಾನ್ಯೋಽಪಿ ಕಶ್ಚನ ।**
**ನ ಹಿ ವೈ ಸ್ವಾನಿ ಲಿಙ್ಗಾನಿ ನಲಃ ಶಂಸತಿ ಕರ್ಹಿಚಿತ್ ॥೧೬॥**

ನಲನೊಬ್ಬನಿಗೆ ನಿಸ್ಸಂಶಯವಾಗಿ–'ನಾನೇ ನಲ'–ಎಂಬ ವಿಷಯವು ತಿಳಿದಿರುವುದೇ ಹೊರತು ಬೇರಾರಿಗೂ–'ನಲನಾರು? ನಲನೆಲ್ಲಿರುವನು? ಏನು ಮಾಡುತ್ತಿರುವನು?'–ಈ ವಾರ್ತೆಗಳೊಂದೂ ತಿಳಿದಿರುವುದಿಲ್ಲ; ತಿಳಿಯುವ ಸಾಧ್ಯತೆಯೂ ಇಲ್ಲ. ನಲನು ತಾನಿರುವ ಕುರುಹನ್ನೂ ಮತ್ತೊಬ್ಬರಿಗೆ ಹೇಳಿರಲಾರನು ಮತ್ತು ಎಲ್ಲಿಯೂ ವಿಶದಪಡಿಸಿರಲಾರನು."

"ಬಾಹುಕ! ಪರ್ಣಾದನೆಂಬ ಬ್ರಾಹ್ಮಣನೊಬ್ಬನು ಕೆಲವು ದಿನಗಳ ಹಿಂದೆ ಅಯೋಧ್ಯೆಗೆ ಹೋಗಿದ್ದನು. ಸ್ತ್ರೀಯೊಬ್ಬಳು ಹೇಳಿಕಳುಹಿಸಿದ್ದ ಈ ಮಾತುಗಳನ್ನು ಪರ್ಣಾದನು ರಾಜಸಭೆಯಲ್ಲಿ ಪುನಃ ಪುನಃ ಹೇಳುತ್ತಿದ್ದನು.

**ಕ್ವ ನು ತ್ವಂ ಕಿತವಚ್ಛಿತ್ತ್ವಾ ವಸ್ತ್ರಾರ್ಧಂ ಪ್ರಸ್ಥಿತೋ ಮಮ ।**
**ಉತ್ಸೃಜ್ಯ ವಿಪಿನೇ ಸುಪ್ತಾಮನುರಕ್ತಾಂ ಪ್ರಿಯಾಂ ಪ್ರಿಯ ॥೧೮॥**

**ಸಾ ವೈ ಯಥಾ ಸಮಾದಿಷ್ಟಾ ತಥಾಸ್ತೇ ತ್ವತ್ಪ್ರತೀಕ್ಷಿಣೀ ।**
**ದಹ್ಯಮಾನಾ ದಿವಾರಾತ್ರೌ ವಸ್ತ್ರಾರ್ಧೇನಾಭಿಸಂವೃತಾ ॥೧೯॥**

**ತಸ್ಯಾ ರುದನ್ತ್ಯಾಃ ಸತತಂ ತೇನ ದುಃಖೇನ ಪಾರ್ಥಿವ ।**
**ಪ್ರಸಾದಂ ಕುರು ಮೇ ವೀರ ಪ್ರತಿವಾಕ್ಯಂ ವದಸ್ವ ಚ ॥೨೦॥**

'ಎಲೈ ಜೂಜುಕೋರನೇ! ನನ್ನ ಸೀರೆಯಲ್ಲಿ ಅರ್ಧಭಾಗವನ್ನು ಕಿತ್ತುಕೊಂಡು ಎಲ್ಲಿಗೆ ಹೋದೆ? ಪ್ರಿಯನೇ! ನಿನ್ನ ಪ್ರಿಯಳಾದ, ನಿನ್ನಲ್ಲಿಯೇ ಅನುರಕ್ತಳಾದ, ಮೇಲಾಗಿ ದಾರಿ ನಡೆದ ಆಯಾಸದಿಂದ ಬಳಲಿ-ಬೆಂಡಾಗಿ ಮಲಗಿ ನಿದ್ರಿಸುತ್ತಿದ್ದ ಅಬಲೆಯನ್ನು ಘೋರಾರಣ್ಯದಲ್ಲಿ ಬಿಟ್ಟು ಎಲ್ಲಿಗೆ ಹೊರಟು ಹೋದೆ? ನೀನವಳನ್ನು ಹಿಂದೆ ನೋಡಿದ್ದಾಗ ಯಾವ ರೀತಿಯಲ್ಲಿ ಅರ್ಧ ವಸ್ತ್ರವನ್ನು ಧರಿಸಿದ್ದಳೋ–ಈಗಲೂ ಹಾಗೆಯೇ ಇದ್ದು ನಿನ್ನ ಪ್ರತೀಕ್ಷೆಯಲ್ಲಿಯೇ ಕಾಲಕಳೆಯುತ್ತಿದ್ದಾಳೆ. ನಿನ್ನನ್ನಗಲಿದ ವಿರಹತಾಪದಿಂದ ಸದಾ

ದುಃಖಿಸುತ್ತಿರುವ ನಿನ್ನ ಪ್ರಿಯತಮೆಗೆ ಪ್ರಸನ್ನನಾಗು ಮತ್ತು ಈ ಪ್ರಶ್ನೆಗೆ ಉತ್ತರವನ್ನು ಕೊಡುವ ಕೃಪೆಮಾಡು, ವೀರ!'

ಹೀಗೆ ಹೇಳಿದ ಬ್ರಾಹ್ಮಣನ ಮಾತುಗಳಿಗೆ ಪ್ರತ್ಯುತ್ತರವಾಗಿ ನೀನು ಅಂದು ಹೇಳಿದ್ದ ಮಾತುಗಳನ್ನು ವಿದರ್ಭರಾಜಕುಮಾರಿಯು ಪುನಃ ಕೇಳುವ ಆಶಯವುಳ್ಳವಳಾಗಿದ್ದಾಳೆ. ಬಾಹುಕ! ಅಂದು ನೀನು ಹೇಳಿದುದನ್ನು ಮತ್ತೊಮ್ಮೆ ನನ್ನ ಒಡತಿಯ ಸಲುವಾಗಿ ಹೇಳು."

ಯುಧಿಷ್ಠಿರ! ಕೇಶಿನಿಯ ಮಾತುಗಳನ್ನು ಕೇಳಿ ನಲನ ಹೃದಯದಲ್ಲಿ ದಾರುಣವಾದ ವೇದನೆಯುಂಟಾಯಿತು. ಕಣ್ಣುಗಳಲ್ಲಿ ನೀರು ತುಂಬಿ ಕೊಂಡಿತು. ಆದರೂ ತನ್ನ ಹೃದಯದ ಇಂಗಿತವನ್ನು ಹೊರಕ್ಕೆ ತೋರಿಸ ಕೂಡದೆಂಬ ಇಚ್ಛೆಯಿಂದ ನಲನು ಉಕ್ಕಿಬರುತ್ತಿದ್ದ ತನ್ನ ದುಃಖವನ್ನು ಬಹಳ ಕಷ್ಟದಿಂದ ತಡೆಹಿಡಿಯಲು ಯತ್ನಿಸಿದನು. ಶೋಕಾಗ್ನಿಯಿಂದ ಬೆಂದು ಹೋಗುತ್ತಿದ್ದ ನೃಪತಿಯು ದುಃಖದಿಂದ ಕೂಡಿದ ಗದ್ಗದಸ್ವರದಿಂದ ತಾನಂದು ಆಡಿದ ಮಾತುಗಳನ್ನೇ ಪುನರುಚ್ಚರಿಸಿದನು :

**ವೈಷಮ್ಯಮಪಿ ಸಮ್ಪ್ರಾಪ್ತಾ ಗೋಪಾಯನ್ತಿ ಕುಲಸ್ತ್ರಿಯಃ ।**
**ಆತ್ಮಾನಮಾತ್ಮನಾ ಸತ್ಯೋ ಜಿತಃ ಸ್ವರ್ಗೋ ನ ಸಂಶಯಃ ॥೨೫॥**

**ರಹಿತಾ ಭರ್ತೃಭಿಶ್ಚಾಪಿ ನ ಕ್ರುಧ್ಯನ್ತಿ ಕದಾಚನ ।**
**ಪ್ರಾಣಾಂಶ್ಚಾರಿತ್ರಕವಚಾನ್ಧಾರಯನ್ತಿ ವರಸ್ತ್ರಿಯಃ ॥೨೬॥**

**ವಿಷಮಸ್ಥೇನ ಮೂಢೇನ ಪರಿಭ್ರಷ್ಟಸುಖೇನ ಚ ।**
**ಯತ್ಸಾ ತೇನ ಪರಿತ್ಯಕ್ತಾ ತತ್ರ ನ ಕ್ರೋದ್ಧುಮರ್ಹತಿ ॥೨೭॥**

**ಪ್ರಾಣಯಾತ್ರಾಂ ಪರಿಪ್ರೇಪ್ಸೋಃ ಶಕುನ್ಯೈರ್ಹೃತವಾಸಸಃ ।**
**ಆಧಿಭಿರ್ದಹ್ಯಮಾನಸ್ಯ ಶ್ಯಾಮಾ ನ ಕ್ರೋದ್ಧುಮರ್ಹತಿ ॥೨೮॥**

**ಸತ್ಕೃತಾಽಸತ್ಕೃತಾ ವಾಪಿ ಪತಿಂ ದೃಷ್ಟ್ವಾ ತಥಾವಿಧಮ್ ।**
**ರಾಜ್ಯಭ್ರಷ್ಟಂ ಶ್ರಿಯಾ ಹೀನಂ ಕ್ಷುಧಿತಂ ವ್ಯಸನಾಪ್ಲುತಮ್ ॥೨೯॥**

"ಬ್ರಾಹ್ಮಣಶ್ರೇಷ್ಠರೇ! ನೀವು ಹೇಳಿದುದೆಲ್ಲವನ್ನೂ ನಾನು ಕೇಳಿದೆನು. ಈ ವಿಷಯದಲ್ಲಿ ನಾನೂ ಒಂದೆರಡು ಮಾತನಾಡಲು ಇಚ್ಛಿಸುತ್ತೇನೆ. ಪತಿವ್ರತೆಯರಾದ ಸ್ತ್ರೀಯರು ಎಂತಹ ಕಠಿನಪರಿಸ್ಥಿತಿಯಲ್ಲಿಯೂ ಕೂಡ ತಮ್ಮ ಪಾತಿವ್ರತ್ಯದ ಶಕ್ತಿಯಿಂದಲೇ ತಮ್ಮನ್ನು ತಾವೇ ರಕ್ಷಿಸಿಕೊಳ್ಳಲು

ಸಮರ್ಥರಾಗುತ್ತಾರೆ ಮತ್ತು ಅಂತಹವರಿಂದ ಸ್ವರ್ಗವೂ ಜಯಿಸಲ್ಪಡುತ್ತದೆ. ವರಸ್ತ್ರೀಯರು ಪತಿಯಿಂದ ಪರಿತ್ಯಜಿಸಲ್ಪಟ್ಟರೂ ಪತಿಯ ವಿಷಯವಾಗಿ ಕೋಪಿಸಿಕೊಳ್ಳುವುದಿಲ್ಲ. ಪತಿವ್ರತೆಯರಾದ ಸ್ತ್ರೀಯರು ತಮ್ಮ ಪ್ರಾಣರಕ್ಷಣೆಗೆ ಸದಾಚಾರವೆಂಬ ವಜ್ರಕವಚವನ್ನು ಧರಿಸಿದವರಾಗಿರುತ್ತಾರೆ. ತನ್ನನ್ನು ಬಿಟ್ಟುಹೋದ ಗಂಡನ ವಿಷಯದಲ್ಲಿ ಅವಳು (ದಮಯಂತಿಯು) ಖಂಡಿತ ವಾಗಿಯೂ ಕುಪಿತಳಾಗಕೂಡದು. ಏಕೆಂದರೆ : ಆ ಮೂಢನು ಅಂದು ವಿಷಮಪರಿಸ್ಥಿತಿಯಲ್ಲಿದ್ದನು. ರಾಜ್ಯಭ್ರಷ್ಟನಾಗಿದ್ದನು. ಸುಖವೆಂಬುದೇ ಅವನಿ ಗಿರಲಿಲ್ಲ. ಆಹಾರಕ್ಕೆಂದು ಪಕ್ಷಿಗಳನ್ನು ಹಿಡಿಯಲು ಹೋಗಿ ಪಕ್ಷಿಗಳಿಂದ ವಂಚಿತನಾಗಿ ತನ್ನ ವಸ್ತ್ರವನ್ನೂ ಕಳೆದುಕೊಂಡು, ಮನೋರೋಗಪೀಡಿತನಾದ ನಿರ್ಭಾಗ್ಯನೊಬ್ಬನ (ಗಂಡನ) ವಿಷಯದಲ್ಲಿ ಸಾಧ್ವಿಯಾದ ಅವಳು ಖಂಡಿತವಾಗಿಯೂ ಕುಪಿತಳಾಗಬಾರದು. ಗಂಡನು ರಾಜ್ಯಭ್ರಷ್ಟನಾಗಿರು ವಾಗ, ಸಕಲೈಶ್ವರ್ಯಗಳನ್ನೂ ಕಳೆದುಕೊಂಡಿರುವಾಗ, ಹಸಿವು-ಬಾಯಾರಿಕೆ ಗಳಿಂದ ಬಳಲಿ-ಬೆಂಡಾಗಿರುವಾಗ, ವ್ಯಸನಸಾಗರದಲ್ಲಿ ಮುಳುಗಿರುವಾಗ– ಆತನು ತನ್ನ ಹೆಂಡತಿಯ ವಿಷಯದಲ್ಲಿ ಒಳ್ಳೆಯದನ್ನೇ ಮಾಡಿರಲಿ ; ಅಥವಾ ಕೆಟ್ಟುದನ್ನೇ ಮಾಡಿರಲಿ–ಸಾಧ್ವಿಯಾದ ಪತಿವ್ರತೆಯಾದ ಸ್ತ್ರೀಯು ಅಂತಹ ನಿರ್ಭಾಗ್ಯನ ವಿಷಯದಲ್ಲಿ ಖಂಡಿತವಾಗಿಯೂ ಕುಪಿತಳಾಗಬಾರದು."

ಯುಧಿಷ್ಠಿರ! ನಲನು ಆ ಮಾತುಗಳನ್ನು ಹೇಳುತ್ತಿರುವಾಗ ತನ್ನ ಹೃದಯದಲ್ಲುಂಟಾದ ದುಃಖವನ್ನು ತಡೆಹಿಡಿಯಬೇಕೆಂದು ಎಷ್ಟೇ ಪ್ರಯತ್ನಿ ಸಿದರೂ ದುಃಖವನ್ನು ತಡೆಯಲಾಗಲಿಲ್ಲ. ಕ್ಷಣ-ಕ್ಷಣಕ್ಕೂ ಉಕ್ಕಿಬರುತ್ತಿದ್ದ ದುಃಖವನ್ನು ತಡೆಯಲಾಗದೇ ಬಾಹುಕನು ಬಿಕ್ಕಿ-ಬಿಕ್ಕಿ ಅತ್ತುಬಿಟ್ಟನು.

'ಅಳಬೇಡ, ಬಾಹುಕ!'–ಎಂದು ಕೇಶಿನಿಯು ಸಮಯೋಚಿತವಾಗಿ ಸಂತೈಸಿ ದಮಯಂತಿಯ ಬಳಿಗೆ ಬಂದು, ಬಾಹುಕನೊಡನೆ ನಡೆದ ಸಂಭಾಷಣೆಗಳೆಲ್ಲವನ್ನೂ ಯಥಾವತ್ತಾಗಿ ವಿವರಿಸಿದಳಲ್ಲದೇ–ಬಾಹುಕನು ತಾನು ಅಯೋಧ್ಯೆಯಲ್ಲಿ ಹೇಳಿದ ಮಾತುಗಳನ್ನೇ ಇಲ್ಲಿಯೂ ಪುನರುಚ್ಚರಿಸಿ ದಾಗ ಅವನಿಗುಂಟಾದ ಅಪಾರದುಃಖವನ್ನು ತಡೆಯಲಾಗದೇ ಅವನು ಅತ್ತುದನ್ನೂ ದಮಯಂತಿಗೆ ಹೇಳಿದಳು."

೭೪ನೆಯ ಅಧ್ಯಾಯವು ಮುಗಿಯಿತು.

೭೫ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ದಮಯಂತಿಯ ನಿರ್ದೇಶಾನುಸಾರವಾಗಿ ಕೇಶಿನಿಯು ಬಾಹುಕನನ್ನು ಪುನಃ ಪರೀಕ್ಷಿಸಿದುದು : ಕೇಶಿನಿಯ ಜೊತೆಯಲ್ಲಿ ಬಂದಿದ್ದ ತನ್ನ ಮಕ್ಕಳನ್ನು ಕಂಡೊಡನೆಯೇ ಬಾಹುಕನಿಗೆ ಪ್ರೇಮವು ಉಕ್ಕಿಬಂದುದು

ಬೃಹದಶ್ವರು ಹೇಳುತ್ತಾರೆ :

"ಯುಧಿಷ್ಠಿರ! ಕೇಶಿನಿಯು ಹೇಳಿದುದನ್ನು ಕೇಳಿ ದಮಯಂತಿಗೂ ಬಹಳ ದುಃಖವಾಯಿತು. ಕೇಶಿನಿಯು ಹೇಳಿದ ಮಾತುಗಳಿಂದ ಋತುಪರ್ಣ-ವಾರ್ಷ್ಣೇಯರೊಡನೆ ಕುಂಡಿನಕ್ಕೆ ಬಂದಿರುವ ಆ ಪುರುಷನು ನಲನೇ ಇರಬಹುದೆಂದು ದಮಯಂತಿಯು ಸಂಶಯಿಸಿದಳು. ಉಳಿದೆಲ್ಲ ವಿಷಯಗಳಲ್ಲಿಯೂ ನಲನು ಹೇಳಬೇಕಾದ ಮಾತುಗಳನ್ನೇ ಆ ಮನುಷ್ಯನೂ ಹೇಳುತ್ತಿರುವುದರಿಂದ ಅವನು ನಲನೇ ಇರಬೇಕೆಂದು ಊಹಿಸುವ ಸಾಧ್ಯತೆಯಿದ್ದರೂ–ಮುಖ್ಯವಾಗಿ ಆ ಮನುಷ್ಯನ ವಿಚಿತ್ರಸ್ವರೂಪವನ್ನು ನೋಡಿದಾಗ ಮಾತ್ರ ಅವನು ನಲನೆಂದು ಯಾರಿಂದಲೂ ಹೇಳುವ ಸಾಧ್ಯತೆಯಿರಲಿಲ್ಲ. ದಮಯಂತಿಯು ಬಾಹುಕನನ್ನು ಮತ್ತೂ ಪರೀಕ್ಷಿಸಬೇಕೆನ್ನುವ ಆಶಯದಿಂದ ಕೇಶಿನಿಯನ್ನು ಕುರಿತು ಹೇಳಿದಳು :

"ಕೇಶಿನಿ! ಪುನಃ ನೀನು ಬಾಹುಕನಿರುವೆಡೆಗೆ ಹೋಗು. ವ್ಯಾಜಾಂತರಗಳಿಂದ ಅವನ ಪಕ್ಕದಲ್ಲಿಯೇ ಇದ್ದು ಅವನೇನು ಮಾಡುವನು? ಅವನ ಸ್ವಭಾವವೇನು?–ಎಂಬುದನ್ನು ಬಹುಸೂಕ್ಷ್ಮವಾಗಿ ಪರೀಕ್ಷಿಸು. ಅವನೇನಾದರೂ ಕೆಲಸಮಾಡಿದರೆ ಆ ಕಾರ್ಯಕ್ಕೆ ಕಾರಣವೇನೆಂಬುದನ್ನೂ ತಿಳಿದುಕೋ. ಅವನು ಮಾಡುವ ಚೇಷ್ಟೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸು. ಮತ್ತೊಂದು ಮುಖ್ಯವಿಷಯವನ್ನು ಜ್ಞಾಪಕದಲ್ಲಿಡು. ಅವನೇನಾದರೂ ಬೆಂಕಿಯನ್ನಾಗಲೀ, ನೀರನ್ನಾಗಲೀ ಕೇಳಿದಲ್ಲಿ ಅವನಿಗೆ ತೊಂದರೆಯಾಗುವುದೆಂದು ಭಾವಿಸಿ ಅವಸರದಿಂದ ಅಗ್ನಿಯನ್ನಾಗಲೀ, ನೀರನ್ನಾಗಲೀ ಕೊಡಲು ಹೋಗಬೇಡ. ವ್ಯಾಜಾಂತರದಿಂದ ಅವನು ಹೇಳಿದುದನ್ನು ಕೇಳಿಯೂ ಕೇಳದವಳಂತೆ ನಟಿಸು. ಅವನ ಕೆಲಸವನ್ನು ಬಹುಸೂಕ್ಷ್ಮವಾಗಿ ಪರಿಶೀಲಿಸು.

ಅವನ ನಡತೆ, ಚೇಷ್ಟೆಗಳು ಮತ್ತು ಅವನಲ್ಲಿರಬಹುದಾದ ಅಮಾನುಷಶಕ್ತಿ–ಇವೆಲ್ಲವನ್ನೂ ನೀನು ಅವನ ಸಮೀಪವರ್ತಿಯಾಗಿದ್ದು ಸೂಕ್ಷ್ಮವಾಗಿ ಪರಿಶೀಲಿಸಿ ತಿಳಿದುಕೊಂಡು ಬಂದು ಒಡನೆಯೇ ನನಗೆ ಯಥಾವತ್ತಾಗಿ ತಿಳಿಸಬೇಕು, ತಿಳಿಯಿತೇ ?"

"ಹಾಗೆಯೇ ಆಗಲಿ, ರಾಜಕುಮಾರಿ!"

ಹೀಗೆ ಹೇಳಿ ಕೇಶಿನಿಯು ಬಾಹುಕನ ಬಳಿಗೆ ಹೋಗಿ, ಅವನ ಸಂಗಡ ಮಾತನಾಡುವ ನೆಪಮಾಡಿಕೊಂಡು ಅಶ್ವವಿದ್ಯಾಪಾರಂಗತನಾದ ಬಾಹುಕನ ವಿಚಿತ್ರಚರ್ಯೆಗಳೆಲ್ಲವನ್ನೂ ಪ್ರತ್ಯಕ್ಷವಾಗಿ ಕಂಡು ಆಶ್ಚರ್ಯಭರಿತಳಾಗಿ, ಒಡತಿಗೆ ನಿವೇದನಮಾಡುವ ಅವಸರದಿಂದ ಪುನಃ ದಮಯಂತಿಯ ಅಂತಃಪುರಕ್ಕೆ ತೆರಳಿದಳು. ದಮಯಂತಿಯನ್ನು ಕಂಡು ಅವಳಿಗೆ ತಾನು ಪ್ರತ್ಯಕ್ಷವಾಗಿ ಕಂಡ ಬಾಹುಕನ ಮಾನುಷ ಮತ್ತು ಅಮಾನುಷಚರ್ಯೆಗಳೆಲ್ಲವನ್ನೂ ವಿಶದವಾಗಿ ತಿಳಿಯಪಡಿಸಿದಳು :

"ರಾಜಕುಮಾರಿ! ಅವನ ವ್ಯವಹಾರಗಳೆಲ್ಲವೂ ಅದ್ಭುತವೂ, ಮಂಗಳಕರವೂ ಆಗಿವೆ. ಇದನ್ನು ನಾನು ಪ್ರತ್ಯಕ್ಷವಾಗಿಯೇ ಕಂಡೆನು. ನಾನು ಇಂತಹ ಒಂದು ವೈಚಿತ್ರ್ಯವನ್ನು ಇದುವರೆಗೂ ಕಂಡೂ ಇರಲಿಲ್ಲ ; ಕೇಳಿಯೂ ಇರಲಿಲ್ಲ.

**ಹ್ರಸ್ವಮಾಸಾದ್ಯ ಸಂಚಾರಂ ನಾಸೌ ವಿನಮತೇ ಕ್ವಚಿತ್ ।**
**ತಂ ತು ದೃಷ್ಟ್ವಾ ಯಥಾಸಂಗಮುತ್ಸರ್ಪತಿ ಯಥಾಸುಖಮ್ ॥೯॥**
**ಸಂಕಟೇಽಪ್ಯಸ್ಯ ಸುಮಹಾನ್ವಿವರೋ ಜಾಯತೇಽಧಿಕಃ ।**
**ಋತುಪರ್ಣಸ್ಯ ಚಾರ್ಥಾಯ ಭೋಜನೀಯಮನೇಕಶಃ ॥೧೦॥**
**ಪ್ರೇಷಿತಂ ತತ್ರ ರಾಜ್ಞಾ ತು ಮಾಂಸಂ ಚೈವ ಪ್ರಭೂತವತ್ ।**
**ತಸ್ಯ ಪ್ರಕ್ಷಾಲನಾರ್ಥಾಯ ಕುಮ್ಭಾಸ್ತತ್ರೋಪಕಲ್ಪಿತಾಃ ॥೧೧॥**
**ತೇ ತೇನಾವೇಕ್ಷಿತಾಃ ಕುಮ್ಭಾಃ ಪೂರ್ಣಾ ಏವಾಭವಂಸ್ತತಃ ।**
**ತತಃ ಪ್ರಕ್ಷಾಲನಂ ಕೃತ್ವಾ ಸಮಧಿಶ್ರಿತ್ಯ ಬಾಹುಕಃ ॥೧೨॥**
**ತೃಣಮುಷ್ಟಿಂ ಸಮಾದಾಯ ಸವಿತುಸ್ತಂ ಸಮಾದಧತ್ ।**
**ಅಥ ಪ್ರಜ್ವಲಿತಸ್ತತ್ರ ಸಹಸಾ ಹವ್ಯವಾಹನಃ ॥೧೩॥**

ಅವನು ಬಾಗಿಲೊಂದನ್ನು ದಾಟಿ ಹೋಗುವಾಗ ಬಾಗಿಲು ಚಿಕ್ಕದಾಗಿದ್ದರೂ ಅವನು ತಲೆತಗ್ಗಿಸಿ ಹೋಗುವ ಅವಶ್ಯಕತೆಯಿಲ್ಲ. ಅವನ ಆಳುತನಕ್ಕೆ ಸರಿಯಾಗಿ ಅಚಲವೆನಿಸಿದ ಮರದ ಬಾಗಿಲೂ ಎತ್ತರವಾಗಿ ಆತನ ದೀರ್ಘಶರೀರವು ಸ್ವಲ್ಪವೂ ಬಾಗದ ರೀತಿಯಲ್ಲಿ ಪ್ರವೇಶಿಸಲು ಅವಕಾಶ ವೀಯುತ್ತದೆ. ಕಂಡಿಯೊಂದು ಪ್ರವೇಶಿಸಲು ದುಸ್ಸಾಧ್ಯವೆನಿಸಿ ಕಿರಿದಾಗಿದ್ದರೂ ಬಾಹುಕನು ಅದೇ ಕಂಡಿಯಿಂದ ಹೋಗಬೇಕೆಂದು ನಿಶ್ಚಯಿಸಿದೊಡನೆಯೇ ಕಿರಿದಾದ ಕಂಡಿಯು ಹಿರಿದಾಗಿ ಬಾಹುಕನ ಸುಖಪ್ರವೇಶಕ್ಕೆ ಅವಕಾಶವನ್ನೀಯುತ್ತದೆ. ಈ ವಿಚಿತ್ರಗಳನ್ನು ನಾನು ಪ್ರತ್ಯಕ್ಷವಾಗಿಯೇ ನೋಡಿದೆನು, ರಾಜಕುಮಾರಿ!

ಮೂರನೆಯ ವೈಚಿತ್ರ್ಯವನ್ನು ಹೇಳುವೆನು, ಕೇಳು!

ನಮ್ಮ ಭೀಮರಾಜನು ಅತಿಥಿಯಾದ ಋತುಪರ್ಣನ ಭೋಜನಕ್ಕಾಗಿ ನಾನಾಪ್ರಾಣಿಗಳ ನಾನಾವಿಧವಾದ ಮಾಂಸವನ್ನು ಬಾಹುಕನಲ್ಲಿಗೆ ಪಕ್ವ ಮಾಡಲು ಕಳುಹಿಸಿಕೊಟ್ಟಿದ್ದನು. ತೊಳೆಯುವ ಸಲುವಾಗಿ ಅನೇಕಪಾತ್ರೆಗಳೂ ಅಡಿಗೆಯ ಮನೆಯಲ್ಲಿದ್ದುವು. ಆದರೆ ಅವುಗಳೊಂದರಲ್ಲಿಯೂ ಮಾಂಸವನ್ನು ತೊಳೆಯಲು ನೀರಿರಲಿಲ್ಲ. ಅದನ್ನು ನಾನು ಕಣ್ಣಾರೆ ಕಂಡೆನು. ನೀನು ನನ್ನೊಡನೆ ಹೇಳಿಕಳುಹಿಸಿದ್ದಂತೆ ಬಾಹುಕನು ನನಗೆ ನೀರನ್ನು ತರಲು ಹೇಳುವನೆಂದು ಭಾವಿಸಿದ್ದೆನು. ಆದರೆ ಬಾಹುಕನು ನನ್ನನ್ನು ನೀರುಕೇಳುವ ಬದಲಾಗಿ ಆ ಪಾತ್ರೆಗಳನ್ನೇ ಒಮ್ಮೆ ನೋಡಿದನು. ಅವನು ಎವೆಯಿಕ್ಕದೆ ಆ ಪಾತ್ರೆಗಳನ್ನೇ ನೋಡುತ್ತಿದ್ದಾಗ ಆ ಪಾತ್ರೆಗಳಲ್ಲಿ ಶುದ್ಧವಾದ ನೀರು ತುಂಬಿಕೊಂಡಿತು. ಆ ನೀರಿನಿಂದಲೇ ಬಾಹುಕನು ಮಾಂಸವನ್ನು ತೊಳೆದು, ಅದನ್ನು ಬೇಯಿಸಲು ಒಲೆಯ ಮೇಲಿಟ್ಟನು. ಆಗಲಾದರೂ ಬೆಂಕಿಯನ್ನು ತರಲು ನನಗೆ ಹೇಳಬಹುದೆಂದು ನಾನು ಅವನ ಕಡೆಗೇ ನೋಡುತ್ತಿದ್ದೆನು. ಆದರೆ ಮಹಾತ್ಮನಾದ ಬಾಹುಕನು ಒಂದು ಮುಷ್ಟಿ ಹುಲ್ಲನ್ನು ತೆಗೆದುಕೊಂಡು ಸೂರ್ಯನಿಗೆ ತೋರಿಸಿದೊಡನೆಯೇ ಆ ಹುಲ್ಲು 'ಭುಗ್' ಎಂದು ಹೊತ್ತಿಕೊಂಡಿತು. ಈ ಎಲ್ಲ ವಿಚಿತ್ರಗಳನ್ನೂ ನೋಡಿ ನಿನಗೆ ಕೂಡಲೇ ಹೇಳಬೇಕೆಂಬ ಆಶಯದಿಂದ ಓಡಿಬಂದೆನು. ಈ ಮಧ್ಯೆ ಇನ್ನೂ ಒಂದು ಅತ್ಯಾಶ್ಚರ್ಯಕರವಾದ ಸಂಗತಿಯು ನಡೆಯಿತು, ದಮಯಂತಿ!

**ಯದಗ್ನಿಮಪಿ ಸಂಸ್ಪೃಶ್ಯ ನೈವಾಸೌ ದಹ್ಯತೇ ಶುಭೇ ।**
**ಛನ್ದೇನ ಚೋದಕಂ ತಸ್ಯ ವಹತ್ಯಾವರ್ಜಿತಂ ದ್ರುತಮ್ ॥೧೫॥**

ಶುಭಾಂಗಿಯೇ! ಅವನು ಬೆಂಕಿಯನ್ನು ಕೈಯಿಂದಲೇ ಮುಟ್ಟಿ ಒಂದು ಒಲೆಯಿಂದ ಮತ್ತೊಂದು ಒಲೆಗೆ ಹಾಕುತ್ತಿದ್ದನು. ಆದರೂ ಬೆಂಕಿಯು ಅವನ ಕೈಯ್ಯನ್ನು ಸುಡಲಿಲ್ಲ. ಅವನು ಕುಳಿತಿದ್ದೆಡೆಗೆ ನೀರು ಪ್ರವಾಹರೂಪವಾಗಿ ಹರಿದುಬರುತ್ತಿದ್ದಿತು. ಮತ್ತೂ ಒಂದು ವಿಚಿತ್ರವನ್ನು ಕಂಡೆನು, ರಾಜಪುತ್ರಿ!

**ಯತ್ಸ ಪುಷ್ಪಾಣ್ಯುಪಾದಾಯ ಹಸ್ತಾಭ್ಯಾಂ ಮಮೃದೇ ಶನೈಃ ।**
**ಮೃದ್ಯಮಾನಾನಿ ಪಾಣಿಭ್ಯಾಂ ತೇನ ಪುಷ್ಪಾಣಿ ನಾನ್ಯಥಾ ॥೧೬॥**

**ಭೂಯ ಏವ ಸುಗನ್ಧೀನಿ ಹೃಷಿತಾನಿ ಭವನ್ತಿ ಹಿ ।**
**ಏತಾನ್ಯದ್ಭುತಲಿಙ್ಗಾನಿ ದೃಷ್ಟ್ವಾಹಂ ದ್ರುತಮಾಗತಾ ॥೧೭॥**

ಅವನು ಅರಮನೆಯ ಹೂದೋಟದಲ್ಲಿದ್ದ ನವಸುಮಗಳನ್ನು ತಂದನು. ಚೇಷ್ಟೆಮಾಡುತ್ತಿರುವನೋ ಎಂಬಂತೆ ಅವುಗಳನ್ನು ತನ್ನೆರಡು ಕೈಗಳಿಂದಲೂ ಮೃದುವಾಗಿ ಹೊಸಕಿದನು. ಹೂವುಗಳೇನಾದುವು ಗೊತ್ತೇ? ಬಾಡಿ ಬತ್ತಿಹೋಗಲಿಲ್ಲ. ಮೊದಲಿಗಿಂತಲೂ ಹೆಚ್ಚು ವಿಕಸಿತವಾಗಿ, ಹೆಚ್ಚು ಸುಗಂಧಮಯವಾಗಿ ರಾರಾಜಿಸಿದುವು. ಈ ವಿಧವಾದ ಅತ್ಯಾಶ್ಚರ್ಯಕರ ವಾದ ಸಂಗತಿಗಳೆಲ್ಲವನ್ನೂ ಕಂಡು ಎಲ್ಲವನ್ನೂ ನಿನಗೆ ಹೇಳಬೇಕೆಂಬ ಆಶಯದಿಂದ ಓಡಿಬಂದೆನು, ದಮಯಂತಿ!"

ಯುಧಿಷ್ಠಿರ! ದಮಯಂತಿಯು ನಲನ ಆ ಅಮಾನುಷವಾದ ವರ್ತನೆ ಗಳನ್ನು ತಿಳಿದವಳಾಗಿದ್ದುದರಿಂದ ಆ ವಿಷಯಗಳು ಅವಳಿಗೆ ಹೆಚ್ಚು ಆಶ್ಚರ್ಯ ವೆನಿಸಲಿಲ್ಲ. ಬಾಹುಕನು ನಲನೇ ಆಗಿರುವನೆಂಬ ನಿಶ್ಚಯಕ್ಕೆ ದಮಯಂತಿಯು ಬಂದಳು. ಆದರೂ ಆತನಿಗಿದ್ದ ವಕ್ರಶರೀರವನ್ನು ನೆನೆದೊಡನೆಯೇ ದಮಯಂತಿಯ ಹಿಗ್ಗಿದ ಮನಸ್ಸು ಕುಗ್ಗುತ್ತಿದ್ದಿತು. ಸಂಕಟಪಡುವಳು. ಮತ್ತೊಂದು ವಿಧವಾಗಿಯೂ ಬಾಹುಕನು ನಲನೇ–ಎಂಬುದನ್ನು ಪರೀಕ್ಷಿಸಬೇಕೆಂದು ದಮಯಂತಿಯು ನಿಶ್ಚಯಿಸಿದವಳಾಗಿ ಕೇಶಿನಿಯನ್ನು ಕುರಿತು ಗೋಳಿಡುತ್ತಾ ಹೇಳಿದಳು :

“ಸುಂದರಾಂಗಿಯೇ! ನೀನು ಪುನಃ ಬಾಹುಕನಿರುವ ಅಡಿಗೆಯ ಮನೆಗೆ ಹೋಗಿ ಅವನು ಬೇಯಿಸಿ ಸಿದ್ಧಪಡಿಸಿರುವ ಮಾಂಸದ ಸ್ವಲ್ಪಭಾಗವನ್ನು ಆತನಿಗೆ ತಿಳಿಯದಂತೆ ತೆಗೆದುಕೊಂಡು ಬಾ.”

ದಮಯಂತಿಯ ಹಿತೈಷಿಣಿಯಾದ ಕೇಶಿನಿಯು ದಮಯಂತಿಯ ಆಜ್ಞಾನುಸಾರವಾಗಿ ಒಡನೆಯೇ ಬಾಹುಕನಿದ್ದ ಅಡಿಗೆಮನೆಯೊಳಕ್ಕೆ ಹೋಗಿ, ಅವನಿಗೆ ತಿಳಿಯದಂತೆ ಆಗ ತಾನೇ ಸಿದ್ಧಪಡಿಸಿದ್ದ ಬಿಸಿ-ಬಿಸಿಯಾದ ಮಾಂಸದ ಸ್ವಲ್ಪಭಾಗವನ್ನು ತೆಗೆದುಕೊಂಡು, ಸ್ವಲ್ಪವೂ ಕಾಲವಿಳಂಬಮಾಡದೇ ದಮಯಂತಿಯಿದ್ದೆಡೆಗೆ ಧಾವಿಸಿದಳು.

ತನ್ನ ಆಗಮನವನ್ನೇ ನಿರೀಕ್ಷಿಸುತ್ತಿದ್ದ ದಮಯಂತಿಯ ಕೈಯಲ್ಲಿ ಕೇಶಿನಿಯು ತಾನು ತಂದಿದ್ದ ಮಾಂಸಾಹಾರವನ್ನಿಟ್ಟಳು. ಹಿಂದೆ ಅನೇಕ ಬಾರಿ ನಲನಿಂದ ಸಿದ್ಧಪಡಿಸಿದ್ದ ಆಹಾರವನ್ನು ಭುಂಜಿಸಿ, ಅದರ ರುಚಿಯನ್ನು ಮನಗಂಡಿದ್ದ ದಮಯಂತಿಯು ತನ್ನ ಸೇವಕಿಯಾದ ಕೇಶಿನಿಯು ತಂದ ಆಹಾರವನ್ನು ಭಕ್ಷಿಸಿದಳು. ರುಚಿಯಲ್ಲಿ ನಲಪಾಕಕ್ಕೂ, ಬಾಹುಕಪಾಕಕ್ಕೂ ಸ್ವಲ್ಪವಾದರೂ ವ್ಯತ್ಯಾಸವೇ ಇರಲಿಲ್ಲ. ಬಾಹುಕನು ನಲನಲ್ಲದೇ ಮತ್ತಾರೂ ಅಲ್ಲವೆಂಬುದು ದಮಯಂತಿಗೆ ಖಚಿತವಾಯಿತು. ಬಾಹುಕರೂಪದಲ್ಲಿರುವ ನಲನನ್ನು ನೆನೆದು ಗಟ್ಟಿಯಾಗಿ ರೋದನಮಾಡಿದಳು. ಗಳ-ಗಳನೆ ಕಣ್ಣೀರು ಸುರಿಸುತ್ತಿದ್ದ ದಮಯಂತಿಗೆ ಮತ್ತೊಂದು ವಿಧವಾಗಿಯೂ ಬಾಹುಕನನ್ನು ಪರೀಕ್ಷಿಸಬೇಕೆನ್ನಿಸಿತು. ಒಡನೆಯೇ ಸಮಾಧಾನತಂದುಕೊಂಡು ಅಶ್ರುಗಳಿಂದ ತೋಯ್ದುಹೋಗಿದ್ದ ಕೋಮಲವಾದ ಮುಖವನ್ನು ಶುಭ್ರವಾದ ನೀರಿನಿಂದ ತೊಳೆದುಕೊಂಡವಳಾಗಿ, ತನ್ನ ಇಬ್ಬರು ಮಕ್ಕಳನ್ನೂ ಕರೆದು ಮುದ್ದಾಡಿ, ಅವರನ್ನು ಬಾಹುಕನ ಸಮೀಪಕ್ಕೆ ಕರೆದೊಯ್ಯುವಂತೆಯೂ, ಆ ಮಕ್ಕಳನ್ನು ನೋಡಿ ಬಾಹುಕನು ಏನು ಮಾಡುವನು? ಮತ್ತು ಏನು ಹೇಳುವನು?–ಎಂಬುದನ್ನು ವಿವರವಾಗಿ ತನಗೆ ಹೇಳಬೇಕೆಂದೂ ಆಜ್ಞಾಪಿಸಿ, ಕೇಶಿನಿಯನ್ನು ಪುನಃ ತನ್ನ ಮಕ್ಕಳೊಡನೆ ಬಾಹುಕನಿದ್ದೆಡೆಗೆ ಕಳುಹಿಸಿಕೊಟ್ಟಳು.

ಪ್ರೇಮಪುತ್ರನಾದ ಇಂದ್ರಸೇನನೂ ಮತ್ತು ಪ್ರೇಮಪುತ್ರಿಯಾದ ಇಂದ್ರ ಸೇನೆಯೂ ಕೇಶಿನಿಯೊಡನೆ ತನ್ನ ಬಳಿಗೆ ಬರುತ್ತಿರುವುದನ್ನು ಕಂಡೊಡ

ನೆಯೇ ಬಾಹುಕವೇಷಧಾರಿಯಾದ ನಲನು ಪುತ್ರವಾತ್ಸಲ್ಯಪ್ರಚೋದಿತನಾಗಿ ನಾಲ್ಕು ಹೆಜ್ಜೆಗಳನ್ನು ಮುಂದಿಟ್ಟು ಇಬ್ಬರು ಮಕ್ಕಳನ್ನೂ ಬಾಚಿತಬ್ಬಿ ಮುದ್ದಿಟ್ಟು, ಒಬ್ಬೊಬ್ಬರನ್ನು ಒಂದೊಂದು ಕೈಯಲ್ಲಿ ಎತ್ತಿಕೊಂಡು ಆನಂದಬಾಷ್ಪಗಳನ್ನು ಸುರಿಸುತ್ತಾ ಒಳಕ್ಕೆ ಹೋಗಿ, ಅಲ್ಲಿದ್ದ ರತ್ನಗಂಬಳಿಯ ಮೇಲೆ ಕುಳಿತು ತನ್ನ ಇಬ್ಬರು ಮಕ್ಕಳನ್ನೂ ತೊಡೆಯ ಮೇಲೆ ಕುಳ್ಳಿರಿಸಿ



ಕೊಂಡು ಅವರ ಮೈದಡವಿದನು. ಒಡನೆಯೇ ನಲನಿಗೆ ಹಿಂದಿನ ಸ್ಮರಣೆಯುಂಟಾಗಿ ಅವರ ಮೈದಡವುತ್ತಾ ಗಟ್ಟಿಯಾಗಿ ಅತ್ತುಬಿಟ್ಟನು. ಅವನು ತನ್ನ ಮಕ್ಕಳನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಅಳುತ್ತಿದ್ದಾಗ ತನ್ನ ಸಮೀಪದಲ್ಲಿಯೇ ಕೇಶಿನಿಯು ಇರುವಳೆಂಬುದನ್ನೂ ಗಮನಿಸಲಿಲ್ಲ. ಕ್ಷಣ

ಕಾಲಕಳೆದೊಡನೆಯೇ ಆ ಮಕ್ಕಳನ್ನು ತನ್ನ ತೊಡೆಯಿಂದ ಕೆಳಗಿಳಿಸಿ ಕೇಶಿನಿಯನ್ನು ಕುರಿತು ಹೇಳಿದನು :

"ಮಂಗಳಾಂಗಿಯೇ! ಈ ಅವಳಿಮಕ್ಕಳನ್ನು ನೋಡಿದೊಡನೆಯೇ ನನ್ನ ಮಕ್ಕಳ ಜ್ಞಾಪಕವುಂಟಾಯಿತು. ನನಗೂ ಇವರ ಸಮಾನರೂಪರಾದ ಇಬ್ಬರು ಮಕ್ಕಳಿದ್ದಾರೆ. ಇವರನ್ನು ಆಕಸ್ಮಿಕವಾಗಿ ನೋಡಿದ್ದರಿಂದ ನನಗೆ ನನ್ನ ಮಕ್ಕಳ ನೆನಪಾಯಿತು. ಅವರನ್ನು ನೆನೆದು ಗಟ್ಟಿಯಾಗಿ ಅತ್ತುಬಿಟ್ಟೆನು. ಕೇಶಿನಿ! ನಿನ್ನೊಡನೆ ಮತ್ತೊಂದು ವಿಷಯವನ್ನೂ ಹೇಳಬೇಕೆಂದಿರುವೆನು. ನೀನು ಪದೇ-ಪದೇ ನಾನಿರುವ ಸ್ಥಳಕ್ಕೆ ಬರುತ್ತಿರುವುದನ್ನು ಕಂಡು ಜನರು ಏನಾದರೂ ಆಡಿಕೊಂಡಾರು. ನಮ್ಮ ವಿಷಯದಲ್ಲಿ ಕೆಟ್ಟುದಾಗಿ ಯೋಚಿಸಿಯಾರು. ಮೇಲಾಗಿ ನಾವಿಲ್ಲಿಗೆ ಪರದೇಶದಿಂದ ಕೇವಲ ಅತಿಥಿಗಳಾಗಿ ಬಂದಿರುತ್ತೇವೆ. ಆದುದರಿಂದ ಇನ್ನು ಮುಂದೆ ನೀನಿಲ್ಲಿಗೆ ಪದೇ-ಪದೇ ಬರಬೇಡ. ಮಕ್ಕಳನ್ನು ಕರೆದುಕೊಂಡು ಹೊರಟುಹೋಗು."

ಎಪ್ಪತ್ತೈದನೆಯ ಅಧ್ಯಾಯವು ಮುಗಿಯಿತು.

೭೬ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ದಮಯಂತೀ-ಬಾಹುಕರ ಮಾತುಕತೆ : ನಲನು ತನ್ನ ನಿಜಸ್ವರೂಪವನ್ನು ಪ್ರಕಟಿಸಿದುದು : ದಮಯಂತೀ-ನಲರ ಪುನರ್ಮಿಲನ

ಬೃಹದಶ್ವರು ಮುಂದುವರಿಸಿ ಹೇಳುತ್ತಾರೆ :

"ಯುಧಿಷ್ಠಿರ! ಧರ್ಮಾತ್ಮನಾದ ನಲನ ದುಃಖದ ಉದ್ವೇಗವನ್ನು ಕಂಡು ಕೇಶಿನಿಯು ತನ್ನೊಡತಿಗೆ ಆ ವಿಷಯವನ್ನು ತಿಳಿಸುವ ಸಲುವಾಗಿ ಒಡನೆಯೇ ಅರಮನೆಗೆ ಹಿಂದಿರುಗಿ ಬಾಹುಕನು ಮಕ್ಕಳನ್ನು ಕಂಡೊಡನೆಯೇ ಓಡಿಬಂದು ಏನನ್ನೋ ನೆನೆದು ಬಹುವಾಗಿ ದುಃಖಪಟ್ಟುದನ್ನೂ ವಿಶದವಾಗಿ ದಮಯಂತಿಗೆ ಹೇಳಿದಳು.

ದಮಯಂತಿಯು ಅವಳ ಮಾತುಗಳಿಂದ ಬಾಹುಕನನ್ನು ನಲನೆಂದೇ

ನಿಶ್ಚಯಿಸಿದಳು. ಆದರೂ ತಾನೂ ಒಮ್ಮೆ ಅವನನ್ನು ಕಂಡು ಮಾತನಾಡ ಬೇಕೆಂಬ ಅಭಿಲಾಷೆಯು ದಮಯಂತಿಗುಂಟಾಯಿತು. ದುಃಖದಿಂದ ಉದ್ವಿಗ್ನಹೃದಯಳಾದ ದಮಯಂತಿಯು ಕೇಶಿನಿಯನ್ನು ಸಂಬೋಧಿಸಿ ಪುನಃ ಹೇಳಿದಳು :

"ಕೇಶಿನಿ! ಈಗ ನೀನು ನನಗಾಗಿ ನಮ್ಮ ತಾಯಿಯ ಬಳಿಗೆ ಹೋಗಿ ನಾನು ಹೇಳುವಂತೆ ಹೇಳಬೇಕು ಮತ್ತು ಅವಳ ಉತ್ತರವನ್ನು ಒಡನೆಯೇ ನನಗೆ ಬಂದು ತಿಳಿಸಬೇಕು.

'ಅಮ್ಮ! ಋತುಪರ್ಣನೊಡನೆ ಆಗಮಿಸಿರುವ, ಅಶ್ವವಿದ್ಯೆಯಲ್ಲಿ ನಿಷ್ಣಾತನಾದ ಬಾಹುಕನೇ ನಲನಿರಬಹುದೆಂದು ಶಂಕಿಸಿ ನಾನಾವಿಧಗಳಿಂದ ಅವನನ್ನು ಪರೀಕ್ಷಿಸಿದೆನು. ನನ್ನ ಪರೀಕ್ಷೆಗೆ ಸರಿಯಾದ ಫಲವೇ ಸಿಕ್ಕಿ ಬಾಹುಕನೇ ನಲನೆಂದು ಸ್ಥಿರಪಟ್ಟಿರುವುದು. ಆದರೂ ಬಾಹುಕನಿಗಿರುವ ವಿಕಾರವಾದ ಶರೀರದ ವಿಷಯವಾಗಿ ನಾನಿನ್ನೂ ಸಂದೇಹಗ್ರಸ್ತಳಾಗಿರುವೆನು. ನಲನ ಶರೀರದಲ್ಲಿ ಬದಲಾವಣೆಯು ಏಕಾಯಿತೆಂಬುದನ್ನು ನಿರ್ಧರಿಸಲು ನಾನೇ ಒಮ್ಮೆ ಬಾಹುಕನನ್ನು ಕಾಣಬೇಕೆಂದಿದ್ದೇನೆ. ಇದಕ್ಕಾಗಿ ನೀನು ಅವನಿಗೆ ಅರಮನೆಗೆ ಬರಲು ಅನುಮತಿಯನ್ನು ನೀಡು ಅಥವಾ ನಾನೇ ಅವನಲ್ಲಿಗೆ ಹೋಗಲು ಸಮ್ಮತಿಸು. ಈ ವಿಷಯವನ್ನು ನಮ್ಮ ತಂದೆಯವರಿಗೆ ತಿಳಿಸುವುದು ಅಥವಾ ತಿಳಿಸದಿರುವುದು ನಿನ್ನ ಇಷ್ಟಕ್ಕೆ ಸೇರಿದುದಾಗಿದೆ. ನಿನ್ನ ಅನುಮತಿಯನ್ನೂ ಮತ್ತು ನಿನ್ನ ಸಲಹೆಯನ್ನೂ ಕಾತರದಿಂದ ನಿರೀಕ್ಷಿ ಸುತ್ತಿರುವೆನು.'

ಕೇಶಿನಿ! ಈ ಮಾತುಗಳನ್ನು ನೀನು ನಮ್ಮ ತಾಯಿಯೊಡನೆ ಹೇಳಿ ಅವಳೇನು ಹೇಳುವಳೆಂಬುದನ್ನು ತಿಳಿದುಕೊಂಡು ಬಾ."

ಕೇಶಿನಿಯು ದಮಯಂತಿಯು ಹೇಳಿದ ಮಾತುಗಳನ್ನು ಯಥಾ ವತ್ತಾಗಿ ಅವಳ ತಾಯಿಗೆ ತಿಳಿಸಿದಳು. ಮಹಾರಾಣಿಯು ಮಗಳ ಅಭಿಪ್ರಾಯ ವನ್ನು ಭೀಮರಾಜನಿಗೂ ತಿಳಿಸಿದಳು. ದಮಯಂತಿಯ ಅಭಿಪ್ರಾಯವನ್ನು ಭೀಮರಾಜನು ಕೂಲಂಕಷವಾಗಿ ಪರಿಶೀಲಿಸಿ, ಬಾಹುಕನನ್ನು ಅಂತಃಪುರಕ್ಕೆ ಕರೆತರಲು ಅನುಮತಿಯನ್ನಿತ್ತನು. ತಂದೆ-ತಾಯಿಗಳಿಬ್ಬರ ಅನುಜ್ಞೆಯನ್ನೂ

ಪಡೆದನಂತರ ದಮಯಂತಿಯು–ಪುನಃ ಬಾಹುಕನ ಸಮೀಪಕ್ಕೆ ಹೋಗುವಂತೆಯೂ, ಬಾಹುಕನನ್ನು ಒಡನೆಯೇ ಕರೆತರಬೇಕೆಂತಲೂ ಕೇಶಿನಿಗೆ ಆಜ್ಞೆಮಾಡಿದಳು. ಒಡನೆಯೇ ಕೇಶಿನಿಯು ಪಾಕಶಾಲೆಯಲ್ಲಿದ್ದ ಬಾಹುಕನ ಸಮೀಪಕ್ಕೆ ಹೋಗಿ, ದಮಯಂತಿಯ ಆಶಯವನ್ನು ತಿಳಿಯಪಡಿಸಿ ಅವನನ್ನು ದಮಯಂತಿಯ ಅಂತಃಪುರಕ್ಕೆ ಕರೆದುಕೊಂಡು ಬಂದಳು.



ಬಾಹುಕನು ದಮಯಂತಿಯನ್ನು ನೋಡಿದೊಡನೆಯೇ ಹೃದಯಾಂತರಾಳದಿಂದ ಉಕ್ಕಿ-ಉಕ್ಕಿ ಬರುತ್ತಿದ್ದ ದುಃಖವನ್ನು ತಡೆದುಕೊಳ್ಳಲು ಅಸಮರ್ಥನಾಗಿ, ಧಾರಾಕಾರವಾದ ಕಂಬನಿಯ ಮೂಲಕ ದುಃಖವನ್ನು ಹೊರ

ಹಾಕಿದನು. ಬಾಹುಕನ ಆಗಿನ ಪರಿಸ್ಥಿತಿಯನ್ನು ಕಂಡು ದಮಯಂತಿಯೂ ದುಃಖಸಾಗರದಲ್ಲಿ ಮುಳುಗಿಹೋದಳು.

ಯುಧಿಷ್ಠಿರ! ಅಂದು ದಮಯಂತಿಯ ಸ್ಥಿತಿಯು ಶೋಚನೀಯವಾಗಿದ್ದಿತು. ಕಾಷಾಯವಸ್ತ್ರವನ್ನು ಧರಿಸಿದ್ದಳು. ನಲನನ್ನಗಲಿದ ದಿನದಿಂದಲೂ ಬಾಚದೆಯೇ ಇದ್ದ ಅವಳ ಕೇಶರಾಶಿಯು ಜಡೆಗಟ್ಟಿದ್ದಿತು. ಅನೇಕದಿನಗಳಿಂದಲೂ ಅಲಂಕಾರವಸ್ತುಗಳನ್ನಾಗಲೀ, ಆಭರಣಗಳನ್ನಾಗಲೀ ಕಾಣದಿದ್ದ ಅವಳ ಶರೀರವು ಧೂಳಿನಿಂದ ಮಲಿನವಾಗಿದ್ದಿತು. ಆ ಸ್ಥಿತಿಯಲ್ಲಿದ್ದ ದಮಯಂತಿಯು ಬಾಹುಕನಿಗೆ ಹೇಳಿದಳು :

"ಬಾಹುಕ! ಧರ್ಮಜ್ಞನಾದ, ಕರ್ತವ್ಯಾಕರ್ತವ್ಯಗಳ ವಿವೇಚನಾತಜ್ಞನಾದವನೊಬ್ಬನು–ಮಲಗಿರುವ ತನ್ನ ಧರ್ಮಪತ್ನಿಯನ್ನು ಘೋರಾರಣ್ಯದಲ್ಲಿ ಏಕಾಕಿನಿಯನ್ನಾಗಿ ಬಿಟ್ಟು ಹೋಗುವುದನ್ನು ಎಲ್ಲಿಯಾದರೂ ನೋಡಿರುವೆಯಾ ಅಥವಾ ಕೇಳಿರುವೆಯಾ? ಶ್ರಾಂತಳಾದ, ದೋಷರಹಿತಳಾದ ಧರ್ಮಪತ್ನಿಯನ್ನು–ಧರ್ಮಾತ್ಮನಾದ ನಲನೊಬ್ಬನ ಹೊರತಾಗಿ ಬೇರಾರೂ ಬಿಟ್ಟುಹೋಗಿರುವ ವಾರ್ತೆಯನ್ನು ನಾನಿದುವರೆಗೂ ಕೇಳಿರುವುದಿಲ್ಲ. ನಿದ್ರಾಪರವಶಳಾಗಿದ್ದ ನನ್ನನ್ನು–ನಾನು ಮಾಡಿದ ಯಾವ ಅಪರಾಧದ ಕಾರಣದಿಂದಾಗಿ–ನನ್ನ ಪತಿಯು ಪರಿತ್ಯಜಿಸಿ ಹೊರಟುಹೋದನು? ನಮ್ಮಿಬ್ಬರ ವಿವಾಹವಾದನಂತರ ಇದುವರೆಗೆ ಅವನ ವಿಷಯದಲ್ಲಿ ನಾನು ಮಾಡಿರುವ ಅಪರಾಧವಾದರೂ ಏನಿರುವುದು? ನಾನು ನಲನಿಗೆ ವಿಧೇಯಳಾದ ಪತ್ನಿಯಾಗಿರಲಿಲ್ಲವೇ? ದೇವತೆಗಳನ್ನೂ ಪರಿತ್ಯಜಿಸಿ, ದೇವತೆಗಳ ಸಮ್ಮುಖದಲ್ಲಿಯೇ ನಾನು ಧರ್ಮಾತ್ಮನಾದ ನಲನನ್ನು ಪರಿಗ್ರಹಿಸಿದೆನಲ್ಲವೇ? ಮೇಲಾಗಿ ನಾನು ನಲನ ಪ್ರತಿಕೃತಿಗಳಂತಿರುವ ಈ ಇಬ್ಬರು ಮಕ್ಕಳ ತಾಯಿಯೂ ಆಗಿರುವೆನಲ್ಲಾ! ಸರ್ವದಾ ಪತಿಯ ಹಿತಚಿಂತನೆಯಲ್ಲಿಯೇ ಆಸಕ್ತಳಾದ, ಭಕ್ತಳಾದ ನನ್ನನ್ನು ಪರಿತ್ಯಾಗಮಾಡಿದುದೇಕೆ? ಅಗ್ನಿಸಾಕ್ಷಿಯಾಗಿ ಸಾಕ್ಷಾತ್ ಇಂದ್ರಾದಿದೇವತೆಗಳ ಸಮ್ಮುಖದಲ್ಲಿ–'ನಾನು ಎಂದೂ ನಿನ್ನವನಾಗಿರುತ್ತೇನೆ'– ಎಂಬುದಾಗಿ ನಲನು ಪ್ರತಿಜ್ಞಾವಚನವನ್ನಿತ್ತಿದ್ದನಲ್ಲವೇ? ಅಬಲೆಯಾದ, ಅಧೀರಳಾದ, ಏಕಾಕಿನಿಯಾದ ನನ್ನನ್ನು ಘೋರಾರಣ್ಯದಲ್ಲಿ ಪರಿತ್ಯಜಿಸಿ ಹೋಗುವಾಗ ಆ ಪ್ರತಿಜ್ಞಾವಚನವು ಅವನ ಸ್ಮರಣೆಗೆ ಬರಲಿಲ್ಲವೇ?"

ಧರ್ಮಜ! ದಮಯಂತಿಯು ಆ ಮಾತುಗಳನ್ನು ಹೇಳುವಾಗ ಅವಳ ಧ್ವನಿಯು ದುಃಖಾಧಿಕ್ಯದಿಂದ ಗದ್ಗದವಾಗಿದ್ದಿತು. ಕಪ್ಪಾದ ಕಣ್ಣುಗುಡ್ಡೆಗಳುಳ್ಳ ಮತ್ತು ಕೆಂಪಾದ ಕಣ್ಣಿನ ಕೊನೆಯಭಾಗಗಳುಳ್ಳ ಅವಳ ಕಣ್ಣುಗಳಿಂದ ಶೋಕಬಾಷ್ಪವು ಬಹುವಾಗಿ ಸುರಿಯಿತು. ಹೀಗೆ ಕಣ್ಣೀರು ಸುರಿಸುತ್ತಿದ್ದುದನ್ನು ನಲನು ಕಂಡು, ದುಃಖಾರ್ತೆಯಾದ ದಮಯಂತಿಯನ್ನು ಕುರಿತು ಹೇಳಿದನು :

**ಮಮ ರಾಜ್ಯಂ ಪ್ರಣಷ್ಟಂ ಯನ್ನಾಹಂ ತತ್ಕೃತವಾನ್ಸ್ವಯಮ್ ।**
**ಕಲಿನಾ ತತ್ಕೃತಂ ಭೀರು ಯಚ್ಚ ತ್ವಾಮಹಮತ್ಯಜಮ್ ॥೧೭॥**

"ಮಂಗಳಾಂಗಿಯೇ! ನಾನು ಪಗಡೆಯಾಟದಲ್ಲಿ ರಾಜ್ಯವನ್ನು ಕಳೆದುಕೊಂಡುದೂ ಮತ್ತು ನಿನ್ನನ್ನು ಘೋರಾರಣ್ಯದಲ್ಲಿ ಪರಿತ್ಯಜಿಸಿದುದೂ– ನಾನು ಸ್ವೇಚ್ಛೆಯಿಂದ ಮಾಡಿದ ಕಾರ್ಯಗಳಲ್ಲ. ಆ ಎರಡು ಕಾರ್ಯಗಳೂ ಕಲಿಯ ಪ್ರಭಾವದಿಂದ ನಡೆದುಹೋದುವು. ಧರ್ಮಾತ್ಮಳೇ! ನೀನು ನನ್ನನ್ನು ಕಾಣುವ ಸಲುವಾಗಿಯೇ ಹಗಲಿರುಳೆನ್ನದೇ ಅರಣ್ಯದಲ್ಲಿ ಅಲೆದಾಡುತ್ತಿದ್ದಾಗ ದುಃಖಾಧಿಕ್ಯದಿಂದ ನೀನೊಮ್ಮೆ ಕಲಿಯನ್ನು ಶಪಿಸಿದೆ. ನಿನ್ನ ಶಾಪದ ಪರಿಣಾಮದಿಂದಾಗಿ ನನ್ನಲ್ಲಿ ಸ್ಥಾನವನ್ನು ಕಲ್ಪಿಸಿಕೊಂಡಿದ್ದ ಮತ್ತು ಮೇಲೆ ಹೇಳಿದ ಎರಡು ದುರ್ಘಟನೆಗಳಿಗೂ ಕಾರಣನಾದ ಕಲಿಯು ಬಹುವಾಗಿ ಪರಿತಪಿಸತೊಡಗಿದನು. ನಿನ್ನ ಶಾಪವು ಅವನಿಗೆ ಅಗ್ನಿರೂಪವಾಯಿತು. ಅಗ್ನಿಸ್ವರೂಪನಾಗಿ ನನ್ನನ್ನು ಆಶ್ರಯಿಸಿ ಸಂಪೂರ್ಣವಾಗಿಯೇ ನನ್ನನ್ನು ವಿನಾಶಮಾಡಬೇಕೆಂದಿದ್ದ ಕಲಿಪುರುಷನು ನಿನ್ನ ಶಾಪವೆಂಬ ಅಗ್ನಿಗೆ ಸಿಕ್ಕಿ ಬೆಂದುಹೋದನು. ಶುಭಾಂಗಿಯೇ! ನನ್ನ ಯಥೋಚಿತವಾದ ಕರ್ಮಾನುಷ್ಠಾನಗಳಿಂದಲೂ ಮತ್ತು ತಪಸ್ಸಿನಿಂದಲೂ ಕಲಿಯನ್ನು ನಿರ್ವೀರ್ಯನನ್ನಾಗಿ ಮಾಡಿದೆನು. ನಮ್ಮ ಶುಭೋದಯವು ಸಮೀಪವರ್ತಿಯಾಗಿದೆಯೆಂದು ಆಶಿಸಿದ್ದೇನೆ. ಕಡುಪಾಪಿಯಾದ ಆ ಕಲಿಯು ನನ್ನನ್ನು ಬಿಟ್ಟು ಬದುಕಿಕೊಂಡನು. ಕಲಿಯಿಂದ ವಿಮೋಚನೆಹೊಂದಿದ ನಂತರವೇ ನಾನು ನಿನ್ನನ್ನು ನೋಡಲು ಬಂದಿರುವೆನು.

ಕೋಮಲಾಂಗಿಯೇ! ನಾನಿಲ್ಲಿಗೆ ಬಂದಿರುವುದು ನಿನ್ನ ಸಲುವಾಗಿಯೇ.

ಅದೊಂದುಳಿದು ಬೇರಾವ ಪ್ರಯೋಜನಕ್ಕಾಗಿಯೂ ನಾನಿಲ್ಲಿಗೆ ಬಂದಿರುವುದಿಲ್ಲ. ಆದರೆ ನನ್ನದೊಂದು ಪ್ರಶ್ನೆಯಿದೆ. ಅದಕ್ಕೆ ಯಥಾವತ್ತಾಗಿ ಉತ್ತರಿಸುವುದು ನಿನ್ನ ಕರ್ತವ್ಯವೂ ಆಗಿದೆ.

**ಕಥಂ ನು ನಾರೀ ಭರ್ತಾರಮನುರಕ್ತಮನುವ್ರತಮ್ ।**
**ಉತ್ಸೃಜ್ಯ ವರಯೇದನ್ಯಂ ಯಥಾ ತ್ವಂ ಭೀರು ಕರ್ಹಿಚಿತ್ ॥೨೨॥**

**ದೂತಾಶ್ಚರನ್ತಿ ಪೃಥಿವೀಂ ಕೃತ್ಸ್ನಾಂ ನೃಪತಿಶಾಸನಾತ್ ।**
**ಭೈಮೀ ಕಿಲ ಸ್ಮ ಭರ್ತಾರಂ ದ್ವಿತೀಯಂ ವರಯಿಷ್ಯತಿ ॥೨೩॥**

**ಸ್ವೈರವೃತ್ತಾ ಯಥಾಕಾಮಮನುರೂಪಮಿವಾತ್ಮನಃ ।**
**ಶ್ರುತ್ವೈವ ಚೈವಂ ತ್ವರಿತೋ ಭಾಙ್ಗಾಸುರಿರುಪಸ್ಥಿತಃ ॥೨೪॥**

ದಮಯಂತಿ! ಪ್ರಪಂಚದಲ್ಲಿ ಯಾವೊಬ್ಬ ಹೆಂಗಸಾದರೂ ತನ್ನಲ್ಲಿ ವಿಶೇಷವಾದ ಅನುರಾಗವನ್ನು ಹೊಂದಿದ್ದ, ಅನುವ್ರತನಾದ ಪತಿಯನ್ನು ಬಿಟ್ಟು ಬೇರೆಯವನನ್ನು ವಿವಾಹವಾಗಲು ನೀನೀಗ ಅಪೇಕ್ಷಿಸಿರುವಂತೆ ಅಪೇಕ್ಷಿಸುವಳೇ? ಭೀಮರಾಜನ ಆಜ್ಞೆಯಂತೆ ರಾಜಭಟರು ದೇಶ-ವಿದೇಶ ಗಳಿಗೂ ಹೋಗಿ-'ಭೀಮರಾಜನಂದಿನಿಯಾದ ದಮಯಂತಿಯು ಸ್ವೇಚ್ಛೆ ಯಿಂದ ದ್ವಿತೀಯಸ್ವಯಂವರವನ್ನು ಮಾಡಿಕೊಳ್ಳುತ್ತಾಳೆ'–ಎಂಬ ವಾರ್ತೆ ಯನ್ನು ಹರಡುತ್ತಿದ್ದಾರೆ. ಆ ವಾರ್ತೆಯನ್ನು ಕೇಳುತ್ತಲೇ ಅಯೋಧ್ಯಾಧಿ ಪತಿಯಾದ ಭಾಂಗಾಸುರಿಯು ಇಲ್ಲಿಗೆ ಆಗಮಿಸಿರುವನು. ನಿನ್ನೀ ನಿಶ್ಚಯವು ಸಾಧುವಾಗಿದೆಯೇ?"

ನಲನು ಕರುಣಪೂರಿತನಾಗಿ ಹೇಳಿದ ಆ ಮಾತನ್ನು ದಮಯಂತಿಯು ಕೇಳಿದಳು. ದ್ವಿತೀಯಸ್ವಯಂವರವಾರ್ತೆಯನ್ನು ನೆನೆಯುವುದೂ ಮಹಾ ಪಾಪಕರವೆಂಬ ವಿಷಯವು ದಮಯಂತಿಗೆ ತಿಳಿದಿದ್ದಿತು. ಆ ವಾರ್ತೆಯ ಹಿನ್ನೆಲೆ ಏನೆಂಬುದನ್ನು ತಿಳಿಯದೇ ನಲನ ಮನಸ್ಸಿನಲ್ಲುಂಟಾಗಿರುವ ಉದ್ವೇಗವನ್ನು ತರ್ಕಿಸಿ ದಮಯಂತಿಯು ನಡುಗಿದಳು. ಒಡನೆಯೇ ಸಾಧ್ವಿಯಾದ ದಮಯಂತಿಯು ತನ್ನೆರಡು ಕೈಗಳನ್ನೂ ಜೋಡಿಸಿ ನಲನನ್ನು ಕುರಿತು ಹೇಳಿದಳು :

"ಮಂಗಳಾಂಗನೇ! ನನ್ನ ವಿಷಯದಲ್ಲಿ ನೀನು ಕಿಂಚಿತ್ತಾದರೂ

ದೋಷವುಳ್ಳವಳೆಂದು ಸಂಶಯಪಡಬೇಡ. ನಾನು ದೋಷರಹಿತಳಾಗಿಯೇ ಇರುವೆನು. ಹಿಂದೆ ನಡೆದುದನ್ನೇ ಸ್ಮರಿಸು. ಸ್ವಯಂವರಕ್ಕೆಂದೇ ಆಗಮಿಸಿದ ಇಂದ್ರಾದಿದೇವತೆಗಳನ್ನೂ ತಿರಸ್ಕರಿಸಿ, ಅವರ ಸಮ್ಮುಖದಲ್ಲಿಯೇ ನಾನು ನಿನ್ನನ್ನು ನನ್ನ ಪ್ರಾಣಪತಿಯನ್ನಾಗಿ ಪರಿಗ್ರಹಿಸಿರುವೆನು. ನೀನು ಎಲ್ಲಿರುವೆ ಯೆಂಬುದನ್ನು ತಿಳಿಯುವ ಸಲುವಾಗಿಯೂ ಮತ್ತು ನಿನ್ನನ್ನು ಇಲ್ಲಿಗೆ ಕರೆತರುವ ಸಲುವಾಗಿಯೂ ಭೂವಲಯದ ಎಲ್ಲ ರಾಜ್ಯಗಳಿಗೂ ಬ್ರಾಹ್ಮಣರನ್ನು ಕಳುಹಿಸಲಾಯಿತು. ಅವರು ಎಲ್ಲೆಡೆಗಳಲ್ಲಿಯೂ ನಾನು ಹೇಳಿಕಳುಹಿಸಿದ್ದ ಮಾತುಗಳನ್ನು ಜನಪದಗೀತೆಯಂತೆ ಹಾಡುತ್ತಿದ್ದರು. ಕಡೆಗೊಮ್ಮೆ ಪಂಡಿತ ವರೇಣ್ಯನಾದ ಪರ್ಣಾದನೆಂಬ ಬ್ರಾಹ್ಮಣನು ಕೋಸಲದೇಶದ ರಾಜಧಾನಿ ಯಾದ ಅಯೋಧ್ಯೆಯಲ್ಲಿ ಋತುಪರ್ಣರಾಜನ ಆಸ್ಥಾನದಲ್ಲಿ ನಿನ್ನನ್ನು ಕಂಡನು. ಪರ್ಣಾದನು ಹೇಳಿದ ಗೀತೆಗೆ ನಾನು ನಿರೀಕ್ಷಿಸಿದ್ದ ಉತ್ತರವನ್ನೇ ನೀನು ಕೊಟ್ಟೆಯಾದ ಕಾರಣ ಬಾಹುಕನ ರೂಪದಲ್ಲಿರುವ ನೀನೇ ನಲನಿರಬಹುದೆಂದು ನಿರ್ಧರಿಸಿದವಳಾಗಿ, ನಿನ್ನನ್ನು ಇಲ್ಲಿಗೆ ಕರೆತರಲು ಈ ಸನ್ನಾಹವನ್ನು ಮಾಡಿದೆನು. ವಿಶ್ವದಲ್ಲಿರುವ ರಥದ ಸಾರಥಿಗಳಲ್ಲಿ ನಿನ್ನೊಬ್ಬ ನನ್ನುಳಿದು ಮತ್ತಾರೂ ನೂರುಯೋಜನದೂರವನ್ನು ಒಂದೇ ದಿನದಲ್ಲಿ ಪ್ರಯಾಣಮಾಡಲಾರರೆಂಬುದನ್ನು ನಾನು ಚೆನ್ನಾಗಿ ಬಲ್ಲೆನು. ರಥದ ಸಾರಥ್ಯದಲ್ಲಿಯೂ, ಕುದುರೆಗಳ ನಿಯಂತ್ರಣದಲ್ಲಿಯೂ ನೀನೆಷ್ಟು ಕುಶಲ ನೆಂಬುದು ನನಗೆ ತಿಳಿದಿದೆ. ಮಹಾರಾಜ! ನೀನು ನಲನೆಂಬುದನ್ನು ನಿರ್ಧರಿಸಲು ಮತ್ತು ನಿನ್ನನ್ನಿಲ್ಲಿಗೆ ಬಹುಬೇಗ ಕರೆತರಲು ಮಾಡಿದ ಸನ್ನಾಹ ವಿದು, ಪ್ರಭೋ!

**ಸ್ಪೃಶೇಯಂ ತೇನ ಸತ್ಯೇನ ಪಾದಾವೇತೌ ಮಹೀಪತೇ ।**
**ಯಥಾ ನಾಸತ್ಕೃತಂ ಕಿಂಚಿನ್ಮನಸಾಪಿ ಚರಾಮ್ಯಹಮ್ ॥೩೧॥**

**ಅಯಂ ಚರತಿ ಲೋಕೇಽಸ್ಮಿನ್ಭೂತಸಾಕ್ಷೀ ಸದಾಗತಿಃ ।**
**ಏಷ ಮೇ ಮುಞ್ಚತು ಪ್ರಾಣಾನ್ಯದಿ ಪಾಪಂ ಚರಾಮ್ಯಹಮ್ ॥೩೨॥**

**ಯಥಾ ಚರತಿ ತಿಗ್ಮಾಂಶುಃ ಪರೇಣ ಭುವನಂ ಸದಾ ।**
**ಸ ಮುಞ್ಚತು ಮಮ ಪ್ರಾಣಾನ್ಯದಿ ಪಾಪಂ ಚರಾಮ್ಯಹಮ್ ॥೩೩॥**

**ಚನ್ದ್ರಮಾಃ ಸರ್ವಭೂತಾನಾಮನ್ತಶ್ಚರತಿ ಸಾಕ್ಷಿವತ್ ।**
**ಸ ಮುಞ್ಚತು ಮಮ ಪ್ರಾಣಾನ್ಯದಿ ಪಾಪಂ ಚರಾಮ್ಯಹಮ್ ॥೩೪॥**

**ಏತೇ ದೇವಾಸ್ತ್ರಯಃ ಕೃತ್ಸ್ನಂ ತ್ರೈಲೋಕ್ಯಂ ಧಾರಯನ್ತಿ ವೈ ।**
**ವಿಬ್ರುವನ್ತು ಯಥಾ ಸತ್ಯಮೇತದ್ದೇವಾಸ್ತ್ಯಜನ್ತು ಮಾಮ್ ॥೩೫॥**

ನಾನು ನಿನ್ನ ಕಾಲುಗಳನ್ನು ಮುಟ್ಟಿ ಪ್ರಮಾಣಮಾಡಿ ಹೇಳುತ್ತೇನೆ. ಮನಸ್ಸಿನಿಂದಲೂ, ಮಾತಿನಿಂದಲೂ, ಶರೀರದಿಂದಲೂ, ಕರ್ಮದಿಂದಲೂ– ನಾನು ಪರಿಶುದ್ಧಳಾಗಿದ್ದೇನೆ. ನಾನು ಮನಸ್ಸಿನಿಂದಲಾದರೂ ನಿಜಪತಿಗೆ ಸಲ್ಲದ ಅಪರಾಧವನ್ನು ಮಾಡಿರುವುದಿಲ್ಲ.

ನಲರಾಜ! ಪ್ರಮಾಣಪೂರ್ವಕವಾಗಿ ಹೇಳುತ್ತೇನೆ. ನಾನೇನಾದರೂ ನಿನ್ನ ವಿಷಯದಲ್ಲಿ ಅಪರಾಧವನ್ನೆಸಗಿದ್ದರೆ ಅಥವಾ ಪಾಪಮಾರ್ಗವನ್ನು ನನ್ನ ಜೀವನದಲ್ಲಿ ಒಮ್ಮೆಯಾದರೂ ನೆನೆದಿದ್ದರೆ–ವಿಶ್ವವ್ಯಾಪಕನಾದ ವಾಯು ದೇವನು ಈ ಕ್ಷಣದಲ್ಲಿಯೇ ನನ್ನ ಪ್ರಾಣಗಳನ್ನು ಅಪಹರಿಸಲಿ. ಜಗತ್ತಿಗೇ ಸಾಕ್ಷಿಭೂತನಾಗಿರುವ ಸೂರ್ಯದೇವನು ನನ್ನ ಪ್ರಾಣಗಳನ್ನು ಅಪಹರಿಸಲಿ. ಎಲ್ಲ ಪ್ರಾಣಿಗಳ ಹೃದಯಾಂತರಾಳದಲ್ಲಿಯೂ ಸಾಕ್ಷಿಭೂತನಾಗಿ ಕುಳಿತಿರುವ ಚಂದ್ರನು–ನಾನು ಅಪರಾಧಿನಿಯಾಗಿದ್ದರೆ–ಈ ಕೂಡಲೇ ನನ್ನ ಪ್ರಾಣಗಳನ್ನು ಅಪಹರಿಸಲಿ."

ಹೀಗೆಂದು ಹೇಳಿದ ದಮಯಂತಿಯ ಮನಸ್ಸು ಮತ್ತೂ ತಲ್ಲಣಿಸುತ್ತಲೇ ಇದ್ದಿತು. ತಲೆಯೆತ್ತಿ ಮೇಲೆ ನೋಡುತ್ತಾ ದಮಯಂತಿಯು ಗಂಭೀರಧ್ವನಿಯಿಂದ ನುಡಿದಳು :

"ಈ ಮೂರು ಲೋಕಗಳನ್ನೂ ಧರಿಸಿರುವ ಈ ಮೂವರು ಸೂರ್ಯ-ಚಂದ್ರ-ವಾಯುದೇವತೆಗಳು ನಾನು ಪವಿತ್ರಾತ್ಮಳೆಂಬುದನ್ನು ಘೋಷಿಸಲಿ ; ಅಥವಾ ನನ್ನನ್ನು ಪರಿತ್ಯಜಿಸಿ ಹೊರಟುಹೋಗಲಿ. (ಪ್ರಾಣಾಪಹಾರ ಮಾಡಲಿ.)"

ದಮಯಂತಿಯ ಆ ಮಾತುಗಳನ್ನು ಕೇಳಿದೊಡನೆಯೇ ವಿಶ್ವವ್ಯಾಪಕ ನಾದ ವಾಯುದೇವನು ಅಂತರಿಕ್ಷದಲ್ಲಿ ನಿಂತು ನಲನನ್ನು ಕುರಿತು ಹೇಳಿದನು:

**ನೈಷಾ ಕೃತವತೀ ಪಾಪಂ ನಲ ಸತ್ಯಂ ಬ್ರವೀಮಿ ತೇ ॥೩೬॥**

**ರಾಜಞ್ಛೀಲನಿಧಿಃ ಸ್ಫೀತೋ ದಮಯನ್ತ್ಯಾ ಸುರಕ್ಷಿತಃ ।**
**ಸಾಕ್ಷಿಣೋ ರಕ್ಷಿಣಶ್ಚಾಸ್ಯಾ ವಯಂ ತ್ರೀನ್ಪರಿವತ್ಸರಾನ್ ॥೩೭॥**

**ಉಪಾಯೋ ವಿಹಿತಶ್ಚಾಯಂ ತ್ವದರ್ಥಮತುಲೋಽನಯಾ ।**
**ನ ಹ್ಯೇಕಾಹ್ನಾ ಶತಂ ಗನ್ತಾ ತ್ವಾಮೃತೇಽನ್ಯಃ ಪುಮಾನಿಹ ॥೩೮॥**

**ಉಪಪನ್ನಾ ತ್ವಯಾ ಭೈಮೀ ತ್ವಂ ಚ ಭೈಮ್ಯಾ ಮಹೀಪತೇ ।**
**ನಾತ್ರ ಶಙ್ಕಾ ತ್ವಯಾ ಕಾರ್ಯಾ ಸಂಗಚ್ಛ ಸಹ ಭಾರ್ಯಯಾ ॥೩೯॥**

"ನಲರಾಜನೇ! ನಾನು ಸತ್ಯವಾಗಿ ಹೇಳುತ್ತೇನೆ. ಇವಳು ನಿನ್ನ ವಿಷಯದಲ್ಲಿ ಕಿಂಚಿತ್ತಾದರೂ ಅಪರಾಧವನ್ನು ಮಾಡಿರುವುದಿಲ್ಲ. ಪವಿತ್ರಾತ್ಮಳೂ, ಶುದ್ಧಾತ್ಮಳೂ ಆಗಿರುತ್ತಾಳೆ. ದಮಯಂತಿಯು ತನ್ನ ಶೀಲವೆಂಬ ನಿಧಿಯನ್ನು ರಕ್ಷಿಸಿಕೊಂಡಿದ್ದಾಳೆ. ಇವಳು ತನ್ನ ಕುಲಗೌರವವನ್ನು ರಕ್ಷಿಸಿಕೊಂಡುಬಂದಿರುವುದು ಮಾತ್ರವಲ್ಲದೇ–ಉಭಯವಂಶಗಳ ಗೌರವವನ್ನೂ ಮತ್ತಷ್ಟು ಹೆಚ್ಚಿಸಿದ್ದಾಳೆ. ಇದಕ್ಕೆ ನಾವು ಮೂವರೂ ಸಾಕ್ಷಿಗಳಾಗಿರುತ್ತೇವೆ. ಈ ಮೂರು ವರ್ಷಗಳ ಕಾಲ ನಾವು ಇವಳನ್ನು ರಕ್ಷಿಸಿರುತ್ತೇವೆ. ನಿನ್ನ ಸಲುವಾಗಿಯೇ, ನಿನ್ನನ್ನು ಇಲ್ಲಿಗೆ ಶೀಘ್ರವಾಗಿ ಕರೆತರುವ ಸಲುವಾಗಿಯೇ ದಮಯಂತಿಯು ಇತರರಿಂದ ಊಹಿಸಲೂ ಅಸದಳವಾದ ಈ ಯೋಜನೆಯನ್ನು ಸಿದ್ಧಪಡಿಸಿದಳು. ನಿನ್ನೊಬ್ಬನ ಹೊರತಾಗಿ ಪೃಥ್ವಿಯಲ್ಲಿ ಯಾರೊಬ್ಬರಿಗೂ ನೂರುಯೋಜನಪ್ರಯಾಣವನ್ನು ಒಂದೇ ದಿನದ ಅವಧಿಯಲ್ಲಿ ಮುಗಿಸುವುದು ಅಸಾಧ್ಯವೆಂಬ ನಿಶ್ಚಯವು ದಮಯಂತಿಗೆ ಇದ್ದುದರಿಂದಲೇ ಅವಳು ವಿನೂತನವಾದ ಈ ಯೋಜನೆಯನ್ನು ಸಿದ್ಧಗೊಳಿಸಿ, ಕಾರ್ಯರೂಪಕ್ಕೆ ತಂದು ಅನುರೂಪವಾದ ಫಲವನ್ನು ಹೊಂದಿದಳು. ನಲರಾಜ! ಮೂರು ವರ್ಷಗಳ ಕಾಲ ಅಗಣಿತವಾದ ಕಷ್ಟಪರಂಪರೆಗಳನ್ನು ಅನುಭವಿಸಿದನಂತರ ನೀನಿಂದು ಭೀಮರಾಜಕನ್ಯೆಯನ್ನು ಪುನಃ ಪಡೆದಿರುವೆ. ಅಂತೆಯೇ ದಮಯಂತಿಯೂ ತನ್ನ ಸ್ವಾಮಿಯನ್ನು ಪಡೆದಿರುವಳು. ಈ ಸಮಯದಲ್ಲಿ ನೀನು ಇವಳ ವಿಷಯದಲ್ಲಿ-ಇವಳ ಪಾವಿತ್ರ್ಯದ ವಿಷಯದಲ್ಲಿ ಸ್ವಲ್ಪವಾದರೂ ಶಂಕಿಸಬೇಡ. ಈ ಶುಭದಿನದಂದು ನಿನ್ನ ಅರ್ಧಾಂಗಿಯೊಡನೆ ಸೇರಿ ಸುಖಿಯಾಗಿರು."

ವಾಯುದೇವನು ಈ ಮಾತುಗಳನ್ನು ಹೇಳಿದೊಡನೆಯೇ ನಲ-ದಮ

ಯಂತಿಯರ ಮೇಲೆ ದೇವತೆಗಳು ಪುಷ್ಪವೃಷ್ಟಿಗರೆದರು. ಮಂಗಳವಾದ್ಯಗಳು ಮೊಳಗಿದುವು. ಮಂದಮಾರುತವು ಬೀಸತೊಡಗಿತು. ಆ ಅದ್ಭುತವನ್ನು ಪ್ರತ್ಯಕ್ಷವಾಗಿ ಕಂಡು ನಲನು ದಮಯಂತಿಯ ಮೇಲೆ ತನಗಿದ್ದ ಸಂಶಯವನ್ನು ಪೂರ್ಣವಾಗಿ ತೊರೆದನು.

ಅನಂತರದಲ್ಲಿ ಭೂಪತಿಯಾದ ನಲನು ಕಾರ್ಕೋಟಕನನ್ನು ನೆನೆದು ಅವನಿಂದ ಕೊಡಲ್ಪಟ್ಟ ಪರಿಶುದ್ಧವಾದ ವಸ್ತ್ರವನ್ನು ಧರಿಸಿ ಒಡನೆಯೇ ಕುರೂಪವನ್ನು ತೊರೆದು ಮೊದಲಿನಂತೆಯೇ ಸ್ಫುರದ್ರೂಪಿಯಾದನು. ತನ್ನ ಪತಿಯು ಮೊದಲಿನಂತೆ ಕನಕಾಂಗದ-ಕೇಯೂರಗಳಿಂದಲೂ, ಪೀತಾಂಬರ ದಿಂದಲೂ ಅಲಂಕೃತನಾಗಿ ತನ್ನ ಮುಂದೆ ನಿಂತಿರುವುದನ್ನು ಕಂಡು ದಮ ಯಂತಿಗೆ ಅಪರಿಮಿತವಾದ ಆನಂದವುಂಟಾಯಿತು. ತನ್ನ ಪ್ರಾಣಪತಿಯನ್ನು ಬಾಚಿತಬ್ಬಿಕೊಂಡು ಬಿಕ್ಕಿ-ಬಿಕ್ಕಿ ಅತ್ತುಬಿಟ್ಟಳು. ನಲನೂ ಸಹ ದಮಯಂತಿ ಯನ್ನು ಪ್ರತ್ಯಾಲಿಂಗಿಸಿ ಪ್ರಿಯೋಕ್ತಿಗಳಿಂದ ಸಂತೈಸಿದನು. ಆ ವೇಳೆಗೆ ಸರಿಯಾಗಿ ದಮಯಂತಿಯ ಅಂತಃಪುರಕ್ಕೆ ಬಂದು 'ಅಪ್ಪಾ' ಎಂದು ಕೂಗಿದ ಇಂದ್ರಸೇನ ಮತ್ತು ಇಂದ್ರಸೇನೆಯರನ್ನು ನಲನು ಬಾಚಿತಬ್ಬಿಕೊಂಡು ಅವರ ನೆತ್ತಿಯನ್ನು ಪ್ರೇಮಪೂರ್ವಕವಾಗಿ ಆಘ್ರಾಣಿಸಿ ಅಮಿತಾನಂದವನ್ನು ಅನುಭವಿಸಿದನು.

ದಮಯಂತಿಯು ನಲನ ಮುಖಾರವಿಂದವನ್ನು ತನ್ನ ಹೃತ್ಕಮಲದ ಮೇಲಿಟ್ಟುಕೊಂಡು, ತನ್ನ ಹಿಂದಿನ ಕಷ್ಟಪರಂಪರೆಗಳನ್ನು ನೆನೆದು ಸುದೀರ್ಘ ವಾಗಿ ನಿಟ್ಟುಸಿರುಬಿಟ್ಟಳು. ಮೂರು ವರ್ಷಗಳ ಪರ್ಯಂತವಾಗಿ ವಿರಹ ವೇದನೆಯನ್ನನುಭವಿಸುತ್ತಿದ್ದ ದಮಯಂತೀ-ನಲರು ಬಾಹ್ಯಪ್ರಪಂಚವನ್ನೇ ಮರೆತು ಸ್ವಲ್ಪಹೊತ್ತಿನವರೆಗೆ ಗಾಢಾಲಿಂಗನೆಯಲ್ಲಿಯೇ ಇದ್ದುಬಿಟ್ಟರು.

ಅತ್ತಲಾಗಿ ರಾಜಮಾತೆಯು ನಲನ ಆಗಮನದ ವಿಷಯವನ್ನು ತಿಳಿದು ಸಂತೋಷಭರಿತಳಾಗಿ ದಮಯಂತಿಯ ಅಂತಃಪುರದಲ್ಲಿ ನಲ-ದಮಯಂತಿ ಯರ ನಡುವೆ ನಡೆದ ವಿಷಯಗಳೆಲ್ಲವನ್ನೂ ತನ್ನ ಪತಿಯಾದ ಭೀಮರಾಜ ನಿಗೆ ತಿಳಿಸಿದಳು. ಆ ಸಂತೋಷವಾರ್ತೆಯನ್ನು ಕೇಳಿದ ಭೀಮರಾಜನು ತನ್ನ ಪತ್ನಿಗೆ ಹೇಳಿದನು :

"ಮಹಾತ್ಮನಾದ ನಲನಿಂದು ದಮಯಂತಿಯೊಡನೆ ಪೂರ್ಣವಾಗಿ

ವಿಶ್ರಮಿಸಿಕೊಳ್ಳಲಿ. ನಾಳೆ ಮುಂಜಾನೆ ಅವನೆದ್ದು ಸ್ನಾನ-ಸಂಧ್ಯಾವಂದನ-ದೇವಪೂಜಾದಿಗಳನ್ನು ಮುಗಿಸಿದನಂತರ ದಮಯಂತೀಸಹಿತನಾದ ನಲ ನನ್ನು ನಾನು ಕಾಣುವೆನು."

ಯುಧಿಷ್ಠಿರ! ನಲ-ದಮಯಂತಿಯರು ತಮಗೆ ಅರಣ್ಯದಲ್ಲಾದ ಅನುಭವಗಳನ್ನು ಒಬ್ಬರು ಮತ್ತೊಬ್ಬರಿಗೆ ಹೇಳಿಕೊಳ್ಳುತ್ತಾ ಅಂದು ರಾತ್ರಿ ಯನ್ನು ಬಹಳ ಸುಖದಿಂದ ಕಳೆದರು.

ಧರ್ಮಜ! ನಲ-ದಮಯಂತಿಯರು ಭೀಮರಾಜನ ಅರಮನೆಯಲ್ಲಿ ಕೆಲವು ದಿನಗಳು ಸುಖವಾಗಿದ್ದರು. ದಮಯಂತಿಯು ಸಂತೋಷವಾಗಿರು ವಂತೆ ತಾನು ನಡೆದುಕೊಳ್ಳಬೇಕೆಂಬ ಆಶಯವು ನಲನಿಗೂ–ನಲನು ಸಂತೋಷವಾಗಿರುವಂತೆ ತಾನು ನಡೆದುಕೊಳ್ಳುವುದು ತನ್ನ ಮುಖ್ಯಕರ್ತವ್ಯ ವೆಂಬ ಅಭಿಪ್ರಾಯವು ದಮಯಂತಿಗೂ ಇದ್ದುದರಿಂದ ನಲ-ದಮಯಂತಿಯ ರಿಬ್ಬರೂ ಅಮಿತವಾದ ಆನಂದದಿಂದ ಕಾಲಕಳೆದರು. ರಾಜ್ಯವನ್ನು ಕಳೆದು ಕೊಂಡು ಮೂರು ವರ್ಷಗಳು ಕಳೆದುಹೋಗಿ ನಾಲ್ಕನೆಯ ವರ್ಷದಲ್ಲಿ ನಲನು ಪುನಃ ದಮಯಂತಿಯನ್ನು ಸೇರಿ ಹೆಚ್ಚಿನ ಆನಂದವನ್ನು ಪಡೆದನು.

ನಲನನ್ನು ಪುನಃ ಪಡೆದ ದಮಯಂತಿಯ ಆನಂದವೆಷ್ಟೆಂಬುದನ್ನು ವರ್ಣಿಸುವ ಸಾಧ್ಯತೆಯೇ ಇಲ್ಲ. ಆಗ ತಾನೇ ಹುಟ್ಟುತ್ತಿರುವ, ಬಿಸಿಲಿನಿಂದ ಬಾಡಿದ ಸಣ್ಣ ಸಸಿಗಳ ಮೇಲೆ ಮಳೆಸುರಿದರೆ ಸಸ್ಯಶಾಲಿನಿಯಾದ ಭೂಮಿಯು ಎಷ್ಟು ಸಂತೋಷಿಸುವುದೋ–ಅದೇ ರೀತಿಯಲ್ಲಿ ನಲನನ್ನು ಪಡೆದ ದಮಯಂತಿಯು ಅಮಿತಾನಂದವನ್ನು ಪಡೆದಳು. ಕಳೆದುಹೋಗಿದ್ದ ಮುಖಕಾಂತಿಯು ನಾಲ್ಮಡಿಯಾಗಿ ಪುನಃ ಅವಳ ಮುಖಾರವಿಂದವನ್ನಲಂಕರಿ ಸಿತು. ಹಿಂದಿನಂತೆಯೇ ದಮಯಂತಿಯು ತನ್ನ ಶರೀರಶೋಭೆಯಿಂದ ಪ್ರಕಾಶಿಸಿದಳು. ವಿರಹವೇದನೆಯಿಂದ ಶರೀರಪೋಷಣೆಯ ವಿಷಯದಲ್ಲಿ ಮತ್ತು ಶರೀರದ ಅಲಂಕಾರದ ವಿಷಯದಲ್ಲಿ ತನಗಿದ್ದ ಔದಾಸೀನ್ಯ, ಪತಿ ಯನ್ನು ಕಾಣಬೇಕೆಂಬ ಉದ್ವೇಗ, ಹಗಲಿರುಳೆನ್ನದೇ ಧಾರಾಕಾರವಾಗಿ ಹರಿಯುತ್ತಿದ್ದ ಕಂಬನಿ–ಇವುಗಳಿಂದ ವಿಮುಕ್ತಳಾದ ದಮಯಂತಿಯು–ಉದಯಿಸಿದ ಚಂದ್ರನಿಂದ ಕೂಡಿದ ರಾತ್ರಿಯಂತೆ–ಕಂಗೊಳಿಸಿದಳು."

೭೬ನೆಯ ಅಧ್ಯಾಯವು ಮುಗಿಯಿತು.

೭೭ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

# ನಲನ ಆಗಮನದಿಂದ ವಿದರ್ಭದೇಶದಲ್ಲಿ ಸಂಭ್ರಮದ ಉತ್ಸವ: ಋತುಪರ್ಣನೊಡನೆ ನಲನ ಮಾತುಕತೆ : ಋತುಪರ್ಣನು ಅಶ್ವವಿದ್ಯೆಯನ್ನು ನಲನಿಂದ ಪಡೆದು ಅಯೋಧ್ಯೆಗೆ ಹಿಂದಿರುಗಿದುದು

ಬೃಹದಶ್ವರು ನಲೋಪಾಖ್ಯಾನವನ್ನು ಮುಂದುವರಿಸಿ ಹೇಳ ತೊಡಗಿದರು :

"ಯುಧಿಷ್ಠಿರ! ನಾನು ಹಿಂದೆ ಹೇಳಿದಂತೆ ನಲನು ಆ ರಾತ್ರಿಯನ್ನು ದಮಯಂತಿಯೊಡನೆ ಸುಖದಿಂದ ಕಳೆದು, ಮುಂಜಾನೆ ಎದ್ದು, ಸ್ನಾನ-ಸಂಧ್ಯಾವಂದನ-ದೇವಪೂಜಾದಿಗಳನ್ನು ಮುಗಿಸಿಕೊಂಡನಂತರ ವಸ್ತ್ರಾಭರಣ ಗಳಿಂದ ಅಲಂಕೃತನಾಗಿ, ಸಾಲಂಕೃತೆಯಾದ ದಮಯಂತಿಯೊಡನೆ ಭೀಮ ರಾಜನ ಸಮ್ಮುಖಕ್ಕೆ ತೆರಳಿದನು. ಭೀಮರಾಜನನ್ನು ಕಂಡೊಡನೆಯೇ ನಲನು ಅಭಿವಾದನಪೂರ್ವಕವಾಗಿ ನಮಸ್ಕರಿಸಿದನು. ಪತಿಯನ್ನು ಅನುಸರಿಸಿ ದಮಯಂತಿಯೂ ತಂದೆಗೆ ನಮಸ್ಕರಿಸಿದಳು. ಭೀಮರಾಜನು ನಲನನ್ನು ತನ್ನ ಮಗನೆಂದೇ ಭಾವಿಸಿ ಆಶೀರ್ವದಿಸುತ್ತಾ, ನಲನ ಭುಜವನ್ನು ಹಿಡಿದು ಮೇಲೆತ್ತಿ ಆಲಿಂಗಿಸಿಕೊಂಡು, ನೆತ್ತಿಯನ್ನು ಆಘ್ರಾಣಿಸಿ, ಆನಂದಬಾಷ್ಪಗಳಿಂದ ಅಭಿಷೇಚಿಸಿ, ಮಗಳನ್ನೂ-ಅಳಿಯನನ್ನೂ ಕುರಿತು ಸಮಯೋಚಿತವಾದ ಸವಿಮಾತುಗಳನ್ನಾಡಿದನು.

ನಲನೂ ಸಹ ರಾಜನಿತ್ತ ಸತ್ಕಾರವನ್ನು ಸ್ವೀಕರಿಸಿ ಸಮಯೋಚಿತವಾದ ಸವಿಮಾತುಗಳಿಂದ ಭೀಮರಾಜನನ್ನು ಗೌರವಿಸಿದನು.

ನಲನು ಬಂದಿರುವ ವಾರ್ತೆಯು ಕ್ಷಣಮಾತ್ರದಲ್ಲಿ ಪ್ರಜೆಗಳಿಗೆ ತಿಳಿ ಯಿತು. ಆನಂದಾತಿಶಯದಿಂದ ಪಟ್ಟಣಿಗರು ಕುಣಿದಾಡಿದರು. ಎಲ್ಲೆಡೆಗಳ ಲ್ಲಿಯೂ ಆನಂದದ ಕೋಲಾಹಲಧ್ವನಿಯು ಕೇಳಿಬರುತ್ತಿದ್ದಿತು. ನಲನನ್ನು ಗೌರವಿಸುವ ಸಲುವಾಗಿ ಪಟ್ಟಣಿಗರು ತಮ್ಮ ತಮ್ಮ ಮನೆಗಳನ್ನೂ, ರಾಜ ಬೀದಿಗಳನ್ನೂ ತಳಿರು-ತೋರಣಗಳಿಂದಲೂ, ಪುಷ್ಪಮಾಲಿಕೆಗಳಿಂದಲೂ ಅಲಂಕರಿಸಿದರು. ಎಲ್ಲೆಡೆಗಳಲ್ಲಿಯೂ ರಾಷ್ಟ್ರಧ್ವಜಗಳು ಹಾರಾಡತೊಡಗಿ ದುವು. ಬೀದಿಯುದ್ದಕ್ಕೂ ಸುಗಂಧಮಯವಾದ ನೀರನ್ನು ಚುಮುಕಿಸಿ,

ರಂಗವಲ್ಲಿಯನ್ನಿಟ್ಟು, ಪುಷ್ಪಹಾರಗಳಿಂದ ಅಲಂಕರಿಸಿದರು. ತಮ್ಮ ತಮ್ಮ ಮನೆಗಳ ಬಾಗಿಲುಗಳನ್ನೂ, ದೇವಾಲಯಗಳನ್ನೂ ಮತ್ತು ಪ್ರಾರ್ಥನಾ ಮಂದಿರಗಳನ್ನೂ ಪಟ್ಟಣಿಗರು ನಾನಾವಿಧವಾದ, ಸುಗಂಧಮಯವಾದ ಪುಷ್ಪಮಾಲಿಕೆಗಳಿಂದ ಅಲಂಕರಿಸಿದರು.



ಇತ್ತಲಾಗಿ ಋತುಪರ್ಣನಿಗೂ ನಲ-ದಮಯಂತಿಯರ ಪುನರ್ಮಿಲನದ ಶುಭವಾರ್ತೆಯು ತಿಳಿಯಿತು. ಆ ವಾರ್ತೆಯನ್ನು ಕೇಳಿ ಋತುಪರ್ಣನು ಆನಂದಭರಿತನಾದನು. ನಲರಾಜನನ್ನು ತನ್ನ ಬಿಡಾರಕ್ಕೆ ಆದರಪೂರ್ವಕವಾಗಿ ಬರಮಾಡಿಕೊಂಡು ಅವನ ಕ್ಷಮೆಬೇಡಿದನು. "ನಲರಾಜ! ನಿನ್ನಂತಹ

ಮಹಾನುಭಾವನನ್ನು ನಾನು ತಿಳಿಯದೇ ಸೇವಾವೃತ್ತಿಗೆ ನಿಯೋಜಿಸಿಕೊಂಡು ಅಪಚಾರವನ್ನು ಮಾಡಿಬಿಟ್ಟೆನು. ದಯೆಯಿಟ್ಟು ಕ್ಷಮಿಸು."

"ಋತುಪರ್ಣ! ನೀನೇ ನನ್ನನ್ನು ಕ್ಷಮಿಸಬೇಕಾಗಿದೆ. ಏಕೆಂದರೆ ನಿನ್ನಲ್ಲಿ ನಾನು ಸೇವಾವೃತ್ತಿಯಲ್ಲಿದ್ದಾಗ ನಿನ್ನ ಮನನೋಯುವ ಅನೇಕ ಮಾತುಗಳನ್ನಾಡಿದ್ದೇನೆ. ಆದುದರಿಂದ ನಾನು ನಿನ್ನನ್ನು ಕ್ಷಮಿಸುವ ಕಾರಣವೂ ಇಲ್ಲ ; ಅಗತ್ಯವೂ ಇಲ್ಲ."

"ನಲರಾಜ! ನಿಶ್ಚಯವಾಗಿಯೂ ನಾನಿಂದು ಅಮಿತಾನಂದವನ್ನು ಪಡೆದಿದ್ದೇನೆ. ಅದೃಷ್ಟಾಯತ್ತವಾಗಿ ನೀನಿಂದು ಪುನಃ ದಮಯಂತಿಯೊಡನೆ ಸೇರಿ ನಿನ್ನ ಪೂರ್ವಸುಖವನ್ನು ಪಡೆದಿರುವೆ. ಇದು ನನಗೆ ಹೆಚ್ಚಿನ ಸಂತೋಷ ವನ್ನುಂಟುಮಾಡಿದೆ. ನೀನು ವೇಷಮರೆಸಿಕೊಂಡು ನನ್ನ ಮನೆಯಲ್ಲಿದ್ದಾಗ ನಾನು ನಿನ್ನ ವಿಷಯದಲ್ಲಿ ಅಪರಾಧಮಾಡಿದ ನೆನಪು ನನಗಿಲ್ಲ. ಒಂದು ವೇಳೆ ತಿಳಿದೋ-ತಿಳಿಯದೆಯೋ ಅಪರಾಧವನ್ನೇನಾದರೂ ಮಾಡಿದ್ದಲ್ಲಿ ಅದನ್ನು ಕ್ಷಮಿಸಿಬಿಡುವುದು ಉಚಿತವಾಗಿದೆ."

"ಋತುಪರ್ಣ! ನೀನು ನನ್ನ ವಿಷಯದಲ್ಲಿ ಕಿಂಚಿತ್ತಾದರೂ ಅಪರಾಧ ವನ್ನೆಸಗಿಲ್ಲ. ನನಗೆ ಸ್ವಲ್ಪವಾದರೂ ತೊಂದರೆಕೊಡಲಿಲ್ಲ. ಒಂದು ವೇಳೆ ನೀನು ಅಪರಾಧವನ್ನೆಸಗಿದ್ದರೂ ಅದರಿಂದ ನನಗೆ ಕೋಪವುಂಟಾಗಿಲ್ಲ. ನನಗೆ ಕೋಪಬರುವ ಅಪರಾಧವನ್ನೇನೂ ನೀನು ಮಾಡಿರುವುದಿಲ್ಲ. ಹಾಗೇ ನಾದರೂ ನೀನು ನನ್ನ ವಿಷಯದಲ್ಲಿ ಅಪರಾಧಮಾಡಿದ್ದರೆ ಆಗಲೂ ನೀನು ಕ್ಷಮಾರ್ಹನೇ ಆಗಿರುತ್ತೀಯೆ. (ಅಂತಹ ಅಪರಾಧಗಳು ತಿಳಿಯದೇ ಮಾಡಿದ ಅಪರಾಧಗಳೆನಿಸುವುದಿಲ್ಲವೇ?) ಮೇಲಾಗಿ, ಮಹಾರಾಜ! ನೀನು ಹಿಂದೂ ಕೂಡ ನನಗೆ ಗೆಳೆಯನೇ ಆಗಿದ್ದೆ ; ಬಂಧುವೂ ಆಗಿದ್ದೆ. ಆದುದರಿಂದ ನಿನ್ನ ಅರಮನೆಯಲ್ಲಿ ನಾನಿದ್ದಷ್ಟು ದಿನಗಳನ್ನೂ ಸಂತೋಷದಿಂದಲೇ ಕಳೆದೆನು. ನನಗೆ ಬೇಕಾದ ವಸ್ತುಗಳೆಲ್ಲವನ್ನೂ ನಾನು ನಿನ್ನ ಅರಮನೆಯಲ್ಲಿ ನಿರಾತಂಕವಾಗಿ ಪಡೆಯುತ್ತಿದ್ದೆನು. ಯಾವುದಕ್ಕೂ ಕೊರತೆಯಿರಲಿಲ್ಲ. ನಾನಾ ರೆಂಬುದು ತಿಳಿಯದಿದ್ದರೂ ಅರಮನೆಯ ಪರಿವಾರದವರು ನನ್ನನ್ನು ಗೌರವ ದಿಂದಲೇ ಕಾಣುತ್ತಿದ್ದರು. ನಾನು ಬಹಳ ಸುಖವಾಗಿಯೇ ನಿನ್ನ ಅರಮನೆ ಯಲ್ಲಿ ಕಾಲ ಕಳೆದೆನು. ಹೆಚ್ಚೇನು ಹೇಳಲಿ, ಋತುಪರ್ಣ! ಒಂದೇ ಮಾತಿನಲ್ಲಿ

ಹೇಳುವುದಾದರೆ–ನನ್ನ ಸ್ವಂತ ಅರಮನೆಯಲ್ಲಿ ನನಗಿದ್ದ ಅಥವಾ ನಾನು ಅನುಭವಿಸುತ್ತಿದ್ದ ಸುಖಕ್ಕಿಂತಲೂ ಅಧಿಕವಾದ ಸುಖವನ್ನೇ ನಾನು ನಿನ್ನ ಅರಮನೆಯಲ್ಲಿ ಅನುಭವಿಸಿದೆನು. ಮಿತ್ರನೇ! ನಿನಗೆ ವಿನಿಮಯರೂಪವಾಗಿ ಕೊಡಬೇಕಾಗಿರುವ ಅಶ್ವವಿದ್ಯೆಯು ನನ್ನಲ್ಲಿಯೇ ಉಳಿದಿದೆ. ಈಗ ನೀನು ಆ ವಿದ್ಯೆಯನ್ನು ಪಡೆಯಲು ಇಚ್ಛಿಸುವೆಯಾದರೆ ಅಗತ್ಯವಾಗಿ ಉಪದೇಶಿಸು ವೆನು.''

ಋತುಪರ್ಣನು ನಲನ ಮಾತಿಗೆ ಒಪ್ಪಿದನು.

ಪರಿಶುದ್ಧನಾಗಿ ಬಂದ ಋತುಪರ್ಣನಿಗೆ ನಲರಾಜನು ಅಶ್ವವಿದ್ಯೆಯನ್ನು ಯಥಾವಿಧಿಯಾಗಿ ಉಪದೇಶಿಸಿದನು.

ನಲನಿಗೆ ಸರಹಸ್ಯವಾದ ಅಕ್ಷವಿದ್ಯೆಯನ್ನು ಹಿಂದೆಯೇ ಉಪದೇಶ ಮಾಡಿದ್ದರಿಂದ ವಿನಿಮಯರೂಪವಾಗಿ ಅವನಿಂದ ಸರಹಸ್ಯವಾದ ಅಶ್ವವಿದ್ಯೆ ಯನ್ನು ಪಡೆದ ಭಾಂಗಾಸುರಿಯು ಆನಂದಭರಿತನಾಗಿ ಬೇರೊಬ್ಬ ಸಾರಥಿ ಯನ್ನು ಕರೆದುಕೊಂಡು ಭೀಮರಾಜನ ಅನುಮತಿಯನ್ನು ಪಡೆದು ತನ್ನ ದೇಶಕ್ಕೆ ಹಿಂದಿರುಗಿದನು.

ಯುಧಿಷ್ಠಿರ! ಋತುಪರ್ಣನು ಅಯೋಧ್ಯೆಗೆ ಹೊರಟುಹೋದನಂತರ ನಲನು ಕುಂಡಿನನಗರಿಯಲ್ಲಿ ಸ್ವಲ್ಪಕಾಲ ವಾಸವಾಗಿದ್ದನು.''

೭೭ನೆಯ ಅಧ್ಯಾಯವು ಮುಗಿಯಿತು.

೭೮ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ನಲರಾಜನು ತನ್ನ ತಮ್ಮನಾದ ಪುಷ್ಕರನನ್ನು ಪಗಡೆಯಾಟದಲ್ಲಿ ಸೋಲಿಸಿದುದು : ಅವನನ್ನು ಅವನ ರಾಜ್ಯಕ್ಕೆ ಕಳುಹಿಸಿ ತಾನು ರಾಜ್ಯಭಾರವನ್ನು ವಹಿಸಿಕೊಂಡುದು

ಬೃಹದಶ್ವರು ಹೇಳುತ್ತಾರೆ :

"ಕುಂತೀಪುತ್ರನೇ! ನಲನು ತನ್ನ ಮಾವನಾದ ಭೀಮರಾಜನ ಅರ ಮನೆಯಲ್ಲಿ ಒಂದು ತಿಂಗಳು ಮಾತ್ರವಿದ್ದು ಭೀಮರಾಜನ ಅನುಮತಿಯನ್ನು ಪಡೆದು ಒಂದು ಸಣ್ಣ ಸೈನ್ಯದಳವನ್ನೂ ತನ್ನೊಡನೆ ತೆಗೆದುಕೊಂಡು ನಿಷಧ ದೇಶಕ್ಕೆ ಹೊರಟನು. ನಲನು ಶುಭ್ರವಾದ, ಅಲಂಕೃತವಾದ ರಥದಲ್ಲಿ ಕುಳಿತಿದ್ದನು. ಅವನ ಹಿಂಬದಿಯಲ್ಲಿ ಹದಿನಾರು ಆನೆಗಳೂ, ಐವತ್ತು ಕುದುರೆ

ಗಳೂ ಮತ್ತು ಆರು ನೂರು ಪದಾತಿಗಳೂ ಹೊರಟುವು. ಆ ಸೈನ್ಯದಳವು ಪದಾಘಾತದಿಂದ ಭೂಮಿಯನ್ನೇ ನಡುಗಿಸುತ್ತಿತ್ತು. ಕೆಲವು ದಿನಗಳೊಳಗಾಗಿಯೇ ಪುಷ್ಕರನ ವಿಷಯದಲ್ಲಿ ಕುಪಿತನಾಗಿದ್ದ ನಲನು ನಿಷಧದೇಶಕ್ಕೆ ತೆರಳಿದನು. ತನ್ನ ರಾಜಧಾನಿಗೆ ಬಂದೊಡನೆಯೇ ನಲನು ತನ್ನ ಸೈನ್ಯವನ್ನು ಒಂದೆಡೆಯಲ್ಲಿ ನಿಲ್ಲಿಸಿ, ತನ್ನ ತಮ್ಮನಾದ ಪುಷ್ಕರನಲ್ಲಿಗೆ ಹೋಗಿ ಹೇಳಿದನು:

"ಪುಷ್ಕರ! ನಾವು ಪಗಡೆಯಾಟವಾಡೋಣ. ನಾನು ಅಪಾರವಾದ ಐಶ್ವರ್ಯವನ್ನು ಸಂಪಾದನೆಮಾಡಿಕೊಂಡು ಬಂದಿರುತ್ತೇನೆ. ನನ್ನ ಧರ್ಮಪತ್ನಿಯಾದ ದಮಯಂತಿಯನ್ನೂ ಮತ್ತು ನಾನು ಸಂಪಾದಿಸಿಕೊಂಡು ಬಂದಿರುವ ಸಕಲೈಶ್ವರ್ಯವನ್ನೂ ನಾನು ಪಣವನ್ನಾಗಿಡುತ್ತೇನೆ. ನೀನು ಪಗಡೆಯಾಟದ ಮೂಲಕವಾಗಿಯೇ ನನ್ನಿಂದ ಪಡೆದ ಈ ರಾಜ್ಯವನ್ನು ಪಣವನ್ನಾಗಿಡು. ಆಟವು ಒಡನೆಯೇ ಆರಂಭವಾಗಲಿ. ನಿನ್ನೊಡನೆ ಪುನಃ ದ್ಯೂತವಾಡಬೇಕೆಂಬುದು ನನ್ನ ದೃಢನಿಶ್ಚಯವಾಗಿದೆ. ನಿನಗೆ ಮಂಗಳವಾಗಲಿ. ನಮ್ಮಲ್ಲಿ ಯಾವ ಅನರ್ಘವಸ್ತುಗಳಿವೆಯೋ ಅವೆಲ್ಲವನ್ನೂ ಪಣವನ್ನಾಗಿಡೋಣ. ಜೊತೆಗೆ ನಮ್ಮ ಪ್ರಾಣಗಳನ್ನೂ ಪಣವನ್ನಾಗಿಡೋಣ.

**ಜಿತ್ವಾ ಪರಸ್ವಮಾಹೃತ್ಯ ರಾಜ್ಯಂ ವಾ ಯದಿ ವಾ ವಸು ।**
**ಪ್ರತಿಪಾಣಃ ಪ್ರದಾತವ್ಯಃ ಪರಮೋ ಧರ್ಮ ಉಚ್ಯತೇ ॥೭॥**

ಒಬ್ಬನ ದೇಶ-ಕೋಶಗಳನ್ನು ದ್ಯೂತದಲ್ಲಿ ಗೆದ್ದನಂತರ ಸೋತವನು ಪುನಃ ಬಂದು ದ್ಯೂತಕ್ಕೆ ಕರೆದರೆ–ಗೆದ್ದವನು ತಾನು ಗೆದ್ದ ರಾಜ್ಯ-ಕೋಶಗಳನ್ನೇ ಪಣವನ್ನಾಗಿಟ್ಟು ದ್ಯೂತವಾಡುವುದು ಉತ್ತಮಧರ್ಮವೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಒಂದು ವೇಳೆ ನಿನಗೆ ದ್ಯೂತವಾಡುವ ಇಚ್ಛೆಯೇ ಇಲ್ಲದಿದ್ದರೆ ಆಯುಧಗಳಿಂದಲೇ ನಮ್ಮ ಬಲಾಬಲಗಳನ್ನು ಪರೀಕ್ಷಿಸೋಣ. ನಿನ್ನೊಡನೆ ದ್ವಂದ್ವಯುದ್ಧಮಾಡಿ ನನ್ನ ಸಂಕಟವನ್ನು ತೀರಿಸಿಕೊಂಡು ಶಾಂತನಾಗುತ್ತೇನೆ. ಅಥವಾ ಯುದ್ಧದಲ್ಲಿ ನನ್ನನ್ನು ಸಂಹರಿಸಿ ನೀನಾದರೂ ಸುಖದಿಂದಿರಬಹುದಾಗಿದೆ.

**ವಂಶಭೋಜ್ಯಮಿದಂ ರಾಜ್ಯಮರ್ಥಿತವ್ಯಂ ಯಥಾ ತಥಾ ।**
**ಯೇನ ಕೇನಾಪ್ಯುಪಾಯೇನ ವೃದ್ಧಾನಾಮಿತಿ ಶಾಸನಮ್ ॥೯॥**

ವಂಶಪರಂಪರಾಗತವಾಗಿ ಬಂದಿರುವ, ಆನುವಂಶಿಕವಾಗಿ ಉಪಭುಂಜಿಸಲ್ಪಡುತ್ತಿದ್ದ ಈ ರಾಜ್ಯವನ್ನು ಯಾವ ಉಪಾಯದಿಂದಲಾದರೂ ಪುನಃ ಸಂಪಾದಿಸುವುದು ಮುಖ್ಯಕರ್ತವ್ಯವೆಂಬುದು ವೃದ್ಧರ ಅನುಶಾಸನವಾಗಿದೆ. ಆದುದರಿಂದ ನಾನು ಹೇಳಿರುವ ಎರಡು ಮಾರ್ಗಗಳಲ್ಲಿ ಯಾವುದಾದರೂ ಒಂದು ಮಾರ್ಗವನ್ನು ನೀನು ಅನುಸರಿಸಿಯೇ ತೀರಬೇಕು. ಪಗಡೆಯಾಡಲು ಸಿದ್ಧನಾಗು ಅಥವಾ ಧನುಸ್ಸನ್ನು ಬಗ್ಗಿಸಿ ಯುದ್ಧಕ್ಕಾದರೂ ಸಿದ್ಧನಾಗು."

ನಲನು ಹೇಳಿದುದನ್ನು ಕೇಳಿ ಪುಷ್ಕರನಿಗೆ ಬಹಳ ಸಂತೋಷವೇ ಆಯಿತು. ಏಕೆಂದರೆ : ಅದುವರೆಗೆ ಪುಷ್ಕರನು ನಲನ ರಾಜ್ಯವನ್ನು ಅನುಭವಿಸುತ್ತಿದ್ದನೇ ಹೊರತು ತ್ರಿಲೋಕಸುಂದರಿಯಾದ ದಮಯಂತಿಯನ್ನು ಪಡೆಯುವ ಅವಕಾಶವು ಸಿಕ್ಕಿರಲಿಲ್ಲ. ಪ್ರಕೃತ ನಲನು ತಾನಾಗಿಯೇ ದಮಯಂತಿಯನ್ನೂ ಪಣವನ್ನಾಗಿಡಲು ಮುಂದೆ ಬಂದಿದ್ದಾನೆ. ಮೇಲಾಗಿ ಪುಷ್ಕರನಿಗೆ ತನ್ನ ವಿಜಯದಲ್ಲಿ ಶಂಕೆಯೇ ಇರಲಿಲ್ಲ. ಈ ಕಾರಣದಿಂದಾಗಿ ನಲನ ಮಾತುಗಳನ್ನು ಕೇಳಿ ಪುಷ್ಕರನು ಹಿರಿಹಿಗ್ಗಿ ನಸುನಗುತ್ತಾ ನಲನನ್ನು ಕುರಿತು ಹೇಳಿದನು :

**ದಿಷ್ಟ್ಯಾ ತ್ವಯಾರ್ಜಿತಂ ವಿತ್ತಂ ಪ್ರತಿಪಾಣಾಯ ನೈಷಧ ।**
**ದಿಷ್ಟ್ಯಾ ಚ ದುಷ್ಕೃತಂ ಕರ್ಮ ದಮಯನ್ತ್ಯಾಃ ಕ್ಷಯಂ ಗತಮ್ ॥೧೧॥**

**ದಿಷ್ಟ್ಯಾ ಚ ಧ್ರಿಯಸೇ ರಾಜನ್ಸದಾರೋಽದ್ಯ ಮಹಾಭುಜ ।**
**ಧನೇನಾನೇನ ವೈ ಭೈಮೀ ಜಿತೇನ ಸಮಲಂಕೃತಾ ॥೧೩॥**

**ಮಾಮುಪಸ್ಥಾಸ್ಯತಿ ವ್ಯಕ್ತಂ ದಿವಿ ಶಕ್ರಮಿವಾಪ್ಸರಾಃ ।**
**ನಿತ್ಯಶೋ ಹಿ ಸ್ಮರಾಮಿ ತ್ವಾಂ ಪ್ರತೀಕ್ಷೇಽಪಿ ಚ ನೈಷಧ ॥೧೪॥**

**ದೇವನೇನ ಮಮ ಪ್ರೀತಿರ್ನ ಭವತ್ಯಸುಹೃದ್ಗಣೈಃ ।**
**ಜಿತ್ವಾ ತ್ವದ್ಯ ವರಾರೋಹಾಂ ದಮಯನ್ತೀಮನಿನ್ದಿತಾಮ್ ।**
**ಕೃತಕೃತ್ಯೋ ಭವಿಷ್ಯಾಮಿ ಸಾ ಹಿ ಮೇ ನಿತ್ಯಶೋ ಹೃದಿ ॥೧೫॥**

"ನೈಷಧ! ನನ್ನ ಅದೃಷ್ಟವಿಶೇಷದಿಂದಲೇ ನೀನು ಐಶ್ವರ್ಯವನ್ನು

ಸಂಪಾದಿಸಿ, ಸಂಪಾದಿಸಿದ ಐಶ್ವರ್ಯವನ್ನು ಪಣವನ್ನಾಗಿಡಲು ಬಂದಿರುವೆ. ಮತ್ತೊಂದು ರೀತಿಯಲ್ಲಿ ಹೇಳುವುದಾದರೆ–ನನ್ನ ಅದೃಷ್ಟದ ಜೊತೆಗೆ ದಮಯಂತಿಯ ದುರದೃಷ್ಟವೂ ಇಂದಿಗೆ ಕಳೆಯಿತೆನ್ನಬಹುದು. ಆಜಾನು ಬಾಹುವೇ! ನೀನೂ ನಿನ್ನ ಪತ್ನಿಯೂ ಇದುವರೆಗೂ ಜೀವಿಸಿರುವುದು ನನ್ನ ಅದೃಷ್ಟವೆಂದೇ ಹೇಳಬೇಕು. ನೀನು ಈಗ ಪಣವನ್ನಾಗಿ ಇಡಲಿರುವ ಐಶ್ವರ್ಯದೊಡನೆ ದಮಯಂತಿಯನ್ನೂ ದ್ಯೂತದಲ್ಲಿ ನಾನು ಖಂಡಿತ ವಾಗಿಯೂ ಗೆಲ್ಲುವೆನು. ಅನಂತರ ಅವಳು ನನ್ನವಳಾಗಿ–ಅಪ್ಸರೆಯು ಇಂದ್ರ ನನ್ನು ಸೇವೆಮಾಡುವಂತೆ–ನನ್ನ ಸೇವೆಮಾಡಲು ಸಿದ್ಧಳಾಗುವಳೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ನಲ! ನಿಶ್ಚಯವಾಗಿ ಹೇಳುವುದಾದರೆ ನಾನು ನಿನ್ನನ್ನು ಅನುದಿನವೂ ಸ್ಮರಿಸುತ್ತಲೇ ಇದ್ದೆನು. ನಾನು ನಿನ್ನ ಆಗಮನವನ್ನು ನಿರೀಕ್ಷಿಸುತ್ತಲೇ ಇದ್ದೆನು. ಏಕೆಂದರೆ : ನನಗೆ ಸರಿಸಮಾನರಲ್ಲದವರೊಡನೆ ಅಥವಾ ನನ್ನ ಸುಹೃದರಲ್ಲದವರೊಡನೆ ದ್ಯೂತವಾಡುವುದು ನನಗೆ ರುಚಿಸದು. ಇಂದು ನೀನು ನನ್ನ ಅದೃಷ್ಟವಶದಿಂದಲೇ ಆಗಮಿಸಿರುವೆ. ನೀನು ಪಣವನ್ನಾಗಿ ಇಡಲಿರುವ ದಮಯಂತಿಯನ್ನೂ ಗೆದ್ದು ನಾನು ಕೃತಾರ್ಥನಾಗಿ ಮಹಾಭಾಗ್ಯವಂತನೆಂಬುದನ್ನು ಸ್ಥಿರಪಡಿಸಿಕೊಳ್ಳುವೆನು. ಅನುಪಮ ಸುಂದರಿಯಾದ ದಮಯಂತಿಯನ್ನು ನಾನು ಇದುವರೆಗೂ ಮನಸ್ಸಿನಲ್ಲೇ ನೆನೆದು-ನೆನೆದು ಪರಿತಪಿಸುತ್ತಿದ್ದೆನು. ಅವಳು ನನ್ನ ಹೃದಯದಲ್ಲಿ ನೆಲೆಸಿಬಿಟ್ಟಿದ್ದಾಳೆ. ಇಂದವಳನ್ನು ಪ್ರತ್ಯಕ್ಷವಾಗಿ ಪರಿಗ್ರಹಿಸುವ ಸುಮುಹೂರ್ತವು ಒದಗಿಬಂದುದಕ್ಕಾಗಿ ಸಂತೋಷಿಸುತ್ತೇನೆ."

ಪುಷ್ಕರನ ಕರ್ಣಕಠೋರವಾದ ಅಸಂಬದ್ಧಪ್ರಲಾಪವನ್ನು ಕೇಳಿ ನಲನಿಗೆ ತಡೆಯಲಾರದಷ್ಟು ಕೋಪವುಂಟಾಯಿತು. ಕತ್ತಿಯನ್ನು ಒರೆಯಿಂದ ತೆಗೆದು ಕ್ಷಣಮಾತ್ರದಲ್ಲಿ ಪುಷ್ಕರನ ಕತ್ತನ್ನು ಕತ್ತರಿಸಿಬಿಡಬೇಕೆಂದು ನಿಶ್ಚಯಿಸಿದನು. ಆದರೆ ಮರುಕ್ಷಣದಲ್ಲಿಯೇ ಅವನ ಮನಸ್ಸು ಬದಲಾಯಿಸಿತು. ತತ್ಕಾಲದಲ್ಲಿ ಕ್ಷಮೆಯೇ ಉತ್ತಮವೆನಿಸಿತು. ಹೃದಯದಲ್ಲಿನ ಕೋಪಾಗ್ನಿಯು ಶಮನವಾಗದಿದ್ದರೂ ಹೊರಗೆ ಮಾತ್ರ ಪುಷ್ಕರನ ಮಾತಿಗೆ ನಲನು ನಸುನಕ್ಕನು. ಆದರೆ ಕೆಂಡದಂತೆ ಪರಿವರ್ತಿತವಾಗಿದ್ದ ಕೆಂಪಾದ ಕಣ್ಣುಗಳ ಮೂಲಕವಾಗಿ ತನ್ನ ಕೋಪವನ್ನು ಹೊರಗೆಡಹುತ್ತಾ ಪುಷ್ಕರನಿಗೆ ಹೇಳಿ

ದನು : "ಪುಷ್ಕರ! ಮೊದಲು ದ್ಯೂತವಾಡೋಣ. ಅನಂತರದ ಆಗು-ಹೋಗುಗಳೆಲ್ಲವನ್ನೂ ಈಗಲೇ ಏಕೆ ಹೇಳಿ ಮುಗಿಸುವೆ? ನನ್ನನ್ನು ದ್ಯೂತದಲ್ಲಿ ಗೆದ್ದನಂತರ ನಿನಗಿಚ್ಛೆಬಂದಂತೆ ಏನು ಬೇಕಾದರೂ ಹೇಳಬಹುದು ಅಥವಾ ಏನು ಬೇಕಾದರೂ ಮಾಡಬಹುದು. ಆದರೆ ನೀನೇ ಸೋತು ಮಾತನಾಡದಂತಾಗುವುದಂತೂ ಖಂಡಿತ."

ನಲ-ಪುಷ್ಕರರಿಬ್ಬರೂ ಎದುರು-ಬದುರಾಗಿ ಕುಳಿತು ಪಗಡೆಯಾಟವನ್ನು ಪ್ರಾರಂಭಿಸಿದರು. (ಹಿಂದೆ ಕಲಿಯ ನೆರವಿನಿಂದ ಪುಷ್ಕರನು ಗೆದ್ದನೆಂದರೆ ಈಗ ಪುಷ್ಕರನ ನೆರವಿಗೆ ಯಾರಿದ್ದಾರೆ?) ಮೊದಲನೆಯ ಆಟವನ್ನು ಕೆಲವೇ ಕ್ಷಣಗಳೊಳಗಾಗಿಯೇ ನಲನು ಗೆದ್ದು, ಪುಷ್ಕರನು ಪಣವನ್ನಾಗಿಟ್ಟಿದ್ದ ರಾಜ್ಯ-ಕೋಶಗಳನ್ನೂ, ಅವನ ಪ್ರಾಣಗಳನ್ನೂ ತನ್ನದನ್ನಾಗಿ ಮಾಡಿಕೊಂಡನು. ಪುಷ್ಕರನ ಮುಖವು ಕಪ್ಪಿಟ್ಟಿತು. ಕೈಗಳಿಂದ ದಾಳಗಳು ಜಾರಿ ಕೆಳಗೆ ಬಿದ್ದುವು. ತಲೆಯನ್ನು ತಗ್ಗಿಸಿ ಕುಳಿತಿದ್ದ ತಮ್ಮನಾದ ಪುಷ್ಕರನನ್ನು ಸಂಬೋಧಿಸಿ ಧರ್ಮಾತ್ಮನಾದ ನಲನು ಹೇಳಿದನು :

"ಪುಷ್ಕರ! ನಿಷ್ಕಂಟಕವಾದ ಈ ಸಾಮ್ರಾಜ್ಯವು ಯಾವ ವಿಧವಾದ ಪ್ರತಿಬಂಧಕವೂ ಇಲ್ಲದೇ ಈಗ ನನ್ನದಾಗಿರುತ್ತದೆ. ದಮಯಂತಿಯನ್ನು ಕಡೆಗಣ್ಣುಗಳಿಂದ ನೋಡುವ ಅದೃಷ್ಟವೂ ನಿನಗಿಲ್ಲ. ರಾಜಾಪಸದನೇ! ನಿನ್ನ ಪ್ರಾಣಗಳನ್ನೂ ನಾನು ಗೆದ್ದಿರುವೆನಾದ್ದರಿಂದ ಪರಿವಾರಸಮೇತನಾಗಿ ನೀನಿಂದು ದಮಯಂತಿಯ ಸೇವೆಮಾಡಬೇಕಾದ ಕಾಲವು ಸನ್ನಿಹಿತವಾಗಿದೆ. ಈಗ ನೀನು ನನ್ನ ದಾಸನಾಗಿರುವೆ. ಹಿಂದೆ ನಡೆದ ಆಟದಲ್ಲಿ ನನ್ನನ್ನು ನೀನು ಸೋಲಿಸಿಬಿಟ್ಟೆನೆಂಬ ದುರಭಿಮಾನವು ನಿನಗಿದ್ದಿರಬಹುದು. ಆದರೆ ವಸ್ತುತಃ ನೀನೇ ನನ್ನ ಸೋಲಿಗೆ ಕಾರಣನಲ್ಲ.

**ನ ತ್ವಯಾ ತತ್ಕೃತಂ ಕರ್ಮ ಯೇನಾಹಂ ವಿಜಿತಃ ಪುರಾ ।**
**ಕಲಿನಾ ತತ್ಕೃತಂ ಕರ್ಮ ತ್ವಂ ಚ ಮೂಢ ನ ಬುಧ್ಯಸೇ ॥೨೨॥**

**ನಾಹಂ ಪರಕೃತಂ ದೋಷಂ ತ್ವಯ್ಯಾಧಾಸ್ಯೇ ಕಥಂಚನ ।**
**ಯಥಾ ಸುಖಂ ವೈ ಜೀವ ತ್ವಂ ಪ್ರಾಣಾನವಸೃಜಾಮಿ ತೇ ॥೨೩॥**

ನಿನಗೆ ವಿಷಯವು ತಿಳಿದಿರಬಹುದು ; ಅಥವಾ ತಿಳಿಯದಿರಬಹುದು,

ನನ್ನ ಸೋಲಿಗೆ ಮುಖ್ಯಕಾರಣನು ಕಲಿಪುರುಷನು. ಆದುದರಿಂದ ಅವನು ಮಾಡಿದ ಅಪರಾಧಕ್ಕಾಗಿ ನಾನು ನಿನ್ನನ್ನು ಶಿಕ್ಷಿಸುವುದಿಲ್ಲ. ನೀನು ಸುಖವಾಗಿಯೇ ಇರು. ನಿನಗೆ ಜೀವದಾನಮಾಡಿದ್ದೇನೆ. ನಿನಗೆ ಹಿಂದಿದ್ದ ರಾಜ್ಯವನ್ನೂ ವಿಭಾಗಿಸಿ ಕೊಡುತ್ತೇನೆ. ರಾಜ್ಯಭಾರಕ್ಕೆ ಬೇಕಾಗುವ ಪರಿಕರ



ಗಳನ್ನೂ ಒದಗಿಸಿಕೊಡುತ್ತೇನೆ. ನೀನು ನನ್ನ ಅನುಜನೆಂಬ ಅಭಿಮಾನವು ಹಿಂದೆ ನನಗೆ ಹೇಗಿದ್ದಿತೋ ಇಂದೂ ಸಹ ಅದೇ ಅಭಿಮಾನ-ಪ್ರೀತಿಗಳೇ ಅಚ್ಚಳಿಯದೇ ನನ್ನಲ್ಲಿವೆ. ನಿನ್ನ ಮೇಲಿನ ಸೋದರಪ್ರೇಮವು ನಿನ್ನ ಕ್ರೂರ ವರ್ತನೆಯಿಂದಾಗಲೀ–ಅಥವಾ ನಾನು ಅನುಭವಿಸಿದ ಕಷ್ಟಗಳ ಕಾರಣದಿಂದಾ

ಗಲೀ ಕಡಿಮೆಯಾಗಿರುವುದಿಲ್ಲ. ಪುಷ್ಕರ! ನೀನು ನನ್ನ ಸಹೋದರ. ದೀರ್ಘಾಯುಷ್ಮಂತನಾಗಿ ಬಾಳು."

ಮಹಾಪರಾಕ್ರಮಿಯಾದ ನಲನು ತನ್ನ ತಮ್ಮನಾದ ಪುಷ್ಕರನೊಡನೆ ಹೀಗೆ ಹೇಳಿ, ಅವನನ್ನು ಆಲಿಂಗಿಸಿ, ಅವನ ತಲೆಯನ್ನು ಆಘ್ರಾಣಿಸಿ, ಸವಿಮಾತುಗಳಿಂದ ಸಂತೈಸಿ, ತನ್ನ ರಾಜಧಾನಿಗೆ ಹೊರಡಲು ಅವನಿಗೆ ಅನುಮತಿಯನ್ನಿತ್ತನು.

ಯುಧಿಷ್ಠಿರ! ಸೋತುಹೋದ ತನ್ನನ್ನು ನಲನು ಹೀಗೆ ಪುರಸ್ಕರಿಸುವ ನೆಂದು ಪುಷ್ಕರನು ಭಾವಿಸಿರಲಿಲ್ಲ. ನಲನ ಮಾತುಗಳನ್ನು ಕೇಳಿ ಪುಷ್ಕರನಿಗೆ ಅಮಿತಾನಂದವಾಯಿತು. ಧರ್ಮಾತ್ಮನಾದ ನಲನ ಪಾದಕಮಲಗಳನ್ನು ಮುಟ್ಟಿ ನಮಸ್ಕರಿಸಿ, ಬದ್ಧಾಂಜಲಿಯಾಗಿ ನಿಂತು ನಲನನ್ನು ಕುರಿತು ಹೇಳಿದನು :

"ಅಣ್ಣ! ನಿನ್ನ ಕೀರ್ತಿಯು ಶಾಶ್ವತವಾಗಿ ಉಳಿಯಲಿ. ಶತಸಹಸ್ರ ವರ್ಷಪರ್ಯಂತವಾಗಿ ನೀನು ಸುಖ-ಸಂತೋಷಗಳಿಂದ ಜೀವಿಸಿರು. ದ್ಯೂತ ದಲ್ಲಿ ಸೋತ ನನಗೆ ಜೀವದಾನಮಾಡಿ ಆಶ್ರಯವನ್ನಿತ್ತ ನೀನು ನಿಶ್ಚಯ ವಾಗಿಯೂ ಮಹಾತ್ಮನೇ ಸರಿ."

ನಲನ ಅರಮನೆಯಲ್ಲಿ ಪುಷ್ಕರನು ಒಂದುತಿಂಗಳ ಕಾಲವಿದ್ದು, ಅನಂತರದಲ್ಲಿ ನಲನ ಅನುಮತಿಯನ್ನು ಪಡೆದು ಚತುರಂಗಬಲಸಮೇತನಾಗಿ ವಿಧೇಯರಾದ ಅನೇಕಸೇವಕರು ಮತ್ತು ಪತ್ನೀ-ಪುತ್ರರಿಂದೊಡಗೂಡಿ ಎರಡನೆಯ ಸೂರ್ಯನೋಪಾದಿಯಲ್ಲಿ ಉಜ್ವಲವಾದ ತೇಜಸ್ಸಿನಿಂದ ಪ್ರಕಾಶಿಸುತ್ತಾ ಉಲ್ಲಾಸದಿಂದ ತನ್ನ ರಾಜಧಾನಿಗೆ ಪ್ರಯಾಣಮಾಡಿದನು.

ಯುಧಿಷ್ಠಿರ! ನಾನು ಹಿಂದೆ ಹೇಳಿದ ರೀತಿಯಲ್ಲಿ ಧರ್ಮಾತ್ಮನಾದ ನಲನು ತನ್ನ ತಮ್ಮನಿಗೆ ತೊಂದರೆಯನ್ನುಂಟುಮಾಡದೆ, ರಾಜ್ಯವನ್ನೂ, ಯಥೇಚ್ಛವಾದ ಧನ-ಕನಕ-ವಸ್ತುಗಳನ್ನೂ ಕೊಟ್ಟು ಕಳುಹಿಸಿದನಂತರ ನಿಷಧದೇಶದ ರಾಜ್ಯಭಾರವನ್ನು ವಹಿಸಿಕೊಂಡು ತನ್ನ ಪ್ರಜೆಗಳಿಗೆ ಅಮಿತಾ ನಂದವನ್ನುಂಟುಮಾಡಿದನು. ಜನನಾಯಕರೂ ಮತ್ತು ರಾಜ್ಯದ ಮುಖ್ಯಾ ಧಿಕಾರಿಗಳೂ ನಲನಲ್ಲಿಗೆ ಬಂದು ವಿನೀತರಾಗಿ ನಿಂತು ಹೇಳಿದರು :

"ಮಹಾರಾಜ! ಇಂದಿನ ದಿನವೇ ಸುದಿನ. ನಿನ್ನ ಪುನರಾಗಮನದಿಂದ ಈ ರಾಜಧಾನಿಯಲ್ಲಿರುವ ಮತ್ತು ಈ ರಾಜ್ಯದಲ್ಲಿರುವ ಸಕಲಪ್ರಜೆಗಳೂ ಆನಂದಭರಿತರಾಗಿದ್ದಾರೆ. ದೇವತೆಗಳು ಶತಕ್ರತುವಾದ ಇಂದ್ರನನ್ನು ತಮ್ಮ ರಾಜನನ್ನಾಗಿ ಮಾಡಿಕೊಂಡು ಸಂತುಷ್ಟರಾಗಿರುವಂತೆ–ನೀನು ರಾಜನಾಗಿರುವುದರಿಂದ ಪ್ರಜೆಗಳಾದ ನಾವು ಸಂತುಷ್ಟರಾಗಿದ್ದೇವೆ."

೭೮ನೆಯ ಅಧ್ಯಾಯವು ಮುಗಿಯಿತು.

೭೯ನೆಯ ಅಧ್ಯಾಯ ನಲೋಪಾಖ್ಯಾನಪರ್ವ (ಮುಂದುವರಿದಿದೆ.)

## ನಲೋಪಾಖ್ಯಾನದ ಶ್ರವಣ ಮತ್ತು ಪ್ರವಚನಗಳ ಫಲಶ್ರುತಿ : ಬೃಹದಶ್ವರಿಂದ ಯುಧಿಷ್ಠಿರನಿಗೆ ಅಕ್ಷವಿದ್ಯೋಪದೇಶ

ಬೃಹದಶ್ವರು ಹೇಳುತ್ತಾರೆ :

"ಧರ್ಮಜ! ನಿಷಧರಾಜಧಾನಿಯಲ್ಲಿ ನಲನು ಪುನಃ ರಾಜನಾದುದಕ್ಕಾಗಿ ಅನೇಕಾನೇಕ ಉತ್ಸವಸಮಾರಂಭಗಳು ನಡೆದುವು. ಆ ಸಮಯಕ್ಕೆ ಸರಿಯಾಗಿ ನಲನು ದಮಯಂತಿಯನ್ನೂ ಚತುರಂಗಬಲದೊಡನೆ ರಾಜಧಾನಿಗೆ ಕರೆಸಿಕೊಂಡನು. ಮಹಾತ್ಮನಾದ, ಅತುಲಪರಾಕ್ರಮಿಯಾದ ಭೀಮರಾಜನು ತನ್ನ ಮಗಳಿಗೆ ಹೇರಳವಾದ ಬಳುವಳಿಗಳನ್ನಿತ್ತು ಪುರಸ್ಕರಿಸಿ ಕಳುಹಿಸಿಕೊಟ್ಟನು. ದಮಯಂತಿಯು ರಾಜಧಾನಿಗೆ ತನ್ನ ಇಬ್ಬರು ಮಕ್ಕಳಿಂದ ಸಮೇತಳಾಗಿ ಬಂದನಂತರ–ದೇವೇಂದ್ರನು ಶಚಿಯಿಂದೊಡಗೂಡಿ ನಂದನವನದಲ್ಲಿ ವಿಹರಿಸುವಂತೆ–ನಲನು ತನ್ನ ಮುಂದಿನ ದಿನಗಳನ್ನು ದಮಯಂತಿಯೊಡನೆ ಅತ್ಯಾನಂದದಿಂದ ಕಳೆದನು. ಪುಣ್ಯಶ್ಲೋಕನಾದ ನಲನು ತನ್ನ ರಾಜ್ಯವನ್ನು ಪುನಃ ಪಡೆದನಂತರ ಜಂಬೂದ್ವೀಪದಲ್ಲಿಯೇ ಅತಿಶ್ರೇಷ್ಠನಾದ ರಾಜನೆಂಬ ಕೀರ್ತಿಯನ್ನು ಗಳಿಸಿ ರಾಜ್ಯವನ್ನಾಳಿದನು. ನಲನು ಅನೇಕಾನೇಕ ಯಜ್ಞ-ಯಾಗಾದಿಗಳನ್ನು ಮಾಡಿ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನ-ದಕ್ಷಿಣೆಗಳನ್ನು ಕೊಟ್ಟನು.

ಧರ್ಮಜ! ನೀನೂ ಸಹ ನಲಚಕ್ರವರ್ತಿಯಂತೆಯೇ ನಿನ್ನ ರಾಜ್ಯ-ಕೋಶಗಳನ್ನು ಪುನಃ ಪಡೆದು ನಿನ್ನ ಅನುಜರೊಡನೆ ಪೂರ್ಣಚಂದ್ರನಂತೆ

ಪ್ರಕಾಶಿಸುವೆ. ಇದರಲ್ಲಾವ ಸಂಶಯವೂ ಇಲ್ಲ. ಯುಧಿಷ್ಠಿರ! ನಾನು ಆಖ್ಯಾನಮಾಡಿದ ರೀತಿಯಲ್ಲಿ ಪರಪುರಂಜಯನಾದ ನಲನು ದ್ಯೂತದ ಕಾರಣದಿಂದಾಗಿ ತನ್ನ ಪತ್ನಿಯೊಡನೆ ಅನೇಕವಿಧವಾದ ಕಷ್ಟಗಳನ್ನನು ಭವಿಸಿದನು. ನೀನೂ ಇಂದು ದ್ಯೂತದ ಕಾರಣದಿಂದಲೇ ರಾಜ್ಯಭ್ರಷ್ಟ ನಾಗಿರುವೆ. ಆದರೆ ನಿನಗೂ–ನಲನಿಗೂ ಎಷ್ಟೋ ತಾರತಮ್ಯವಿದೆ. ನಲನು ನಿನಗಿಂತಲೂ ಹೆಚ್ಚಿನ ಕಷ್ಟವನ್ನು ಅನುಭವಿಸಿದನೆಂಬುದೇ ನನ್ನ ಅಭಿಪ್ರಾಯ ವಾಗಿದೆ. ಏಕೆಂದರೆ : ನಲನು ಏಕಾಕಿಯಾಗಿ ಅನೇಕವಿಧವಾದ ದಾರುಣವಾದ ಕಷ್ಟಗಳನ್ನನುಭವಿಸಿದನು. ಆದರೆ ನೀನಿಲ್ಲಿ ಏಕಾಕಿಯಾಗಿಲ್ಲ. ನಿನ್ನ ಆಜ್ಞಾನುವರ್ತಿಗಳಾದ ಅನುಜರಿದ್ದಾರೆ. ನಿನ್ನನ್ನುಪಚರಿಸಲು ದ್ರೌಪದಿ ಯಿದ್ದಾಳೆ. ನೀನು ಅರಣ್ಯದಲ್ಲಿದ್ದರೂ ಧರ್ಮಜಿಜ್ಞಾಸೆಮಾಡಲು ನಿನ್ನೊಡನೆ ವೇದ-ವೇದಾಂಗಪಾರಂಗತರಾದ ಅನೇಕಬ್ರಾಹ್ಮಣರಿದ್ದಾರೆ. ಆದುದರಿಂದ ನೀನು ಕಿಂಚಿತ್ತಾದರೂ ವ್ಯಥೆಪಡುವ ಕಾರಣವಿಲ್ಲ.

**ಕರ್ಕೋಟಕಸ್ಯ ನಾಗಸ್ಯ ದಮಯನ್ತ್ಯಾ ನಲಸ್ಯ ಚ ।**
**ಋತುಪರ್ಣಸ್ಯ ರಾಜರ್ಷೇಃ ಕೀರ್ತನಂ ಕಲಿನಾಶನಮ್ ॥೧೦॥**

**ಇತಿಹಾಸಮಿದಂ ಚಾಪಿ ಕಲಿನಾಶನಮಚ್ಯುತ ।**
**ಶಕ್ಯಮಾಶ್ವಸಿತುಂ ಶ್ರುತ್ವಾ ತ್ವದ್ವಿಧೇನ ವಿಶಾಮ್ಪತೇ ॥೧೧॥**

ಅಚ್ಯುತನೇ! ಈ ನಲೋಪಾಖ್ಯಾನದಲ್ಲಿ ಬರುವ ಕಾರ್ಕೋಟಕ ಸರ್ಪ, ದಮಯಂತೀ, ನಲ, ಋತುಪರ್ಣ–ಇವರ ಸಂಕೀರ್ತನೆಯು ನಿಶ್ಚಯವಾಗಿಯೂ ಕಲಿಪುರುಷನ ಪ್ರಭಾವವನ್ನು ನಾಶಗೊಳಿಸುತ್ತದೆ. ಕಲಿಕಲ್ಮಷಧ್ವಂಸಕವಾದ ಈ ನಲೋಪಾಖ್ಯಾನವು ನಿನ್ನಂತೆಯೇ ದುಃಖಸಾಗರದಲ್ಲಿ ಮುಳುಗಿರುವವರಿಗೆ ಅವರ ಮನಸ್ಸಿನ ಆತಂಕವನ್ನು ಕಡಿಮೆಮಾಡಿ ಸುಖದ ಆಶ್ವಾಸನೆಯನ್ನೀಯುತ್ತದೆ.

**ಅಸ್ಥಿರತ್ವಂ ಚ ಸಂಚಿನ್ತ್ಯ ಪುರುಷಾರ್ಥಸ್ಯ ನಿತ್ಯದಾ ।**
**ತಸ್ಯೋದಯೇ ವ್ಯಯೇ ಚಾಪಿ ನ ಚಿನ್ತಯಿತುಮರ್ಹಸಿ ॥೧೨॥**

ಮಾನವನಿಗೆ ಸೋಲು-ಗೆಲುವುಗಳೆಂಬುವು (ಧನಸಂಪತ್ತು) ಶಾಶ್ವತ ವಲ್ಲ. ಆದುದರಿಂದ ನೀನು ನಿನಗಾಗಿರುವ ಇಂದಿನ ಸೋಲಿಗಾಗಿ ವ್ಯಥೆಪಡ

ಬೇಕಾಗಿಲ್ಲ. ಮುಂದೆ ಉಂಟಾಗುವ ವಿಜಯಕ್ಕಾಗಿ ಸಂತೋಷಪಡಬೇಕಾಗಿಯೂ ಇಲ್ಲ. ನಲೋಪಾಖ್ಯಾನವನ್ನು ಕೇಳಿದಮೇಲಾದರೂ ನಿನ್ನ ಮನಸ್ಸಿನ ಉದ್ವೇಗವನ್ನು ದೂರಮಾಡು. ದುಃಖಿಸಬೇಡ.

**ವಿಷಮಾವಸ್ಥಿತೇ ದೈವೇ ಪೌರುಷೇಽಫಲತಾಂ ಗತೇ ।**
**ವಿಷಾದಯನ್ತಿ ನಾತ್ಮಾನಂ ಸತ್ತ್ವೋಪಾಶ್ರಯಿಣೋ ನರಾಃ ॥೧೪॥**

ಅದೃಷ್ಟವು ವಿಷಮಸ್ಥಿತಿಯಲ್ಲಿದ್ದಾಗಲೂ, ಮನುಷ್ಯಪ್ರಯತ್ನಗಳೆಲ್ಲವೂ ವಿಫಲವಾದಾಗಲೂ–ಸ್ಥಿರಚಿತ್ತರಾದ ಜನರು ಅಧೀರರಾಗುವುದಿಲ್ಲ. ಅದಕ್ಕಾಗಿ ವಿಷಾದಿಸುವುದೂ ಇಲ್ಲ.

**ಯೇ ಚೇದಂ ಕಥಯಿಷ್ಯನ್ತಿ ನಲಸ್ಯ ಚರಿತಂ ಮಹತ್ ।**
**ಶ್ರೋಷ್ಯನ್ತಿ ಚಾಪ್ಯಭೀಕ್ಷ್ಣಂ ವೈ ನಾಲಕ್ಷ್ಮೀಸ್ತಾನ್ಭಜಿಷ್ಯತಿ ॥೧೫॥**
**ಅರ್ಥಾಸ್ತಸ್ಯೋಪಪತ್ಸ್ಯನ್ತೇ ಧನ್ಯತಾಂ ಚ ಗಮಿಷ್ಯತಿ ।**
**ಇತಿಹಾಸಮಿಮಂ ಶ್ರುತ್ವಾ ಪುರಾಣಂ ಶಶ್ವದುತ್ತಮಮ್ ॥೧೬॥**
**ಪುತ್ರಾನ್ಪೌತ್ರಾನ್ಪಶೂಂಶ್ಚಾಪಿ ಲಭತೇ ನೃಷು ಚಾಗ್ರ್ಯತಾಮ್ ।**
**ಆರೋಗ್ಯಪ್ರೀತಿಮಾಂಶ್ಚೈವ ಭವಿಷ್ಯತಿ ನ ಸಂಶಯಃ ॥೧೭॥**

ಯಾರು ಈ ನಲೋಪಾಖ್ಯಾನವನ್ನು ಪದೇ-ಪದೇ ಓದುವರೋ ಮತ್ತು ಕೇಳುವರೋ–ಅವರೆಂದಿಗೂ ಅದೃಷ್ಟಹೀನರಾಗುವುದಿಲ್ಲ. ಯಾವನು ಈ ಇತಿಹಾಸವನ್ನು ಏಕಾಗ್ರಚಿತ್ತದಿಂದ ಓದುವನೋ–ಅವನ ಕಾರ್ಯಗಳೆಲ್ಲವೂ ಸುಗಮವಾಗಿ ಸಾಧನೆಯಾಗುತ್ತವೆ. ಅವನು ಕೀರ್ತಿಮಂತನಾಗಿ, ಪುತ್ರ-ಪೌತ್ರವಂತನಾಗಿ, ಗೋಧನನಾಗಿ, ಸಮಾಜದಲ್ಲಿ ಉನ್ನತಸ್ಥಾನಗಳನ್ನು ಗಳಿಸಿ, ಐಶ್ವರ್ಯವಂತನಾಗಿ, ಆರೋಗ್ಯವಂತನಾಗಿ, ಸರ್ವದಾ ಸಂತೋಷಚಿತ್ತನಾಗಿರುತ್ತಾನೆ.

ಯುಧಿಷ್ಠಿರ! 'ಹನ್ನೆರಡು ವರ್ಷಗಳ ವನವಾಸ ಮತ್ತು ಒಂದುವರ್ಷ ಅಜ್ಞಾತವಾಸಗಳನ್ನು ಕಳೆದ ಮೇಲೆಯೂ ದ್ಯೂತದಲ್ಲಿ ನಿಷ್ಣಾತನಾದವನು ದ್ಯೂತದಲ್ಲಿ ಪರಿಣತನಲ್ಲದ ನನ್ನನ್ನು ಪುನಃ ದ್ಯೂತಕ್ಕೆ ಕರೆದರೆ ಏನು ಮಾಡಲಿ?'–ಎಂದಿರುವ ನಿನ್ನ ಹೃದಯದ ಚಿಂತೆಯನ್ನೂ ನಾನು ಹೋಗಲಾಡಿಸಲು ನಿರ್ಧರಿಸಿದ್ದೇನೆ. ಧರ್ಮಜ! ನಾನು ಅಕ್ಷವಿದ್ಯೆಯನ್ನು

ಸರಹಸ್ಯವಾಗಿ ತಿಳಿದಿರುವೆನು. ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿದ್ದೇನೆ. ಆದುದರಿಂದ ನಿನಗೆ ಅಕ್ಷವಿದ್ಯೆಯನ್ನು ಉಪದೇಶಿಸುತ್ತೇನೆ. ಸ್ವೀಕರಿಸು."

ಬೃಹದಶ್ವರು ಹೇಳಿದ ಮಾತುಗಳನ್ನು ಕೇಳಿ ಯುಧಿಷ್ಠಿರನಿಗೆ ಪರಮಾನಂದವಾಯಿತು. ಬದ್ಧಾಂಜಲಿಯಾಗಿ ಬೇಡಿದನು :

"ಮಹಾನುಭಾವರೇ! ನಾನು ನಿಶ್ಚಯವಾಗಿಯೂ ಅಕ್ಷವಿದ್ಯೆಯನ್ನು ತಮ್ಮಿಂದ ತಿಳಿದುಕೊಳ್ಳುವ ಆಶಯದಿಂದಿರುತ್ತೇನೆ."

ಬೃಹದಶ್ವರು "ತಥಾಸ್ತು" ಎಂದರು.

ಯುಧಿಷ್ಠಿರನು ಪರಿಶುದ್ಧನಾಗಿ ಬಂದು ಪ್ರಾಙ್ಮುಖನಾಗಿ ಕುಳಿತನಂತರ ಬೃಹದಶ್ವರು ಯುಧಿಷ್ಠಿರನಿಗೆ ಸರಹಸ್ಯವಾದ ಅಕ್ಷವಿದ್ಯೆಯನ್ನು ಯಥಾವಿಧಿಯಾಗಿ ಉಪದೇಶಿಸಿ, ಅನಂತರ ಅಶ್ವಹೃದಯವನ್ನೂ ಉಪದೇಶಿಸಿದರು. ಬಳಿಕ ತೀರ್ಥಗಳಲ್ಲಿ ಸ್ನಾನಮಾಡುವ ಸಲುವಾಗಿ ಬೃಹದಶ್ವರು ತೀರ್ಥಯಾತ್ರೆಗೆ ತೆರಳಿದರು.

ಬೃಹದಶ್ವರು ಹೊರಟುಹೋದನಂತರ ಸ್ಥಿರಪ್ರತಿಜ್ಞನಾದ ಯುಧಿಷ್ಠಿರನು ನಾನಾದಿಕ್ಕುಗಳಲ್ಲಿದ್ದ ತೀರ್ಥಕ್ಷೇತ್ರಗಳಿಂದ ಆಗಮಿಸಿರುವ ಬ್ರಾಹ್ಮಣರಿಂದಲೂ ತಪಸ್ವಿಗಳಿಂದಲೂ–'ಮೇಧಾವಿಯಾದ, ಸವ್ಯಸಾಚಿಯಾದ ಅರ್ಜುನನು ತನ್ನ ತಪಸ್ಸನ್ನು ಮುಂದುವರಿಸುತ್ತಿರುವನೆಂಬ ಮತ್ತು ವಾಯುಭಕ್ಷನಾಗಿ ತಪಸ್ಸುಮಾಡುತ್ತಿರುವನೆಂಬ'–ವಾರ್ತೆಗಳನ್ನು ಕೇಳಿದನು. 'ಪಾರ್ಥನು ಇಂದು ಮಾಡುತ್ತಿರುವ ಘೋರವಾದ ತಪಸ್ಸನ್ನು ಈ ಹಿಂದೆ ಯಾರೂ ಮಾಡಿರಲಿಲ್ಲ'ವೆಂಬ ವಾರ್ತೆಯನ್ನು ತಾಪಸರು ಯುಧಿಷ್ಠಿರನೊಡನೆ ಹೇಳಿದರು. 'ಕುಂತೀಪುತ್ರನಾದ ಧನಂಜಯನು ನಿಯಮವ್ರತಾನುಷ್ಠಾನಗಳಿಂದಲೂ, ಏಕಾಗ್ರತೆಯಿಂದಲೂ, ಮೌನದಿಂದಲೂ ತಪಸ್ಸನ್ನು ಮಾಡುತ್ತಾ ಸಾಕ್ಷಾತ್ ಧರ್ಮನಿಗೆ ಸಮಾನವಾದ (ಆಕಾರವನ್ನು ಹೊಂದಿ ಬಂದಿರುವ ಧರ್ಮದೇವತೆಯಂತೆ) ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವನೆಂಬ'–ವಾರ್ತೆಯನ್ನೂ ಯುಧಿಷ್ಠಿರನಿಗೆ ತಪಸ್ವಿಗಳು ವಿವರಿಸಿ ಹೇಳಿದರು.

ಯುಧಿಷ್ಠಿರನು ತನ್ನ ಪ್ರಿಯನಾದ ಅರ್ಜುನನು ಶರೀರಕ್ಲೇಶಕರವಾದ

ಅಂತಹ ಘೋರತರವಾದ ತಪಸ್ಸಿನಲ್ಲಿ ನಿರತನಾಗಿರುವುದನ್ನು ಕೇಳಿ ದುಃಖಗೊಂಡನು. ಆದರೆ ಅವನ ದುಃಖಪರಿಹಾರಕ್ಕೆ ತತ್ತ್ವವಿಷಯಗಳ ಮನನಾದಿಗಳೇ ಮಾರ್ಗಗಳಾಗಿದ್ದುವು. ತನ್ನೊಡನಿದ್ದ ಅನೇಕಬ್ರಾಹ್ಮಣರನ್ನು ಕರೆಸಿ ಅವರೊಡನೆ ತಾತ್ತ್ವಿಕವಾದ ಸಂಭಾಷಣೆಗಳನ್ನು ಮಾಡುತ್ತಾ ಅರ್ಜುನನ ವಿಯೋಗದಿಂದುಂಟಾದ ದುಃಖವನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಿಕೊಳ್ಳುತ್ತಿದ್ದನು.

೭೯ನೆಯ ಅಧ್ಯಾಯವು ಮುಗಿಯಿತು.

೮೦ನೆಯ ಅಧ್ಯಾಯ ತೀರ್ಥಯಾತ್ರಾಪರ್ವ

## ದ್ರೌಪದೀಸಹಿತರಾದ ಪಾಂಡವರು ಅರ್ಜುನನಿಗಾಗಿ ಚಿಂತಿಸಿದುದು

ನಲೋಪಾಖ್ಯಾನವು ಮುಗಿದ ಮರುದಿನ ವೈಶಂಪಾಯನರು ಮಹಾಭಾರತಪ್ರವಚನಕ್ಕೆ ಕುಳಿತರು. ತನ್ನ ಪೂರ್ವಜರ ಇತಿಹಾಸವನ್ನು ಕೇಳುವುದರಲ್ಲಿ ಅತ್ಯಾಸಕ್ತನಾಗಿದ್ದ ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸಿದನು :

"ಪೂಜ್ಯರೇ! ಸವ್ಯಸಾಚಿಯಾದ ನಮ್ಮ ಮುತ್ತಜ್ಜನು ಕಾಮ್ಯಕವನದಿಂದ ಹೊರಟುಹೋದನಂತರ ಪಾಂಡುವಿನ ಮಕ್ಕಳಾದ ಧರ್ಮರಾಜ-ಭೀಮ-ನಕುಲ-ಸಹದೇವರು ಏನು ಮಾಡಿದರು? ಪಾರ್ಥನ ಅಗಲುವಿಕೆಯಿಂದಾಗಿ ಅವರು ಬಹುವಾಗಿ ಪರಿತಪಿಸುತ್ತಿದ್ದಿರಬಹುದಲ್ಲವೇ? ಏಕೆಂದರೆ : ಧನುರ್ಧಾರಿಗಳಲ್ಲಿ ಶ್ರೇಷ್ಠನಾದ, ಶತ್ರುಸೈನ್ಯಧ್ವಂಸಕನಾದ ಅರ್ಜುನನೊಬ್ಬನೇ ಪಾಂಡವರಿಗೆ ರಕ್ಷಕನಾಗಿದ್ದನು. ವಿಷ್ಣುವು ಯಾವ ರೀತಿಯಲ್ಲಿ ದೇವತೆಗಳಿಗೆ ಸದಾ ರಕ್ಷಕನಾಗಿರುವನೋ–ಅದೇ ರೀತಿಯಲ್ಲಿ ಪಾರ್ಥನೂ ಪಾಂಡವರ ಯೋಗ-ಕ್ಷೇಮದಲ್ಲಿಯೇ ಸರ್ವದಾ ಜಾಗರೂಕನಾಗಿರುತ್ತಿದ್ದನು. ಪರಾಕ್ರಮದಲ್ಲಿ ಇಂದ್ರನಿಗೆ ಸಮಾನನಾದ, ಯುದ್ಧದಲ್ಲಿ ಪರಾಙ್ಮುಖತೆಯೆಂಬುದನ್ನೇ ಅರಿಯದ ಪಾರ್ಥನಿಲ್ಲದೇ ನನ್ನ ಮುತ್ತಾತಂದಿರು ಹೇಗೆ ಕಾಲಕಳೆದರೆಂದು ನಾನು ಯೋಚಿಸುತ್ತಿದ್ದೇನೆ. ಪಾರ್ಥನನ್ನಗಲಿದ ಅವರು ಸರ್ವದಾ ಅವನ ಚಿಂತೆಯಲ್ಲಿಯೇ ಇದ್ದಿರಬಹುದಲ್ಲವೇ?"

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ನೀನು ಹೇಳುತ್ತಿರುವುದು ನಿಜ. ಅಪ್ರತಿಮಪರಾಕ್ರಮಿಯಾದ ಪಾರ್ಥನು ಕಾಮ್ಯಕವನದಿಂದ ಹೊರಟುಹೋದನಂತರ ಪಾಂಡುವಿನ ನಾಲ್ವರು ಮಕ್ಕಳೂ ಮತ್ತು ದ್ರೌಪದಿಯೂ ಬಹುದುಃಖಿತರಾದರು. ಅವರ ಮುಖದಲ್ಲಿ ಕಾಂತಿಯೆಂಬುದೇ ಇರಲಿಲ್ಲ. ಹರಿದುಹೋದ ಮುತ್ತಿನಹಾರದಂತೆ ಅಥವಾ ರೆಕ್ಕೆಯಿಂದ ವಿಹೀನವಾದ ಪಕ್ಷಿಯಂತೆ–ಅವರು ಕಾಂತಿಹೀನರಾಗಿದ್ದರು. ಅತ್ಯಂತಶೋಭಾಯಮಾನವಾಗಿದ್ದ ಆ ಕಾಮ್ಯಕವನವೂ–ಕುಬೇರನಿಂದ ವಿಹೀನವಾದ ಚೈತ್ರರಥೋದ್ಯಾನದಂತೆ–ಕಾಂತಿಹೀನವಾಯಿತು. ಪಾರ್ಥನಿಂದ ವಿಹೀನರಾದ ಆ ರಾಜಕುಮಾರರು ವಿಧಿಯಿಲ್ಲದೇ ಅಸಂತೋಷದಿಂದಲೇ ಕಾಮ್ಯಕವನದಲ್ಲಿ ಸ್ವಲ್ಪಕಾಲವನ್ನು ಕಳೆದರು.

ಜನಮೇಜಯ! ಮನಸ್ಸಿಗೆ ಬೇಕಿಲ್ಲದಿದ್ದರೂ ನಿತ್ಯ-ನೈಮಿತ್ತಿಕಕರ್ಮಗಳನ್ನೂ ಮತ್ತು ತಮ್ಮ ದೈನಂದಿನಕರ್ತವ್ಯಗಳನ್ನೂ ಮುಗಿಸಿಯೇ ತೀರಬೇಕಲ್ಲವೇ! ಅತುಲಪರಾಕ್ರಮಿಗಳಾದ ಭೀಮ-ನಕುಲ-ಸಹದೇವರು ಕಾಡುಗಳಲ್ಲಿ ಸುತ್ತಾಡಿ ವಿಷರಹಿತಬಾಣಗಳನ್ನು ಪ್ರಯೋಗಿಸಿ ಯಾಗಯೋಗ್ಯವಾದ ಸಾಧುಪ್ರಾಣಿಗಳನ್ನು ಕೊಂದು ಬ್ರಾಹ್ಮಣರಿಗಾಗಿ ತರುತ್ತಿದ್ದರು. ಶತ್ರುಧ್ವಂಸಕರಾದ ಪುರುಷವ್ಯಾಘ್ರರು ಈ ರೀತಿಯಲ್ಲಿ ಬೇಟೆಯಾಡಿ ನಾನಾವಿಧವಾದ ಪ್ರಾಣಿಗಳನ್ನು ಕೊಂದು ಅವುಗಳ ಮಾಂಸವನ್ನು ಪರಿಶುದ್ಧಮಾಡಿ ಬ್ರಾಹ್ಮಣರಿಗೆ ಅರ್ಪಣೆಮಾಡುತ್ತಿದ್ದರು. ಇಷ್ಟವಿರಲಿ ; ಇಷ್ಟವಿಲ್ಲದಿರಲಿ–ಈ ನಿತ್ಯಕರ್ತವ್ಯವನ್ನು ಅವರು ಮಾಡಲೇಬೇಕಾಗಿದ್ದಿತು. ತಮ್ಮ ದೈನಂದಿನ ಕರ್ತವ್ಯವನ್ನು ಯಥಾಕ್ರಮವಾಗಿ ಮಾಡಿ ಮುಗಿಸುತ್ತಿದ್ದರೂ ಯಾರ ಮುಖದಲ್ಲಿಯೂ ಸಂತೋಷಸೂಚಕವಾದ ಕಾಂತಿಯೇ ಇರಲಿಲ್ಲ. ಹೃದಯದಲ್ಲಿಯೇ ಇಲ್ಲದ ಮೇಲೆ ಮುಖದಲ್ಲಿ ಕಾಣಲು ಹೇಗೆ ತಾನೇ ಸಾಧ್ಯವಾದೀತು? ಅದರಲ್ಲಿಯೂ ದ್ರೌಪದಿಗೆ ಪಾರ್ಥನ ವಿರಹವೇದನೆಯು ದಾರುಣವಾಗಿದ್ದಿತು. ಅರ್ಜುನನನ್ನು ಬಾರಿ-ಬಾರಿಗೂ ನೆನೆದು ಕಣ್ಣೀರಿಡುತ್ತಾ ಧರ್ಮಜನನ್ನು ಕುರಿತು ಹೇಳಿದಳು :

"ಧರ್ಮಜ! ಅರ್ಜುನನನ್ನೂ ಮತ್ತು ಅವನ ಪರಾಕ್ರಮವನ್ನೂ ನೆನೆ

ದಂತೆ ನನ್ನ ದುಃಖವು ಅಪರಿಮಿತವಾಗುತ್ತದೆ. ಎರಡು ಕೈಗಳುಳ್ಳ ಅರ್ಜುನನು ಸಹಸ್ರಬಾಹುವಾದ ಕಾರ್ತವೀರ್ಯಾರ್ಜುನನಿಗೆ ಸಮಾನನು. ಪಾಂಡವ ಶ್ರೇಷ್ಠನಾದ ಅರ್ಜುನನಿಲ್ಲದ ಈ ಕಾಮ್ಯಕವನವು ನನ್ನ ಕಣ್ಣಿಗೆ ಸೊಬಗಿನಿಂದ ಕಾಣುತ್ತಿಲ್ಲ. ಅವನಿಲ್ಲದ ಈ ಭೂಭಾಗವು ನಾನು ಎತ್ತೆತ್ತ ನೋಡಿದರೂ ಶೂನ್ಯವಾಗಿಯೇ ಕಾಣುತ್ತಿದೆ. ವಿಕಸಿತವಾದ ಕುಸುಮಗಳಿಂದ ಕೂಡಿದ ವೃಕ್ಷಗಳಿಂದಲೂ, ವಿಸ್ಮಯಕಾರಕದೃಶ್ಯಗಳಿಂದಲೂ ಕೂಡಿರುವ ಈ ವನವೂ ಅರ್ಜುನನಿಲ್ಲಿದ್ದಾಗ ಶೋಭಾಯಮಾನವಾಗಿದ್ದಂತೆ ಈಗ ಶೋಭಾಯ ಮಾನವಾಗಿಲ್ಲ. ನೀಲಮೇಘಶ್ಯಾಮನಾದ, ಮದಗಜಗಮನನಾದ, ಪುಂಡರೀ ಕಾಕ್ಷನಾದ ಅರ್ಜುನನಿಲ್ಲದ ಈ ಕಾಮ್ಯಕವನವು ನನಗೆ ಸ್ವಲ್ಪವಾದರೂ ಸುಂದರವಾಗಿ ಕಾಣುತ್ತಿಲ್ಲ. ಯಾವನು ಎರಡು ಕೈಗಳಿಂದಲೂ ಬಾಣಬಿಡಲು ಸಮರ್ಥನೋ, ಯಾವನ ಧನುಷ್ಟೇಂಕಾರವು ಸಿಡಿಲಿನ ಘೋಷಕ್ಕೆ ಸಮಾನವಾಗಿರುವುದೋ–ಅಂತಹ ಅರ್ಜುನನನ್ನು ನೆನೆಯುತ್ತಿದ್ದಂತೆಲ್ಲಾ ನನ್ನ ದುಃಖವು ಹೆಚ್ಚುತ್ತಿರುತ್ತದೆ. ನನಗೆ ಸುಖವೆಂಬುದೇ ಇಲ್ಲವಾಗಿದೆ, ಮಹಾರಾಜ!"

ಜನಮೇಜಯ! ದ್ರೌಪದಿಯು ಬಿಕ್ಕಿ-ಬಿಕ್ಕಿ ಅಳುತ್ತಾ ಅರ್ಜುನನ ವಿರಹದಿಂದ ತನಗುಂಟಾಗಿರುವ ಸಂಕಟವನ್ನು ಧರ್ಮಜನೊಡನೆ ಹೇಳಿದು ದನ್ನು ಕೇಳಿ ಶತ್ರುನಿಷೂದನನಾದ ಭೀಮಸೇನನು ದ್ರೌಪದಿಯನ್ನು ಕುರಿತು ಹೇಳಿದನು :

"ಶುಭಾಂಗಿಯೇ! ಅರ್ಜುನನ ವಿಷಯವಾಗಿ ನೀನು ಧರ್ಮಜನೊಡನೆ ಹೇಳಿದ ಅಭಿಪ್ರಾಯವೇ ನನ್ನ ಮನಸ್ಸಿನಲ್ಲಿಯೂ ಇದೆ. ನಾನು ಹೇಳಲಿದ್ದ ಮಾತುಗಳನ್ನೇ ನೀನೂ ಹೇಳಿರುವೆ. ಅಮೃತಧಾರೆಗೆ ಸಮಾನವಾದ ಈ ಮಾತುಗಳನ್ನು ಕೇಳಿ ನನ್ನ ಹೃದಯವು ಸಂತಸಗೊಂಡಿದೆ. ಯಾವನ ಬಾಹು ಗಳು ನೀಳವಾಗಿಯೂ, ಸಮವಾಗಿಯೂ, ದುಂಡಾಗಿಯೂ, ಪರಿಘಾಯುಧಕ್ಕೆ ಸಮಾನವಾಗಿಯೂ ಇವೆಯೋ, ಯಾವನ ಎರಡು ಭುಜಮೂಲಗಳ ಲ್ಲಿಯೂ ಎರಡು ಕೈಗಳಿಂದಲೂ ಧನುಸ್ಸಿನ ಶಿಂಜಿನಿಯ ಸೆಳೆಯುವಿಕೆಯಿಂದ ಉಂಟಾದ ಚಿಹ್ನೆಗಳಿರುವುವೋ, ಯಾವನ ಎರಡು ತೋಳುಗಳು ಸುವರ್ಣಾ ಭರಣಗಳುಳ್ಳ ಐದೈದು ಬೆರಳುಗಳಿಂದ ಕೂಡಿದ್ದು ಐದು ಹೆಡೆಗಳುಳ್ಳ ಒಂದು

ಜೊತೆ ಹಾವುಗಳಂತೆ ಪರಿಶೋಭಿಸುತ್ತಿವೆಯೋ–ಅಂತಹ ಪುರುಷವ್ಯಾಘ್ರನಾದ ಅರ್ಜುನನಿಲ್ಲದಿರುವ ಈ ಕಾಮ್ಯಕವನವು ನಿಶ್ಚಯವಾಗಿಯೂ ಸೂರ್ಯನಿಲ್ಲದ ಆಕಾಶದಂತೆಯೇ ನನಗೆ ಕಾಣುತ್ತಿದೆ. ಯಾವನನ್ನು ಆಶ್ರಯಿಸಿ ಪಾಂಚಾಲರೂ ಮತ್ತು ಕುರುಗಳೂ ದೇವತೆಗಳನ್ನೂ ಯುದ್ಧದಲ್ಲಿ ಎದುರಿಸಲು ಸಮರ್ಥರಾಗುವರೋ ಮತ್ತು ಯಾವನ ಕರಾವಲಂಬನೆಯಿಂದ ನಾವೆಲ್ಲರೂ ನಮ್ಮ ಶತ್ರುಗಳು ಜಯಿಸಲ್ಪಟ್ಟಿರುವರೆಂದೂ, ಈ ಭೂಮಿಯು ನಮ್ಮದೇ ಆಗಿಬಿಟ್ಟಿದೆಯೆಂದೂ ತಿಳಿದಿರುವೆವೋ–ಅಂತಹ ಪಾರ್ಥನಿಲ್ಲದಿರುವ ಈ ಕಾಮ್ಯಕವನದಲ್ಲಿ ನನ್ನ ಮನಸ್ಸಿಗೆ ಸ್ವಲ್ಪವಾದರೂ ಶಾಂತಿಯು ಸಿಕ್ಕದಾಗಿದೆ. ಪಾರ್ಥನಿಲ್ಲದ ಈ ಕಾಮ್ಯಕವನದ ನಾಲ್ಕು ದಿಕ್ಕುಗಳೂ ನನಗೆ ಶೂನ್ಯವಾಗಿಯೂ, ಕತ್ತಲಿನಿಂದ ಕವಿದುಕೊಂಡಿರುವಂತೆಯೂ ಕಾಣುತ್ತಿದೆ. ಈ ಭೂಮಿಯೇ ನನಗೆ ಶೂನ್ಯವಾಗಿ ಕಾಣುತ್ತಿದೆ.”

ಭೀಮನು ಹೀಗೆ ಹೇಳಿದನಂತರ ನಕುಲನು ಅರ್ಜುನನನ್ನು ನೆನೆದು ಬಿಕ್ಕಿ-ಬಿಕ್ಕಿ ಅಳುತ್ತಾ ಹೇಳತೊಡಗಿದನು :

“ಯಾವನ ಯುದ್ಧಕೌಶಲ್ಯವನ್ನು ದೇವತೆಗಳೂ ತಲೆದೂಗಿ ಹೊಗಳುವರೋ–ಆ ಪಾರ್ಥನಿಲ್ಲದ ಈ ಕಾಮ್ಯಕವನದಲ್ಲಿ ನಾವು ಯಾವ ವಿಧವಾದ ಸುಖವನ್ನು ತಾನೇ ಅನುಭವಿಸಿಯೇವು? ಯಾವ ಪಾರ್ಥನು ಉತ್ತರದಿಕ್ಕಿಗೆ ಹೋಗಿ ನೂರಾರು ಗಂಧರ್ವನಾಯಕರನ್ನು ಯುದ್ಧದಲ್ಲಿ ಪರಾಜಯಗೊಳಿಸಿದನೋ ಮತ್ತು ಅವರಿಂದ ತಿತ್ತಿರಿ-ಕಲ್ಮಾಷಗಳೆಂಬ ಉತ್ತಮಜಾತಿಯ ವಾಯುವೇಗವುಳ್ಳ ಕುದುರೆಗಳನ್ನು ಪಡೆದು ಅವುಗಳೆಲ್ಲವನ್ನೂ ನಮ್ಮಣ್ಣನು ಮಾಡಿದ ರಾಜಸೂಯಯಾಗದ ಸಮಯದಲ್ಲಿ ಭ್ರಾತೃಪ್ರೇಮದಿಂದ ಪಾರಿತೋಷಿಕರೂಪವಾಗಿ ಧರ್ಮಜನಿಗೆ ಕೊಟ್ಟನೋ, ಯಾವನು ಭೀಮಾವರಜನೋ, ಯಾವನು ದೇವತೆಗಳಿಗೆ ಸಮಾನನೆನಿಸಿರುವನೋ–ಅಂತಹ ಮಹಾತ್ಮನಾದ ಪಾರ್ಥನಿಲ್ಲದ ಈ ಕಾಮ್ಯಕವನದಲ್ಲಿ ನಾನು ಇರಲು ಇಷ್ಟಪಡುವುದಿಲ್ಲ.”

ನಕುಲನು ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿದನಂತರ ಸಹದೇವನು ಹೇಳಿದನು :

“ಅಣ್ಣ! ಯಾವನು ರಾಜಸೂಯಯಾಗದ ಸಮಯದಲ್ಲಿ ವಿಶ್ವ

ಪರ್ಯಟನಮಾಡಿ ಅನೇಕರಾಜರನ್ನು ಗೆದ್ದು ಹೇರಳವಾದ ಕಪ್ಪ-ಕಾಣಿಕೆ ಗಳನ್ನೂ ದಾಸಿಯರನ್ನೂ ತಂದು ನಿನಗೊಪ್ಪಿಸಿದನೋ, ಯಾವನು ಏಕಾಕಿ ಯಾಗಿ ಯಾದವರೆಲ್ಲರನ್ನೂ ಯುದ್ಧದಲ್ಲಿ ಎದುರಿಸಿ ಅವರನ್ನು ಪರಾಭವ ಗೊಳಿಸಿ ಕೃಷ್ಣನ ಅನುಮತಿಯನ್ನು ಪಡೆದು ಸುಭದ್ರೆಯನ್ನು ಕರೆತಂದನೋ ಮತ್ತು ಯಾವನು ಗುರುಗಳ ಆದೇಶದಂತೆ ಮಹಾತ್ಮನಾದ ದ್ರುಪದನ ಪಟ್ಟಣಕ್ಕೆ ಮುತ್ತಿಗೆಹಾಕಿ, ಯುದ್ಧಸನ್ನದ್ಧನಾಗಿ ಬಂದ ದ್ರುಪದನನ್ನು ತನ್ನ ಭುಜಬಲ-ಪರಾಕ್ರಮಗಳಿಂದ ಸೆರೆಹಿಡಿದು ಗುರುಗಳಾದ ದ್ರೋಣರಿಗೊಪ್ಪಿಸಿ ದನೋ–ಅಂತಹ ಪಾರ್ಥನ ಈ ಹುಲ್ಲಿನ ಹಾಸಿಗೆಯು ಶೂನ್ಯವಾಗಿರು ವುದನ್ನು ನೋಡುತ್ತಿದ್ದಂತೆಲ್ಲಾ ನನ್ನ ದುಃಖವು ಇಮ್ಮಡಿಯಾಗುತ್ತದೆ. ನನ್ನ ಹೃದಯದ ದುಗುಡವು ಶಾಂತವಾಗುವುದೇ ಇಲ್ಲ. ಆದುದರಿಂದ ಈ ಕಾಮ್ಯಕವನದಿಂದ ಹೊರಟುಹೋಗುವುದೇ ನಮಗೆ ಸೂಕ್ತವಾಗಿ ಕಾಣುತ್ತದೆ. ನಾವು ಇಲ್ಲಿಯೇ ಇನ್ನು ಮುಂದೆಯೂ ಇದ್ದರೆ ಈ ಕಾಮ್ಯಕವನವು ನಮಗೆ ಖಂಡಿತವಾಗಿಯೂ ಸಂತಸವನ್ನುಂಟುಮಾಡುವುದಿಲ್ಲ.”

ೞ೦ನೆಯ ಅಧ್ಯಾಯವು ಮುಗಿಯಿತು.

ೞ೧ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಯುಧಿಷ್ಠಿರನ ಬಳಿಗೆ ನಾರದರ ಆಗಮನ: ತೀರ್ಥಯಾತ್ರೆಯ ಪ್ರಸ್ತಾಪದಲ್ಲಿ ನಾರದರಿಂದ ಭೀಷ್ಮ-ಪುಲಸ್ತ್ಯರ ಸಂವಾದಕಥನ

ಪಾರಿಕ್ಷಿತ! ಧನಂಜಯನಿಲ್ಲದಿದ್ದುದರಿಂದ ಬಹಳವಾಗಿ ಕಳವಳ ಗೊಂಡು ದುಃಖಿಸುತ್ತಾ ತಮ್ಮ-ತಮ್ಮ ಮನೋಗತವಾದ ಅಭಿಪ್ರಾಯಗಳನ್ನು ಹೇಳಿದ ದ್ರೌಪದೀ-ಭೀಮಸೇನ-ನಕುಲ-ಸಹದೇವರ ಮಾತುಗಳನ್ನು ಕೇಳಿ ಧರ್ಮಜನೂ ಬಹಳ ಖಿನ್ನನಾದನು. ಆ ಸಮಯಕ್ಕೆ ಸರಿಯಾಗಿ ಬ್ರಹ್ಮ ತೇಜಸ್ಸಿನಿಂದ ಕಂಗೊಳಿಸುತ್ತಿದ್ದ, ಸಾಕ್ಷಾತ್ ಯಜ್ಞೇಶ್ವರನಂತೆಯೇ ಜಾಜ್ವಲ್ಯ ಮಾನವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ, ದೇವರ್ಷಿಗಳಾದ ನಾರದರನ್ನು ನೋಡಿದನು. ನಾರದರು ಬರುತ್ತಿರುವುದನ್ನು ಕಂಡೊಡನೆಯೇ ತನ್ನ ಅನುಜರಿಂದೊಡಗೂಡಿ ಅವರಿಗೆದುರಾಗಿ ಹೋಗಿ ಮಹರ್ಷಿಗಳಿಗೆ ಆದರದ

ಸ್ವಾಗತವನ್ನಿತ್ತು, ಆಶ್ರಮಕ್ಕೆ ಕರೆತಂದು ಯಥೋಚಿತವಾಗಿ ಉಪಚರಿಸಿದನು. ನಾರದಮಹರ್ಷಿಗಳು ಕುಳಿತುಕೊಂಡನಂತರ–ದೇವತೆಗಳಿಂದ ಪರಿವೃತ ನಾದ ದೇವೇಂದ್ರನು ಪ್ರಕಾಶಿಸುವಂತೆ–ತಮ್ಮಂದಿರಿಂದೊಡಗೂಡಿ ವಿರಾಜಿ ಸುತ್ತಿದ್ದ ಧರ್ಮಜನು ಮಹರ್ಷಿಗಳ ಅನುಮತಿಯನ್ನು ಪಡೆದು ಕುಳಿತು



ಕೊಂಡನು. ವೇದಾಭಿಮಾನೀದೇವತೆಯಾದ ಸಾವಿತ್ರಿಯು ಹೇಗೆ ವೇದ ಗಳಿಂದ ಪ್ರತ್ಯೇಕವಾಗಿರದೆ ಕೂಡಿಯೇ ಇರುವುದೋ, ಮೇರುಪರ್ವತವನ್ನು ಸೂರ್ಯಪ್ರಭೆಯು ಹೇಗೆ ಅನುಸರಿಸುತ್ತದೆಯೋ–ಅದೇ ರೀತಿಯಲ್ಲಿ, ಅದೇ ಧರ್ಮವನ್ನು ಅನುಸರಿಸಿ ಪತಿವ್ರತಾಪರಾಯಣೆಯಾದ ದ್ರೌಪದಿಯು ಪಾಂಡವ ರೊಡನೆ ಕುಳಿತಿದ್ದಳು. ಧರ್ಮಜನಿತ್ತ ಆದರದ ಆತಿಥ್ಯವನ್ನು ಸ್ವೀಕರಿಸಿದ

ನಂತರ ನಾರದಮಹರ್ಷಿಗಳು ಅನೇಕ ಸವಿಮಾತುಗಳಿಂದ ಧರ್ಮಜನನ್ನು ಸಂತೈಸಿ ಹೀಗೆಂದರು :

"ಧರ್ಮಾತ್ಮರಲ್ಲಿ ಶ್ರೇಷ್ಠನೇ! ಈಗಿನ ನಿನ್ನ ಅಪೇಕ್ಷೆಯೇನು? ನಾನು ನಿನಗಾಗಿ ಏನು ಮಾಡಲಿ? ನಿಸ್ಸಂಕೋಚವಾಗಿ ಹೇಳು."

ಧರ್ಮಜನು ದೇವಸಂಪೂಜ್ಯರಾದ ನಾರದರಿಗೆ ಅನುಜರೊಡನೆ ಪುನಃ ನಮಸ್ಕರಿಸಿ ಎರಡು ಕೈಗಳನ್ನು ಜೋಡಿಸಿಕೊಂಡು ನಾರದರನ್ನು ಕುರಿತು ಹೇಳಿದನು :

"ನಾರದರೇ! ಸರ್ವಲೋಕನಮಸ್ಕೃತರಾದ ನೀವು ತೃಪ್ತರಾದರೆ ನಿಮ್ಮ ಅನುಗ್ರಹದಿಂದಾಗಿ ನನ್ನ ಸಕಲೇಷ್ಟಾರ್ಥಗಳೂ ಪೂರ್ಣವಾದಂತೆಯೇ ಸರಿ. ಅನುಜರಿಂದೊಡಗೂಡಿರುವ ನನ್ನನ್ನು ತಾವು ಅನುಗ್ರಹಿಸಲಿಚ್ಛಿಸುವಿರಾದರೆ, ನಾನು ತಮ್ಮ ಪ್ರೀತಿಗೆ ಪಾತ್ರನಾಗಿರುವೆನಾದರೆ–ನನಗುಂಟಾಗಿರುವ ಒಂದು ಸಂದೇಹವನ್ನು ನಿವಾರಣೆಮಾಡಲು ತಾವು ಅರ್ಹರಾಗಿರುತ್ತೀರಿ. ಈ ಪೃಥ್ವಿಯಲ್ಲಿರುವ ಪುಣ್ಯಕ್ಷೇತ್ರಗಳನ್ನೂ, ಪುಣ್ಯತೀರ್ಥಗಳನ್ನೂ ಏಕೆ ಸಂದರ್ಶಿಸಬೇಕು? ಅದರಿಂದ ಪ್ರಾಪ್ತವಾಗುವ ಫಲವೇನು?–ಈ ವಿಷಯವನ್ನು ನನಗೆ ದಯೆಯಿಟ್ಟು ವಿವರವಾಗಿ ಹೇಳಿರಿ."

ನಾರದರು ಹೇಳುತ್ತಾರೆ :

"ಮಹಾರಾಜ! ಇದೇ ವಿಷಯವಾಗಿ ಮಹಾಬುದ್ಧಿಶಾಲಿಯಾದ ಭೀಷ್ಮನು ಪುಲಸ್ತ್ಯಮಹರ್ಷಿಗಳಿಂದ ತಿಳಿದುಕೊಂಡ ವಿಷಯವನ್ನು ವಿವರಿಸಿ ಹೇಳುತ್ತೇನೆ. ನೀನೂ ಕೇಳುವವನಾಗು. ಕೆಲವು ಕಾಲದ ಹಿಂದೆ ಗಂಗೆಯ ಜನ್ಮಸ್ಥಳವಾದ ಹಿಮವತ್ಪರ್ವತದಲ್ಲಿ ಮಹಾತ್ಮನಾದ ಭೀಷ್ಮನು ಅನೇಕ ಋಷಿ-ಮಹರ್ಷಿಗಳೊಡನೆ ಪಿತೃಕರ್ಮಾಂಗವಾದ ನಿಯಮಾನುಷ್ಠಾನಗಳಲ್ಲಿ ತತ್ಪರನಾಗಿ ವಾಸಿಸುತ್ತಿದ್ದನು. ಗಂಗೆಯ ಉಗಮಸ್ಥಾನವಾದ ಆ ಪವಿತ್ರ ಭೂಮಿಯು ದೇವ-ಗಂಧರ್ವರಿಂದಲೂ, ಅನೇಕ ಋಷಿ-ಮಹರ್ಷಿಗಳಿಂದಲೂ ಸಂಸೇವ್ಯಮಾನವಾಗಿದ್ದಿತು. ಮಹಾತ್ಮನಾದ ಭೀಷ್ಮನು ವಿಧ್ಯುಕ್ತವಾದ ವ್ರತನಿಯಮಾನುಷ್ಠಾನಗಳಿಂದ ಪಿತೃದೇವತೆಗಳನ್ನೂ–ದೇವತೆಗಳನ್ನೂ ಮತ್ತು ಋಷಿತರ್ಪಣದಿಂದ ಋಷಿಗಳನ್ನೂ ಸಂತೃಪ್ತಿಗೊಳಿಸಿದನು.

ಆ ಸಮಯದಲ್ಲೊಂದು ದಿನ ಮಹಾತ್ಮನಾದ ಭೀಷ್ಮನು ಮೌನಿಯಾಗಿ ಕುಳಿತು ಜಪಮಾಡುತ್ತಿದ್ದಾಗ ಅದ್ಭುತದರ್ಶನರಾದ ಪುಲಸ್ತ್ಯಮಹರ್ಷಿಗಳು ಅಲ್ಲಿಗೆ ಬಂದರು. ಉಗ್ರತಪಸ್ಕರಾದ, ದೇದೀಪ್ಯಮಾನವಾದ ತೇಜಸ್ಸಿನಿಂದ ಕೂಡಿದ್ದ ಪುಲಸ್ತ್ಯಮಹರ್ಷಿಗಳನ್ನು ಕಂಡು ಮಹಾತ್ಮನಾದ ಭೀಷ್ಮನು ಆಶ್ಚರ್ಯಚಕಿತನೂ, ಆನಂದಪರವಶನೂ ಆದನು. ಒಡನೆಯೇ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಭೀಷ್ಮನು ಪ್ರತ್ಯುತ್ಥಾನಮಾಡಿ ಆಗಮಿಸಿದ ಮಹರ್ಷಿಗಳನ್ನು ಯಥಾವಿಧಿಯಾಗಿ ಸತ್ಕರಿಸಿದನು. ಅವರನ್ನು ಉಚಿತಾಸನದಲ್ಲಿ ಕುಳ್ಳಿರಿಸಿ, ತಾನೂ ಪರಿಶುದ್ಧನಾಗಿ, ಏಕಾಗ್ರಚಿತ್ತನಾಗಿ, ಅರ್ಘ್ಯಪಾತ್ರೆಯನ್ನು ತಲೆಯ ಮೇಲಿಟ್ಟುಕೊಂಡು 'ಭೀಷ್ಮನಾಮಾಹಂ' ಎಂದು ತನ್ನ ನಾಮಧೇಯವನ್ನು ಗಟ್ಟಿಯಾಗಿ ಹೇಳುತ್ತಾ ಪುಲಸ್ತ್ಯಮಹರ್ಷಿಗಳನ್ನು ಕುರಿತು ಹೇಳಿದನು : "ಸುವ್ರತರೇ! ನನ್ನನ್ನು ಭೀಷ್ಮನೆಂದು ಕರೆಯುತ್ತಾರೆ. ನಾನು ನಿಮ್ಮ ದಾಸನಾಗಿದ್ದೇನೆ. ತಮ್ಮ ದರ್ಶನಮಾತ್ರದಿಂದಲೇ ನಾನು ಸಕಲಪಾಪಗಳಿಂದಲೂ ವಿಮುಕ್ತನಾಗಿದ್ದೇನೆ"–ಹೀಗೆಂದು ಹೇಳಿ ಭೀಷ್ಮನು ಶುಚಿಯಾಗಿ, ಪವಿತ್ರಮನಸ್ಕನಾಗಿ, ತಲೆಯಮೇಲೆ ಪೂಜಾವಸ್ತುಗಳಿರುವ ಪಾತ್ರೆಯನ್ನು ಇಟ್ಟುಕೊಂಡು ಪುಲಸ್ತ್ಯಮುನಿಗಳನ್ನು ಸ್ವಾಗತಿಸಿ, ಪೀಠದಲ್ಲಿ ಕುಳ್ಳಿರಿಸಿ, ಯಥಾವಿಧಿಯಾಗಿ ಪೂಜಿಸಿದನು. ಕುರುವಂಶಪ್ರದೀಪನಾದ, ಉಗ್ರತಪಸ್ಯೆಯಿಂದಲೂ, ವೇದಾಭ್ಯಾಸದಿಂದಲೂ ಅತ್ಯಂತಕೃಶನಾಗಿರುವ ಭೀಷ್ಮನನ್ನು ನೋಡಿ ಮಹರ್ಷಿಗಳಾದ ಪುಲಸ್ತ್ಯರಿಗೆ ಅಮಿತಾನಂದವಾಯಿತು.

ಲಗನೆಯ ಅಧ್ಯಾಯವು ಮುಗಿಯಿತು.

ಲ೨ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಭೀಷ್ಮನ ಕೋರಿಕೆಯಂತೆ ಪುಲಸ್ತ್ಯರು ನಾನಾತೀರ್ಥಗಳ ಮಾಹಾತ್ಮ್ಯವನ್ನು ವಿವರಿಸಿ ಹೇಳಿದುದು

ಯುಧಿಷ್ಠಿರ! ವಿನಯಶೀಲನಾದ ಭೀಷ್ಮನನ್ನು ನೋಡಿ ಸಂತುಷ್ಟರಾದ ಪುಲಸ್ತ್ಯರು ಹೇಳಿದರು :

“ಸುವ್ರತನೇ! ಭೀಷ್ಮ! ನಾನು ನಿನ್ನ ವಿನಯ, ಜಿತೇಂದ್ರಿಯತೆ, ಸತ್ಯಸಂಧತೆ–ಇವುಗಳನ್ನು ನೋಡಿ ಸಂತುಷ್ಟನಾಗಿದ್ದೇನೆ. ನೀನು ಧರ್ಮಿಷ್ಠನಾಗಿರುವುದರಿಂದಲೂ ಮತ್ತು ಪಿತೃಭಕ್ತಿಪರಾಯಣನಾಗಿರುವುದರಿಂದಲೂ ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿದ್ದೇನೆ. ನಿನ್ನಲ್ಲಿ ಇಂತಹ ಅಸಾಧಾರಣವಾದ ಧರ್ಮವಿರುವುದರಿಂದಲೇ ನೀನು ನನ್ನನ್ನು ಕಾಣಲು ಸಮರ್ಥನಾದೆ. ಭೀಷ್ಮ! ನನ್ನ ಅಂತಶ್ಚಕ್ಷುಸ್ಸಿನಿಂದ ನಾನು ಸ್ವರ್ಗ-ಮರ್ತ್ಯಲೋಕ-ಪಾತಾಳಗಳಲ್ಲಿ ನಡೆಯುವ ಸಕಲವಿಷಯಗಳನ್ನೂ ಇಲ್ಲಿಯೇ ಕುಳಿತು ನೋಡುವ ಸಾಮರ್ಥ್ಯವನ್ನು ಪಡೆದಿರುತ್ತೇನೆ. ನನ್ನ ದರ್ಶನವು ವ್ಯರ್ಥವಾಗುವುದಿಲ್ಲ. ನಾನು ನಿನಗೇನು ಮಾಡಿಕೊಡಲಿ? ನಿಷ್ಕಳಂಕನೇ! ಕುರುಕುಲಪ್ರದೀಪನೇ! ನೀನೇನನ್ನು ಕೇಳಿದರೂ ನಾನು ಅನುಗ್ರಹಿಸಲು ಸಿದ್ಧನಿದ್ದೇನೆ.”

“ಮಹಾಭಾಗರೇ! ತ್ರಿಲೋಕಪೂಜಿತರಾದ ನೀವು ನನ್ನ ವಿಷಯದಲ್ಲಿ ಸುಪ್ರೀತರಾಗಿರುವಾಗ ಮತ್ತು ನಿಮ್ಮ ದರ್ಶನಲಾಭವು ನನಗೆ ಸಿಕ್ಕಿರುವಾಗ ನಾನು ಕೃತಕೃತ್ಯನಾದೆನೆಂದೇ ಭಾವಿಸಿದ್ದೇನೆ. ಧಾರ್ಮಿಕರಲ್ಲಿ ಅಗ್ರಗಣ್ಯರೇ! ನಾನು ನಿಶ್ಚಯವಾಗಿಯೂ ನಿಮ್ಮ ಅನುಗ್ರಹಕ್ಕೆ ಪಾತ್ರನಾಗಿರುವೆನಾದರೆ ನನಗುಂಟಾಗಿರುವ ಕೆಲವು ಸಂದೇಹಗಳನ್ನು ನಿಮ್ಮ ಮುಂದಿಡುತ್ತೇನೆ. ನೀವು ದಯಮಾಡಿ ನನ್ನ ಸಂದೇಹಗಳನ್ನು ನಿವಾರಣೆಮಾಡಬೇಕಾಗಿ ಕೇಳಿಕೊಳ್ಳುತ್ತೇನೆ. ಮಹಾನುಭಾವರೇ! ನನಗೆ ಈ ಪೃಥ್ವಿಯಲ್ಲಿರುವ ತೀರ್ಥಗಳ ವಿಷಯವಾಗಿ ಧರ್ಮಸಂಶಯವುಂಟಾಗಿದೆ. ಆ ತೀರ್ಥಗಳ ವಿಷಯವಾಗಿ ಕೇಳಿ ತಿಳಿದುಕೊಳ್ಳಬೇಕೆಂಬ ಆಶಯದಿಂದಿರುತ್ತೇನೆ. ದೇವಸದೃಶರೇ! ವಿಪ್ರರ್ಷಿಗಳೇ! ಈ ಪೃಥ್ವಿಯನ್ನು ಪ್ರದಕ್ಷಿಣೆಮಾಡಿಕೊಂಡು ತೀರ್ಥಗಳನ್ನು ಸಂದರ್ಶಿಸುವವನಿಗೆ ಎಂತಹ ಐಹಿಕ ಮತ್ತು ಆಮುಷ್ಮಿಕಫಲಗಳು ಸಿಕ್ಕುವುವು? ಈ ವಿಷಯದಲ್ಲಿ ನನಗಿರುವ ಸಂದೇಹವನ್ನು ಕೃಪೆಯಿಟ್ಟು ಪೂರ್ಣವಾಗಿ ನಿವಾರಣೆಮಾಡಿರಿ.”

ಭೀಷ್ಮನ ವಿನಯೋಕ್ತಿಯನ್ನು ಕೇಳಿ ಪುಲಸ್ತ್ಯರು ಹೇಳಿದರು :

“ಮಗು! ಋಷಿ-ಮಹರ್ಷಿಗಳಿಗೆ ಆಶ್ರಯಭೂತವಾಗಿರುವ ತೀರ್ಥಗಳನ್ನು ಸಂದರ್ಶಿಸುವುದರಿಂದ ಪ್ರಾಪ್ತವಾಗುವ ಅಸದೃಶವಾದ ಫಲಗಳೇ

ನೆಂಬುದನ್ನು ವಿವರವಾಗಿ ಹೇಳುತ್ತೇನೆ ಮತ್ತು ಮೊದಲು ತೀರ್ಥಯಾತ್ರೆ ಮಾಡಲು ಅರ್ಹರಾರೆಂಬುದನ್ನೂ ಹೇಳುತ್ತೇನೆ. ತದೇಕಚಿತ್ತನಾಗಿ ಕೇಳು :

**ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯತಮ್ ।**
**ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ॥೯॥**

**ಪ್ರತಿಗ್ರಹಾದಪಾವೃತ್ತಃ ಸಂತುಷ್ಟೋ ಯೇನ ಕೇನಚಿತ್ ।**
**ಅಹಂಕಾರನಿವೃತ್ತಶ್ಚ ಸ ತೀರ್ಥಫಲಮಶ್ನುತೇ ॥೧೦॥**

**ಅಕಲ್ಕಕೋ ನಿರಾರಮ್ಭೋ ಲಘ್ವಾಹಾರೋ ಜಿತೇನ್ದ್ರಿಯಃ ।**
**ವಿಮುಕ್ತಃ ಸರ್ವಪಾಪೇಭ್ಯಃ ಸ ತೀರ್ಥಫಲಮಶ್ನುತೇ ॥೧೧॥**

**ಅಕ್ರೋಧನಶ್ಚ ರಾಜೇನ್ದ್ರ ಸತ್ಯಶೀಲೋ ದೃಢವ್ರತಃ ।**
**ಆತ್ಮೋಪಮಶ್ಚ ಭೂತೇಷು ಸ ತೀರ್ಥಫಲಮಶ್ನುತೇ ॥೧೨॥**

ಯಾವನ ಕೈಗಳು, ಕಾಲುಗಳು, ಮನಸ್ಸು, ವಿದ್ಯೆ, ತಪಸ್ಸು, ಕೀರ್ತಿ–ಇವುಗಳು ಸಂಯತವಾಗಿರುವುವೋ–ಅಂತಹವನು ತೀರ್ಥಯಾತ್ರೆಯ ಫಲವನ್ನು ಪಡೆಯುತ್ತಾನೆ. (ಹಸ್ತಸಂಯಮ : ಪ್ರಾಣಿಹಿಂಸೆಮಾಡಲು ಕೈಗಳನ್ನು ಉಪಯೋಗಿಸದಿರುವುದು. ಪಾದಸಂಯಮ : ಪಾಪಭೂಯಿಷ್ಠವಾದ ಸ್ಥಳಗಳಿಗೆ ಹೋಗದಿರುವುದು ಅಥವಾ ಅಪವಿತ್ರವಸ್ತುಗಳನ್ನು ತುಳಿಯದಿರುವುದು. ಮನಸ್ಸಂಯಮ : ದುಷ್ಟವಿಷಯಗಳನ್ನು ಚಿಂತಿಸದಿರುವುದು. ವಿದ್ಯಾಸಂಯಮ : ಪರಮತಖಂಡನೆಗಾಗಲೀ, ಶ್ರುತಿ-ಸ್ಮೃತಿಗಳನ್ನು ಕುತ್ಸಿತರೀತಿಯಲ್ಲಿ ಅರ್ಥಮಾಡುವುದಕ್ಕಾಗಲೀ ವಿದ್ಯೆಯನ್ನು ಉಪಯೋಗಿಸದಿರುವುದು. ತಪಸ್ಸಂಯಮ : ತಪಸ್ಸನ್ನು ಆತ್ಮೋದ್ಧಾರಕ್ಕೆ ಮಾತ್ರವೇ ವಿನಿಯೋಗಿಸುವುದು ; ಶಾಪಾನುಗ್ರಹಗಳಿಗೆ ತಪಃಶಕ್ತಿಯನ್ನು ವ್ಯಯಮಾಡದಿರುವುದು. ಕೀರ್ತಿಸಂಯಮ : ಕೀರ್ತಿಯ ಆಕಾಂಕ್ಷೆಯೇ ಇಲ್ಲದೇ ಕರ್ತವ್ಯದೃಷ್ಟಿಯಿಂದಲೇ ಕಾರ್ಯಮಾಡುವುದು.)

ದಾನವನ್ನು ತೆಗೆದುಕೊಳ್ಳದಿರುವವನು, ತನ್ನ ಅದೃಷ್ಟಾಯತ್ತವಾಗಿ ಸಿಕ್ಕಿದ ವಿತ್ತದಿಂದಲೇ ಸಂತೃಪ್ತಿಪಡುವವನು, ಅಹಂಕಾರಪಡದಿರುವವನು–ಇಂತಹವರು ತೀರ್ಥಯಾತ್ರೆಯ ಫಲವನ್ನು ಪಡೆಯುತ್ತಾರೆ. ದಾಂಭಿಕನಲ್ಲದವನು, ಕಾಮ್ಯಸಂಕಲ್ಪವಿಲದೇ ಕೇವಲ ಕರ್ತವ್ಯಬುದ್ಧಿಯಿಂದ ನಿತ್ಯ-ನೈಮಿತ್ತಿ

ಕಾದಿ ಕರ್ಮಗಳನ್ನು ಮಾಡುವವನು, ಅಲ್ಪಾಹಾರನು, ಜಿತೇಂದ್ರಿಯನಾದವನು, ಪಾಪರಹಿತನಾದವನು–ತೀರ್ಥಯಾತ್ರೆಯ ಫಲವನ್ನು ಪಡೆಯುತ್ತಾನೆ.

ಕೋಪವಿಲ್ಲದವನು, ಸತ್ಯಶೀಲನು, ವ್ರತಾನುಷ್ಠಾನಗಳನ್ನು ನಿಷ್ಠೆಯಿಂದ ಮಾಡುವವನು, ಸಕಲಪ್ರಾಣಿಗಳನ್ನೂ ತನ್ನಂತೆಯೇ ಕಂಡುಕೊಳ್ಳುವವನು–ತೀರ್ಥಯಾತ್ರೆಯ ಫಲವನ್ನು ಪಡೆಯುತ್ತಾನೆ.

ಭೀಷ್ಮ! ಶ್ರುತಿ-ಸ್ಮೃತಿಗಳಲ್ಲಿರುವ ಯಜ್ಞ-ಯಾಗಾದಿಗಳ ಪ್ರಕ್ರಿಯೆಗಳನ್ನೂ ಮತ್ತು ಅವುಗಳನ್ನು ಮಾಡುವುದರಿಂದ ಪಡೆಯಬಹುದಾದ ಐಹಿಕಾಮುಷ್ಮಿಕಫಲಗಳನ್ನೂ ಋಷಿ-ಮಹರ್ಷಿಗಳು ತಮ್ಮ ಜ್ಞಾನಸಂಪತ್ತಿನಿಂದ ಲೋಕಕ್ಕೆ ವಿವರವಾಗಿ ತಿಳಿಯಪಡಿಸಿರುತ್ತಾರೆ. ಆದರೆ ಬಹುದಕ್ಷಿಣಾಕವಾದ ಈ ಯಜ್ಞ-ಯಾಗಾದಿಗಳನ್ನು ಬಡವನಾದವನು ಮಾಡಲಾರನು. ಯಜ್ಞ-ಯಾಗಾದಿಗಳನ್ನು ಮಾಡಲು ಅಪಾರಧನಸಂಪತ್ತುಗಳೂ, ಸಾಮಗ್ರಿಗಳೂ ಬೇಕಾಗುತ್ತವೆ. ಆದುದರಿಂದ ಸಾಮಾನ್ಯವಾಗಿ ಯಜ್ಞ-ಯಾಗಾದಿಗಳನ್ನು ರಾಜರೇ ಮಾಡುತ್ತಾರೆ. ಕೆಲವು ಸಮಯಗಳಲ್ಲಿ ಐಶ್ವರ್ಯವಂತರಾದ ಪ್ರಜೆಗಳೂ ಮಾಡಬಹುದು. ಹಾಗಾದರೆ ಯಜ್ಞ-ಯಾಗಾದಿಗಳಿಂದ ಪ್ರಾಪ್ತವಾಗುವ ಐಹಿಕಾಮುಷ್ಮಿಕಫಲಗಳನ್ನು ನಿರ್ಧನನೂ, ನಿರ್ಮಿತ್ರನೂ, ಅಪತ್ನೀಕನೂ (ಹೆಂಡತಿಯಿಲ್ಲದವನೂ), ಮಕ್ಕಳಿಲ್ಲದವನೂ ಆಗಿರುವವನೊಬ್ಬನು ಪಡೆಯುವುದೆಂತು? (ಯಜ್ಞ-ಯಾಗಾದಿಗಳನ್ನು ಮಾಡಲು ಸಪತ್ನೀಕನಾಗಿರಬೇಕು ; ಪುತ್ರವಂತನಾಗಿಯೂ, ಧನಿಕನಾಗಿಯೂ, ಅನೇಕ ಮಿತ್ರರಿಂದೊಡಗೂಡಿಯೂ ಇರಬೇಕು). ಈ ವಿಷಯವನ್ನೇ ನಾನು ನಿನಗೆ ತಿಳಿಯಪಡಿಸುತ್ತೇನೆ. ಭೀಷ್ಮ! ಋಷಿ-ಮಹರ್ಷಿಗಳ ತಪಸ್ಸಾಧನೆಗೆ ಪರಮ ಗುಹ್ಯಸ್ಥಾನವಾಗಿರುವ ತೀರ್ಥಕ್ಷೇತ್ರಗಳ ಯಾತ್ರೆಮಾಡುವುದು ವಾಜಪೇಯ, ರಾಜಸೂಯ, ಅಶ್ವಮೇಧಾದಿ ಯಜ್ಞಗ್ಗಳನ್ನು ಮಾಡುವುದರಿಂದ ಪ್ರಾಪ್ತವಾಗುವ ಫಲಕ್ಕಿಂತಲೂ ವಿಶೇಷವಾದ ಫಲವನ್ನು ನೀಡುತ್ತದೆ.

**ಅನುಪೋಷ್ಯ ತ್ರಿರಾತ್ರಾಣಿ ತೀರ್ಥಾನ್ಯನಭಿಗಮ್ಯ ಚ ।**
**ಅದತ್ತ್ವಾ ಕಾಞ್ಚನಂ ಗಾಶ್ಚ ದರಿದ್ರೋ ನಾಮ ಜಾಯತೇ ॥೧೮॥**

ತೀರ್ಥಯಾತ್ರೆಯನ್ನೇ ಮಾಡದಿರುವವನೂ, ತೀರ್ಥಕ್ಕೆ ಹೋಗಿಯೂ

ಮೂರು ರಾತ್ರಿಗಳು ಉಪವಾಸದಿಂದಿರದವನೂ, ಸುವರ್ಣವನ್ನೂ ಮತ್ತು ಹಸುಗಳನ್ನೂ ದಾನವಾಗಿ ಕೊಡದಿರುವವನೂ ದರಿದ್ರನಾಗಿ ಹುಟ್ಟುತ್ತಾನೆ.

ಭೀಷ್ಮ! ನಿಶ್ಚಯವಾಗಿ ಹೇಳುವುದಾದರೆ ;

**ಅಗ್ನಿಷ್ಟೋಮಾದಿಭಿರ್ಯಜ್ಞೈರಿಷ್ಟ್ವಾ ವಿಪುಲದಕ್ಷಿಣೈಃ ।**
**ನ ತತ್ಫಲಮವಾಪ್ನೋತಿ ತೀರ್ಥಾಭಿಗಮನೇನ ಯತ್ ॥೧೯॥**

ಬಹುದಕ್ಷಿಣಾಕವಾದ ಅಗ್ನಿಷ್ಟೋಮಾದಿ ಯಾಗಗಳನ್ನು ಮಾಡಿದವನೂ–ತೀರ್ಥಯಾತ್ರೆಯನ್ನು ಮಾಡುವವನು ಗಳಿಸುವಷ್ಟು ಅಪಾರವಾದ ಪುಣ್ಯವನ್ನು ಗಳಿಸಲಾರನು.

ಭೀಷ್ಮ! ಈ ಪೃಥ್ವಿಯಲ್ಲಿ ಪುಣ್ಯತೀರ್ಥಗಳು ಅನೇಕವಿವೆ. ಎಲ್ಲವನ್ನೂ ಅನುಕ್ರಮವಾಗಿ ನಿನಗೆ ತಿಳಿಸುತ್ತೇನೆ.

**ನೃಲೋಕೇ ದೇವದೇವಸ್ಯ ತೀರ್ಥಂ ತ್ರೈಲೋಕ್ಯವಿಶ್ರುತಮ್ ।**
**ಪುಷ್ಕರಂ ನಾಮ ವಿಖ್ಯಾತಂ ಮಹಾಭಾಗಃ ಸಮಾವಿಶೇತ್ ॥೨೦॥**

**ದಶಕೋಟಿಸಹಸ್ರಾಣಿ ತೀರ್ಥಾನಾಂ ವೈ ಮಹಾಮತೇ ।**
**ಸಾಂನಿಧ್ಯಂ ಪುಷ್ಕರೇ ಯೇಷಾಂ ತ್ರಿಸಂಧ್ಯಂ ಕುರುನನ್ದನ ॥೨೧॥**

**ಆದಿತ್ಯಾ ವಸವೋ ರುದ್ರಾಃ ಸಾಧ್ಯಾಶ್ಚ ಸಮರುದ್ಗಣಾಃ ।**
**ಗನ್ಧರ್ವಾಪ್ಸರಸಶ್ಚೈವ ನಿತ್ಯಂ ಸಂನಿಹಿತಾ ವಿಭೋ ॥೨೨॥**

**ಯತ್ರ ದೇವಾಸ್ತಪಸ್ತಪ್ತ್ವಾ ದೈತ್ಯಾ ಬ್ರಹ್ಮರ್ಷಯಸ್ತಥಾ ।**
**ದಿವ್ಯಯೋಗಾ ಮಹಾರಾಜ ಪುಣ್ಯೇನ ಮಹತಾನ್ವಿತಾಃ ॥೨೩॥**

ಕುರುನಂದನನೇ! ಮಾನವಲೋಕದಲ್ಲಿ ದೇವದೇವನಾದ ಬ್ರಹ್ಮನ ತೀರ್ಥವಿದೆ. ಆ ತೀರ್ಥವು ಪುಷ್ಕರವೆಂಬ ಹೆಸರಿನಿಂದ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿದೆ. ಮಹಾಭಾಗ್ಯಶಾಲಿಯು ಮಾತ್ರವೇ ಅಲ್ಲಿಗೆ ಹೋಗಲು ಸಾಧ್ಯವಾಗುವುದು. ಪ್ರಾತಃಸಂಧ್ಯೆ ಮತ್ತು ಸಾಯಂಸಂಧ್ಯೆಗಳಲ್ಲಿಯೂ - ಮಧ್ಯಾಹ್ನದಲ್ಲಿಯೂ ಆ ಪುಷ್ಕರದಲ್ಲಿ ಕೋಟ್ಯನುಕೋಟಿ ತೀರ್ಥಗಳ ಸಾನ್ನಿಧ್ಯವಿರುತ್ತದೆ. ಆದಿತ್ಯರೂ, ವಸುಗಳೂ, ರುದ್ರರೂ,

ಸಾಧ್ಯರೂ, ಮರುತ್ತುಗಳೂ, ಗಂಧರ್ವರೂ ಮತ್ತು ಅಪ್ಸರೆಯರೂ ಪುಷ್ಕರ ತೀರ್ಥದಲ್ಲಿ ಸರ್ವಕಾಲದಲ್ಲಿಯೂ ಉಪಸ್ಥಿತರಾಗಿರುತ್ತಾರೆ. ಆ ದಿವ್ಯ ಪುಷ್ಕರದ ತೀರದಲ್ಲಿಯೇ ಅನೇಕಾನೇಕ ದೇವತೆಗಳೂ, ದೈತ್ಯರೂ, ದಾನವರೂ, ಬ್ರಹ್ಮರ್ಷಿಗಳೂ ಅನೇಕವರ್ಷಗಳ ಪರ್ಯಂತವಾಗಿ ತಪಶ್ಚರ್ಯೆಯಿಂದ ಪುಣ್ಯವನ್ನೂ, ಕಟ್ಟಕಡೆಗೆ ಬ್ರಹ್ಮಸಾಕ್ಷಾತ್ಕಾರವನ್ನೂ ಪಡೆದರು.

**ಮನಸಾಪ್ಯಭಿಕಾಮಸ್ಯ ಪುಷ್ಕರಾಣಿ ಮನಸ್ವಿನಃ ।**
**ಪೂಯನ್ತೇ ಸರ್ವಪಾಪಾನಿ ನಾಕಪೃಷ್ಠೇ ಚ ಪೂಜ್ಯತೇ ॥೨೪॥**

**ತಸ್ಮಿಂಸ್ತೀರ್ಥೇ ಮಹಾರಾಜ ನಿತ್ಯಮೇವ ಪಿತಾಮಹಃ ।**
**ಉವಾಸ ಪರಮಪ್ರೀತೋ ಭಗವಾನ್ಕಮಲಾಸನಃ ॥೨೫॥**

ಸತ್ಯವ್ರತನೇ! ಪುಷ್ಕರತೀರ್ಥದ ಮಹಿಮೆಯನ್ನು ನಾನು ಎಷ್ಟೆಂದು ವರ್ಣಿಸಲಿ! ಜಿತೇಂದ್ರಿಯರಾದವರು ಏಕಾಗ್ರಚಿತ್ತದಿಂದ ಎಲ್ಲಿಯೋ ಇದ್ದು ಒಮ್ಮೆ ಪುಷ್ಕರವನ್ನು ಸ್ಮರಿಸಿದರೂ ಪಾಪಗಳಿಂದ ವಿಮುಕ್ತರಾಗುತ್ತಾರೆ ಮತ್ತು ಸ್ವರ್ಗಲೋಕದಲ್ಲಿ ಮಾನ್ಯತೆಯನ್ನೂ ಪಡೆಯುತ್ತಾರೆ. ಪದ್ಮಾಸನನಾದ ಚತುರ್ಮುಖನೂ ಪುಷ್ಕರತೀರ್ಥಕ್ಕೆ ಬಂದು ಆ ತೀರ್ಥದಲ್ಲಿ ವಿಧಿಪೂರ್ವಕವಾಗಿ ಮಿಂದು ಅಮಿತಾನಂದವನ್ನು ಪಡೆದು ಅನೇಕದಿನಗಳವರೆಗೆ ಅಲ್ಲಿಯೇ ವಾಸವಾಗಿದ್ದನು.

**ಪುಷ್ಕರೇಷು ಮಹಾಭಾಗ ದೇವಾಃ ಸರ್ಷಿಗಣಾಃ ಪುರಾ ।**
**ಸಿದ್ಧಿಂ ಸಮಭಿಸಮ್ಪ್ರಾಪ್ತಾಃ ಪುಣ್ಯೇನ ಮಹತಾನ್ವಿತಾಃ ॥೨೬॥**

**ತತ್ರಾಭಿಷೇಕಂ ಯಃ ಕುರ್ಯಾತ್ಪಿತೃದೇವಾರ್ಚನೇ ರತಃ ।**
**ಅಶ್ವಮೇಧಾದ್ದಶಗುಣಂ ಫಲಂ ಪ್ರಾಹುರ್ಮನೀಷಿಣಃ ॥೨೭॥**

ಮಹಾಭಾಗನೇ! ಆ ಪುಷ್ಕರದಲ್ಲಿಯೇ ಹಿಂದೆ ದೇವತೆಗಳೂ, ಮಹರ್ಷಿಗಳೂ ತಪಸ್ಸುಮಾಡಿ ಸಿದ್ಧಿಯನ್ನು ಪಡೆದು ಮಹಾಪುಣ್ಯಶಾಲಿಗಳಾದರು. ಪಿತೃದೇವತೆಗಳನ್ನೂ–ದೇವತೆಗಳನ್ನೂ ಅರ್ಚಿಸಲು ಸಂಕಲ್ಪಿಸಿ ಆ ಪುಷ್ಕರದಲ್ಲಿ ಸ್ನಾನಮಾಡಿ ಯಾವನು ಪಿತೃತರ್ಪಣವನ್ನೂ-ದೇವಾರ್ಚನೆಯನ್ನೂ ಮಾಡು

ವನೋ ಅವನಿಗೆ ಅಶ್ವಮೇಧಯಾಗಮಾಡುವುದರಿಂದ ಪ್ರಾಪ್ತವಾಗುವ ಫಲಕ್ಕಿಂತಲೂ ಹತ್ತುಪಾಲು ಹೆಚ್ಚಿನ ಫಲವು ಪ್ರಾಪ್ತವಾಗುವುದೆಂದು ವಿದ್ವಾಂಸರು ಹೇಳುತ್ತಾರೆ.

**ಅಪ್ಯೇಕಂ ಭೋಜಯೇದ್ವಿಪ್ರಂ ಪುಷ್ಕರಾರಣ್ಯಮಾಶ್ರಿತಃ ।**
**ತೇನಾಸೌ ಕರ್ಮಣಾ ಭೀಷ್ಮ ಪ್ರೇತ್ಯ ಚೇಹ ಚ ಮೋದತೇ ॥೨೮॥**

ಭೀಷ್ಮ! ಆ ಪುಷ್ಕರಾರಣ್ಯಕ್ಕೆ ಯಾತ್ರೆಹೋಗಿ, ಅಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿ, ಅನಂತರದಲ್ಲಿ ಒಬ್ಬ ಬ್ರಾಹ್ಮಣನಿಗೆ ಅನ್ನದಾನಮಾಡಿದರೂ–ಅವನು ಇಹದಲ್ಲಿಯೂ, ಪರದಲ್ಲಿಯೂ ಸುಖಪಡುತ್ತಾನೆ. ಭೋಜನವೆಂದರೆ ಪಂಚಭಕ್ಷ್ಯಭೋಜನವನ್ನೇನೂ ಮಾಡಿಸಬೇಕಾಗಿಲ್ಲ.

**ಶಾಕೈರ್ಮೂಲೈಃ ಫಲೈರ್ವಾಪಿ ಯೇನ ವರ್ತಯತೇ ಸ್ವಯಮ್ ।**
**ತದ್ವೈ ದದ್ಯಾದ್ಬ್ರಾಹ್ಮಣಾಯ ಶ್ರದ್ಧಾವಾನನಸೂಯಕಃ ।**
**ತೇನೈವ ಪ್ರಾಪ್ನುಯಾತ್ಪ್ರಾಜ್ಞೋ ಹಯಮೇಧಫಲಂ ನರಃ ॥೨೯॥**

ತಾನು ತಿನ್ನುವ ಕಂದ-ಮೂಲ-ಫಲಗಳನ್ನೇ ಬ್ರಾಹ್ಮಣನೊಬ್ಬನಿಗೆ ಭಕ್ತಿ-ಶ್ರದ್ಧಾಪೂರ್ವಕವಾಗಿ ಅರ್ಪಿಸಿದರೂ ಅವನು ಆ ಅತ್ಯಲ್ಪವಾದ ದಾನದಿಂದಲೇ ಅಶ್ವಮೇಧಯಾಗವನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ವಾ ರಾಜಸತ್ತಮ ।**
**ನ ವೈ ಯೋನೌ ಪ್ರಜಾಯನ್ತೇ ಸ್ನಾತಾಸ್ತೀರ್ಥೇ ಮಹಾತ್ಮನಃ ॥೩೦॥**

ಗಾಂಗೇಯನೇ! ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಾಗಲೀ–ಶ್ರದ್ಧೆಯಿಂದ ಮತ್ತು ಭಕ್ತಿಯಿಂದ ನಿಯಮಾನುಷ್ಠಾನದಿಂದಿದ್ದು ಮಹಾತ್ಮನಾದ ಬ್ರಹ್ಮನ ಆ ತೀರ್ಥದಲ್ಲಿ ಸ್ನಾನಮಾಡಿದಲ್ಲಿ ಅಂತಹವರಿಗೆ ಪುನರ್ಜನ್ಮದ ಭಯವು ತಪ್ಪುವುದು. ಅವರು ಬ್ರಹ್ಮಸಾಯುಜ್ಯವನ್ನೇ ಪಡೆಯುವರು.

**ಕಾರ್ತಿಕೀಂ ತು ವಿಶೇಷೇಣ ಯೋಽಭಿಗಚ್ಛತಿ ಪುಷ್ಕರಮ್ ।**
**ಪ್ರಾಪ್ನುಯಾತ್ಸ ನರೋ ಲೋಕಾನ್ಬ್ರಹ್ಮಣಃ ಸದನೇಽಕ್ಷಯಾನ್ ॥೩೧॥**

ಭೀಷ್ಮ! ಕಾರ್ತಿಕಮಾಸದ ಹುಣ್ಣಿಮೆಯ ದಿನ ಪುಷ್ಕರದಲ್ಲಿ ಸ್ನಾನ ಮಾಡುವುದು ಬಹುಪುಣ್ಯಪ್ರದವಾದುದೆಂದು ಜ್ಞಾನಿಗಳಾದವರು ಹೇಳುತ್ತಾರೆ.

ಕಾರ್ತಿಕಶುದ್ಧ ಹುಣ್ಣಿಮೆಯ ದಿನ ಪುಷ್ಕರದಲ್ಲಿ ಸ್ನಾನಮಾಡಿದವನು ಬ್ರಹ್ಮ ಲೋಕದಲ್ಲಿ ಚಿರಕಾಲವಿರುತ್ತಾನೆ.

**ಸಾಯಂ ಪ್ರಾತಃ ಸ್ಮರೇದ್ಯಸ್ತು ಪುಷ್ಕರಾಣಿ ಕೃತಾಞ್ಜಲಿಃ ।**
**ಉಪಸ್ಪೃಷ್ಟಂ ಭವೇತ್ತೇನ ಸರ್ವತೀರ್ಥೇಷು ಭಾರತ ॥೩೨॥**

ಯಾವನು ತನ್ನ ಮನೆಯಲ್ಲಿಯೇ ಇದ್ದರೂ ಸಾಯಂಕಾಲ-ಪ್ರಾತಃ ಕಾಲಗಳಲ್ಲಿ ಕೈಜೋಡಿಸಿ ಏಕಾಗ್ರಚಿತ್ತನಾಗಿ ಪುಷ್ಕರಗಳನ್ನು ಧ್ಯಾನಮಾಡುವನೋ–ಅವನು ನಿಶ್ಚಯವಾಗಿಯೂ ಸಮಸ್ತತೀರ್ಥಗಳಲ್ಲಿಯೂ ಸ್ನಾನ ಮಾಡಿದ ಫಲವನ್ನೇ ಪಡೆಯುತ್ತಾನೆ.

**ಜನ್ಮಪ್ರಭೃತಿ ಯತ್ಪಾಪಂ ಸ್ತ್ರಿಯಾ ವಾ ಪುರುಷೇಣ ವಾ ।**
**ಪುಷ್ಕರೇ ಸ್ನಾತಮಾತ್ರಸ್ಯ ಸರ್ವಮೇವ ಪ್ರಣಶ್ಯತಿ ॥೩೩॥**

ಹೆಂಗಸಾಗಲೀ, ಗಂಡಸಾಗಲೀ–ಪುಷ್ಕರದಲ್ಲಿ ಸ್ನಾನಮಾಡಿದೊಡನೆಯೇ ಹುಟ್ಟಿದ ಮೊದಲ್ಗೊಂಡು ಮಾಡಿರುವ ಸರ್ವಪಾಪಗಳಿಂದಲೂ ವಿಮುಕ್ತರಾಗುತ್ತಾರೆ.

**ಯಥಾ ಸುರಾಣಾಂ ಸರ್ವೇಷಾಮಾದಿಸ್ತು ಮಧುಸೂದನಃ ।**
**ತಥೈವ ಪುಷ್ಕರಂ ರಾಜಂಸ್ತೀರ್ಥಾನಾಮಾದಿರುಚ್ಯತೇ ॥೩೪॥**

ಭೀಷ್ಮ! ಮಧುಸೂದನನು ಹೇಗೆ ದೇವತೆಗಳಲ್ಲಿ ಮೊದಲನೆಯವನಾಗಿರುವನೋ ಇದೇ ರೀತಿಯಲ್ಲಿ ಭೂಲೋಕದಲ್ಲಿರುವ ತೀರ್ಥಗಳಲ್ಲಿ ಪುಷ್ಕರವು ಮೊದಲನೆಯದಾದ ತೀರ್ಥವೆಂದು ಪ್ರಸಿದ್ಧವಾಗಿದೆ.

**ಉಷ್ಟ್ವಾ ದ್ವಾದಶ ವರ್ಷಾಣಿ ಪುಷ್ಕರೇ ನಿಯತಃ ಶುಚಿಃ ।**
**ಕ್ರತೂನ್ಸರ್ವಾನವಾಪ್ನೋತಿ ಬ್ರಹ್ಮಲೋಕಂ ಸ ಗಚ್ಛತಿ ॥೩೫॥**

ಶುಚಿಯಾಗಿ ನಿಯಮಾನುಷ್ಠಾನದಿಂದ ಹನ್ನೆರಡು ವರ್ಷಗಳ ಕಾಲ ಪುಷ್ಕರದ ತೀರದಲ್ಲಿ ವಾಸಮಾಡುವ ಮಾನವನು ವಿಧಿವಿಹಿತವಾದ ಸಕಲ ಯಾಗಗಳನ್ನೂ ಮಾಡಿದ ಮಹಾಪುಣ್ಯವನ್ನು ಪಡೆಯುವುದಲ್ಲದೇ– ಅವಸಾನಾನಂತರದಲ್ಲಿ ಬ್ರಹ್ಮಲೋಕಕ್ಕೂ ಹೋಗುತ್ತಾನೆ.

**ಯಸ್ತು ವರ್ಷಶತಂ ಪೂರ್ಣಮಗ್ನಿಹೋತ್ರಮುಪಾಸತೇ ।**
**ಕಾರ್ತಿಕೀಂ ವಾ ವಸೇದೇಕಾಂ ಪುಷ್ಕರೇ ಸಮಮೇವ ತತ್ ॥೩೬॥**

ಕಾರ್ತಿಕಮಾಸದ ಪೂರ್ಣಿಮೆಯ ಒಂದೇ ದಿನ ಪುಷ್ಕರದ ಸಮೀಪದಲ್ಲಿ ನಿಯಮಾನುಷ್ಠಾನದಿಂದ ವಾಸಮಾಡುವವನಿಗೆ, ನೂರು ವರ್ಷಗಳ ಕಾಲ ಅನವರತವಾಗಿ ಅಗ್ನಿಹೋತ್ರಮಾಡುವವನಿಗೆ ಪ್ರಾಪ್ತವಾಗುವ ಫಲವು ಲಭಿಸುತ್ತದೆ.

**ತ್ರೀಣಿ ಶೃಙ್ಗಾಣಿ ಶುಭ್ರಾಣಿ ತ್ರೀಣಿ ಪ್ರಸ್ರವಣಾನಿ ಚ ।**
**ಪುಷ್ಕರಾಣ್ಯಾದಿಸಿದ್ಧಾನಿ ನ ವಿದ್ಮಸ್ತತ್ರ ಕಾರಣಮ್ ॥೩೭॥**

ಶುಭ್ರವಾದ ಮೂರು ಶಿಖರಗಳೂ ಮತ್ತು ಮೂರು ಸರೋವರಗಳೂ ಪುಷ್ಕರಗಳೆಂಬ ಹೆಸರಿನಿಂದ ಪ್ರಸಿದ್ಧಿಹೊಂದಿವೆ. ಇವು ಯಾವಾಗ ಪ್ರಾದುರ್ಭೂತವಾದುವೆಂಬುದನ್ನು ನಾವು ತಿಳಿಯದವರಾಗಿದ್ದೇವೆ. ಇವುಗಳು ಅನಾದಿಕಾಲದಿಂದಲೂ ಇವೆ.

**ದುಷ್ಕರಂ ಪುಷ್ಕರೇ ಗನ್ತುಂ ದುಷ್ಕರಂ ಪುಷ್ಕರೇ ತಪಃ ।**
**ದುಷ್ಕರಂ ಪುಷ್ಕರೇ ದಾನಂ ವಸ್ತುಂ ಚೈವ ಸುದುಷ್ಕರಮ್ ॥೩೮॥**

ಆದರೆ, ಭೀಷ್ಮ! ಸಾಮಾನ್ಯರು ಪುಷ್ಕರಕ್ಕೆ ಹೋಗಲಾರರು. ಸಾಮಾನ್ಯರಾದವರಿಗೆ, ಜಿತೇಂದ್ರಿಯರಲ್ಲದವರಿಗೆ ಪುಷ್ಕರಕ್ಕೆ ಹೋಗುವುದಕ್ಕೆ ಸಾಧ್ಯವಿಲ್ಲ. ವ್ರತ-ನಿಯಮಗಳಿಂದ ಇರುವ (ತಪಸ್ಸುಮಾಡುವ) ಸಾಧ್ಯತೆಯೂ ಇಲ್ಲ ; ಪುಣ್ಯಪ್ರದವಾದ ಪುಷ್ಕರದಲ್ಲಿ ಮನೋನಿಗ್ರಹವಿಲ್ಲ ದವನಿಗೆ ದಾನಮಾಡಲೂ ಸಾಧ್ಯವಿಲ್ಲ ; ವಾಸಮಾಡಲಂತೂ ಸರ್ವಥಾ ಸಾಧ್ಯವಾಗುವುದಿಲ್ಲ.

**ಉಷ್ಯ ದ್ವಾದಶರಾತ್ರಂ ತು ನಿಯತೋ ನಿಯತಾಶನಃ ।**
**ಪ್ರದಕ್ಷಿಣಮುಪಾವೃತ್ಯ ಜಮ್ಬೂಮಾರ್ಗಂ ಸಮಾವಿಶೇತ್ ॥೩೯॥**

ಆ ಪುಷ್ಕರದಲ್ಲಿ ಹನ್ನೆರಡು ದಿವಸಗಳ ಕಾಲ ನಿಯಮವಾದ ವ್ರತಾನುಷ್ಠಾನಗಳಿಂದಿದ್ದು ಅನಂತರದಲ್ಲಿ ಪುಷ್ಕರವನ್ನು ಪ್ರದಕ್ಷಿಣೆಮಾಡಿ ಮುಂದೆ ಜಂಬೂಮಾರ್ಗವೆಂಬ ಪುಣ್ಯಕ್ಷೇತ್ರಕ್ಕೆ ಹೋಗಬೇಕು.

**ಜಮ್ಬೂಮಾರ್ಗಂ ಸಮಾವಿಶ್ಯ ದೇವರ್ಷಿಪಿತೃಸೇವಿತಮ್ ।**
**ಅಶ್ವಮೇಧಮವಾಪ್ನೋತಿ ಸರ್ವಕಾಮಸಮನ್ವಿತಃ ॥೪೦॥**

ದೇವತೆಗಳಿಂದಲೂ, ಋಷಿ-ಮಹರ್ಷಿಗಳಿಂದಲೂ, ಪಿತೃದೇವತೆಗಳಿಂದಲೂ ಆಶ್ರಯಿಸಲ್ಪಟ್ಟಿರುವ ಜಂಬೂಮಾರ್ಗಕ್ಷೇತ್ರದ ಸಂದರ್ಶನದಿಂದ ಅಶ್ವಮೇಧಯಾಗವನ್ನು ಮಾಡಿದ ಫಲವು ಪ್ರಾಪ್ತವಾಗುವುದಲ್ಲದೇ– ಮಾನವನು ತನ್ನ ಸಕಲೇಚ್ಛೆಗಳನ್ನೂ ಪೂರೈಸಿಕೊಳ್ಳುತ್ತಾನೆ.

**ತತ್ರೋಷ್ಯ ರಜನೀಃ ಪಞ್ಚ ಪೂತಾತ್ಮಾ ಜಾಯತೇ ನರಃ ।**
**ನ ದುರ್ಗತಿಮವಾಪ್ನೋತಿ ಸಿದ್ಧಿಂ ಪ್ರಾಪ್ನೋತಿ ಚೋತ್ತಮಾಮ್ ॥**

ಆ ಜಂಬೂಮಾರ್ಗಕ್ಷೇತ್ರದಲ್ಲಿ ಐದು ರಾತ್ರಿಗಳು ನಿಯಮಾನುಷ್ಠಾನದಿಂದ ಇರುವವನು ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಅವನಿಗೆ ನರಕದ ಭಯವಿರುವುದಿಲ್ಲ. ಅವನು ಪೂತಾತ್ಮನಾಗಿ ಸಕಲ ದುಷ್ಟಶಕ್ತಿಗಳನ್ನೂ ಜಯಿಸಲು ಸಮರ್ಥನಾಗುತ್ತಾನೆ.

**ಜಮ್ಬೂಮಾರ್ಗಾದುಪಾವೃತ್ಯ ಗಚ್ಛೇತ್ತನ್ದುಲಿಕಾಶ್ರಮಮ್ ।**
**ನ ದುರ್ಗತಿಮವಾಪ್ನೋತಿ ಬ್ರಹ್ಮಲೋಕಂ ಚ ಗಚ್ಛತಿ ॥೪೨॥**

ಜಂಬೂಮಾರ್ಗವನ್ನು ಸಂದರ್ಶಿಸಿದನಂತರ ಯಾತ್ರಾರ್ಥಿಯು ತಂದುಲಿಕಾಶ್ರಮಕ್ಕೆ ಹೋಗಬೇಕು. ತಂದುಲಿಕಾಶ್ರಮವನ್ನು ಸಂದರ್ಶಿಸಿದವನಿಗೆ ದುರ್ಗತಿಯೇ ಇಲ್ಲ. ಅವನು ಬ್ರಹ್ಮಸಾಯುಜ್ಯವನ್ನೇ ಪಡೆಯುತ್ತಾನೆ.

**ಆಗಸ್ತ್ಯಂ ಸರ ಆಸಾದ್ಯ ಪಿತೃದೇವಾರ್ಚನೇ ರತಃ ।**
**ತ್ರಿರಾತ್ರೋಪೋಷಿತೋ ರಾಜನ್ನಗ್ನಿಷ್ಟೋಮಫಲಂ ಲಭೇತ್ ॥೪೩॥**

ತಂದುಲಿಕಾಶ್ರಮದಿಂದ ಮುಂದೆ ಯಾತ್ರಾರ್ಥಿಯು ಅಗಸ್ತ್ಯಸರೋವರಕ್ಕೆ ಹೋಗಬೇಕು. ಪವಿತ್ರವಾದ ಆ ಅಗಸ್ತ್ಯಸರೋವರದಲ್ಲಿ ಮಿಂದು, ಮೂರು ರಾತ್ರಿಗಳು ನಿಯಮವ್ರತದಿಂದಲೂ–ಉಪವಾಸದಿಂದಲೂ ಇದ್ದು ಪಿತೃಗಳನ್ನೂ ದೇವತೆಗಳನ್ನೂ ಅರ್ಚನೆಮಾಡಿದರೆ ಅಗ್ನಿಷ್ಟೋಮಯಾಗ ಮಾಡಿದ ಫಲವನ್ನು ಪಡೆಯುತ್ತಾನೆ.

**ಶಾಕವೃತ್ತಿಃ ಫಲೈರ್ವಾಪಿ ಕೌಮಾರಂ ವಿನ್ದತೇ ಪರಮ್ ॥೪೪॥**

ಕೇವಲ ಗೆಡ್ಡೆ-ಗೆಣಸುಗಳನ್ನೂ, ಫಲಗಳನ್ನೂ ತಿಂದುಕೊಂಡು ನಿಯಮದಿಂದ ಇರುವವನು ಉತ್ತಮೋತ್ತಮವಾದ ಕೌಮಾರಲೋಕವನ್ನು (ಷಣ್ಮುಖಲೋಕವನ್ನು ) ಪಡೆಯುತ್ತಾನೆ.

**ಕಣ್ವಾಶ್ರಮಂ ತತೋ ಗಚ್ಛೇಚ್ಛ್ರೀಜುಷ್ಟಂ ಲೋಕಪೂಜಿತಮ್ ॥**

**ಧರ್ಮಾರಣ್ಯಂ ಹಿ ತತ್ಪುಣ್ಯಮಾದ್ಯಂ ಚ ಭರತರ್ಷಭ ।**
**ಯತ್ರ ಪ್ರವಿಷ್ಟಮಾತ್ರೋ ವೈ ಸರ್ವಪಾಪೈಃ ಪ್ರಮುಚ್ಯತೇ ॥೪೬॥**

ಅಗಸ್ತ್ಯತೀರ್ಥದ ಯಾತ್ರೆಯನ್ನು ಮಾಡಿದನಂತರ ಮುಂದೆ ಯಾತ್ರಾರ್ಥಿಯು ಸಕಲಲೋಕಸಂಪೂಜ್ಯವಾದ, ಮಹಾಲಕ್ಷ್ಮಿಯಿಂದ ಸಂಸೇವ್ಯವಾದ ಕಣ್ವಾಶ್ರಮಕ್ಕೆ ಹೋಗಬೇಕು. ಕಣ್ವಾಶ್ರಮವು ಅನಾದಿಯಾದುದು. ಕಣ್ವಮಹರ್ಷಿಗಳ ಸಂಪರ್ಕದಿಂದಾಗಿ ಆ ಆಶ್ರಮವಿರುವ ಅರಣ್ಯಕ್ಕೆ ಧರ್ಮಾರಣ್ಯವೆಂದೇ ಹೆಸರಾಗಿದೆ. ಆ ದಿವ್ಯಾಶ್ರಮವನ್ನು ಪ್ರವೇಶಿಸಿದ ಮಾತ್ರದಿಂದಲೇ ಮಾನವನು ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

**ಅರ್ಚಯಿತ್ವಾ ಪಿತೄನ್ದೇವಾನ್ನಿಯತೋ ನಿಯತಾಶನಃ ।**
**ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ॥೪೭॥**

ಆ ಆಶ್ರಮದಲ್ಲಿ ಆಹಾರನಿಯಮದಿಂದಿದ್ದು, ಜಿತೇಂದ್ರಿಯನಾಗಿ ಪಿತೃದೇವತೆಗಳನ್ನೂ–ದೇವತೆಗಳನ್ನೂ ಅರ್ಚನೆಮಾಡುವವನು, ಯಾವ ಯಜ್ಞವನ್ನು ಮಾಡುವುದರಿಂದ ಸಮಸ್ತವಾದ ತನ್ನ ಇಷ್ಟಾರ್ಥಗಳನ್ನು ಪಡೆಯಲು ಸಮರ್ಥನಾಗುವನೋ ಅಂತಹ ಯಜ್ಞವನ್ನು ಮಾಡಿದ ಫಲ ವನ್ನು ಪಡೆಯುತ್ತಾನೆ. ಅರ್ಥಾತ್ ಆಹಾರನಿಯಮದಿಂದಿದ್ದು ಆ ಕಣ್ವಾಶ್ರಮ ದಲ್ಲಿ ಪಿತೃದೇವತೆಗಳನ್ನೂ, ದೇವತೆಗಳನ್ನೂ ಅರ್ಚನೆಮಾಡುವುದರಿಂದ ಸಕಲವಾದ ಇಷ್ಟಾರ್ಥಗಳನ್ನೂ ಪಡೆಯುತ್ತಾನೆ.

**ಪ್ರದಕ್ಷಿಣಂ ತತಃ ಕೃತ್ವಾ ಯಯಾತಿಪತನಂ ವ್ರಜೇತ್ ।**
**ಹಯಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ತತ್ರ ವೈ ॥೪೮॥**

ಆ ದಿವ್ಯಾಶ್ರಮವನ್ನು ಸಂದರ್ಶಿಸಿ ಪೂರ್ವೋಕ್ತವಿಧಿಯಂತೆ ಕರ್ಮಾನುಷ್ಠಾನಗಳನ್ನು ಮಾಡಿದನಂತರ, ಆ ಆಶ್ರಮಕ್ಕೆ ಪ್ರದಕ್ಷಿಣೆಮಾಡಿ ಯಾತ್ರಾರ್ಥಿಯು ಯಯಾತಿಯು ಸ್ವರ್ಗದಿಂದ ಚ್ಯುತನಾಗಿ ಭೂಮಿಯ ಮೇಲೆ ಬಿದ್ದ ಪವಿತ್ರಸ್ಥಳಕ್ಕೆ ಪ್ರಯಾಣಮಾಡಬೇಕು. ಆ ಪವಿತ್ರಸ್ಥಳವನ್ನು ಸಂದರ್ಶಿಸಿದ ಮಾತ್ರದಿಂದಲೇ ಮಾನವನು ಅಶ್ವಮೇಧಯಾಗಮಾಡಿದ ಮಹಾಫಲವನ್ನು ಪಡೆಯುತ್ತಾನೆ.

**ಮಹಾಕಾಲಂ ತತೋ ಗಚ್ಛೇನ್ನಿಯತೋ ನಿಯತಾಶನಃ ।**
**ಕೋಟಿತೀರ್ಥಮುಪಸ್ಪೃಶ್ಯ ಹಯಮೇಧಫಲಂ ಲಭೇತ್ ॥೬೯॥**

ಯಯಾತಿಪತನಭೂಮಿಯನ್ನು ಸಂದರ್ಶಿಸಿದನಂತರ ಯಾತ್ರಾರ್ಥಿಯು ಪರಮಪವಿತ್ರವಾದ ಮಹಾಕಾಲಕ್ಷೇತ್ರಕ್ಕೆ ಹೋಗಬೇಕು. ಅಲ್ಲಿಯೂ ಹಿಂದಿನಂತೆಯೇ ಅವನು ನಿಯತಾಹಾರನಾಗಿಯೂ, ಮೌನಿಯಾಗಿಯೂ, ಜಿತೇಂದ್ರಿಯನಾಗಿಯೂ ಇರಬೇಕು. ಈ ವಿಧವಾದ ವ್ರತನಿಯಮಗಳಿಂದಿದ್ದು ಆ ಮಹಾಕ್ಷೇತ್ರದಲ್ಲಿರುವ ಕೋಟಿತೀರ್ಥದಲ್ಲಿ ಸ್ನಾನಮಾಡುವವನು ಅಶ್ವಮೇಧಯಾಗವನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

**ತತೋ ಗಚ್ಛೇತ ಧರ್ಮಜ್ಞಃ ಸ್ಥಾಣೋಸ್ತೀರ್ಥಮುಮಾಪತೇಃ ।**
**ನಾಮ್ನಾ ಭದ್ರವಟಂ ನಾಮ ತ್ರಿಷು ಲೋಕೇಷು ವಿಶ್ರುತಮ್ ॥೭೨॥**

**ತತ್ರಾಭಿಗಮ್ಯ ಚೇಶಾನಂ ಗೋಸಹಸ್ರಫಲಂ ಲಭೇತ್ ।**
**ಮಹಾದೇವಪ್ರಸಾದಾಚ್ಚ ಗಾಣಪತ್ಯಂ ಚ ವಿನ್ದತಿ ।**
**ಸಮೃದ್ಧಮಸಪತ್ನಂ ಚ ಶ್ರಿಯಾ ಯುಕ್ತಂ ನರೋತ್ತಮಃ ॥೭೧॥**

ಮಹಾಕಾಲಕ್ಷೇತ್ರದ ಯಾತ್ರೆಯನ್ನು ಮುಗಿಸಿದನಂತರ ಯಾತ್ರಾರ್ಥಿಯು ಉಮಾಪತಿಯಾದ ಸ್ಥಾಣುವಿನ ಸಾನ್ನಿಧ್ಯವಿರುವ, ಪುಣ್ಯತೀರ್ಥವೆಂದು ತ್ರಿಲೋಕಪ್ರಸಿದ್ಧವಾದ ಭದ್ರವಟತೀರ್ಥಕ್ಕೆ ಹೋಗಬೇಕು. ಆ ತೀರ್ಥದ ಅಧಿದೇವತೆಯಾದ ಈಶಾನನನ್ನು ಸಂದರ್ಶಿಸಿ, ಭಕ್ತಿಪೂರ್ವಕವಾಗಿ ಅರ್ಚಿಸುವವನು–ಸಹಸ್ರಗೋದಾನಮಾಡಿದ ಫಲವನ್ನು ಪಡೆಯುತ್ತಾನೆ. ಮಹಾದೇವನ ಪ್ರಸಾದದಿಂದ ಅವಸಾನಾನಂತರದಲ್ಲಿ ಗಾಣಪತ್ಯವನ್ನು ಹೊಂದುವನು. (ಶಿವನ ಸೇವಕನಾಗುತ್ತಾನೆ. ಶಿವಗಣಗಳ ನಾಯಕನಾಗುತ್ತಾನೆ.) ಈ ಜನ್ಮದಲ್ಲಿಯೂ ಸಂಪತ್ಸಮೃದ್ಧಿಯನ್ನು ಪಡೆಯುತ್ತಾನೆ.

**ನರ್ಮದಾಂ ತು ಸಮಾಸಾದ್ಯ ನದೀಂ ತ್ರೈಲೋಕ್ಯವಿಶ್ರುತಾಮ್ ।**
**ತರ್ಪಯಿತ್ವಾ ಪಿತೄನ್ದೇವಾನಗ್ನಿಷ್ಟೋಮಫಲಂ ಲಭೇತ್ ॥೭೨॥**

ಭದ್ರವಟತೀರ್ಥವನ್ನು ಸಂದರ್ಶಿಸಿದನಂತರ ಯಾತ್ರಾರ್ಥಿಯು ತ್ರಿಲೋಕಪ್ರಸಿದ್ಧಳಾದ, ಪವಿತ್ರೋದಕಳಾದ ನರ್ಮದಾನದಿಯ ತೀರಕ್ಕೆ ಹೋಗಬೇಕು. ಆ ನದಿಯಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿ, ಪಿತೃದೇವತೆ

ಗಳಿಗೂ, ದೇವತೆಗಳಿಗೂ ಜಲತರ್ಪಣಕೊಡುವವನು ಅಗ್ನಿಷ್ಟೋಮಯಾಗ ಮಾಡಿದ ಫಲವನ್ನು ಪಡೆಯುತ್ತಾನೆ.

**ದಕ್ಷಿಣಂ ಸಿನ್ಧುಮಾಸಾದ್ಯ ಬ್ರಹ್ಮಚಾರೀ ಜಿತೇನ್ದ್ರಿಯಃ ।**
**ಅಗ್ನಿಷ್ಟೋಮಮವಾಪ್ನೋತಿ ವಿಮಾನಂ ಚಾಧಿರೋಹತಿ ॥೫೩॥**

ಮುಂದೆ ಯಾತ್ರಾರ್ಥಿಯು ಸಿಂಧೂನದಿಯ ದಕ್ಷಿಣತೀರಕ್ಕೆ ಹೋಗಬೇಕು. ಅಲ್ಲಿ ಅವನು ಬ್ರಹ್ಮಚರ್ಯವ್ರತಾನುಷ್ಠಾನದಿಂದಿದ್ದು ಜಿತೇಂದ್ರಿಯನಾಗಿ ಸಮುದ್ರಸ್ನಾನವನ್ನು ಮಾಡಿದಲ್ಲಿ ಅಗ್ನಿಷ್ಟೋಮಯಾಗಮಾಡಿದ ಫಲವನ್ನು ಪಡೆದು ಅವಸಾನಾನಂತರದಲ್ಲಿ ಸ್ವರ್ಗವನ್ನು ಪಡೆಯುತ್ತಾನೆ.

**ಚರ್ಮಣ್ವತೀಂ ಸಮಾಸಾದ್ಯ ನಿಯತೋ ನಿಯತಾಶನಃ ।**
**ರನ್ತಿದೇವಾಭ್ಯನುಜ್ಞಾತಮಗ್ನಿಷ್ಟೋಮಫಲಂ ಲಭೇತ್ ॥೫೪॥**

ಸಿಂಧೂನದಿಯ ಸ್ನಾನಮಾಡಿದನಂತರ ಯಾತ್ರಾರ್ಥಿಯು ಚರ್ಮಣ್ವತೀ ನದಿಯ ತೀರಕ್ಕೆ ಹೋಗಿ ಅಲ್ಲಿಯೂ ಹಿಂದಿನಂತೆಯೇ ನಿಯಮಾನುಷ್ಠಾನದಿಂದಿದ್ದು ನದಿಯಲ್ಲಿ ಸ್ನಾನಮಾಡಬೇಕು. ಹೀಗೆ ಸ್ನಾನ ಮಾಡಿದವನು ಮಹಾನುಭಾವನಾದ ರಂತಿದೇವನಿಂದ ಅನುಮೋದಿತವಾದ ಅಗ್ನಿಷ್ಟೋಮಯಾಗಮಾಡಿದ ಫಲವನ್ನು ಪಡೆಯುತ್ತಾನೆ.

**ತತೋ ಗಚ್ಛೇತ ಧರ್ಮಜ್ಞ ಹಿಮವತ್ಸುತಮರ್ಬುದಮ್ ।**
**ಪೃಥಿವ್ಯಾಂ ಯತ್ರ ವೈ ಛಿದ್ರಂ ಪೂರ್ವಮಾಸೀದ್ಯುಧಿಷ್ಠಿರ ॥೫೫॥**

**ತತ್ರಾಶ್ರಮೋ ವಸಿಷ್ಠಸ್ಯ ತ್ರಿಷು ಲೋಕೇಷು ವಿಶ್ರುತಃ ।**
**ತತ್ರೋಷ್ಯ ರಜನೀಮೇಕಾಂ ಗೋಸಹಸ್ರಫಲಂ ಲಭೇತ್ ॥೫೬॥**

ಧರ್ಮಜ್ಞನಾದ ಭೀಷ್ಮನೇ! ಚರ್ಮಣ್ವತೀನದಿಯ ತೀರ್ಥಯಾತ್ರೆಯನ್ನು ಮುಗಿಸಿದನಂತರ ಯಾತ್ರಾರ್ಥಿಯು ಮುಂದೆ ಹಿಮವಂತನ ಮಗನಾದ ಅರ್ಬುದಪರ್ವತಕ್ಕೆ (ಅಬೂ) ಹೋಗಬೇಕು. ಆ ಅಬೂಪರ್ವತದ ಸಮೀಪದಲ್ಲಿಯೇ ಹಿಂದೆ ಭೂಮಿಯೊಳಗೆ ಅಗಾಧವಾದ ಒಂದು ಸುರಂಗವಿದ್ದಿತು. ಭೀಷ್ಮ! ಆ ಅರ್ಬುದಪರ್ವತದ ತಪ್ಪಲಿನಲ್ಲಿ ತ್ರಿಲೋಕಪ್ರಸಿದ್ಧವಾದ ವಸಿಷ್ಠಾಶ್ರಮವಿದೆ. ಆ ಆಶ್ರಮದಲ್ಲಿ ನಿಯಮವ್ರತಾನುಷ್ಠಾನಗಳಿಂದ

ಒಂದು ರಾತ್ರಿಯನ್ನು ಕಳೆಯುವವನು–ಸಹಸ್ರಗೋವುಗಳನ್ನು ದಾನಮಾಡಿದ ಮಹಾಫಲವನ್ನು ಪಡೆಯುತ್ತಾನೆ.

**ಪಿಙ್ಗತೀರ್ಥಮುಪಸ್ಪೃಶ್ಯ ಬ್ರಹ್ಮಚಾರೀ ಜಿತೇನ್ದ್ರಿಯಃ ।**
**ಕಪಿಲಾನಾಂ ನರಶ್ರೇಷ್ಠ ಶತಸ್ಯ ಫಲಮಶ್ನುತೇ ॥೫೭॥**

ಭೀಷ್ಮ! ಆ ವಸಿಷ್ಠಾಶ್ರಮದ ಸಮೀಪದಲ್ಲಿಯೇ ಪಿಂಗತೀರ್ಥವೆಂಬ ಒಂದು ಪುಣ್ಯತೀರ್ಥವಿದೆ. ಬ್ರಹ್ಮಚರ್ಯವ್ರತಾನುಷ್ಠಾನದಿಂದಿದ್ದು ಜಿತೇಂದ್ರಿಯನಾಗಿ ಆ ತೀರ್ಥದಲ್ಲಿ ಸ್ನಾನಮಾಡುವವನು–ಒಂದು ನೂರು ಕಪಿಲಧೇನುಗಳನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ.

**ತತೋ ಗಚ್ಛೇತ ರಾಜೇನ್ದ್ರ ಪ್ರಭಾಸಂ ತೀರ್ಥಮುತ್ತಮಮ್ ।**
**ತತ್ರ ಸಂನಿಹಿತೋ ನಿತ್ಯಂ ಸ್ವಯಮೇವ ಹುತಾಶನಃ ॥೫೮॥**

**ದೇವತಾನಾಂ ಮುಖಂ ವೀರ ಜ್ವಲನೋಽನಿಲಸಾರಥಿಃ ।**
**ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಶುಚಿಃ ಪ್ರಯತಮಾನಸಃ ॥೫೯॥**

**ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ಪ್ರಾಪ್ನೋತಿ ಮಾನವಃ ॥೬೦॥**

ಅರ್ಬುದಪರ್ವತದ ತಪ್ಪಲಿನಲ್ಲಿರುವ ವಸಿಷ್ಠಾಶ್ರಮದ ಯಾತ್ರೆಯನ್ನೂ–ಪಿಂಗಸರೋವರದ ಸ್ನಾನವನ್ನೂ ಮುಗಿಸಿಕೊಂಡು ಯಾತ್ರಾರ್ಥಿಯು ಮುಂದೆ ಉತ್ತಮೋತ್ತಮವಾದ ಪ್ರಭಾಸತೀರ್ಥವಿರುವ ಪುಣ್ಯಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಹುತಾಶನನು (ಯಜ್ಞೇಶ್ವರನು) ತನ್ನ ನಿಜಸ್ವರೂಪವನ್ನು ಧರಿಸಿ ಉಪಸ್ಥಿತನಾಗಿದ್ದಾನೆ. ವಾಯುಸಖನಾದ ಅವನು ದೇವತೆಗಳಿಗೆ ಹವಿಸ್ಸನ್ನು ಒಯ್ಯುವುದರ ಮೂಲಕ ದೇವತೆಗಳ ಮುಖರೂಪನಾಗಿದ್ದಾನೆ. ಮಹಾನುಭಾವನಾದ ಯಜ್ಞೇಶ್ವರನ ಸಾನ್ನಿಧ್ಯವನ್ನು ಹೊಂದಿರುವ ಆ ಪ್ರಭಾಸತೀರ್ಥದಲ್ಲಿ ಪವಿತ್ರಾತ್ಮನಾಗಿ ಜಿತೇಂದ್ರಿಯನಾಗಿ ಸ್ನಾನಮಾಡಿದವನು ಅಗ್ನಿಷ್ಟೋಮ ಮತ್ತು ಅತಿರಾತ್ರಯಾಗಗಳನ್ನು ಮಾಡುವುದರಿಂದ ಪ್ರಾಪ್ತವಾಗುವ ಫಲಕ್ಕಿಂತಲೂ ಅಧಿಕವಾದ ಫಲವನ್ನು ಪಡೆಯುತ್ತಾನೆ.

**ತತೋ ಗತ್ವಾ ಸರಸ್ವತ್ಯಾಃ ಸಾಗರಸ್ಯ ಚ ಸಂಗಮೇ ।**

**ಗೋಸಹಸ್ರಫಲಂ ತಸ್ಯ ಸ್ವರ್ಗಲೋಕಂ ಚ ವಿನ್ದತಿ ।**
**ಪ್ರಭಯಾ ದೀಪ್ಯತೇ ನಿತ್ಯಮಗ್ನಿವದ್ಭರತರ್ಷಭ ॥೬೧॥**

**ತೀರ್ಥೇ ಸಲಿಲರಾಜಸ್ಯ ಸ್ನಾತ್ವಾ ಪ್ರಯತಮಾನಸಃ ।**
**ತ್ರಿರಾತ್ರಮುಷಿತಃ ಸ್ನಾತಸ್ತರ್ಪಯೇತ್ಪಿತೃದೇವತಾಃ ।**
**ಪ್ರಭಾಸತೇ ಯಥಾ ಸೋಮಃ ಸೋಽಶ್ವಮೇಧಂ ಚ ವಿನ್ದತಿ ॥೬೨॥**

ಪ್ರಭಾಸತೀರ್ಥಕ್ಷೇತ್ರವನ್ನು ಸಂದರ್ಶಿಸಿದನಂತರ ಯಾತ್ರಾರ್ಥಿಯು ಸರಸ್ವತೀ-ಸಾಗರಸಂಗಮಸ್ಥಾನಕ್ಕೆ ಪ್ರಯಾಣಮಾಡಬೇಕು. ಆ ಪವಿತ್ರ ಸಂಗಮದ ದರ್ಶನಮಾತ್ರದಿಂದಲೇ ಮಾನವನು ಸಹಸ್ರಧೇನುಗಳ ದಾನ ಫಲವನ್ನೂ, ಅವಸಾನಾನಂತರದಲ್ಲಿ ಸ್ವರ್ಗಫಲವನ್ನೂ ಪಡೆಯುವುದು ಮಾತ್ರವಲ್ಲದೇ–ಸಾಕ್ಷಾತ್ ಯಜ್ಞೇಶ್ವರನಂತೆ ಮಹಾತೇಜಸ್ವಿಯೂ ಆಗು ತ್ತಾನೆ. ಜಿತೇಂದ್ರಿಯನಾಗಿ ಆ ಪವಿತ್ರಸಂಗಮದಲ್ಲಿ ಅನುದಿನವೂ ಸ್ನಾನ ಮಾಡುತ್ತಾ ಪಿತೃದೇವತೆಗಳನ್ನು ತರ್ಪಣ-ಪೂಜಾದಿಗಳಿಂದ ಅರ್ಚಿಸುತ್ತಾ ಮೂರು ರಾತ್ರಿಗಳನ್ನು ಕಳೆಯುವವನು ಪೂರ್ಣಚಂದ್ರನಂತೆ ಕಾಂತಿಮಂತ ನಾಗುತ್ತಾನೆ ಮತ್ತು ಅಶ್ವಮೇಧಯಾಗಮಾಡಿದ ಫಲವನ್ನೂ ಪಡೆಯುತ್ತಾನೆ.

**ವರದಾನಂ ತತೋ ಗಚ್ಛೇತ್ತೀರ್ಥಂ ಭರತಸತ್ತಮ ॥೬೩॥**

**ವಿಷ್ಣೋರ್ದುರ್ವಾಸಸಾ ಯತ್ರ ವರೋ ದತ್ತೋ ಯುಧಿಷ್ಠಿರ ।**
**ವರದಾನೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೬೪॥**

ಸರಸ್ವತೀ-ಸಾಗರಸಂಗಮದ ತೀರ್ಥಯಾತ್ರೆಯನ್ನು ಮಾಡಿಕೊಂಡು ಯಾತ್ರಾರ್ಥಿಯಾದವನು ಮುಂದೆ ವರದಾನವೆಂಬ ಪುಣ್ಯತೀರ್ಥಕ್ಕೆ ಪ್ರಯಾಣಮಾಡಬೇಕು. ಯುಧಿಷ್ಠಿರ! ಆ ಪುಣ್ಯತೀರ್ಥದ ಸಮೀಪದಲ್ಲಿಯೇ ದುರ್ವಾಸಮಹರ್ಷಿಯು ವಿಷ್ಣುವಿಗೆ ವರದಾನಮಾಡಿದ್ದರಿಂದ ಆ ತೀರ್ಥಕ್ಕೆ ವರದಾನತೀರ್ಥವೆಂದೇ ಹೆಸರಾಯಿತು. ವರದಾನತೀರ್ಥದಲ್ಲಿ ನಿಯಮ ಪೂರ್ವಕವಾಗಿ ಸ್ನಾನಮಾಡುವವನು ಸಹಸ್ರಗೋದಾನಮಾಡಿದ ಫಲವನ್ನು ಪಡೆಯುತ್ತಾನೆ.

**ತತೋ ದ್ವಾರವತೀಂ ಗಚ್ಛೇನ್ನಿಯತೋ ನಿಯತಾಶನಃ ।**
**ಪಿಣ್ಡಾರಕೇ ನರಃ ಸ್ನಾತ್ವಾ ಲಭೇದ್ಬಹು ಸುವರ್ಣಕಮ್ ॥೬೫॥**

**ತಸ್ಮಿಂಸ್ತೀರ್ಥೇ ಮಹಾಭಾಗ ಪದ್ಮಲಕ್ಷಣಲಕ್ಷಿತಾಃ ।**
**ಅದ್ಯಾಪಿ ಮುದ್ರಾ ದೃಶ್ಯನ್ತೇ ತದದ್ಭುತಮರಿಂದಮ ॥೬೬॥**

**ತ್ರಿಶೂಲಾಙ್ಕಾನಿ ಪದ್ಮಾನಿ ದೃಶ್ಯನ್ತೇ ಕುರುನನ್ದನ ।**
**ಮಹಾದೇವಸ್ಯ ಸಾನ್ನಿಧ್ಯಂ ತತ್ರ ವೈ ಪುರುಷರ್ಷಭ ॥೬೭॥**

ಅಲ್ಲಿಂದ ಮುಂದೆ ದ್ವಾರಕೆಗೆ ಹೋಗಬೇಕು. ಅಲ್ಲಿ ನಿಯಮದಿಂದಿದ್ದು ನಿಯತಾಹಾರನಾಗಿ ಪಿಂಡಾರಕತೀರ್ಥದಲ್ಲಿ ಸ್ನಾನಮಾಡಿದವನಿಗೆ ಬಹು ಸುವರ್ಣಪ್ರಾಪ್ತಿಯಾಗುತ್ತದೆ. ಕುರುನಂದನನೇ! ಆ ತೀರ್ಥದಲ್ಲಿ ಒಂದು ವೈಚಿತ್ರ್ಯವನ್ನು ನಾವು ಇಂದೂ ಕಾಣಬಹುದು. ಕಮಲಪುಷ್ಪಗಳ ಮತ್ತು ತ್ರಿಶೂಲಗಳ ಚಿಹ್ನೆಗಳಿರುವ ಸುವರ್ಣನಾಣ್ಯಗಳು ಆ ಸರೋವರದಲ್ಲಿ ಈಗಲೂ ಇವೆ. ಆ ಪಿಂಡಾರಕತೀರ್ಥದಲ್ಲಿ ಮಹಾದೇವನ ಸಾನ್ನಿಧ್ಯ ವಿರುತ್ತದೆ.

**ಸಾಗರಸ್ಯ ಚ ಸಿನ್ಧೋಶ್ಚ ಸಂಗಮಂ ಪ್ರಾಪ್ಯ ಭಾರತ ।**
**ತೀರ್ಥೇ ಸಲಿಲರಾಜಸ್ಯ ಸ್ನಾತ್ವಾ ಪ್ರಯತಮಾನಸಃ ॥೬೮॥**

**ತರ್ಪಯಿತ್ವಾ ಪಿತೄನ್ದೇವಾನೃಷೀಂಶ್ಚ ಭರತರ್ಷಭ ।**
**ಪ್ರಾಪ್ನೋತಿ ವಾರುಣಂ ಲೋಕಂ ದೀಪ್ಯಮಾನಂ ಸ್ವತೇಜಸಾ ॥೬೯॥**

**ಶಙ್ಕುಕರ್ಣೇಶ್ವರಂ ದೇವಮರ್ಚಯಿತ್ವಾ ಯುಧಿಷ್ಠಿರ ।**
**ಅಶ್ವಮೇಧಾದ್ದಶಗುಣಂ ಪ್ರವದನ್ತಿ ಮನೀಷಿಣಃ ॥೭೦॥**

ದ್ವಾರವತೀಕ್ಷೇತ್ರದ ಮತ್ತು ಪಿಂಡಾರಕತೀರ್ಥದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಾರ್ಥಿಯು ಮುಂದೆ ಸಿಂಧು-ಸಾಗರಸಂಗಮಸ್ಥಾನಕ್ಕೆ ಪ್ರಯಾಣಮಾಡಬೇಕು. ನಿಯಮವ್ರತಾನುಷ್ಠಾನದಿಂದಿದ್ದು ಆ ಸಂಗಮ ಸ್ಥಾನದಲ್ಲಿರುವ ವರುಣತೀರ್ಥದಲ್ಲಿ ಸ್ನಾನಮಾಡಬೇಕು. ಸ್ನಾನಮಾಡಿ ಪಿತೃ ದೇವತೆಗಳಿಗೂ, ಋಷಿಗಳಿಗೂ, ದೇವತೆಗಳಿಗೂ ವಿಧಿಪೂರ್ವಕವಾಗಿ ತರ್ಪಣವನ್ನು ಕೊಡುವುದರಿಂದ ಮಾನವನು ಕಾಲಾನಂತರದಲ್ಲಿ ತನ್ನ ತೇಜಸ್ಸಿನಿಂದಲೇ ಪ್ರಕಾಶಮಾನವಾದ ವರುಣಲೋಕವನ್ನು ಪಡೆಯುತ್ತಾನೆ. ಅಲ್ಲಿಯೇ ಇರುವ ಶಂಕುಕರ್ಣೇಶ್ವರದೇವನನ್ನು ಭಕ್ತಿಯಿಂದ ಅರ್ಚನೆಮಾಡಿ ದರೆ ಅಶ್ವಮೇಧಯಾಗದ ಫಲದ ಹತ್ತರಷ್ಟು ಪುಣ್ಯವನ್ನು ಮಾನವನು ಪಡೆಯುತ್ತಾನೆಂದು ತಿಳಿದವರು ಹೇಳುತ್ತಾರೆ.

**ಪ್ರದಕ್ಷಿಣಮುಪಾವೃತ್ಯ ಗಚ್ಛೇತ ಭರತರ್ಷಭ ।**
**ತೀರ್ಥಂ ಕುರುವರಶ್ರೇಷ್ಠ ತ್ರಿಷು ಲೋಕೇಷು ವಿಶ್ರುತಮ್ ॥೭೧॥**

**ದಮೀತಿ ನಾಮ್ನಾ ವಿಖ್ಯಾತಂ ಸರ್ವಪಾಪಪ್ರಣಾಶನಮ್ ।**
**ತತ್ರ ಬ್ರಹ್ಮಾದಯೋ ದೇವಾ ಉಪಾಸನ್ತೇ ಮಹೇಶ್ವರಮ್ ॥೭೨॥**

**ತತ್ರ ಸ್ನಾತ್ವಾ ಚ ಪೀತ್ವಾ ಚ ರುದ್ರಂ ದೇವಗಣೈರ್ವೃತಮ್ ।**
**ಜನ್ಮಪ್ರಭೃತಿ ಯತ್ಪಾಪಂ ತತ್ಸ್ನಾತಸ್ಯ ಪ್ರಣಶ್ಯತಿ ॥೭೩॥**

**ದಮೀ ಚಾತ್ರ ನರಶ್ರೇಷ್ಠ ಸರ್ವದೇವೈರಭಿಷ್ಟುತಃ ।**
**ತತ್ರ ಸ್ನಾತ್ವಾ ನರವ್ಯಾಘ್ರ ಹಯಮೇಧಮವಾಪ್ನುಯಾತ್ ॥೭೪॥**

**ಗತ್ವಾ ಯತ್ರ ಮಹಾಪ್ರಾಜ್ಞ ವಿಷ್ಣುನಾ ಪ್ರಭವಿಷ್ಣುನಾ ।**
**ಪುರಾ ಶೌಚಂ ಕೃತಂ ರಾಜನ್ಹತ್ವಾ ದೈತೇಯದಾನವಾನ್ ॥೭೫॥**

ಕುರುಶ್ರೇಷ್ಠನೇ! ಸಿಂಧು-ಸಾಗರಸಂಗಮದಲ್ಲಿರುವ ವರುಣತೀರ್ಥಕ್ಕೆ ಪ್ರದಕ್ಷಿಣೆಮಾಡಿ ಮುಂದೆ ಯಾತ್ರಾರ್ಥಿಯು ತ್ರಿಲೋಕಪ್ರಸಿದ್ಧವಾದ ಪವಿತ್ರ ತಮವಾದ ದಮೀತೀರ್ಥಕ್ಕೆ ಪ್ರಯಾಣಮಾಡಬೇಕು. ಆ ತೀರ್ಥವು ಸರ್ವ ಪಾಪಹರವಾದುದು. ಆ ತೀರ್ಥದ ಬಳಿಯಲ್ಲಿಯೇ ಬ್ರಹ್ಮನು ಸಕಲದೇವತೆ ಗಳಿಂದೊಡಗೂಡಿ ಮಹೇಶ್ವರನ ಉಪಾಸನೆಯನ್ನು ಮಾಡುತ್ತಿರುತ್ತಾನೆ. ವಿಧಿ ಪೂರ್ವಕವಾಗಿ ದಮೀತೀರ್ಥದಲ್ಲಿ ಸ್ನಾನಮಾಡಿ ತೀರ್ಥವನ್ನು ಪ್ರಾಶನಮಾಡಿ ಸಕಲದೇವಸಂಪೂಜ್ಯನಾದ ಮತ್ತು ಸಕಲದೇವತೆಗಳಿಂದಲೂ ಪರಿವೃತನಾದ ರುದ್ರದೇವನನ್ನು ಭಕ್ತಿಪೂರ್ವಕವಾಗಿ ಅರ್ಚನೆಮಾಡುವ ಮಾನವನು–ತಾನು ಹುಟ್ಟಿದಾಗಿನಿಂದಲೂ ಮಾಡಿದ ಸಕಲಪಾಪಗಳಿಂದಲೂ ವಿಮುಕ್ತನಾಗು ತ್ತಾನೆ. ಆ ಕ್ಷೇತ್ರದಲ್ಲಿಯೇ ದಮೀಮಹರ್ಷಿಯು ಸಕಲದೇವತೆಗಳಿಂದಲೂ ಸ್ತೋತ್ರಮಾಡಲ್ಪಟ್ಟನು. ಆ ಮಹರ್ಷಿಯ ಅನುಗ್ರಹದಿಂದಾಗಿ ದಮೀತೀರ್ಥ ದಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡುವವನು ಅಶ್ವಮೇಧಯಾಗಮಾಡಿದ ಫಲವನ್ನು ಪಡೆಯುತ್ತಾನೆ. ಮಹಾಪ್ರಾಜ್ಞನೇ! ದೇವದೇವನಾದ ಮಹಾ ವಿಷ್ಣುವು ದೈತ್ಯರನ್ನೂ ದಾನವರನ್ನೂ ಸಂಹಾರಮಾಡಿದನಂತರ ಅದೇ ದಮೀ ಸರೋವರಕ್ಕೆ ಬಂದು ವಿಧಿಪೂರ್ವಕವಾಗಿ ಸ್ನಾನಮಾಡಿ ಪೂತಾತ್ಮನಾದನು.

**ತತೋ ಗಚ್ಛೇತ ಧರ್ಮಜ್ಞ ವಸೋರ್ಧಾರಾಮಭಿಷ್ಟುತಾಮ್ ।**
**ಗಮನಾದೇವ ತಸ್ಯಾಂ ಹಿ ಹಯಮೇಧಫಲಂ ಲಭೇತ್ ॥೭೬॥**

**ಸ್ನಾತ್ವಾ ಕುರುವರಶ್ರೇಷ್ಠ ಪ್ರಯತಾತ್ಮಾ ಸಮಾಹಿತಃ ।**
**ತರ್ಪ್ಯ ದೇವಾನ್ಪಿತೄಂಶ್ಚೈವ ವಿಷ್ಣುಲೋಕೇ ಮಹೀಯತೇ ॥೭೭॥**

**ತೀರ್ಥೇ ಚಾತ್ರ ಸರಃ ಪುಣ್ಯಂ ವಸೂನಾಂ ಭರತರ್ಷಭ ।**
**ತತ್ರ ಸ್ನಾತ್ವಾ ಚ ಪೀತ್ವಾ ಚ ವಸೂನಾಂ ಸಮ್ಮತೋ ಭವೇತ್ ॥೭೮॥**

**ಸಿನ್ಧೂತ್ತಮಮಿತಿ ಖ್ಯಾತಂ ಸರ್ವಪಾಪಪ್ರಣಾಶನಮ್ ।**
**ತತ್ರ ಸ್ನಾತ್ವಾ ನರಶ್ರೇಷ್ಠ ಲಭೇದ್ಬಹು ಸುವರ್ಣಕಮ್ ॥೭೯॥**

ಧರ್ಮಾತ್ಮನಾದ ಯುಧಿಷ್ಠಿರನೇ! ದಮೀಕ್ಷೇತ್ರದರ್ಶನಾನಂತರದಲ್ಲಿ ಯಾತ್ರಿಕನು ಸುಪ್ರಸಿದ್ಧವಾದ ವಸೋರ್ಧಾರಾಕ್ಷೇತ್ರಕ್ಕೆ ಪ್ರಯಾಣಮಾಡ ಬೇಕು. ಆ ಕ್ಷೇತ್ರವನ್ನು ಪ್ರವೇಶಮಾಡಿದ ಮಾತ್ರದಿಂದಲೇ ಯಾತ್ರಿಕನು ಅಶ್ವಮೇಧಯಾಗಮಾಡಿದ ಫಲವನ್ನು ಪಡೆಯುತ್ತಾನೆ. ಅಂತಹ ಕ್ಷೇತ್ರವದು. ಧರ್ಮಜ! ಜಿತೇಂದ್ರಿಯನಾಗಿ, ತದೇಕಚಿತ್ತನಾಗಿ ಅಲ್ಲಿಯ ತೀರ್ಥದಲ್ಲಿ ಸ್ನಾನಮಾಡಿ ಪಿತೃದೇವತೆಗಳನ್ನೂ ದೇವತೆಗಳನ್ನೂ ತರ್ಪಣಾದಿಗಳ ಮೂಲಕ ಸಂತೃಪ್ತಿಪಡಿಸುವುದರಿಂದ ಯಾತ್ರಿಕನು ಅವಸಾನಾನಂತರದಲ್ಲಿ ವಿಷ್ಣುಲೋಕದಲ್ಲಿ ಗೌರವಿಸಲ್ಪಡುತ್ತಾನೆ. ಆ ಕ್ಷೇತ್ರದಲ್ಲಿಯೇ ಅಷ್ಟವಸುಗಳ ಸರೋವರವಿದೆ. ಆ ಸರೋವರದಲ್ಲಿ ಸ್ನಾನಮಾಡುವುದರಿಂದಲೂ, ಅದರ ಪುಣ್ಯತೀರ್ಥವನ್ನು ಪಾನಮಾಡುವುದರಿಂದಲೂ ಯಾತ್ರಿಕನು ಅಷ್ಟವಸುಗಳ ಅನುಗ್ರಹವನ್ನು ಪಡೆಯುತ್ತಾನೆ ಮತ್ತು ವಸುಗಳಿಗೆ ಸಮ್ಮತನಾಗುತ್ತಾನೆ. ಸಿಂಧೂತ್ತಮವೆಂಬ ಸಕಲಪಾಪನಾಶಕವಾದ ಮತ್ತೊಂದು ಸರೋವರವೂ ಅಲ್ಲಿಯೇ ಇರುವುದು. ಅಲ್ಲಿ ಸ್ನಾನಮಾಡುವುದರಿಂದ ಯಾತ್ರಿಕನು ಬಹುಸಂಖ್ಯಾತವಾದ ಸುವರ್ಣನಾಣ್ಯಗಳನ್ನು ಪಡೆಯುತ್ತಾನೆ.

**ಭದ್ರತುಙ್ಗಂ ಸಮಾಸಾದ್ಯ ಶುಚಿಃ ಶೀಲಸಮನ್ವಿತಃ ।**
**ಬ್ರಹ್ಮಲೋಕಮವಾಪ್ನೋತಿ ಗತಿಂ ಚ ಪರಮಾಂ ವ್ರಜೇತ್ ॥೮೦॥**

ವಸೋರ್ಧಾರಾಕ್ಷೇತ್ರದ ಸರೋವರದಲ್ಲಿ ಸ್ನಾನಮಾಡಿ ಆ ಕ್ಷೇತ್ರಗಳ ಯಾತ್ರೆಯನ್ನು ಮುಗಿಸಿದನಂತರ ಯಾತ್ರಿಕನು ಭದ್ರತುಂಗವೆಂಬ ಕ್ಷೇತ್ರಕ್ಕೆ

ಪ್ರಯಾಣಮಾಡಬೇಕು. ಶುಚಿಯಾಗಿ, ಸದಾಚಾರಸಂಪನ್ನನಾಗಿ ಆ ಕ್ಷೇತ್ರದಲ್ಲಿ ಸೇವೆಮಾಡುವ ಯಾತ್ರಿಕನು ಅವಸಾನಾನಂತರದಲ್ಲಿ ಬ್ರಹ್ಮಲೋಕವನ್ನು ಪಡೆಯುವುದಲ್ಲದೇ–ಸದ್ಗತಿಯನ್ನೂ ಪಡೆಯುತ್ತಾನೆ.



**ಕುಮಾರಿಕಾಣಾಂ ಶಕ್ರಸ್ಯ ತೀರ್ಥಂ ಸಿದ್ಧನಿಷೇವಿತಮ್ ।**
**ತತ್ರ ಸ್ನಾತ್ವಾ ನರಃ ಕ್ಷಿಪ್ರಂ ಸ್ವರ್ಗಲೋಕಮವಾಪ್ನುಯಾತ್ ॥೮೧॥**

ಭದ್ರತುಂಗಕ್ಷೇತ್ರದ ಪ್ರವಾಸಾನಂತರ ಯಾತ್ರಿಕನು ಇಂದ್ರನ ಕುಮಾರಿಯರ ತೀರ್ಥಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯತೀರ್ಥವು ಸಿದ್ಧ-ಚಾರಣರಿಂದ ಅನವರತವೂ ಸೇವಿಸಲ್ಪಡುತ್ತಿದ್ದು ಕುಮಾರಿಕಾತೀರ್ಥವೆಂದೇ ಪ್ರಸಿದ್ಧ

ವಾಗಿದೆ. ಅಲ್ಲಿ ಸ್ನಾನಮಾಡುವ ಯಾತ್ರಿಕನು ಕಾಲಾಂತರದಲ್ಲಿ ಇಂದ್ರನ ಲೋಕವಾದ ಸ್ವರ್ಗವನ್ನು ಪಡೆಯುತ್ತಾನೆ.

**ರೇಣುಕಾಯಾಶ್ಚ ತತ್ರೈವ ತೀರ್ಥಂ ಸಿದ್ಧನಿಷೇವಿತಮ್ ।**
**ತತ್ರ ಸ್ನಾತ್ವಾ ಭವೇದ್ವಿಪ್ರೋ ನಿರ್ಮಲಶ್ಚನ್ದ್ರಮಾ ಯಥಾ ॥೮೨॥**

ಕುಮಾರಿಕಾತೀರ್ಥದ ಬಳಿಯಲ್ಲಿಯೇ ರೇಣುಕಾತೀರ್ಥವೆಂಬ ಮತ್ತೊಂದು ತೀರ್ಥವೂ ಇರುವುದು. ಆ ತೀರ್ಥವೂ ಅತ್ಯಂತಪುಣ್ಯಕರವಾದ ತೀರ್ಥವಾಗಿದ್ದು ಸಿದ್ಧ-ಚಾರಣರಿಂದ ಅನುದಿನವೂ ಸೇವಿಸಲ್ಪಡುತ್ತಿರುವುದು. ಬ್ರಾಹ್ಮಣನಾದವನು ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ನಿರ್ಮಲನಾಗಿ ಚಂದ್ರನಿಗೆ ಸಮಾನವಾದ ಕಾಂತಿಯನ್ನು ಪಡೆಯುತ್ತಾನೆ.

**ಅಥ ಪಞ್ಚನದಂ ಗತ್ವಾ ನಿಯತೋ ನಿಯತಾಶನಃ ।**
**ಪಞ್ಚಯಜ್ಞಾನವಾಪ್ನೋತಿ ಕ್ರಮಶೋ ಯೇಽನುಕೀರ್ತಿತಾಃ ॥೮೩॥**

ಕುಮಾರಿಕಾತೀರ್ಥ ಮತ್ತು ರೇಣುಕಾತೀರ್ಥಕ್ಷೇತ್ರಗಳ ಪ್ರವಾಸಾ ನಂತರದಲ್ಲಿ ಯಾತ್ರಿಕನು ಪಂಚನದಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ನಿಯತಾಹಾರನಾಗಿ, ನಿಯಮಾನುಷ್ಠಾನಪರನಾಗಿ ಆ ಕ್ಷೇತ್ರವನ್ನು ಸೇವಿಸುವ ಯಾತ್ರಿಕನು ವೇದಬೋಧಿತಗಳಾದ ಪಂಚಯಜ್ಞಗಳನ್ನು ಮಾಡುವುದರಿಂದ ಪ್ರಾಪ್ತವಾಗುವ ಮಹಾಪುಣ್ಯವನ್ನು ಪಡೆಯುತ್ತಾನೆ.

**ತತೋ ಗಚ್ಛೇತ ರಾಜೇನ್ದ್ರ ಭೀಮಾಯಾಃ ಸ್ಥಾನಮುತ್ತಮಮ್ ।**
**ತತ್ರ ಸ್ನಾತ್ವಾ ತು ಯೋನ್ಯಾಂ ವೈ ನರೋ ಭರತಸತ್ತಮ ॥೮೪॥**

**ದೇವ್ಯಾಃ ಪುತ್ರೋ ಭವೇದ್ರಾಜಂಸ್ತಪ್ತಕುಣ್ಡಲವಿಗ್ರಹಃ ।**
**ಗವಾಂ ಶತಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥೮೫॥**

ಧರ್ಮಜ! ಪಂಚನದಕ್ಷೇತ್ರಪ್ರವಾಸಾನಂತರದಲ್ಲಿ ಯಾತ್ರಿಕನು ಸುಪ್ರ ಸಿದ್ಧವಾದ ಭೀಮಾಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯಕ್ಷೇತ್ರದಲ್ಲಿರುವ ಯೋನಿಸರೋವರದಲ್ಲಿ ಸ್ನಾನಮಾಡುವ ಯಾತ್ರಿಕನು ಜನ್ಮಾಂತರದಲ್ಲಿ ಸ್ವರ್ಣಕುಂಡಲಗಳನ್ನು ಧರಿಸಿ ಮಹಾದೇವಿಯ ಪುತ್ರನಾಗಿ ಹುಟ್ಟುತ್ತಾನೆ. ಯೋನಿಸರೋವರದಲ್ಲಿ ಸ್ನಾನಮಾಡುವವನಿಗೆ ಒಂದುಲಕ್ಷ ಗೋವುಗಳನ್ನು ದಾನಮಾಡಿದ ಪುಣ್ಯವೂ ಲಭಿಸುತ್ತದೆ.

**ಶ್ರೀಕುಣ್ಡಂ ತು ಸಮಾಸಾದ್ಯ ತ್ರಿಷು ಲೋಕೇಷು ವಿಶ್ರುತಮ್ ।**
**ಪಿತಾಮಹಂ ನಮಸ್ಕೃತ್ಯ ಗೋಸಹಸ್ರಫಲಂ ಲಭೇತ್ ॥೮೬॥**

ಭೀಮಾಕ್ಷೇತ್ರದ ಯಾತ್ರೆಯನ್ನು ಪೂರೈಸಿದನಂತರ ಯಾತ್ರಿಕನು ಪ್ರಸಿದ್ಧವಾದ ಶ್ರೀಕುಂಡಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಮಹಾಕ್ಷೇತ್ರದಲ್ಲಿ ಬ್ರಹ್ಮದೇವನನ್ನು ಅನನ್ಯಭಕ್ತಿಯಿಂದ ಆರಾಧಿಸುವವನು ಸಹಸ್ರ ಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ.

**ತತೋ ಗಚ್ಛೇತ ಧರ್ಮಜ್ಞ ವಿಮಲಂ ತೀರ್ಥಮುತ್ತಮಮ್ ।**
**ಅದ್ಯಾಪಿ ಯತ್ರ ದೃಶ್ಯನ್ತೇ ಮತ್ಸ್ಯಾಃ ಸೌವರ್ಣರಾಜತಾಃ ॥೮೭॥**

**ತತ್ರ ಸ್ನಾತ್ವಾ ನರಃ ಕ್ಷಿಪ್ರಂ ವಾಸವಂ ಲೋಕಮಾಪ್ನುಯಾತ್ ।**
**ಸರ್ವಪಾಪವಿಶುದ್ಧಾತ್ಮಾ ಗಚ್ಛೇತ ಪರಮಾಂ ಗತಿಮ್ ॥೮೮॥**

ಶ್ರೀಕುಂಡಕ್ಷೇತ್ರದ ಯಾತ್ರೆಯನ್ನು ಮುಗಿಸಿ ಮುಂದೆ ವಿಮಲವೆಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ವಿಮಲತೀರ್ಥದಲ್ಲಿ ಚಿನ್ನದ ಮತ್ತು ಬೆಳ್ಳಿಯ ವರ್ಣದ ಮೀನುಗಳನ್ನು ಇಂದೂ ಕಾಣಬಹುದು. ಆ ತೀರ್ಥದಲ್ಲಿ ಸ್ನಾನಮಾಡುವ ಯಾತ್ರಿಕನು ಸಕಲಪಾಪಗಳಿಂದಲೂ ವಿಮೋಚನೆಹೊಂದಿ, ಕಾಲಾಂತರದಲ್ಲಿ ಇಂದ್ರಲೋಕವನ್ನು ಪಡೆಯುತ್ತಾನೆ. ಅವನಿಗೆ ಸದ್ಗತಿಯೂ ಪ್ರಾಪ್ತವಾಗುತ್ತದೆ.

**ವಿತಸ್ತಾಂ ಚ ಸಮಾಸಾದ್ಯ ಸಂತರ್ಪ್ಯ ಪಿತೃದೇವತಾಃ ।**
**ನರಃ ಫಲಮವಾಪ್ನೋತಿ ವಾಜಪೇಯಸ್ಯ ಭಾರತ ॥೮೯॥**

**ಕಾಶ್ಮೀರೇಷ್ವೇವ ನಾಗಸ್ಯ ಭವನಂ ತಕ್ಷಕಸ್ಯ ಚ ।**
**ವಿತಸ್ತಾಖ್ಯಮಿತಿ ಖ್ಯಾತಂ ಸರ್ವಪಾಪಪ್ರಮೋಚನಮ್ ॥೯೦॥**

**ತತ್ರ ಸ್ನಾತ್ವಾ ನರೋ ನೂನಂ ವಾಜಪೇಯಮವಾಪ್ನುಯಾತ್ ।**
**ಸರ್ವಪಾಪವಿಶುದ್ಧಾತ್ಮಾ ಗಚ್ಛೇಚ್ಚ ಪರಮಾಂ ಗತಿಮ್ ॥೯೧॥**

ವಿಮಲಕ್ಷೇತ್ರದ ಯಾತ್ರೆಯನ್ನು ಮುಗಿಸಿ ಯಾತ್ರಿಕನು ವಿತಸ್ತಾ ಎಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಶುದ್ಧಾಂತಃಕರಣವುಳ್ಳ ಯಾತ್ರಿಕನು ಆ ವಿತಸ್ತಾನದಿಯಲ್ಲಿ ಸ್ನಾನಮಾಡಿ ಪಿತೃಗಳನ್ನೂ, ದೇವತೆಗಳನ್ನೂ– ತರ್ಪಣಾದಿಗಳಿಂದಲೂ, ಅರ್ಚನಾದಿಗಳಿಂದಲೂ ಸಂತೃಪ್ತಿಪಡಿಸುವುದರಿಂದ

ವಾಜಪೇಯಮಹಾಯಾಗವನ್ನು ಮಾಡಿದ ಫಲವನ್ನು ಪಡೆಯುತ್ತಾನೆ. ಸಕಲಪಾಪಹಾರಿಯಾದ ಆ ವಿತಸ್ತಾತೀರ್ಥವು ಕಾಶ್ಮೀರದೇಶದಲ್ಲಿದೆ. ಆ ತೀರ್ಥದಲ್ಲಿಯೇ ತಕ್ಷಕನಾಗರಾಜನು ವಾಸಮಾಡುತ್ತಿದ್ದಾನೆ. ಅಂತಹ ಪರಮಪವಿತ್ರವಾದ, ತಕ್ಷಕನಿಗೆ ಆಶ್ರಯಭೂತವಾಗಿರುವ ಸರೋವರದಲ್ಲಿ ಸ್ನಾನಮಾಡುವುದರಿಂದ ಯಾತ್ರಿಕನು ವಾಜಪೇಯಯಾಗಮಾಡಿದ ಫಲವನ್ನು ಪಡೆಯುವನೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಯುಧಿಷ್ಠಿರ! ಆ ಕ್ಷೇತ್ರದಲ್ಲಿ ಸೇವೆಮಾಡುವವನು ಸಕಲಪಾಪಗಳನ್ನೂ ಕಳೆದುಕೊಂಡು ಕಾಲಾಂತರದಲ್ಲಿ ಸದ್ಗತಿಯನ್ನೂ ಪಡೆಯುತ್ತಾನೆ.

**ತತೋ ಗಚ್ಛೇತ ವಡವಾಂ ತ್ರಿಷು ಲೋಕೇಷು ವಿಶ್ರುತಾಮ್ ।**
**ಪಶ್ಚಿಮಾಯಾಂ ತು ಸಂಧ್ಯಾಯಾಮುಪಸ್ಪೃಶ್ಯ ಯಥಾವಿಧಿ ॥೯೨॥**

**ಚರುಂ ಸಪ್ತಾರ್ಚಿಷೇ ರಾಜನ್ಯಥಾಶಕ್ತಿ ನಿವೇದಯೇತ್ ।**
**ಪಿತೄಣಾಮಕ್ಷಯಂ ದಾನಂ ಪ್ರವದನ್ತಿ ಮನೀಷಿಣಃ ॥೯೩॥**

ವಿತಸ್ತಾತೀರ್ಥಕ್ಷೇತ್ರದ ಪ್ರವಾಸವನ್ನು ಮುಗಿಸಿದನಂತರ ಯಾತ್ರಿಕನು 'ವಡವಾ' ಎಂಬ ತ್ರಿಲೋಕಪ್ರಸಿದ್ಧವಾದ ಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಅಲ್ಲಿರುವ ಪವಿತ್ರಸರೋವರದಲ್ಲಿ ಸಾಯಂಸಂಧ್ಯಾಕಾಲದಲ್ಲಿ ಸ್ನಾನಮಾಡಿ ಶುಚಿಯಾಗಿ ಚರುವನ್ನು ಯಜ್ಞೇಶ್ವರನಲ್ಲಿ ಅರ್ಪಿಸಬೇಕು. ಆ ಪುಣ್ಯಕ್ಷೇತ್ರದಲ್ಲಿ ದಾನಮಾಡುವುದರಿಂದ ಪಿತೃದೇವತೆಗಳಿಗೆ ಅಕ್ಷಯವಾದ ತೃಪ್ತಿಯಾಗುವುದೆಂದು ಜ್ಞಾನಿಗಳಾದವರು ಹೇಳುತ್ತಾರೆ. ಆ ಪುಣ್ಯಕ್ಷೇತ್ರದ ಇತಿಹಾಸವನ್ನು ಸಂಕ್ಷೇಪವಾಗಿ ಹೇಳುವೆನು ಕೇಳು, ಯುಧಿಷ್ಠಿರ!

ಬಹಳ ಕಾಲದ ಹಿಂದೆ ಋಷಿಗಳು, ಪಿತೃದೇವತೆಗಳು, ದೇವತೆಗಳು, ಗಂಧರ್ವರು, ಅನೇಕಾನೇಕ ಅಪ್ಸರೆಯರು, ಗುಹ್ಯಕರು, ಪನ್ನಗರು, ಯಕ್ಷರು, ಸಿದ್ಧರು, ವಿದ್ಯಾಧರರು, ರಾಕ್ಷಸರು, ಮಾನವರು, ದೈತ್ಯರು ಮತ್ತು ರುದ್ರರು–ಇವರೆಲ್ಲರೂ ಬ್ರಹ್ಮನನ್ನು ಮುಂದೆಮಾಡಿಕೊಂಡು ಅಷ್ಟೈಶ್ವರ್ಯವನ್ನು ಪಡೆಯುವ ಸಲುವಾಗಿ, ಆ ಕ್ಷೇತ್ರದಲ್ಲಿಯೇ ನಿಯಮವ್ರತಾನುಷ್ಠಾನಪರರಾಗಿ, ಸಹಸ್ರವರ್ಷಗಳಕಾಲ ವಿಷ್ಣುವಿನ ಒಲುಮೆಗೋಸ್ಕರ ವಿಷ್ಣುವಿನ ಪ್ರೀತ್ಯರ್ಥವಾಗಿ ಏಳು ವಿಧವಾದ ದ್ರವ್ಯಗಳಿಂದ ಚರುವನ್ನು ಸಿದ್ಧಪಡಿಸಿ

ಏಳು ಮಂತ್ರಗಳಿಂದ ಹೋಮವನ್ನು ಮಾಡಿ ಏಳು ಋಕ್ಕುಗಳಿಂದ ಸ್ತೋತ್ರ ಮಾಡಿದರು. ಆ ಚರುಹೋಮದಿಂದಲೂ, ಅನವರತವಾದ ಋಙ್ಮಂತ್ರಪುನಶ್ಚರಣೆಗಳಿಂದಲೂ ಮಹಾವಿಷ್ಣುವು ಸುಪ್ರೀತನಾಗಿ ಅವರೆಲ್ಲರಿಗೂ ಅವರವರ ಇಚ್ಛೆಯಂತೆ ಅಷ್ಟೈಶ್ವರ್ಯವನ್ನು ಅನುಗ್ರಹಿಸಿದನು. ತಮ್ಮ ಸಂಕಲ್ಪದ ಸಿದ್ಧಿಯನ್ನು ಪಡೆದ ಬ್ರಹ್ಮಾದಿಗಳು ಆನಂದಭರಿತರಾಗಿ ವಿಷ್ಣುವನ್ನು ಸ್ತೋತ್ರಮಾಡುತ್ತಿರುವಾಗಲೇ ಮಹಾವಿಷ್ಣುವು–ಮೋಡದೊಳಗಿನ ಮಿಂಚಿನಂತೆ–ಅಂತರ್ಧಾನಹೊಂದಿದನು. ಆ ಕಾರಣದಿಂದಲೇ ಆ ಮಹಾಕ್ಷೇತ್ರಕ್ಕೆ 'ಸಪ್ತಚರು' ಎಂದೇ ಹೆಸರಾಯಿತು.

**ಗವಾಂ ಶತಸಹಸ್ರೇಣ ರಾಜಸೂಯಶತೇನ ಚ ।**
**ಅಶ್ವಮೇಧಸಹಸ್ರೇಣ ಶ್ರೇಯಾನ್ಸಪ್ತಾರ್ಚಿಷೇ ಚರುಃ ॥೯೯॥**

ಧರ್ಮಜ! ಆ ಮಹಾಕ್ಷೇತ್ರದಲ್ಲಿ ಸಪ್ತಜ್ವಾಲೆಗಳಿಂದ ಕೂಡಿರುವ ಯಜ್ಞೇಶ್ವರನಲ್ಲಿ ಯಾವನು ಚರುಹೋಮವನ್ನು ಮಾಡುತ್ತಾನೆಯೋ–ಅಂತಹವನು ಲಕ್ಷಗೋದಾನಮಾಡಿದ ಫಲಕ್ಕಿಂತಲೂ ಹೆಚ್ಚಿನ ಫಲವನ್ನು ಪಡೆಯುತ್ತಾನೆ. ಅವನಿಗೆ ಪ್ರಾಪ್ತವಾಗುವ ಫಲವು ನೂರು ರಾಜಸೂಯ ಯಾಗಗಳನ್ನು ಮಾಡಿದ ಫಲಕ್ಕಿಂತಲೂ ಮತ್ತು ಸಾವಿರ ಅಶ್ವಮೇಧಯಾಗಗಳನ್ನು ಮಾಡಿದ ಫಲಕ್ಕಿಂತಲೂ ಅಧಿಕವಾದುದು.

**ತತೋ ನಿವೃತ್ತೋ ರಾಜೇನ್ದ್ರ ರುದ್ರಂ ಪದಮಥಾವಿಶೇತ್ ।**
**ಅರ್ಚಯಿತ್ವಾ ಮಹಾದೇವಮಶ್ವಮೇಧಫಲಂ ಲಭೇತ್ ॥೧೦೦॥**

ಯುಧಿಷ್ಠಿರ! ವಡವಾತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ರುದ್ರಪದಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ರುದ್ರಪದ ಕ್ಷೇತ್ರದಲ್ಲಿ ಮಹಾದೇವನನ್ನು ಸಂದರ್ಶಿಸಿ ಅನನ್ಯಭಕ್ತಿಯಿಂದ ಅರ್ಚಿಸಿದರೆ ಅಶ್ವಮೇಧಯಾಗಮಾಡಿದ ಫಲವು ಪ್ರಾಪ್ತವಾಗುತ್ತದೆ.

**ಮಣಿಮನ್ತಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।**
**ಏಕರಾತ್ರೋಷಿತೋ ರಾಜನ್ನಗ್ನಿಷ್ಟೋಮಫಲಂ ಲಭೇತ್ ॥೧೦೧॥**

ರುದ್ರಪದಕ್ಷೇತ್ರದ ಸಂದರ್ಶನವಾದನಂತರ ಯಾತ್ರಿಕನು ಮಣಿಮಂತ ಪರ್ವತಕ್ಕೆ ಪ್ರಯಾಣಮಾಡಬೇಕು. ಆ ಪರ್ವತದ ತಪ್ಪಲಲ್ಲಿ ಜಿತೇಂದ್ರಿಯ

ನಾಗಿ ಬ್ರಹ್ಮಚರ್ಯವ್ರತದಿಂದ ತದೇಕಚಿತ್ತನಾಗಿ ಒಂದು ರಾತ್ರಿಯನ್ನು ಕಳೆದಲ್ಲಿ ಅಗ್ನಿಷ್ಟೋಮಯಾಗಮಾಡಿದ ಫಲವು ಪ್ರಾಪ್ತವಾಗುತ್ತದೆ.

**ಅಥ ಗಚ್ಛೇತ ರಾಜೇನ್ದ್ರ ದೇವಿಕಾಂ ಲೋಕವಿಶ್ರುತಾಮ್ ।**
**ಪ್ರಸೂತಿರ್ಯತ್ರ ವಿಪ್ರಾಣಾಂ ಶ್ರೂಯತೇ ಭರತರ್ಷಭ ॥೧೦೨॥**

**ತ್ರಿಶೂಲಪಾಣೇಃ ಸ್ಥಾನಂ ಚ ತ್ರಿಷು ಲೋಕೇಷು ವಿಶ್ರುತಮ್ ।**
**ದೇವಿಕಾಯಾಂ ನರಃ ಸ್ನಾತ್ವಾ ಸಮಭ್ಯರ್ಚ್ಯ ಮಹೇಶ್ವರಮ್ ॥೧೦೩॥**

**ಯಥಾಶಕ್ತಿ ಚರುಂ ತತ್ರ ನಿವೇದ್ಯ ಭರತರ್ಷಭ ।**
**ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಲಭತೇ ಫಲಮ್ ॥೧೦೪॥**

ಮಣಿಮಂತಪರ್ವತದ ಸಂದರ್ಶನವನ್ನು ಮಾಡಿಕೊಂಡು ಮುಂದಕ್ಕೆ ಸಕಲಲೋಕಪ್ರಸಿದ್ಧವಾದ ದೇವಿಕಾಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಮಹಾತೀರ್ಥಕ್ಷೇತ್ರದಲ್ಲಿಯೇ ಪ್ರಪ್ರಥಮವಾಗಿ ಬ್ರಾಹ್ಮಣರು ಪ್ರಾದುರ್ಭವಿಸಿದರೆಂದು ಹಿರಿಯರು ಹೇಳಿದ್ದನ್ನು ಕೇಳಿದ್ದೇವೆ. ಆ ದೇವಿಕಾತೀರ್ಥಕ್ಷೇತ್ರದ ಸಮೀಪದಲ್ಲಿಯೇ ತ್ರಿಶೂಲಿಯ ಕ್ಷೇತ್ರವೂ ಇರುವುದು. ಆ ಕ್ಷೇತ್ರವೂ ದೇವಿಕಾಕ್ಷೇತ್ರದಂತೆಯೇ ಸಕಲಲೋಕಪ್ರಸಿದ್ಧವಾಗಿರುವುದು. ಯಾತ್ರಿಕನು ದೇವಿಕಾಕ್ಷೇತ್ರದಲ್ಲಿ ಸ್ನಾನಮಾಡಿ, ತ್ರಿಶೂಲಪಾಣಿಯಾದ ಮಹಾದೇವನನ್ನು ಅರ್ಚಿಸಿ, ಯಥಾಶಕ್ತಿ ಚರುವನ್ನು ಸ್ವಾಮಿಗೆ ನಿವೇದನಮಾಡಬೇಕು. ಹೀಗೆ ಮಾಡುವುದರಿಂದ ಸಕಲಕಾಮನೆಗಳನ್ನೂ ಕೊಡಲು ಸಮರ್ಥವಾದ ಯಾಗವನ್ನು ಮಾಡಿದ ಫಲವನ್ನು ಯಾತ್ರಿಕನು ಪಡೆಯುತ್ತಾನೆ.

**ಕಾಮಾಖ್ಯಂ ತತ್ರ ರುದ್ರಸ್ಯ ತೀರ್ಥಂ ದೇವನಿಷೇವಿತಮ್ ।**
**ತತ್ರ ಸ್ನಾತ್ವಾ ನರಃ ಕ್ಷಿಪ್ರಂ ಸಿದ್ಧಿಂ ಪ್ರಾಪ್ನೋತಿ ಭಾರತ ॥೧೦೫॥**

ಆ ದೇವಿಕಾತೀರ್ಥದ ಸಮೀಪದಲ್ಲಿಯೇ ಕಾಮಾಖ್ಯವೆಂಬ ಮತ್ತೊಂದು ರುದ್ರತೀರ್ಥವಿದೆ. ಆ ತೀರ್ಥವು ಸರ್ವದಾ ದೇವತೆಗಳಿಂದ ಸೇವಿಸಲ್ಪಡುತ್ತಿರುವುದು. ಶುದ್ಧಾಂತಃಕರಣದಿಂದ ಆ ತೀರ್ಥದಲ್ಲಿ ಸ್ನಾನ ಮಾಡುವವನು ಒಡನೆಯೇ ಸಕಲಸಿದ್ಧಿಗಳನ್ನೂ ಪಡೆಯುತ್ತಾನೆ.

**ಯಜನಂ ಯಾಜನಂ ಚೈವ ತಥೈವ ಬ್ರಹ್ಮವಾಲುಕಮ್ ।**
**ಪುಷ್ಪಾಮ್ಭಶ್ಚ ಉಪಸ್ಪೃಶ್ಯ ನ ಶೋಚೇನ್ಮರಣಂ ಗತಃ ॥೧೦೬॥**

ಆ ದೇವಿಕಾತೀರ್ಥಕ್ಷೇತ್ರದಲ್ಲಿಯೇ ಯಜನ, ಯಾಜನ, ಬ್ರಹ್ಮವಾಲುಕ ಮತ್ತು ಪುಷ್ಪಾಂಭಗಳೆಂಬ ಮತ್ತೂ ನಾಲ್ಕು ಪುಣ್ಯತೀರ್ಥಗಳಿವೆ. ಆ ತೀರ್ಥ ಗಳಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಮಾನವನು ಮರಣಾನಂತರದಲ್ಲಿ ಪ್ರಾಪ್ತವಾಗುವ ಯಾತನೆಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.

**ಅರ್ಧಯೋಜನವಿಸ್ತಾರಾ ಪಞ್ಚಯೋಜನಮಾಯತಾ ।**
**ಏತಾವತೀ ವೇದಿಕಾ ತು ಪುಣ್ಯಾ ದೇವರ್ಷಿಸೇವಿತಾ ॥೧೦೮॥**

ಯುಧಿಷ್ಠಿರ! ಆ ದೇವಿಕಾಪುಣ್ಯಕ್ಷೇತ್ರದಲ್ಲಿ ದೇವರ್ಷಿಗಳಿಂದ ಸಂಸೇವ್ಯಮಾನವಾಗಿರುವ, ಐದು ಯೋಜನಗಳಷ್ಟು ಉದ್ದವಿರುವ ಮತ್ತು ಅರ್ಧಯೋಜನದಷ್ಟು ಅಗಲವಿರುವ, ವಿಸ್ತಾರವಾದ, ಪುಣ್ಯಪ್ರದವಾದ ವೇದಿಕೆಯಿದೆ.

ದೇವಿಕಾಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ದೀರ್ಘ ಸತ್ರಕ್ಷೇತ್ರಕ್ಕೆ ಪ್ರಯಾಣಮಾಡಬೇಕು.

**ತತ್ರ ಬ್ರಹ್ಮಾದಯೋ ದೇವಾಃ ಸಿದ್ಧಾಶ್ಚ ಪರಮರ್ಷಯಃ ।**
**ದೀರ್ಘಸತ್ರಮುಪಾಸನ್ತೇ ದೀಕ್ಷಿತಾ ನಿಯತವ್ರತಾಃ ॥೧೦೯॥**

**ಗಮನಾದೇವ ರಾಜೇನ್ದ್ರ ದೀರ್ಘಸತ್ರಮರಿಂದಮ ।**
**ರಾಜಸೂಯಾಶ್ವಮೇಧಾಭ್ಯಾಂ ಫಲಂ ಪ್ರಾಪ್ನೋತಿ ಭಾರತ ॥೧೧೦॥**

ಆ ಮಹಾಕ್ಷೇತ್ರದಲ್ಲಿಯೇ ಹಿಂದೆ ಬ್ರಹ್ಮನೇ ಮೊದಲಾದ ದೇವತೆ ಗಳೂ, ಸಿದ್ಧರೂ, ಮಹರ್ಷಿಗಳೂ ನಿಯಮವ್ರತಾನುಷ್ಠಾನಗಳಿಂದ ದೀರ್ಘ ಸತ್ರದ ದೀಕ್ಷಾವಿಧಿಯನ್ನು ಕೈಗೊಂಡರು. ಆದುದರಿಂದ ಆ ಕ್ಷೇತ್ರಕ್ಕೆ ದೀರ್ಘ ಸತ್ರವೆಂದೇ ಹೆಸರಾಯಿತು. ಆ ಪುಣ್ಯಕ್ಷೇತ್ರಕ್ಕೆ ಪ್ರವೇಶಮಾಡುವುದರಿಂದಲೇ ರಾಜಸೂಯಯಾಗದ ಮತ್ತು ಅಶ್ವಮೇಧಯಾಗದ ಫಲಕ್ಕಿಂತಲೂ ಹೆಚ್ಚಿನ ಫಲವು ಪ್ರಾಪ್ತವಾಗುತ್ತದೆ. ದೀರ್ಘಸತ್ರಕ್ಷೇತ್ರದ ಪ್ರವಾಸವನ್ನು ಮುಗಿಸಿ ಕೊಂಡು ಮುಂದೆ ಯಾತ್ರಿಕನು ಜಿತೇಂದ್ರಿಯನಾಗಿ, ನಿಯತಾಹಾರಿಯಾಗಿ ವಿನಶನಕ್ಷೇತ್ರಕ್ಕೆ ಪ್ರವಾಸಮಾಡಬೇಕು. ಮೇರುವಿನ ಪೃಷ್ಠಭಾಗದಲ್ಲಿ ಹುಟ್ಟಿ ವಿನಶನಮಹಾಕ್ಷೇತ್ರದಲ್ಲಿ ಅಂತರ್ವಾಹಿನಿಯಾಗಿರುವ ಸರಸ್ವತಿಯು ಮುಂದೆ ಚಮಸೋದ್ಭೇದ-ಶಿವೋದ್ಭೇದ-ನಾಗೋದ್ಭೇದತೀರ್ಥಗಳಲ್ಲಿ ಕಾಣಿಸಿಕೊಳ್ಳು ತ್ತಾಳೆ.

**ಸ್ನಾತ್ವಾ ತು ಚಮಸೋದ್ಭೇದೇ ಅಗ್ನಿಷ್ಟೋಮಫಲಂ ಲಭೇತ್ ।**
**ಶಿವೋದ್ಭೇದೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ।**
**ನಾಗೋದ್ಭೇದೇ ನರಃ ಸ್ನಾತ್ವಾ ನಾಗಲೋಕಮವಾಪ್ನುಯಾತ್ ॥**

ಚಮಸೋದ್ಭೇದದಲ್ಲಿ ಸ್ನಾನಮಾಡಿದರೆ ಅಗ್ನಿಷ್ಟೋಮಯಾಗವನ್ನು ಮಾಡುವುದರಿಂದ ಪ್ರಾಪ್ತವಾಗುವ ಫಲವೂ, ಶಿವೋದ್ಭೇದದಲ್ಲಿ ಸ್ನಾನಮಾಡಿದರೆ ಸಹಸ್ರಧೇನುಗಳನ್ನು ದಾನಮಾಡುವುದರಿಂದ ಪ್ರಾಪ್ತವಾಗುವ ಫಲವೂ, ನಾಗೋದ್ಭೇದದಲ್ಲಿ ಸ್ನಾನಮಾಡಿದರೆ ನಾಗಲೋಕವೂ ಲಭಿಸುತ್ತದೆ.

ಯುಧಿಷ್ಠಿರ! ವಿನಶನತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿ ಮುಂದೆ ಯಾತ್ರಿಕನು ದುರ್ಲಭವಾದ ಶಶಯಾನಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಸರಸ್ವತೀನದಿಯಲ್ಲಿರುವ ಆ ಶಶಯಾನತೀರ್ಥದಲ್ಲಿ ಮೊಲದ ರೂಪವನ್ನು ಧರಿಸಿರುವ (ಮೊಲದಂತೆ ತೋರುವ) ಕೊಕ್ಕರೆಗಳು (ಸಾರಸಪಕ್ಷಿಗಳು) ಪ್ರತಿವರ್ಷವೂ ಕಾರ್ತಿಕಮಾಸದಲ್ಲಿ ಹುಣ್ಣಿಮೆಯಾದ ಮೇಲೆ ವಿಹರಿಸುತ್ತವೆ.

**ತತ್ರ ಸ್ನಾತ್ವಾ ನರವ್ಯಾಘ್ರ ದ್ಯೋತತೇ ಶಶಿವತ್ಸದಾ ।**
**ಗೋಸಹಸ್ರಫಲಂ ಚೈವ ಪ್ರಾಪ್ನುಯಾದ್ಭರತರ್ಷಭ ॥೧೧೬॥**

ಶಶಯಾನಸರೋವರದಲ್ಲಿ ನಿಯಮಪೂರ್ವಕವಾಗಿ ಸ್ನಾನಮಾಡುವ ಯಾತ್ರಿಕನು ಚಂದ್ರನಂತೆ ಪ್ರಕಾಶಿಸುತ್ತಾನೆ ಮತ್ತು ಸಹಸ್ರಗೋವುಗಳನ್ನು ದಾನಮಾಡಿದ ಮಹಾಪುಣ್ಯವು ಅವನಿಗೆ ಲಭಿಸುತ್ತದೆ.

**ಕುಮಾರಕೋಟಿಮಾಸಾದ್ಯ ನಿಯತಃ ಕುರುನನ್ದನ ।**
**ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ ।**
**ಗವಾಮಯುತಮಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥೧೧೭॥**

ಶಶಯಾನತೀರ್ಥದಲ್ಲಿ ಸ್ನಾನಮಾಡಿಕೊಂಡು ಯಾತ್ರಿಕನು ಮುಂದೆ ಕುಮಾರಕೋಟಿತೀರ್ಥಕ್ಕೆ ಪ್ರಯಾಣಮಾಡಬೇಕು. ಜಿತೇಂದ್ರಿಯನಾಗಿ ನಿಯತವ್ರತನಾಗಿ ಕುಮಾರಕೋಟಿಯಲ್ಲಿ ಸ್ನಾನಮಾಡಿ ಪಿತೃದೇವತೆಗಳನ್ನು ತರ್ಪಣಾದಿಗಳಿಂದಲೂ–ದೇವತೆಗಳನ್ನು ಪೂಜಾದಿಗಳಿಂದಲೂ ಅರ್ಚಿಸಬೇಕು. ಹೀಗೆ ಮಾಡುವುದರಿಂದ ಯಾತ್ರಿಕನಿಗೆ ಹತ್ತು ಸಾವಿರ ಗೋವುಗಳನ್ನು ದಾನಮಾಡಿದ ಫಲವು ಪ್ರಾಪ್ತವಾಗುತ್ತದೆ ಮತ್ತು ಅವನ ಪೂರ್ವಜರು ಉತ್ತಮಲೋಕಗಳನ್ನೂ ಪಡೆಯುತ್ತಾರೆ.

ಕುಮಾರಕೋಟಿತೀರ್ಥಯಾತ್ರೆಯನ್ನು ಮುಗಿಸಿಕೊಂಡು ಮುಂದೆ ರುದ್ರಕೋಟಿಗೆ ಪ್ರಯಾಣಮಾಡಬೇಕು. ರುದ್ರಕೋಟಿಯಲ್ಲಿ ಹಿಂದೆ ಒಂದು ಕೋಟಿ ಋಷಿ-ಮಹರ್ಷಿಗಳು ಮಹೇಶ್ವರನನ್ನು ದರ್ಶನಮಾಡುವ ಸಲುವಾಗಿ ಸೇರಿದ್ದರು. ಅವರೆಲ್ಲರೂ–'ನಾನು ಮೊದಲು ಮಹೇಶ್ವರನನ್ನು ನೋಡುತ್ತೇನೆ; ನಾನು ಮೊದಲು ನೋಡುತ್ತೇನೆ'–ಎಂದು ಪರಸ್ಪರವಾಗಿ ಸ್ಪರ್ಧಿಸುತ್ತಿದ್ದರು. ಯೋಗಿಯಾದ ಪರಶಿವನು ಮಹರ್ಷಿಗಳ ಹೃದಯದಲ್ಲಿದ್ದ ಆಕಾಂಕ್ಷೆಯನ್ನು ತನ್ನ ಯೋಗಶಕ್ತಿಯಿಂದ ತಿಳಿದವನಾಗಿ ಕೋಟಿ ರುದ್ರರೂಪಗಳನ್ನು ತಾಳಿ ಪ್ರತಿಯೊಬ್ಬ ಮಹರ್ಷಿಯ ಮುಂದೆಯೂ ನಿಂತು ದರ್ಶನವನ್ನಿತ್ತನು. ಪರಶಿವನು ಹೀಗೆ ಮಾಡಿದುದರಿಂದ ಪ್ರತಿಯೊಬ್ಬರೂ ತಾವೇ ಮೊದಲು ಪರಮೇಶ್ವರನನ್ನು ನೋಡಿದುದಾಗಿ ಭಾವಿಸಿ ಪರಶಿವನನ್ನು ನಾನಾ ಪ್ರಕಾರವಾಗಿ ಸ್ತೋತ್ರಮಾಡಿದರು. ಅವರ ಸ್ತೋತ್ರಕ್ಕೆ ಮೆಚ್ಚಿದ ಭಗವಂತನು ಅವರ ಧರ್ಮವು ವೃದ್ಧಿಯಾಗಲೆಂದು ಹರಸಿ ಅದೃಶ್ಯನಾದನು. ಆದುದರಿಂದಲೇ ಆ ತೀರ್ಥಕ್ಕೆ ರುದ್ರಕೋಟಿಯೆಂದು ಹೆಸರಾಯಿತು.

**ತತ್ರ ಸ್ನಾತ್ವಾ ನರವ್ಯಾಘ್ರ ರುದ್ರಕೋಟ್ಯಾಂ ನರಃ ಶುಚಿಃ ।**
**ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥೧೨೪॥**

ರುದ್ರಕೋಟಿಯಲ್ಲಿ ಸ್ನಾನಮಾಡುವವನು ಅಶ್ವಮೇಧಯಾಗಮಾಡಿದ ಫಲವನ್ನು ಪಡೆಯುವುದಲ್ಲದೇ–ತನ್ನ ಕುಲವನ್ನೂ ಉದ್ಧಾರಮಾಡುತ್ತಾನೆ.

ರುದ್ರಕೋಟಿತೀರ್ಥಯಾತ್ರೆಯನ್ನು ಮಾಡಿಕೊಂಡು ಯಾತ್ರಿಕನು ಮುಂದೆ ಸರಸ್ವತೀ-ಸಾಗರಸಂಗಮಸ್ಥಾನಕ್ಕೆ ಪ್ರಯಾಣಮಾಡಬೇಕು. ಆ ಸಂಗಮಸ್ಥಾನವು ಪರಮಪವಿತ್ರವಾದ ಮತ್ತು ಲೋಕಪ್ರಸಿದ್ಧವಾದ ಕ್ಷೇತ್ರ ವಾಗಿದೆ. ಬ್ರಹ್ಮಪುರಸ್ಸರರಾದ ದೇವತೆಗಳೂ, ಜಿತೇಂದ್ರಿಯರಾದ ಋಷಿ-ಮಹರ್ಷಿಗಳೂ ಆ ಪುಣ್ಯಕ್ಷೇತ್ರಕ್ಕೆ ಪ್ರತಿವರ್ಷವೂ ಚೈತ್ರಶುದ್ಧ ಚತುರ್ದಶಿಯ ದಿನ ಆಗಮಿಸಿ ದೇವದೇವನಾದ ಕೇಶವನನ್ನು ಅರ್ಚನೆಮಾಡುತ್ತಾರೆ.

**ತತ್ರ ಸ್ನಾತ್ವಾ ನರವ್ಯಾಘ್ರ ವಿನ್ದೇದ್ಬಹುಸುವರ್ಣಕಮ್ ।**
**ಸರ್ವಪಾಪವಿಶುದ್ಧಾತ್ಮಾ ಬ್ರಹ್ಮಲೋಕಂ ಸ ಗಚ್ಛತಿ ॥೧೨೭॥**

**ಋಷೀಣಾಂ ಯತ್ರ ಸತ್ರಾಣಿ ಸಮಾಪ್ತಾನಿ ನರಾಧಿಪ ।**
**ತತ್ರಾವಸಾನಮಾಸಾದ್ಯ ಗೋಸಹಸ್ರಫಲಂ ಲಭೇತ್ ॥೧೨೮॥**

ಆ ಸರಸ್ವತೀ-ಸಾಗರಸಂಗಮದಲ್ಲಿ ಸ್ನಾನಮಾಡಿದವನು ಸುವರ್ಣರಾಶಿಯನ್ನೇ ದಾನಮಾಡಿದ ಮಹಾಪುಣ್ಯವನ್ನು ಪಡೆದು ಗತಕಲ್ಮಷನಾಗಿ ಅವಸಾನಾನಂತರದಲ್ಲಿ ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಋಷಿ-ಮಹರ್ಷಿಗಳು ತಮ್ಮಿಂದ ಸಂಕಲ್ಪಿತವಾದ ಯಾಗಗಳನ್ನು ಪೂರ್ಣಗೊಳಿಸಿದ ಆ ಮಹಾಕ್ಷೇತ್ರದಲ್ಲಿ ಮರಣಹೊಂದುವವನು ಸಹಸ್ರಗೋವುಗಳನ್ನು ದಾನಮಾಡಿದ ಮಹಾಫಲದೊಡನೆ ಪುಣ್ಯಲೋಕವನ್ನು ಪಡೆಯುತ್ತಾನೆ.

೮೨ನೆಯ ಅಧ್ಯಾಯವು ಮುಗಿಯಿತು.

೮೩ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಕುರುಕ್ಷೇತ್ರದಲ್ಲಿರುವ ತೀರ್ಥಗಳ ವರ್ಣನೆ

ಧರ್ಮಜ! ಸರಸ್ವತೀ-ಸಾಗರಸಂಗಮಕ್ಷೇತ್ರದ ಯಾತ್ರೆಮಾಡಿದ ನಂತರ ಯಾತ್ರಿಕನು ಮುಂದಕ್ಕೆ ಪಾಪನಾಶಕವಾದ ಸುಪ್ರಸಿದ್ಧವಾದ ಕುರುಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದ ದರ್ಶನಮಾತ್ರದಿಂದಲೇ ಪ್ರಾಣಿಗಳ ಸಕಲಪಾಪಗಳೂ ಪರಿಹಾರವಾಗುತ್ತವೆ.

**ಕುರುಕ್ಷೇತ್ರಂ ಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಮ್ ।**
**ಯ ಏವಂ ಸತತಂ ಬ್ರೂಯಾತ್ಸರ್ವಪಾಪೈಃ ಪ್ರಮುಚ್ಯತೇ ॥೨॥**

**ಪಾಂಸವೋಽಪಿ ಕುರುಕ್ಷೇತ್ರೇ ವಾಯುನಾ ಸಮುದೀರಿತಾಃ ।**
**ಅಪಿ ದುಷ್ಕೃತಕರ್ಮಾಣಂ ನಯನ್ತಿ ಪರಮಾಂ ಗತಿಮ್ ॥೩॥**

**ದಕ್ಷಿಣೇನ ಸರಸ್ವತ್ಯಾ ದೃಷದ್ವತ್ಯುತ್ತರೇಣ ಚ ।**
**ಯೇ ವಸನ್ತಿ ಕುರುಕ್ಷೇತ್ರೇ ತೇ ವಸನ್ತಿ ತ್ರಿವಿಷ್ಟಪೇ ॥೪॥**

'ಕುರುಕ್ಷೇತ್ರಕ್ಕೆ ಹೋಗುತ್ತೇನೆ; ಕುರುಕ್ಷೇತ್ರದಲ್ಲಿ ವಾಸಮಾಡುತ್ತೇನೆ'–ಹೀಗೆ ಬಾರಿ-ಬಾರಿಗೂ ಪುನಶ್ಚರಣೆಮಾಡಿದಮಾತ್ರದಿಂದಲೇ ಮಾನವನು ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಅಂತಹ ಮಹಾಪುಣ್ಯಕ್ಷೇತ್ರವದು. ಧರ್ಮಜ! ಆ ಕುರುಕ್ಷೇತ್ರದ ಮೇಲೆ ಬೀಸುವ ಗಾಳಿಯಿಂದ ಮೇಲೆದ್ದ ಧೂಳಿನ ಸ್ಪರ್ಶವಾದರೂ ಸಾಕು–ಮಹಾಪಾಪಿಯನ್ನು ಕೂಡ ಅವಸಾನಾನಂತರದಲ್ಲಿ ಉತ್ತಮಲೋಕಕ್ಕೆ ಒಯ್ಯಲು ಸಮರ್ಥವಾಗು

ತ್ತದೆ. ಸರಸ್ವತೀನದಿಯ ದಕ್ಷಿಣದಿಕ್ಕಿಗೂ, ಧೃಷದ್ವತೀನದಿಯ ಉತ್ತರದಿಕ್ಕಿಗೂ ಇರುವ ಮಹಾಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯಾರು ವಾಸಮಾಡುತ್ತಾರೆಯೋ–ಅವರು ಅವಸಾನಾನಂತರದಲ್ಲಿ ಸ್ವರ್ಗಲೋಕದಲ್ಲಿ ವಾಸಮಾಡುತ್ತಾರೆ. (ಅಲ್ಲಿ ವಾಸಮಾಡುವುದರಿಂದ ಪ್ರಾಪ್ತವಾಗುವ ಪುಣ್ಯವಿಶೇಷದಿಂದ ಅವರಿಗೆ ಸ್ವರ್ಗಲೋಕಪ್ರಾಪ್ತಿಯಾಗುತ್ತದೆ.) ಸರಸ್ವತೀನದಿಯ ದಕ್ಷಿಣದಲ್ಲಿರುವ ಕುರುಕ್ಷೇತ್ರದಲ್ಲಿ ಯಾತ್ರಿಕನು ಒಂದು ತಿಂಗಳಿದ್ದು ವ್ರತಾನುಷ್ಠಾನಗಳನ್ನು ಮಾಡಬೇಕು. ಬ್ರಹ್ಮಪುರಸ್ಸರರಾದ ದೇವತೆಗಳೂ, ಋಷಿ-ಮಹರ್ಷಿಗಳೂ, ಸಿದ್ಧರೂ, ಚಾರಣರೂ, ಗಂಧರ್ವರೂ, ಅಪ್ಸರೆಯರೂ, ಯಕ್ಷರೂ, ಸರ್ಪಗಳೂ–ಆ ಪರಮಪವಿತ್ರವಾದ ಬ್ರಹ್ಮಕ್ಷೇತ್ರದ ಯಾತ್ರೆ ಮಾಡುತ್ತಲೇ ಇರುತ್ತಾರೆ.

(ಇಲ್ಲಿ ಹೇಳಿರುವ ಕುರುಕ್ಷೇತ್ರ-ಬ್ರಹ್ಮಕ್ಷೇತ್ರ ಪದಗಳಿಗೆ ವ್ಯಾಖ್ಯಾನಕಾರರು ಹೀಗೆ ನಿರೂಪಣೆಮಾಡಿರುತ್ತಾರೆ.

**ಕುತ್ಸಿತಂ ರೌತೀತಿ ಕುರುಃ = ಪಾಪಂ, ತಸ್ಯ ಕ್ಷೇಪಣಾತ್ತ್ರಾಯತ ಇತಿ ಕುರುಕ್ಷೇತ್ರಂ.** ಕುತ್ಸಿತವಾದ ಫಲಹೇತುವೇ ಪಾಪ. ಆ ಪಾಪದ ಸಂಪರ್ಕದಿಂದ ದೂರಮಾಡಲು ಸಮರ್ಥವಾದುದು ಕುರುಕ್ಷೇತ್ರ. **ಬ್ರಹ್ಮಲಬ್ಧಿಸ್ಥಾನತ್ವಾತ್ ಬ್ರಹ್ಮಸದನಂ ಅಥವಾ ಬ್ರಹ್ಮಕ್ಷೇತ್ರಂ** = ಆ ಮಹಾಕ್ಷೇತ್ರದಲ್ಲಿ ತದೇಕಚಿತ್ತರಾಗಿ ತಪಸ್ಸುಮಾಡುವ ಯೋಗಿಗಳಿಗೆ ಬ್ರಹ್ಮಸಾಕ್ಷಾತ್ಕಾರವು ಅತಿಶೀಘ್ರವಾಗಿ ಸಿದ್ಧಿಯಾಗುವುದರಿಂದ ಬ್ರಹ್ಮಕ್ಷೇತ್ರ ವೆಂದೂ ಹೆಸರು.)

ಯುಧಿಷ್ಠಿರ! ಈ ಹಿಂದೆ–'**ಕುರುಕ್ಷೇತ್ರಂ ಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಂ**'–ಎಂಬ ವಾಕ್ಯದ ಪುನಶ್ಚರಣೆಯಿಂದಲೇ ಸ್ವರ್ಗಲೋಕ ಪ್ರಾಪ್ತಿಯಾಗುವುದೆಂದು ಹೇಳಿದ್ದೆನಲ್ಲವೆ? ಇಷ್ಟೂ ಹೇಳಬೇಕಾಗಿಲ್ಲ.

**ಮನಸಾಪ್ಯಭಿಕಾಮಸ್ಯ ಕುರುಕ್ಷೇತ್ರಂ ಯುಧಿಷ್ಠಿರ ।**
**ಪಾಪಾನಿ ವಿಪ್ರಣಶ್ಯನ್ತಿ ಬ್ರಹ್ಮಲೋಕಂ ಚ ಗಚ್ಛತಿ ॥೭॥**

**ಗತ್ವಾ ಹಿ ಶ್ರದ್ಧಯಾ ಯುಕ್ತಃ ಕುರುಕ್ಷೇತ್ರಂ ಕುರೂದ್ವಹ ।**
**ಫಲಂ ಪ್ರಾಪ್ನೋತಿ ಚ ತದಾ ರಾಜಸೂಯಾಶ್ವಮೇಧಯೋಃ ॥೮॥**

ಕುರುಕ್ಷೇತ್ರಕ್ಕೆ ಹೋಗುವೆನೆಂದು ಮನಸ್ಸಿನಲ್ಲಿ ಸಂಕಲ್ಪಮಾಡಿ ಒಂದು ವೇಳೆ ಕಾರಣಾಂತರಗಳಿಂದ ಹೋಗಲು ಸಾಧ್ಯವಾಗದಿದ್ದರೂ ಅವನು ಪಾಪಗಳಿಂದ ವಿಮುಕ್ತನಾಗಿ ಅವಸಾನಾನಂತರದಲ್ಲಿ ಬ್ರಹ್ಮಲೋಕವನ್ನು ಪಡೆಯುತ್ತಾನೆ. ಶ್ರದ್ಧೆಯಿಂದ ಕುರುಕ್ಷೇತ್ರದ ಯಾತ್ರೆಯನ್ನು ಮಾಡುವವನು ರಾಜಸೂಯ ಮತ್ತು ಅಶ್ವಮೇಧಯಾಗಗಳನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

**ತತೋ ಮಚಕ್ರುಕಂ ನಾಮ ದ್ವಾರಪಾಲಂ ಮಹಾಬಲಮ್ ।**
**ಯಕ್ಷಂ ಸಮಭಿವಾದ್ಯೈವ ಗೋಸಹಸ್ರಫಲಂ ಲಭೇತ್ ॥೯॥**

ಅನಂತರದಲ್ಲಿ ಕುರುಕ್ಷೇತ್ರದ ದ್ವಾರಪಾಲಕನಾದ ಮಚಕ್ರುಕನೆಂಬ ಮಹಾಬಲಶಾಲಿಯಾದ ಯಕ್ಷನಿಗೆ ನಮಸ್ಕಾರಮಾಡಬೇಕು. ಶುದ್ಧಾಂತಃ ಕರಣನಾಗಿ ಆ ಯಕ್ಷನಿಗೆ ಸಾಷ್ಟಾಂಗನಮಸ್ಕಾರಮಾಡಿದ ಮಾತ್ರದಿಂದಲೇ ಯಾತ್ರಿಕನು ಸಹಸ್ರಗೋವುಗಳನ್ನು ದಾನಮಾಡಿದ ಮಹಾಪುಣ್ಯವನ್ನು ಪಡೆಯುತ್ತಾನೆ. ಯಾತ್ರಿಕನು ಮುಂದೆ ಉತ್ತಮೋತ್ತಮವಾದ, ಸತತವೆಂದು ಪ್ರಸಿದ್ಧವಾದ ಹರಿಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ಯಾವಾಗಲೂ ಶ್ರೀಹರಿಯ ಸಾನ್ನಿಧ್ಯವಿರುತ್ತದೆ.

**ತತ್ರ ಸ್ನಾತ್ವಾ ಚ ನತ್ವಾ ಚ ತ್ರಿಲೋಕಪ್ರಭವಂ ಹರಿಮ್ ।**
**ಅಶ್ವಮೇಧಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥೧೧॥**

ವಿಷ್ಣುತೀರ್ಥದಲ್ಲಿ ಸ್ನಾನಮಾಡಿ ಮೂರು ಲೋಕಗಳ ಉತ್ಪತ್ತಿಗೂ ಕಾರಣಭೂತನಾದ ಶ್ರೀಹರಿಯನ್ನು ಅನನ್ಯಭಕ್ತಿಯಿಂದ ಅರ್ಚಿಸಿದವನಿಗೆ ಅಶ್ವಮೇಧಯಾಗಮಾಡಿದ ಫಲವು ಪ್ರಾಪ್ತವಾಗುತ್ತದೆ ಮತ್ತು ಅವನು ಅವಸಾನಾನಂತರದಲ್ಲಿ ವಿಷ್ಣುಲೋಕವನ್ನೇ ಸೇರುತ್ತಾನೆ.

**ತತಃ ಪಾರಿಪ್ಲವಂ ಗಚ್ಛೇತ್ತೀರ್ಥಂ ತ್ರೈಲೋಕ್ಯವಿಶ್ರುತಮ್ ।**
**ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ಪ್ರಾಪ್ನೋತಿ ಭಾರತ ।**
**ಪೃಥಿವೀತೀರ್ಥಮಾಸಾದ್ಯ ಗೋಸಹಸ್ರಫಲಂ ಲಭೇತ್ ॥೧೨॥**

ವಿಷ್ಣುಕ್ಷೇತ್ರದ ಯಾತ್ರೆಯನ್ನು ಮುಗಿಸಿದನಂತರ ಯಾತ್ರಿಕನು ತ್ರಿಲೋಕಪ್ರಸಿದ್ಧವಾದ ಪಾರಿಪ್ಲವತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು.

ಆ ಪುಣ್ಯತೀರ್ಥದಲ್ಲಿ ಸ್ನಾನಮಾಡುವುದರಿಂದ ಅಗ್ನಿಷ್ಟೋಮ ಮತ್ತು ಅತಿರಾತ್ರಯಾಗಗಳನ್ನು ಮಾಡುವುದರಿಂದ ಪ್ರಾಪ್ತವಾಗುವ ಫಲಕ್ಕಿಂತಲೂ ಹೆಚ್ಚಿನ ಫಲವು ಪ್ರಾಪ್ತವಾಗುತ್ತದೆ. ಪಾರಿಪ್ಲವತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿದನಂತರ ಪೃಥಿವೀತೀರ್ಥಕ್ಕೆ ಪ್ರಯಾಣಮಾಡಬೇಕು. ಪುಣ್ಯತಮ ವಾದ ಪೃಥಿವೀತೀರ್ಥದಲ್ಲಿ ಸ್ನಾನಮಾಡುವುದರಿಂದ ಸಹಸ್ರಧೇನುಗಳನ್ನು ದಾನಮಾಡಿದ ಫಲವು ಲಭಿಸುತ್ತದೆ.

**ತತಃ ಶಾಲೂಕಿನೀಂ ಗತ್ವಾ ತೀರ್ಥಸೇವೀ ನರಾಧಿಪ ।**
**ದಶಾಶ್ವಮೇಧೇ ಸ್ನಾತ್ವಾ ಚ ತದೇವ ಫಲಮಾಪ್ನುಯಾತ್ ॥೧೩॥**

ಪೃಥಿವೀತೀರ್ಥದ ಸಂದರ್ಶನಾನಂತರದಲ್ಲಿ ಯಾತ್ರಿಕನು ಶಾಲೂಕಿನೀ ಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಶಾಲೂಕಿನೀತೀರ್ಥಕ್ಷೇತ್ರದಲ್ಲಿ ದಶಾಶ್ವಮೇಧವೆಂಬ ತೀರ್ಥವಿರುವುದು. ನಿಯತಮನಸ್ಕನಾಗಿ ಆ ತೀರ್ಥದಲ್ಲಿ ಸ್ನಾನಮಾಡಿದವನು ಹತ್ತು ಅಶ್ವಮೇಧಯಾಗಗಳನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

**ಸರ್ಪದೇವೀಂ ಸಮಾಸಾದ್ಯ ನಾಗಾನಾಂ ತೀರ್ಥಮುತ್ತಮಮ್ ।**
**ಅಗ್ನಿಷ್ಟೋಮಮವಾಪ್ನೋತಿ ನಾಗಲೋಕಂ ಚ ವಿನ್ದತಿ ॥೧೪॥**

ಅನಂತರದಲ್ಲಿ ಸರ್ಪಗಳ ತೀರ್ಥವೆಂದು ಪ್ರಸಿದ್ಧವಾಗಿರುವ ಸರ್ಪದೇವೀಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಸರ್ಪದೇವೀತೀರ್ಥದಲ್ಲಿ ಸ್ನಾನಮಾಡಿದವನಿಗೆ ಅಗ್ನಿಷ್ಟೋಮಯಾಗವನ್ನು ಮಾಡಿದ ಫಲವು ಪ್ರಾಪ್ತ ವಾಗುತ್ತದೆ ಮತ್ತು ಅವನು ಅವಸಾನಾನಂತರದಲ್ಲಿ ಭವ್ಯವಾದ ನಾಗಲೋಕ ವನ್ನು ಸೇರುತ್ತಾನೆ.

**ತತೋ ಗಚ್ಛೇತ ಧರ್ಮಜ್ಞ ದ್ವಾರಪಾಲಂ ತರನ್ತುಕಮ್ ।**
**ತತ್ರೋಷ್ಯ ರಜನೀಮೇಕಾಂ ಗೋಸಹಸ್ರಫಲಂ ಲಭೇತ್ ॥೧೫॥**

ಸರ್ಪದೇವಿಕ್ಷೇತ್ರದ ಪ್ರವಾಸಾನಂತರದಲ್ಲಿ ತರಂತುಕವೆಂಬ ದ್ವಾರ ಪಾಲಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಮಹಾಕ್ಷೇತ್ರದಲ್ಲಿ ಒಂದು ರಾತ್ರಿ ನಿಯಮವ್ರತಾನುಷ್ಠಾನದಿಂದ ಕಳೆದಲ್ಲಿ ಸಹಸ್ರಗೋವುಗಳನ್ನು ದಾನ ಮಾಡಿದ ಮಹಾಫಲವು ಪ್ರಾಪ್ತವಾಗುತ್ತದೆ.

**ತತಃ ಪಞ್ಚನದಂ ಗತ್ವಾ ನಿಯತೋ ನಿಯತಾಶನಃ ।**
**ಕೋಟಿತೀರ್ಥಮುಪಸ್ಪೃಶ್ಯ ಹಯಮೇಧಫಲಂ ಲಭೇತ್ ॥೧೬॥**

ತರಂತುಕಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಪಂಚನದಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯಕ್ಷೇತ್ರದಲ್ಲಿ ಸುಪ್ರಸಿದ್ಧವಾದ ಕೋಟಿತೀರ್ಥವಿದೆ. ಆ ತೀರ್ಥದಲ್ಲಿ ಸ್ನಾನಮಾಡಿದವನು ಅಶ್ವಮೇಧಯಾಗಮಾಡಿದ ಫಲವನ್ನು ಪಡೆಯುತ್ತಾನೆ.

**ಅಶ್ವಿನೋಸ್ತೀರ್ಥಮಾಸಾದ್ಯ ರೂಪವಾನಭಿಜಾಯತೇ ॥೧೭॥**

ಪಂಚನದಕ್ಷೇತ್ರದ ಪ್ರವಾಸವನ್ನು ಮುಗಿಸಿಕೊಂಡು ಮುಂದಕ್ಕೆ ಅಶ್ವಿನೀದೇವತೆಗಳ ತೀರ್ಥಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡುವವನು ಜನ್ಮಾಂತರದಲ್ಲಿ ಸ್ಫುರದ್ರೂಪಿಯಾಗಿ ಹುಟ್ಟುತ್ತಾನೆ.

**ತತೋ ಗಚ್ಛೇತ ಧರ್ಮಜ್ಞ ವಾರಾಹಂ ತೀರ್ಥಮುತ್ತಮಮ್ ।**
**ವಿಷ್ಣುರ್ವಾರಾಹರೂಪೇಣ ಪೂರ್ವಂ ಯತ್ರ ಸ್ಥಿತೋಽಭವತ್ ।**
**ತತ್ರ ಸ್ನಾತ್ವಾ ನರಶ್ರೇಷ್ಠ ಅಗ್ನಿಷ್ಟೋಮಫಲಂ ಲಭೇತ್ ॥೧೮॥**

ಅಶ್ವಿನೀದೇವತೆಗಳ ತೀರ್ಥದಲ್ಲಿ ಸ್ನಾನಮಾಡಿದನಂತರ ಯಾತ್ರಿಕನು ವಾರಾಹಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿಯೇ ಹಿಂದೆ ಮಹಾವಿಷ್ಣುವು ವರಾಹರೂಪವನ್ನು ಧರಿಸಿ ನಿಂತಿದ್ದನು. ಆ ವರಾಹತೀರ್ಥದಲ್ಲಿ ಸ್ನಾನಮಾಡುವವನು ಅಗ್ನಿಷ್ಟೋಮಯಾಗವನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

**ತತೋ ಜಯನ್ತ್ಯಾಂ ರಾಜೇನ್ದ್ರ ಸೋಮತೀರ್ಥಂ ಸಮಾವಿಶೇತ್ ।**
**ಸ್ನಾತ್ವಾ ಫಲಮವಾಪ್ನೋತಿ ರಾಜಸೂಯಸ್ಯ ಮಾನವಃ ॥೧೯॥**
**ಏಕಹಂಸೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೨೦॥**

ವಾರಾಹತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದಕ್ಕೆ ಯಾತ್ರಿಕನು ಜಯಂತೀಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಮಹಾಕ್ಷೇತ್ರದಲ್ಲಿ ಸೋಮತೀರ್ಥವೆಂಬ ಸುಪ್ರಸಿದ್ಧವಾದ ತೀರ್ಥವಿದೆ. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ರಾಜಸೂಯಯಾಗವನ್ನು ಮಾಡಿದ ಫಲವು ಪ್ರಾಪ್ತವಾಗುತ್ತದೆ. ಆ ಜಯಂತೀಕ್ಷೇತ್ರದಲ್ಲಿಯೇ ಏಕಹಂಸವೆಂಬ

ಮತ್ತೊಂದು ತೀರ್ಥವೂ ಇದೆ. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ಸಹಸ್ರಧೇನುಗಳನ್ನು ದಾನಮಾಡಿದ ಫಲವು ಪ್ರಾಪ್ತವಾಗುತ್ತದೆ.

**ಕೃತಶೌಚಂ ಸಮಾಸಾದ್ಯ ತೀರ್ಥಸೇವೀ ನರಾಧಿಪ ।**
**ಪುಣ್ಡರೀಕಮವಾಪ್ನೋತಿ ಕೃತಶೌಚೋ ಭವೇಚ್ಚ ಸಃ ॥೨೧॥**

ಜಯಂತೀಕ್ಷೇತ್ರದ ಪ್ರವಾಸವನ್ನು ಮುಗಿಸಿಕೊಂಡು ಯಾತ್ರಿಕನು ಕೃತಶೌಚಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪವಿತ್ರತೀರ್ಥದಲ್ಲಿ ಸ್ನಾನಮಾಡುವವನು ಚಿತ್ತಶುದ್ಧಿಯುಳ್ಳವನಾಗಿ ಅವಸಾನಾನಂತರದಲ್ಲಿ ಪುಂಡರೀಕನ (ವಿಷ್ಣುವಿನ) ಸಾನ್ನಿಧ್ಯವನ್ನು ಪಡೆಯುತ್ತಾನೆ. (ಪುಂಡರೀಕಯಾಗದ ಫಲವನ್ನು ಪಡೆಯುತ್ತಾನೆ.)

**ತತೋ ಮುಞ್ಜವಟಂ ನಾಮ ಸ್ಥಾಣೋಃ ಸ್ಥಾನಂ ಮಹಾತ್ಮನಃ ।**
**ಉಪೋಷ್ಯ ರಜನೀಮೇಕಾಂ ಗಾಣಪತ್ಯಮವಾಪ್ನುಯಾತ್ ॥೨೨॥**

ಕೃತಶೌಚತೀರ್ಥಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಸ್ಥಾಣುವಿನ (ಶಂಭುವಿನ) ಪವಿತ್ರಕ್ಷೇತ್ರವಾದ ಮುಂಜವಟಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ನಿರಾಹಾರನಾಗಿ, ತದೇಕಚಿತ್ತನಾಗಿ ಶಂಭುವನ್ನು ಧ್ಯಾನಮಾಡುತ್ತಾ ಒಂದು ರಾತ್ರಿಯನ್ನು ಕಳೆದಲ್ಲಿ ಅವನು ಜನ್ಮಾಂತರದಲ್ಲಿ ಗಾಣಪತ್ಯವನ್ನು ಹೊಂದುತ್ತಾನೆ.

**ತತ್ರೈವ ಚ ಮಹಾರಾಜ ಯಕ್ಷಿಣೀಂ ಲೋಕವಿಶ್ರುತಾಮ್ ।**
**ಸ್ನಾತ್ವಾಭಿಗಮ್ಯ ರಾಜೇನ್ದ್ರ ಸರ್ವಾನ್ಕಾಮಾನವಾಪ್ನುಯಾತ್ ॥೨೩॥**

ಮುಂಜವಟಕ್ಷೇತ್ರದಲ್ಲಿಯೇ ಯಕ್ಷಿಣೀ ಎಂಬ ತೀರ್ಥವಿದೆ. ಲೋಕಪ್ರಸಿದ್ಧವಾದ ಆ ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಯಕ್ಷಿಣೀದೇವತೆಯನ್ನು ಸೇವಿಸುವವನು ತನ್ನ ಸಕಲವಾದ ಅಭಿಲಾಷೆಗಳನ್ನೂ ಪಡೆಯುತ್ತಾನೆ. ಆ ಯಕ್ಷಿಣೀತೀರ್ಥವು ಕುರುಕ್ಷೇತ್ರಕ್ಕೆ ದ್ವಾರರೂಪವಾಗಿದೆ. ಯಾತ್ರಿಕನು ಶುದ್ಧಮನಸ್ಕನಾಗಿ ಆ ತೀರ್ಥಕ್ಕೆ ಪ್ರದಕ್ಷಿಣ-ನಮಸ್ಕಾರಗಳನ್ನು ಮಾಡಿ ಮುಂದೆ ಪ್ರಯಾಣಮಾಡಬೇಕು. ಆ ತೀರ್ಥವು ಪುಷ್ಕರತೀರ್ಥಕ್ಕೆ ಸಮಾನವಾದುದು ಮತ್ತು ಅದು ಜಮದಗ್ನಿಯ ಮಗನಾದ, ಮಹಾತ್ಮನಾದ ಭಗ

ವಾನ್ ಪರಶುರಾಮನಿಂದ ನಿರ್ಮಿತವಾದುದು. ಆ ತೀರ್ಥದಲ್ಲಿ ಸ್ನಾನಮಾಡಿ ಪಿತೃಗಳನ್ನೂ ದೇವತೆಗಳನ್ನೂ ತರ್ಪಣಾದಿಗಳಿಂದಲೂ–ಅರ್ಚನಾದಿ ಗಳಿಂದಲೂ ತೃಪ್ತಿಪಡಿಸುವವನು ಅಶ್ವಮೇಧಯಾಗವನ್ನು ಮಾಡಿದ ಫಲ ವನ್ನು ಪಡೆಯುತ್ತಾನೆ ಮತ್ತು ಹಿಂದೆಯೇ ಹೇಳಿದಂತೆ ಅವನ ಅಭಿಲಾಷೆ ಗಳೆಲ್ಲವೂ ಪೂರ್ಣವಾಗುತ್ತವೆ.

ಮುಂಜವಟಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ನಿಯತವ್ರತನಾಗಿ, ಜಿತೇಂದ್ರಿಯನಾಗಿ ರಾಮಹ್ರದತೀರ್ಥಕ್ಕೆ ಪ್ರಯಾಣಮಾಡಬೇಕು. ಮಹಾರಾಜ! ರಾಮಹ್ರದತೀರ್ಥದ ಪೂರ್ವೇತಿ ಹಾಸವು ಹೀಗಿರುವುದು : ಮಹಾಪರಾಕ್ರಮಿಯಾದ, ಮಹಾತೇಜಸ್ವಿಯಾದ ಭಗವಾನ್ ಪರಶುರಾಮನು ತನ್ನ ಭುಜಬಲ-ಪರಾಕ್ರಮಗಳಿಂದ ಪ್ರಪಂಚದ ಕ್ಷತ್ರಿಯರೆಲ್ಲರನ್ನೂ ಧ್ವಂಸಮಾಡಿ ಆ ಕ್ಷೇತ್ರದಲ್ಲಿ ಐದು ಕೊಳಗಳನ್ನು ತೋಡಿ ಕ್ಷತ್ರಿಯರ ರಕ್ತದಿಂದ ಆ ಐದು ಸರೋವರಗಳನ್ನೂ ತುಂಬಿಸಿದನಂತರ ಆ ರಕ್ತೋದಕದಿಂದಲೇ ತನ್ನ ತಂದೆಯಾದ ಜಮದಗ್ನಿಗೂ ಮತ್ತು ತನ್ನ ತಾತ-ಮುತ್ತಾತಂದಿರಿಗೂ ತರ್ಪಣಮಾಡಿದನು. ಅವನು ಮಾಡಿದ ಸಾಹಸಕಾರ್ಯದಿಂದ ಸಂತೃಪ್ತರಾದ ಪಿತೃಗಳು ಪರಶುರಾಮನನ್ನು ಕುರಿತು ಹೀಗೆಂದು ಹೇಳಿದರು : "ಭಾರ್ಗವರಾಮ! ಮಹಾಬಾಹುವೇ! ನಿನ್ನ ಪಿತೃ ಭಕ್ತಿಯನ್ನೂ ಮತ್ತು ಸಾಹಸವನ್ನೂ ನೋಡಿ ನಾವು ಸಂತೋಷಗೊಂಡಿರು ವೆವು. ನಿನಗೆ ಮಂಗಳವಾಗಲಿ. ನಿನಗಿಷ್ಟವಾದ ಯಾವ ವರವನ್ನಾದರೂ ಕೇಳು, ಮಗು! ಅನುಗ್ರಹಿಸುವೆವು."

ಶತ್ರುಗಳನ್ನು ಜಯಿಸುವವರಲ್ಲಿ ಶ್ರೇಷ್ಠನೆನಿಸಿದ ಪರಶುರಾಮನು, ತನ್ನ ಪಿತೃಗಳು ಆಕಾಶದಲ್ಲಿ ನಿಂತು ಹೇಳಿದ ಆ ಮಾತುಗಳನ್ನು ಕೇಳಿ ಬದ್ಧಾಂಜಲಿಯಾಗಿ ಹೇಳಿದನು :

**ಭವನ್ತೋ ಯದಿ ಮೇ ಪ್ರೀತಾ ಯದ್ಯನುಗ್ರಾಹ್ಯತಾ ಮಯಿ ।**
**ಪಿತೃಪ್ರಸಾದಮಿಚ್ಛೇಯಂ ತಪ ಆಪ್ಯಾಯನಂ ಪುನಃ ॥೩೨॥**

**ಯಚ್ಚ ರೋಷಾಭಿಭೂತೇನ ಕ್ಷತ್ರಮುತ್ಸಾದಿತಂ ಮಯಾ ।**
**ತತಶ್ಚ ಪಾಪಾನ್ಮುಚ್ಯೇಯಂ ಯುಷ್ಮಾಕಂ ತೇಜಸಾಪ್ಯಹಮ್ ।**
**ಹ್ರದಾಶ್ಚ ತೀರ್ಥಭೂತಾ ಮೇ ಭವೇಯುರ್ಭುವಿ ವಿಶ್ರುತಾಃ ॥೩೩॥**

"ಪಿತೃದೇವತೆಗಳೇ! ನಾನು ಮಾಡಿದ ಕಾರ್ಯದಿಂದ ನೀವು ಸಂತೃಪ್ತರಾಗಿರುವಿರಾದರೆ–ನಾನು ತಮ್ಮ ಅನುಗ್ರಹಕ್ಕೆ ಪಾತ್ರನಾಗಿರುವೆನಾದರೆ–ನಾನು ತಮ್ಮಿಂದ ಈ ಒಂದು ವರವನ್ನು ಪಡೆಯಲಿಚ್ಛಿಸುತ್ತೇನೆ. ನನ್ನಲ್ಲಿ ಈಗ ಕಾಲಕರ್ಮಸಂಯೋಗದಿಂದ ಉದ್ಭೂತವಾಗಿರುವ ಕ್ಷಾತ್ರಧರ್ಮವು ಲುಪ್ತವಾಗಿ ನಾನು ಪುನಃ ತಪಸ್ಸಿನಲ್ಲಿಯೇ ನಿರತನಾಗುವಂತೆಯೂ, ತಪಸ್ಸಿನಿಂದಲೇ ನನಗೆ ಪೂರ್ಣಾನಂದವುಂಟಾಗುವಂತೆಯೂ ಹರಸಿರಿ. ಕೋಪಾವಿಷ್ಟನಾಗಿ ಕ್ಷತ್ರಿಯಕುಲವನ್ನೇ ಸಂಹರಿಸಿದುದರಿಂದ ಪಾಪಭೂಯಿಷ್ಠನಾಗಿದ್ದೇನೆ. ನಿಮ್ಮ ಪ್ರಭಾವದಿಂದ ನಾನು ಆ ಮಹಾಪಾಪದಿಂದ ಮುಕ್ತಿ ಹೊಂದುವಂತಾಗಲಿ. ತಮಗೆ ತರ್ಪಣಾದಿಗಳನ್ನಿತ್ತು ತೃಪ್ತಿಪಡಿಸುವ ಸಲುವಾಗಿಯೇ ನಿರ್ಮಿತವಾದ ಈ ಐದು ರಕ್ತಸರೋವರಗಳೂ ಮುಂದೆ ಐದು ಪವಿತ್ರತೀರ್ಥಗಳೆಂದು ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದಲಿ."

ರಾಮನ ಮಾತುಗಳನ್ನು ಕೇಳಿ ಪರಮಪ್ರೀತರಾದ, ಸಂತುಷ್ಟರಾದ, ಆನಂದಭರಿತರಾದ ಪಿತೃಗಳು ಪರಶುರಾಮನನ್ನು ಕುರಿತು ಹೇಳಿದರು : "ನಿನ್ನಲ್ಲಿರುವ ಪಿತೃಭಕ್ತಿಯ ಫಲರೂಪವಾಗಿ ನಿನ್ನ ತಪಸ್ಸು ಅಭಿವೃದ್ಧಿ ಹೊಂದಲೆಂದು ಅನುಗ್ರಹಿಸುತ್ತವೆ. ಕೋಪಾವಿಷ್ಠನಾಗಿ ನೀನು ಕ್ಷತ್ರಿಯರನ್ನು ಧ್ವಂಸಮಾಡಿರುವುದರಿಂದ ಪ್ರಾಪ್ತವಾಗಿರುವ ಪಾಪದಿಂದಲೂ ನೀನು ವಿಮುಕ್ತನಾಗಿರುವೆ. ಮೇಲಾಗಿ ಆ ಕ್ಷತ್ರಿಯರು ತಾವು ಮಾಡಿದ ಪಾಪಕಾರ್ಯಗಳಿಂದ ವಿನಾಶಹೊಂದಿದರೇ ಹೊರತು ನೀನು ಮಾತ್ರವೇ ಅವರ ವಧೆಗೆ ಕಾರಣನಲ್ಲ.

**ಹ್ರದಾಶ್ಚ ತವ ತೀರ್ಥತ್ವಂ ಗಮಿಷ್ಯನ್ತಿ ನ ಸಂಶಯಃ ।**
**ಹ್ರದೇಷು ತೇಷು ಯಃ ಸ್ನಾತ್ವಾ ಪಿತೄನ್ಸಂತರ್ಪಯಿಷ್ಯತಿ ॥೩೭॥**
**ಪಿತರಸ್ತಸ್ಯ ವೈ ಪ್ರೀತಾ ದಾಸ್ಯನ್ತಿ ಭುವಿ ದುರ್ಲಭಮ್ ।**
**ಈಪ್ಸಿತಂ ಚ ಮನಃಕಾಮಂ ಸ್ವರ್ಗಲೋಕಂ ಚ ಶಾಶ್ವತಮ್ ॥೩೮॥**

ನಮ್ಮ ಸಂತೃಪ್ತಿಗಾಗಿಯೇ ನೀನು ನಿರ್ಮಿಸಿರುವ ಈ ಐದು ರಕ್ತ ಸರೋವರಗಳು ಮುಂದೆ ಪವಿತ್ರವಾದ ಸರೋವರಗಳೆಂದು ಪ್ರಸಿದ್ಧಿ ಹೊಂದುವುವು. ಇದರಲ್ಲಾವ ಸಂಶಯವೂ ಇಲ್ಲ. ಯಾವ ಯಾತ್ರಿಕನು ಈ ಸರೋವರಗಳಲ್ಲಿ ಸ್ನಾನಮಾಡಿ ಶುದ್ಧಾಂತಃಕರಣನಾಗಿ ತರ್ಪಣಾದಿಗಳನ್ನಿತ್ತು

ಪಿತೃದೇವತೆಗಳನ್ನು ಸಂತೃಪ್ತಿಗೊಳಿಸುವನೋ–ಅವನ ಆ ಕ್ರಿಯೆಯಿಂದ ಸಂತುಷ್ಟರಾಗುವ ಪಿತೃದೇವತೆಗಳು, ಭೂಲೋಕದಲ್ಲಿ ದುರ್ಲಭವಾದ ಅಭಿಲಾಷೆಗಳು ಕೂಡ ನೆರವೇರುವಂತೆ ಅವನಿಗೆ ಅನುಗ್ರಹಮಾಡುವರು ಮತ್ತು ಅವಸಾನಾನಂತರದಲ್ಲಿ ಶಾಶ್ವತವಾದ ಸ್ವರ್ಗಲೋಕವೂ ಸಿಕ್ಕುವಂತೆ ಅನುಗ್ರಹಿಸುವರು."

ಮಹಾರಾಜ! ಪರಶುರಾಮನಿಗೆ ಈ ವರಗಳನ್ನಿತ್ತು ಅವನನ್ನು ಹರಸಿ ಪಿತೃದೇವತೆಗಳು ಇದ್ದಲ್ಲಿಯೇ ಅದೃಶ್ಯರಾದರು.

ಈ ರೀತಿಯಲ್ಲಿ ಭಗವಾನ್ ಪರಶುರಾಮನಿಂದ ನಿರ್ಮಿತವಾದ ರಕ್ತಸರೋವರಗಳು ಪುಣ್ಯತೀರ್ಥಗಳಾಗಿ ಪರಿವರ್ತನೆಹೊಂದಿದುವು.

**ಸ್ನಾತ್ವಾ ಹ್ರದೇಷು ರಾಮಸ್ಯ ಬ್ರಹ್ಮಚಾರೀ ಶುಭವ್ರತಃ ।**
**ರಾಮಮಭ್ಯರ್ಚ್ಯ ರಾಜೇನ್ದ್ರ ಲಭೇದ್ಬಹು ಸುವರ್ಣಕಮ್ ॥೪೦॥**

ಬ್ರಹ್ಮಚರ್ಯೆಯಿಂದಿದ್ದು ಶುಭವ್ರತನಾಗಿ ಆ ರಾಮಹ್ರದಗಳಲ್ಲಿ ಸ್ನಾನ ಮಾಡಬೇಕು. ಸ್ನಾನಮಾಡಿದನಂತರ ಆ ಸರೋವರಗಳ ಅಧಿದೇವನಾದ ಭಗವಂತನಾದ ಪರಶುರಾಮನನ್ನು ಭಕ್ತಿಪೂರ್ವಕವಾಗಿ ಪೂಜಿಸಬೇಕು. ಹೀಗೆ ಮಾಡುವವನು ಬಹುಸುವರ್ಣಗಳನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ.

**ವಂಶಮೂಲಕಮಾಸಾದ್ಯ ತೀರ್ಥಸೇವೀ ಕುರೂದ್ವಹ ।**
**ಸ್ವವಂಶಮುದ್ಧರೇದ್ರಾಜನ್ಸ್ನಾತ್ವಾ ವೈ ವಂಶಮೂಲಕೇ ॥೪೧॥**

ರಾಮಹ್ರದಗಳಲ್ಲಿ ಸ್ನಾನಮಾಡಿ ಪರಶುರಾಮನನ್ನು ಅರ್ಚಿಸಿದನಂತರ ವಂಶಮೂಲತೀರ್ಥಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನ ಮಾಡುವವನು ವಂಶೋದ್ಧಾರಕನಾಗುತ್ತಾನೆ.

**ಕಾಯಶೋಧನಮಾಸಾದ್ಯ ತೀರ್ಥಂ ಭರತಸತ್ತಮ ।**
**ಶರೀರಶುದ್ಧಿಃ ಸ್ನಾತಸ್ಯ ತಸ್ಮಿಂಸ್ತೀರ್ಥೇ ನ ಸಂಶಯಃ ॥೪೨॥**
**ಶುದ್ಧದೇಹಶ್ಚ ಸಂಯಾತಿ ಶುಭಾಲ್ಲೋಕಾನನುತ್ತಮಾನ್ ॥೪೩॥**

ಭರತಶ್ರೇಷ್ಠನೇ! ಅನಂತರದಲ್ಲಿ ಯಾತ್ರಿಕನು ಕಾಯಶೋಧನವೆಂಬ ತೀರ್ಥಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ಸರೋವರದ ಅನ್ವರ್ಥನಾಮದಂತೆ ಮಿಂದವನ ಶರೀರಶುದ್ಧಿಯಾಗುವುದಲ್ಲದೇ

ಅವಸಾನಾನಂತರದಲ್ಲಿ ಪರಿಶುದ್ಧವಾದ ದೇಹವನ್ನು ಪಡೆದು ಶುಭಕರವಾದ ಉತ್ತಮಲೋಕಗಳನ್ನೂ ಪಡೆಯುತ್ತಾನೆ.

**ತತೋ ಗಚ್ಛೇತ ಧರ್ಮಜ್ಞ ತೀರ್ಥಂ ತ್ರೈಲೋಕ್ಯವಿಶ್ರುತಮ್ ।**
**ಲೋಕಾ ಯತ್ರೋದ್ಧೃತಾಃ ಪೂರ್ವಂ ವಿಷ್ಣುನಾ ಪ್ರಭವಿಷ್ಣುನಾ ॥೪೪॥**

**ಲೋಕೋದ್ಧಾರಂ ಸಮಾಸಾದ್ಯ ತೀರ್ಥಂ ತ್ರೈಲೋಕ್ಯಪೂಜಿತಮ್ ।**
**ಸ್ನಾತ್ವಾ ತೀರ್ಥವರೇ ರಾಜಲ್ಲೋಕಾನುದ್ಧರತೇ ಸ್ವಕಾನ್ ॥೪೫॥**

ಕಾಯಶೋಧನತೀರ್ಥಕ್ಷೇತ್ರದ ಪ್ರವಾಸಾನಂತರದಲ್ಲಿ ಯಾತ್ರಿಕನು ತ್ರಿಲೋಕಪ್ರಸಿದ್ಧವಾದ ಲೋಕೋದ್ಧಾರಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಅಸುರನೊಬ್ಬನು ಪಾತಾಳಕ್ಕೆ ಒಯ್ದಿದ್ದ ಈ ಭೂಮಂಡಲವನ್ನು ಮಹಾನುಭಾವನಾದ ಮಹಾವಿಷ್ಣುವು ಆ ಸ್ಥಳದಲ್ಲಿಯೇ ಮೇಲಕ್ಕೆ ಎತ್ತಿದನಾದ್ದರಿಂದ ಆ ಕ್ಷೇತ್ರಕ್ಕೆ ಲೋಕೋದ್ಧಾರವೆಂದೇ ಹೆಸರಾಗಿರುವುದು. ಆ ತೀರ್ಥದಲ್ಲಿ ಸ್ನಾನಮಾಡುವವನು ತನ್ನ ಬಂಧು-ಬಾಂಧವರನ್ನೂ, ತನ್ನ ವಂಶದವರನ್ನೂ ಉದ್ಧಾರಮಾಡುತ್ತಾನೆ ಮತ್ತು ತಾನೂ ಉತ್ತಮಲೋಕವನ್ನು ಪಡೆಯುತ್ತಾನೆ.

**ಶ್ರೀತೀರ್ಥಂ ಚ ಸಮಾಸಾದ್ಯ ಸ್ನಾತ್ವಾ ನಿಯತಮಾನಸಃ ।**
**ಅರ್ಚಯಿತ್ವಾ ಪಿತೄಂದೇವಾನ್ವಿಂದತೇ ಶ್ರಿಯಮುತ್ತಮಾಮ್ ॥೪೬॥**

ಲೋಕೋದ್ಧಾರತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಸುಪ್ರಸಿದ್ಧವಾದ ಶ್ರೀತೀರ್ಥಕ್ಕೆ ಪ್ರಯಾಣಮಾಡಬೇಕು. ಶ್ರೀತೀರ್ಥದಲ್ಲಿ ಸ್ನಾನಮಾಡಿ ಜಿತಮನಸ್ಕನಾಗಿ ದೇವ-ಪಿತೃಗಳನ್ನು ಯಥಾವಿಧಿಯಾಗಿ ಅರ್ಚಿಸುವುದರಿಂದ ಸಂಪತ್ಸಮೃದ್ಧಿಯುಂಟಾಗುತ್ತದೆ.

**ಕಪಿಲಾತೀರ್ಥಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।**
**ತತ್ರ ಸ್ನಾತ್ವಾರ್ಚಯಿತ್ವಾ ಚ ಪಿತೄನ್ಸ್ವಾನ್ದೈವತಾನ್ಯಪಿ ।**
**ಕಪಿಲಾನಾಂ ಸಹಸ್ರಸ್ಯ ಫಲಂ ವಿಂದತಿ ಮಾನವಃ ॥೪೭॥**

ಶ್ರೀತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಕಪಿಲಾತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಮಹಾರಾಜ! ನಾನು ಪದೇ-ಪದೇ ಹೇಳುತ್ತಿರುವಂತೆ ಯಾತ್ರಿಕನು ಯಾತ್ರೆಯ ಕಾಲದಲ್ಲಿ

ಬ್ರಹ್ಮಚರ್ಯವ್ರತದಿಂದಿರಬೇಕು ; ಜಿತೇಂದ್ರಿಯನಾಗಿರಬೇಕು ; ಅನುಷ್ಠಾನ ಪರನಾಗಿರಬೇಕು ; ಆಹಾರನಿಯಮದಿಂದಿರಬೇಕು ; ಮನಶ್ಶುದ್ಧಿಯುಳ್ಳವನಾಗಿರಬೇಕು. ಈ ವಿಷಯವು ಬಹಳ ಮುಖ್ಯವಾದುದು. ಈ ನಿಯಮಗಳನ್ನನುಸರಿಸಿ ಪವಿತ್ರತಮವಾದ ಕಪಿಲಾತೀರ್ಥದಲ್ಲಿ ಸ್ನಾನಮಾಡಿ ದೇವ-ಪಿತೃಗಳನ್ನು ಯಥಾವಿಧಿಯಾಗಿ ಅರ್ಚನೆಮಾಡುವುದರಿಂದ ಒಂದು ಸಾವಿರ ಕಪಿಲವರ್ಣದ ಗೋವುಗಳನ್ನು ದಾನಮಾಡುವುದರಿಂದ ಪ್ರಾಪ್ತವಾಗುವ ಫಲವನ್ನು ಪಡೆಯುತ್ತಾನೆ.

**ಸೂರ್ಯತೀರ್ಥಂ ಸಮಾಸಾದ್ಯ ಸ್ನಾತ್ವಾ ನಿಯತಮಾನಸಃ ।**
**ಅರ್ಚಯಿತ್ವಾ ಪಿತೄನ್ದೇವಾನುಪವಾಸಪರಾಯಣಃ ॥೪೮॥**

**ಅಗ್ನಿಷ್ಟೋಮಮವಾಪ್ನೋತಿ ಸೂರ್ಯಲೋಕಂ ಚ ಗಚ್ಛತಿ ॥೪೯॥**

ಕಪಿಲಾತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸೂರ್ಯತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಯಾತ್ರಿಕನು ಜಿತೇಂದ್ರಿಯನಾಗಿ ಸೂರ್ಯತೀರ್ಥದಲ್ಲಿ ಸ್ನಾನಮಾಡಿ, ನಿರಶನವ್ರತದಿಂದಿದ್ದು, ದೇವ-ಪಿತೃಗಳನ್ನು ಯಥಾವಿಧಿಯಾಗಿ ಅರ್ಚಿಸುವುದರಿಂದ ಅಗ್ನಿಷ್ಟೋಮಯಾಗವನ್ನು ಮಾಡಿದ ಫಲವನ್ನು ಪಡೆಯುತ್ತಾನೆ ಮತ್ತು ಅವಸಾನಾನಂತರದಲ್ಲಿ ಸೂರ್ಯನ ಲೋಕವನ್ನೂ ಸೇರುತ್ತಾನೆ.

**ಗವಾಂ ಭವನಮಾಸಾದ್ಯ ತೀರ್ಥಸೇವೀ ಯಥಾಕ್ರಮಮ್ ।**
**ತತ್ರಾಭಿಷೇಕಂ ಕುರ್ವಾಣೋ ಗೋಸಹಸ್ರಫಲಂ ಲಭೇತ್ ॥೫೦॥**

ಸೂರ್ಯತೀರ್ಥಕ್ಷೇತ್ರದ ಪ್ರವಾಸಾನಂತರದಲ್ಲಿ ಅನುಕ್ರಮವಾಗಿ ಗೋಭವನಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಗೋಭವನತೀರ್ಥದಲ್ಲಿ ಸ್ನಾನಮಾಡುವವನು ಸಹಸ್ರಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ.

**ಶಙ್ಖಿನೀತೀರ್ಥಮಾಸಾದ್ಯ ತೀರ್ಥಸೇವೀ ಕುರೂದ್ವಹ ।**
**ದೇವ್ಯಾಸ್ತೀರ್ಥೇ ನರಃ ಸ್ನಾತ್ವಾ ಲಭತೇ ರೂಪಮುತ್ತಮಮ್ ॥೫೧॥**

ಗೋಭವನತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಶಂಖಿನೀತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ದೇವೀತೀರ್ಥವೆಂದೂ

ಪ್ರಸಿದ್ಧವಾಗಿರುವ ಆ ತೀರ್ಥದಲ್ಲಿ ಸ್ನಾನಮಾಡುವವನು ಜನ್ಮಾಂತರದಲ್ಲಿ ಉತ್ತಮರೂಪವಂತನಾಗಿ ಹುಟ್ಟುತ್ತಾನೆ.

**ತತೋ ಗಚ್ಛೇತ ರಾಜೇನ್ದ್ರ ದ್ವಾರಪಾಲಮರನ್ತುಕಮ್ ।**
**ತಚ್ಚ ತೀರ್ಥಂ ಸರಸ್ವತ್ಯಾಂ ಯಕ್ಷೇನ್ದ್ರಸ್ಯ ಮಹಾತ್ಮನಃ ।**
**ತತ್ರ ಸ್ನಾತ್ವಾ ನರೋ ರಾಜನ್ನಗ್ನಿಷ್ಟೋಮಫಲಂ ಲಭೇತ್ ॥೫೨॥**

ಶಂಖಿನೀತೀರ್ಥಕ್ಷೇತ್ರದ ಪ್ರವಾಸಾನಂತರದಲ್ಲಿ ಯಾತ್ರಿಕನು ದ್ವಾರ ಪಾಲಕ್ಷೇತ್ರದಲ್ಲಿರುವ ಅರಂತುಕತೀರ್ಥಕ್ಕೆ ಪ್ರಯಾಣಮಾಡಬೇಕು. ಆ ತೀರ್ಥಕ್ಕೆ ಯಕ್ಷರಾಜನೇ ಅಧಿಪತಿಯು. ಅದು ಸರಸ್ವತೀನದಿಯಲ್ಲಿರುವುದು. ಆ ಪುಣ್ಯತೀರ್ಥದಲ್ಲಿ ಸ್ನಾನಮಾಡುವುದರಿಂದ ಅಗ್ನಿಷ್ಟೋಮಯಾಗವನ್ನು ಮಾಡಿದ ಫಲವು ಪ್ರಾಪ್ತವಾಗುತ್ತದೆ.

**ತತೋ ಗಚ್ಛೇತ ರಾಜೇನ್ದ್ರ ಬ್ರಹ್ಮಾವರ್ತಂ ನರೋತ್ತಮಃ ।**
**ಬ್ರಹ್ಮಾವರ್ತೇ ನರಃ ಸ್ನಾತ್ವಾ ಬ್ರಹ್ಮಲೋಕಮವಾಪ್ನುಯಾತ್ ॥೫೩॥**

ಅರಂತುಕತೀರ್ಥಸ್ನಾನವನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಬ್ರಹ್ಮಾವರ್ತತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಬ್ರಹ್ಮಾವರ್ತತೀರ್ಥ ದಲ್ಲಿ ಸ್ನಾನಮಾಡುವುದರಿಂದ ಯಾತ್ರಿಕನಿಗೆ ಅವಸಾನಾನಂತರದಲ್ಲಿ ಬ್ರಹ್ಮ ಲೋಕವೇ ಪ್ರಾಪ್ತವಾಗುತ್ತದೆ.

**ತತೋ ಗಚ್ಛೇತ ರಾಜೇನ್ದ್ರ ಸುತೀರ್ಥಕಮನುತ್ತಮಮ್ ।**
**ತತ್ರ ಸಂನಿಹಿತಾ ನಿತ್ಯಂ ಪಿತರೋ ದೈವತೈಃ ಸಹ ॥೫೪॥**

**ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ ।**
**ಅಶ್ವಮೇಧಮವಾಪ್ನೋತಿ ಪಿತೃಲೋಕಂ ಚ ಗಚ್ಛತಿ ॥೫೫॥**

**ತತೋಽಮ್ಬುಮತ್ಯಾಂ ಧರ್ಮಜ್ಞ ಸುತೀರ್ಥಕಮನುತ್ತಮಮ್ ॥೫೬॥**

ಬ್ರಹ್ಮಾವರ್ತತೀರ್ಥಸ್ನಾನವನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸುಪ್ರಸಿದ್ಧವಾದ ಸುತೀರ್ಥಕಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಯಾವಾಗಲೂ ದೇವ-ಪಿತೃಗಳ ಸಾನ್ನಿಧ್ಯವಿರುತ್ತದೆ. ಆ ತೀರ್ಥ ದಲ್ಲಿ ಸ್ನಾನಮಾಡಿ ಯಥಾವಿಧಿಯಾಗಿ ದೇವ-ಪಿತೃಗಳನ್ನು ಅರ್ಚಿಸಬೇಕು. ಹೀಗೆ ಮಾಡುವುದರಿಂದ ಅಶ್ವಮೇಧಯಾಗವನ್ನು ಮಾಡಿದ ಫಲವು ಪ್ರಾಪ್ತ

ವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಉತ್ತಮವಾದ ಪಿತೃಲೋಕವೂ ಲಭ್ಯವಾಗುತ್ತದೆ. ಆದುದರಿಂದಲೇ ಅಂಬುಮತೀನದಿಯ ಸಮೀಪದಲ್ಲಿರುವ ಆ ಸುತೀರ್ಥವು ಉತ್ತಮೋತ್ತಮವಾದ ತೀರ್ಥವೆಂದು ಪ್ರಸಿದ್ಧವಾಗಿದೆ.

**ಕಾಶೀಶ್ವರಸ್ಯ ತೀರ್ಥೇಷು ಸ್ನಾತ್ವಾ ಭರತಸತ್ತಮ ।**
**ಸರ್ವವ್ಯಾಧಿವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥೫೭॥**

**ಮಾತೃತೀರ್ಥಂ ಚ ತತ್ರೈವ ಯತ್ರ ಸ್ನಾತಸ್ಯ ಭಾರತ ।**
**ಪ್ರಜಾ ವಿವರ್ಧತೇ ರಾಜನ್ನನನ್ತಾಂ ಶ್ರಿಯಮಶ್ನುತೇ ॥೫೮॥**

ಸುತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಕಾಶೀಶ್ವರನ ತೀರ್ಥಗಳಿಗೆ ಪ್ರಯಾಣಮಾಡಬೇಕು. ಕಾಶೀಶ್ವರತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಇಹಜನ್ಮದ ಸಕಲವ್ಯಾಧಿಗಳೂ ನಿವಾರಣೆಯಾಗಿ ಅವಸಾನಾನಂತರದಲ್ಲಿ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆ. ಆ ಕಾಶೀಶ್ವರನ ತೀರ್ಥಗಳ ಸಮೀಪದಲ್ಲಿಯೇ ಮಾತೃತೀರ್ಥವೂ ಇರುವುದು. ಮಾತೃ ತೀರ್ಥದಲ್ಲಿ ಸ್ನಾನಮಾಡುವವನಿಗೆ ಸತ್ಪುತ್ರರು ಹುಟ್ಟುತ್ತಾರೆ ಮತ್ತು ಅಪಾರ ವಾದ ಐಶ್ವರ್ಯವೂ ಪ್ರಾಪ್ತವಾಗುತ್ತದೆ.

**ತತಃ ಶೀತವನಂ ಗಚ್ಛೇನ್ನಿಯತೋ ನಿಯತಾಶನಃ ।**
**ತೀರ್ಥಂ ತತ್ರ ಮಹಾರಾಜ ಮಹದನ್ಯತ್ರ ದುರ್ಲಭಮ್ ॥೫೯॥**

**ಪುನಾತಿ ಗಮನಾದೇವ ದೃಷ್ಟಮೇಕಂ ನರಾಧಿಪ ।**
**ಕೇಶಾನಭ್ಯುಕ್ಷ್ಯ ವೈ ತಸ್ಮಿನ್ಪೂತೋ ಭವತಿ ಭಾರತ ॥೬೦॥**

ಮಾತೃತೀರ್ಥದ ಸ್ನಾನವನ್ನು ಮುಗಿಸಿಕೊಂಡು ಯಾತ್ರಿಕನು ನಿಯತಾ ಹಾರನಾಗಿ, ಜಿತೇಂದ್ರಿಯನಾಗಿ ಶೀತವನತೀರ್ಥಕ್ಕೆ ಪ್ರಯಾಣಮಾಡಬೇಕು. ಆ ತೀರ್ಥಕ್ಷೇತ್ರಯಾತ್ರೆಯಿಂದ ಪ್ರಾಪ್ತವಾಗುವ ಅಪೂರ್ವಫಲವು ಮತ್ತೆ ಲ್ಲಿಯೂ ಲಭಿಸಲಾರದು. ಆ ಒಂದು ಕ್ಷೇತ್ರಕ್ಕೆ ಹೋಗುವುದರಿಂದಲೇ ಯಾತ್ರಿಕನು ಪರಮಪಾವನನಾಗುತ್ತಾನೆ. ಆ ಒಂದು ಕ್ಷೇತ್ರವನ್ನು ಒಮ್ಮೆ ನೋಡುವುದರಿಂದಲೇ ಯಾತ್ರಿಕನು ಶುದ್ಧನಾಗುತ್ತಾನೆ. ಈ ಕ್ಷೇತ್ರದಲ್ಲಿ ಮುಂಡನಮಾಡಿಸಿಕೊಳ್ಳುವುದರಿಂದ ಅಥವಾ ತಲೆಯ ಮೇಲೆ ನೀರನ್ನು ಚುಮುಕಿಸಿಕೊಳ್ಳುವುದರಿಂದ ಯಾತ್ರಿಕನು ಪವಿತ್ರನಾಗುತ್ತಾನೆ.

**ತೀರ್ಥಂ ತತ್ರ ಮಹಾರಾಜ ಶ್ವಾವಿಲ್ಲೋಮಾಪಹಂ ಸ್ಮೃತಮ್ ।**
**ಯತ್ರ ವಿಪ್ರಾ ನರವ್ಯಾಘ್ರ ವಿದ್ವಾಂಸಸ್ತೀರ್ಥತತ್ಪರಾಃ ॥೬೧॥**

**ಪ್ರೀತಿಂ ಗಚ್ಛನ್ತಿ ಪರಮಾಂ ಸ್ನಾತ್ವಾ ಭರತಸತ್ತಮ ।**
**ಶ್ವಾವಿಲ್ಲೋಮಾಪನಯನೇ ತೀರ್ಥೇ ಭರತಸತ್ತಮ ॥೬೨॥**

**ಪ್ರಾಣಾಯಾಮೈರ್ನಿರ್ಹರನ್ತಿ ಸ್ವಲೋಮಾನಿ ದ್ವಿಜೋತ್ತಮಾಃ ।**
**ಪೂತಾತ್ಮಾನಶ್ಚ ರಾಜೇನ್ದ್ರ ಪ್ರಯಾನ್ತಿ ಪರಮಾಂ ಗತಿಮ್ ॥೬೩॥**

ಆ ಸೀತವನಕ್ಷೇತ್ರದಲ್ಲಿಯೇ ಶ್ವಾವಿಲ್ಲೋಮಾಪಹವೆಂಬ ತೀರ್ಥವಿರುವುದು. ವಿದ್ವಾಂಸರಾದ ಬ್ರಾಹ್ಮಣರು ಶ್ವಾವಿಲ್ಲೋಮಾಪಹತೀರ್ಥದಲ್ಲಿ ಸ್ನಾನಮಾಡಿ ಅಮಿತಾನಂದವನ್ನು ಪಡೆಯುತ್ತಾರೆ. ಆ ಪವಿತ್ರಸ್ಥಳದಲ್ಲಿ ಶ್ರೇಷ್ಠರಾದ ಬ್ರಾಹ್ಮಣರು ಮುಂಡನಮಾಡಿಸಿಕೊಂಡು (ಸಂನ್ಯಾಸಿಗಳಾಗಿ) ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ ಸಮಾಧಿಗಳೆಂಬ ಅಷ್ಟಾಂಗಯೋಗಾಭ್ಯಾಸಗಳಿಂದ ಪೂತಾತ್ಮರಾಗಿ ಕಡೆಯಲ್ಲಿ ಮುಕ್ತರಾಗುತ್ತಾರೆ.

**ದಶಾಶ್ವಮೇಧಿಕಂ ಚೈವ ತಸ್ಮಿಂಸ್ತೀರ್ಥೇ ಮಹೀಪತೇ ।**
**ತತ್ರ ಸ್ನಾತ್ವಾ ನರವ್ಯಾಘ್ರ ಗಚ್ಛೇತ ಪರಮಾಂ ಗತಿಮ್ ॥೬೪॥**

ಆ ಕ್ಷೇತ್ರದಲ್ಲಿಯೇ ದಶಾಶ್ವಮೇಧಿಕವೆಂಬ ಮತ್ತೊಂದು ತೀರ್ಥವೂ ಇರುವುದು. ಆ ಪುಣ್ಯತೀರ್ಥದಲ್ಲಿ ಸ್ನಾನಮಾಡುವುದರಿಂದ ಸದ್ಗತಿಯು ಲಭ್ಯವಾಗುತ್ತದೆ.

ಯುಧಿಷ್ಠಿರ! ದಶಾಶ್ವಮೇಧಿಕತೀರ್ಥದಲ್ಲಿ ಸ್ನಾನಮಾಡಿದನಂತರ ಯಾತ್ರಿಕನು ಮಾನುಷತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದ ವಿಷಯದಲ್ಲಿಯೂ ಒಂದು ಐತಿಹ್ಯವಿದೆ. ಹಿಂದೆ ವ್ಯಾಧನೊಬ್ಬನು ಕೃಷ್ಣಮೃಗಗಳನ್ನು ಕೊಲ್ಲುವ ಸಲುವಾಗಿ ಅವುಗಳನ್ನು ಅಟ್ಟಿಸಿಕೊಂಡು ಬರುತ್ತಿದ್ದನು. ವ್ಯಾಧನಿಂದ ಭಯಪಟ್ಟ ಕೃಷ್ಣಮೃಗಗಳು ಓಡಿಯೋಡಿಬಂದು ಆ ಮಾನುಷಸರೋವರದಲ್ಲಿ ಬಿದ್ದುವು. ಒಡನೆಯೇ ಅವುಗಳೆಲ್ಲವೂ ಮನುಷ್ಯರೂಪವನ್ನು ತಾಳಿದುವು.

**ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಬ್ರಹ್ಮಚಾರೀ ಸಮಾಹಿತಃ ।**
**ಸರ್ವಪಾಪವಿಶುದ್ಧಾತ್ಮಾ ಸ್ವರ್ಗಲೋಕೇ ಮಹೀಯತೇ ॥೬೬॥**

ಬ್ರಹ್ಮಚರ್ಯದಿಂದಿದ್ದು, ಅನುಷ್ಠಾನಪರನಾಗಿ, ನಿಯತವ್ರತನಾಗಿ ಆ ಮಾನುಷತೀರ್ಥದಲ್ಲಿ ಸ್ನಾನಮಾಡುವವನು ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ ಮತ್ತು ಅವಸಾನಾನಂತರದಲ್ಲಿ ಸ್ವರ್ಗಲೋಕದಲ್ಲಿ ಸಕಲದೇವತೆಗಳಿಂದಲೂ ಗೌರವಿಸಲ್ಪಡುತ್ತಾನೆ.

ಮಹಾರಾಜ! ಆ ಮಾನುಷತೀರ್ಥಕ್ಕೆ ಪೂರ್ವದಿಕ್ಕಿನಲ್ಲಿ ಒಂದು ಕ್ರೋಶ ದೂರದಲ್ಲಿ ಸುಪ್ರಸಿದ್ಧವಾದ, ಸಿದ್ಧ-ಚಾರಣರಿಂದ ಸಂಸೇವ್ಯಮಾನ ವಾದ ಆಪಗಾ ಎಂಬ ನದಿಯಿರುವುದು.

**ಶ್ಯಾಮಾಕಂ ಭೋಜನೇ ತತ್ರ ಯಃ ಪ್ರಯಚ್ಛತಿ ಮಾನವಃ ।**
**ದೇವಾನ್ಪಿತೄನ್ಸಮುದ್ದಿಶ್ಯ ತಸ್ಯ ಧರ್ಮಫಲಂ ಮಹತ್ ।**
**ಏಕಸ್ಮಿನ್ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಾ ॥೬೯॥**

ಆ ಸ್ಥಳದಲ್ಲಿ ಸಾಮೆಯಿಂದ ಮಾಡಿದ ಅನ್ನವನ್ನು ದೇವತೆಗಳಿಗೂ ಪಿತೃಗಳಿಗೂ ನಿವೇದನಮಾಡಿದರೆ ಮಹಾಪುಣ್ಯವು ಲಭ್ಯವಾಗುತ್ತದೆ. ಆ ಭಕ್ಷ್ಯವನ್ನು ದೇವತೆಗಳಿಗೆ ನಿವೇದನೆಮಾಡಿ ಅನಂತರದಲ್ಲಿ ಒಬ್ಬ ಬ್ರಾಹ್ಮಣನಿಗೆ ಆ ಭಕ್ಷ್ಯಸಹಿತವಾಗಿ ಭೋಜನಮಾಡಿಸಿದರೂ ಒಂದು ಕೋಟಿ ಬ್ರಾಹ್ಮಣರಿಗೆ ಭೋಜನಮಾಡಿಸಿದ ಪುಣ್ಯವು ಲಭ್ಯವಾಗುತ್ತದೆ. ಆ ಸ್ಥಳದ ಮಹಿಮೆಯು ಇಂತಹುದಾಗಿದೆ.

**ತತ್ರ ಸ್ನಾತ್ವಾರ್ಚಯಿತ್ವಾ ಚ ಪಿತೄನ್ಸ್ವೈ ದೈವತಾನಿ ಚ ।**
**ಉಷಿತ್ವಾ ರಜನೀಮೇಕಾಮಗ್ನಿಷ್ಟೋಮಫಲಂ ಲಭೇತ್ ॥೭೦॥**

ಆಪಗಾನದಿಯಲ್ಲಿ ಸ್ನಾನಮಾಡಿ ಶುಚೀಭೂತನಾಗಿ ದೇವ-ಪಿತೃಗಳನ್ನು ಯಥಾವಿಧಿಯಾಗಿ ಅರ್ಚಿಸಿ ಒಂದು ರಾತ್ರಿ ಜಾಗರಣೆಯಿಂದಿರುವವನು ಅಗ್ನಿಷ್ಟೋಮಯಾಗಮಾಡಿದ ಫಲವನ್ನು ಪಡೆಯುತ್ತಾನೆ.

**ತತೋ ಗಚ್ಛೇತ ರಾಜೇನ್ದ್ರ ಬ್ರಹ್ಮಣಃ ಸ್ಥಾನಮುತ್ತಮಮ್ ।**
**ಬ್ರಹ್ಮೋದುಮ್ಬರಮಿತ್ಯೇವ ಪ್ರಕಾಶಂ ಭುವಿ ಭಾರತ ॥೭೧॥**

**ತತ್ರ ಸಪ್ತರ್ಷಿಕುಣ್ಡೇಷು ಸ್ನಾತಸ್ಯ ನರಪುಙ್ಗವ ।**
**ಕೇದಾರೇ ಚೈವ ರಾಜೇನ್ದ್ರ ಕಪಿಲಸ್ಯ ಮಹಾತ್ಮನಃ ॥೭೨॥**

**ಬ್ರಹ್ಮಾಣಮಧಿಗಮ್ಯಾಥ ಶುಚಿಃ ಪ್ರಯತಮಾನಸಃ ।**
**ಸರ್ವಪಾಪವಿಶುದ್ಧಾತ್ಮಾ ಬ್ರಹ್ಮಲೋಕಂ ಪ್ರಪದ್ಯತೇ ॥೭೩॥**

ಯುಧಿಷ್ಠಿರ! ಆಪಗಾನದಿಯ ತೀರ್ಥಸ್ನಾನವನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಬ್ರಹ್ಮನ ಸಾಕ್ಷಾತ್ ಸಾನ್ನಿಧ್ಯವಿರುವ ಬ್ರಹ್ಮೋದುಂಬರಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಪರಮಪವಿತ್ರವಾದ ಆ ಕ್ಷೇತ್ರದಲ್ಲಿ ಸಪ್ತರ್ಷಿಕುಂಡವಿದೆ. ಆ ಕುಂಡದಲ್ಲಿ ಮತ್ತು ಬ್ರಹ್ಮನ ಸಾನ್ನಿಧ್ಯವಿರುವ ಕಪಿಲಮಹರ್ಷಿಯ ಕೇದಾರತೀರ್ಥದಲ್ಲಿ ಸ್ನಾನಮಾಡುವವನು ಚಿತ್ತಶುದ್ಧಿಯನ್ನು ಹೊಂದುತ್ತಾನೆ. ಅವನ ಪಾಪಗಳೆಲ್ಲವೂ ಪರಿಹಾರವಾಗುತ್ತವೆ ಮತ್ತು ಅವಸಾನಾನಂತರದಲ್ಲಿ ಅವನು ಬ್ರಹ್ಮಲೋಕವನ್ನೂ ಪಡೆಯುತ್ತಾನೆ.

**ಕಪಿಲಸ್ಯ ಚ ಕೇದಾರಂ ಸಮಾಸಾದ್ಯ ಸುದುರ್ಲಭಮ್ ।**
**ಅನ್ತರ್ಧಾನಮವಾಪ್ನೋತಿ ತಪಸಾ ದಗ್ಧಕಿಲ್ಬಿಷಃ ॥೭೪॥**

ಕಪಿಲಮಹರ್ಷಿಯ ಕೇದಾರಕ್ಷೇತ್ರವು ಅತ್ಯಂತದುರ್ಲಭವಾದುದು. ಆ ಕ್ಷೇತ್ರದಲ್ಲಿ ನಿಯತವ್ರತನಾಗಿ ತಪಸ್ಸನ್ನು ಮಾಡುವವನು ತನ್ನ ಸಕಲ ಪಾಪಗಳನ್ನೂ ಪರಿಹಾರಮಾಡಿಕೊಳ್ಳುವುದು ಮಾತ್ರವಲ್ಲದೇ–ಇಚ್ಛಿಸಿದಾಗ ಅಂತರ್ಧಾನಹೊಂದುವ ಒಂದು ಅಪೂರ್ವಶಕ್ತಿಯನ್ನೂ ಪಡೆಯುತ್ತಾನೆ. (ಮುಕ್ತನಾಗುತ್ತಾನೆ.)

**ತತೋ ಗಚ್ಛೇತ ರಾಜೇನ್ದ್ರ ಸರಕಂ ಲೋಕವಿಶ್ರುತಮ್ ।**
**ಕೃಷ್ಣಪಕ್ಷೇ ಚತುರ್ದಶ್ಯಾಮಭಿಗಮ್ಯ ವೃಷಧ್ವಜಮ್ ।**
**ಲಭತೇ ಸರ್ವಕಾಮಾನ್ಹಿ ಸ್ವರ್ಗಲೋಕಂ ಚ ಗಚ್ಛತಿ ॥೭೫॥**

ಕಪಿಲಕ್ಷೇತ್ರದ ಪ್ರವಾಸವನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಲೋಕಪ್ರಸಿದ್ಧವಾದ ಸರಕತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ಮಹಾದೇವನ ಸಾನ್ನಿಧ್ಯವಿರುವುದು. ಕೃಷ್ಣಚತುರ್ದಶಿಯ ದಿನ ಸರಕತೀರ್ಥದಲ್ಲಿ ಸ್ನಾನಮಾಡಿ ಮಹಾದೇವನ ದರ್ಶನವನ್ನು ಮಾಡುವವನಿಗೆ ಸಕಲೇಷ್ಟಾರ್ಥಗಳೂ ಸಿದ್ಧಿಸುತ್ತವೆ ಮತ್ತು ಅವಸಾನಾನಂತರದಲ್ಲಿ ಸ್ವರ್ಗಲೋಕವೂ ಲಭಿಸುತ್ತದೆ. ಧರ್ಮಜ! ಸರಕತೀರ್ಥದಲ್ಲಿಯೂ, ಹಿಂದೆ ಹೇಳಿದ ರುದ್ರಕೋಟಿಯಲ್ಲಿಯೂ ಮತ್ತು ಅವುಗಳ ಸಮೀಪದಲ್ಲಿರುವ ವಾಪೀ

ಕೂಪ-ಹ್ರದಗಳಲ್ಲಿಯೂ ಮೂರುಕೋಟಿ ಪುಣ್ಯತೀರ್ಥಗಳ ಸಾನ್ನಿಧ್ಯವಿರುತ್ತದೆ.

**ಇಲಾಸ್ಪದಂ ಚ ತತ್ರೈವ ತೀರ್ಥಂ ಭರತಸತ್ತಮ ।**
**ತತ್ರ ಸ್ನಾತ್ವಾರ್ಚಯಿತ್ವಾ ಚ ದೈವತಾನಿ ಪಿತೄನಥ ।**
**ನ ದುರ್ಗತಿಮವಾಪ್ನೋತಿ ವಾಜಪೇಯಂ ಚ ವಿನ್ದತಿ ॥೭೮॥**

ಆ ಕ್ಷೇತ್ರದಲ್ಲಿಯೇ ಇಲಾಸ್ಪದವೆಂಬ ಸುಪ್ರಸಿದ್ಧವಾದ ಮತ್ತೊಂದು ತೀರ್ಥವಿದೆ. ಆ ತೀರ್ಥದಲ್ಲಿ ಸ್ನಾನಮಾಡಿ ಯಥಾವಿಧಿಯಾಗಿ ದೇವ-ಪಿತೃಗಳನ್ನು ಅರ್ಚನೆಮಾಡುವವನಿಗೆ ನರಕವಾಸವಿಲ್ಲ. ವಾಜಪೇಯಯಾಗವನ್ನು ಮಾಡಿದ ಫಲವನ್ನೂ ಪಡೆಯುತ್ತಾನೆ.

**ಕಿಂದಾನೇ ಚ ನರಃ ಸ್ನಾತ್ವಾ ಕಿಂಜಪ್ಯೇ ಚ ಮಹೀಪತೇ ।**
**ಅಪ್ರಮೇಯಮವಾಪ್ನೋತಿ ದಾನಂ ಜಪ್ಯಂ ಚ ಭಾರತ ॥೭೯॥**

ಯುಧಿಷ್ಠಿರ! ಇಲಾಸ್ಪದತೀರ್ಥಸ್ನಾನವನ್ನು ಮುಗಿಸಿದನಂತರ ಯಾತ್ರಿಕನು ಕಿಂದಾನ ಮತ್ತು ಕಿಂಜಪ್ಯಗಳೆಂಬ ಸುಪ್ರಸಿದ್ಧವಾದ ತೀರ್ಥಕ್ಷೇತ್ರಗಳಿಗೆ ಪ್ರಯಾಣಮಾಡಬೇಕು. ಆ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಅಪಾರವಾಗಿ ದಾನಮಾಡಿದ ಮತ್ತು ಅಸಂಖ್ಯಾತವಾಗಿ ಜಪಮಾಡಿದ ಫಲವು ಪ್ರಾಪ್ತಿಯಾಗುತ್ತದೆ.

**ಕಲಶ್ಯಾಂ ವಾರ್ಯುಪಸ್ಪೃಶ್ಯ ಶ್ರದ್ದಧಾನೋ ಜಿತೇನ್ದ್ರಿಯಃ ।**
**ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥೮೦॥**

ಕಿಂದಾನ-ಕಿಂಜಪ್ಯತೀರ್ಥಗಳ ಸ್ನಾನವನ್ನು ಮುಗಿಸಿಕೊಂಡು ಮುಂದೆ ಕಲಶೀತೀರ್ಥಕ್ಕೆ ಪ್ರಯಾಣಮಾಡಬೇಕು. ಜಿತೇಂದ್ರಿಯನಾಗಿ ಶ್ರದ್ಧೆಯಿಂದ ಆ ಕಲಶೀತೀರ್ಥದಲ್ಲಿ ಆಚಮನಮಾಡುವುದರಿಂದ (ಸ್ನಾನಮಾಡುವುದರಿಂದ) ಅಗ್ನಿಷ್ಟೋಮಯಾಗಮಾಡಿದ ಫಲವು ಪ್ರಾಪ್ತಿಯಾಗುತ್ತದೆ.

ಯುಧಿಷ್ಠಿರ! ಹಿಂದೆ ಹೇಳಿದ ಸರಕತೀರ್ಥಕ್ಷೇತ್ರಕ್ಕೆ ಪೂರ್ವದಿಕ್ಕಿನಲ್ಲಿ ಮಂಗಳಕರವಾದ, ಸುಪ್ರಸಿದ್ಧವಾದ ಅಂಬಾಜನ್ಮವೆಂಬ ಮಹಾತ್ಮರಾದ ನಾರದರ ತೀರ್ಥವಿದೆ.

**ತತ್ರ ತೀರ್ಥೇ ನರಃ ಸ್ನಾತ್ವಾ ಪ್ರಾಣಾನುತ್ಸೃಜ್ಯ ಭಾರತ ।**
**ನಾರದೇನಾಭ್ಯನುಜ್ಞಾತೋ ಲೋಕಾನ್ಪ್ರಾಪ್ನೋತ್ಯನುತ್ತಮಾನ್ ॥೮೨॥**

ಆ ತೀರ್ಥದಲ್ಲಿ ಸ್ನಾನಮಾಡಿದರೆ ನಾರದಮಹರ್ಷಿಗಳ ಅನುಗ್ರಹ ದಿಂದಾಗಿ ಮರಣಾನಂತರ ಉತ್ತಮಲೋಕಗಳು ಪ್ರಾಪ್ತವಾಗುತ್ತವೆ.

**ಶುಕ್ಲಪಕ್ಷೇ ದಶಮ್ಯಾಂ ಚ ಪುಣ್ಡರೀಕಂ ಸಮಾವಿಶೇತ್ ।**
**ತತ್ರ ಸ್ನಾತ್ವಾ ನರೋ ರಾಜನ್ಪುಣ್ಡರೀಕಫಲಂ ಲಭೇತ್ ॥೮೩॥**

ಅಂಬಾಜನ್ಮತೀರ್ಥದ ಯಾತ್ರೆಯನ್ನು ಮುಗಿಸಿಕೊಂಡು ಶುಕ್ಲಪಕ್ಷದ ದಶಮಿಯ ದಿವಸ ಪುಂಡರೀಕತೀರ್ಥಕ್ಕೆ ಪ್ರಯಾಣಮಾಡಬೇಕು. ಆ ತೀರ್ಥ ದಲ್ಲಿ ಸ್ನಾನಮಾಡುವುದರಿಂದ ಪುಂಡರೀಕಯಾಗಮಾಡಿದ ಫಲವು ಲಭ್ಯ ವಾಗುತ್ತದೆ. ಪುಂಡರೀಕತೀರ್ಥಸ್ನಾನವನ್ನು ಮುಗಿಸಿದನಂತರ ಯಾತ್ರಿಕನು ತ್ರಿಲೋಕಪ್ರಸಿದ್ಧವಾದ ತ್ರಿವಿಷ್ಟಪತೀರ್ಥಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ಸಕಲಪಾಪಪ್ರಣಾಶಿನಿಯಾದ ವೈತರಣೀನದಿಯಿರುವುದು.

**ತತ್ರ ಸ್ನಾತ್ವಾರ್ಚಯಿತ್ವಾ ಚ ಶೂಲಪಾಣಿಂ ವೃಷಧ್ವಜಮ್ ।**
**ಸರ್ವಪಾಪವಿಶುದ್ಧಾತ್ಮಾ ಗಚ್ಛೇತ ಪರಮಾಂ ಗತಿಮ್ ॥೮೪॥**

ಆ ಪುಣ್ಯನದಿಯಲ್ಲಿ ಸ್ನಾನಮಾಡಿ ತ್ರಿಶೂಲಪಾಣಿಯಾದ, ವೃಷಭ ಧ್ವಜನಾದ ಪರಮೇಶ್ವರನನ್ನು ಅನನ್ಯಭಕ್ತಿಯಿಂದ ಅರ್ಚನೆಮಾಡುವವನು ಸಕಲಪಾಪಗಳಿಂದಲೂ ವಿಮುಕ್ತನಾಗಿ, ಪರಿಶುದ್ಧಾತ್ಮನಾಗಿ, ಅವಸಾನಾ ನಂತರದಲ್ಲಿ ಸದ್ಗತಿಯನ್ನೂ ಪಡೆಯುತ್ತಾನೆ. ಯುಧಿಷ್ಠಿರ! ತ್ರಿವಿಷ್ಟಪಕ್ಷೇತ್ರದ ತೀರ್ಥಯಾತ್ರೆಯನ್ನು ಮುಗಿಸಿದನಂತರ ಯಾತ್ರಿಕನು ಮುಂದೆ ಉತ್ತಮೋತ್ತಮವಾದ ಫಲಕೀವನಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪವಿತ್ರಕ್ಷೇತ್ರದಲ್ಲಿಯೇ ದೇವತೆಗಳು ಸಾವಿರಾರು ವರ್ಷಗಳ ಪರ್ಯಂತವಾಗಿ ತಪಸ್ಸನ್ನು ಮಾಡುತ್ತಿದ್ದರು. ಈಗಲೂ ಅಲ್ಲಿ ಸಕಲದೇವತೆಗಳ ಸಾನ್ನಿಧ್ಯವೂ ಇರುವುದು.

**ದೃಷದ್ವತ್ಯಾಂ ನರಃ ಸ್ನಾತ್ವಾ ತರ್ಪಯಿತ್ವಾ ಚ ದೇವತಾಃ ।**
**ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ವಿನ್ದತಿ ಭಾರತ ॥೮೭॥**

**ತೀರ್ಥೇ ಚ ಸರ್ವದೇವಾನಾಂ ಸ್ನಾತ್ವಾ ಭರತಸತ್ತಮ ।**
**ಗೋಸಹಸ್ರಸ್ಯ ರಾಜೇನ್ದ್ರ ಫಲಂ ವಿನ್ದತಿ ಮಾನವಃ ॥೮೮॥**

ಫಲಕೀವನಕ್ಷೇತ್ರದಲ್ಲಿರುವ ದೃಷದ್ವತೀನದಿಯಲ್ಲಿ ಸ್ನಾನಮಾಡಿ ದೇವತೆಗಳನ್ನು ಅನನ್ಯಭಕ್ತಿಯಿಂದ ಅರ್ಚಿಸುವವನು ಅಗ್ನಿಷ್ಟೋಮ ಮತ್ತು ಅತಿರಾತ್ರಯಜ್ಞಗಳನ್ನು ಮಾಡಿ ಪಡೆಯುವ ಫಲಕ್ಕಿಂತಲೂ ಹೆಚ್ಚಾದ ಫಲ ವನ್ನು ಪಡೆಯುತ್ತಾನೆ. ಆ ಕ್ಷೇತ್ರದಲ್ಲಿಯೇ ಸರ್ವದೇವತೀರ್ಥವೆಂಬ ಮತ್ತೊಂದು ತೀರ್ಥವಿದೆ. ಆ ತೀರ್ಥದಲ್ಲಿ ಸ್ನಾನಮಾಡುವವನು ಒಂದು ಸಾವಿರ ಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ.

**ಪಾಣಿಖಾತೇ ನರಃ ಸ್ನಾತ್ವಾ ತರ್ಪಯಿತ್ವಾ ಚ ದೇವತಾಃ ।**
**ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ವಿನ್ದತಿ ಭಾರತ ।**
**ರಾಜಸೂಯಮವಾಪ್ನೋತಿ ಋಷಿಲೋಕಂ ಚ ವಿನ್ದತಿ ॥೯೦॥**

ಸರ್ವದೇವತೀರ್ಥದ ಸಮೀಪದಲ್ಲಿಯೇ ಪಾಣಿಖಾತವೆಂಬ ಮತ್ತೊಂದು ತೀರ್ಥವಿದೆ. ಆ ತೀರ್ಥದಲ್ಲಿ ಸ್ನಾನಮಾಡಿ ದೇವತೆಗಳನ್ನು ಅನನ್ಯಭಕ್ತಿಯಿಂದ ಅರ್ಚನೆಮಾಡುವವನು ಅಗ್ನಿಷ್ಟೋಮ ಮತ್ತು ಅತಿರಾತ್ರಯಾಗಗಳನ್ನು ಮಾಡಿ ಪಡೆಯುವ ಫಲಕ್ಕಿಂತಲೂ ಹೆಚ್ಚಿನ ಫಲ ವನ್ನೂ–ರಾಜಸೂಯಯಾಗಮಾಡಿದ ಫಲವನ್ನೂ ಪಡೆದು, ಅವಸಾನಾ ನಂತರದಲ್ಲಿ ಋಷಿ-ಮಹರ್ಷಿಗಳಿಗೆ ಪ್ರಾಪ್ತವಾಗುವ ಉತ್ತಮಲೋಕಗಳನ್ನೂ ಪಡೆಯುತ್ತಾನೆ. ಈ ರೀತಿಯಾಗಿ ಫಲಕೀವನಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಮಿಶ್ರಕವೆಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಮಹಾತ್ಮರಾದ ವ್ಯಾಸರು ಬ್ರಾಹ್ಮಣರಿಗಾಗಿ ಸಕಲತೀರ್ಥಗಳನ್ನೂ ಆ ಕ್ಷೇತ್ರದಲ್ಲಿ ಮಿಶ್ರಮಾಡಿದ ಕಾರಣದಿಂದಾಗಿ ಆ ತೀರ್ಥಕ್ಕೆ ಮಿಶ್ರಕತೀರ್ಥವೆಂದೇ ಹೆಸರಾಗಿದೆ.

**ಸರ್ವತೀರ್ಥೇಷು ಸ ಸ್ನಾತಿ ಮಿಶ್ರಕೇ ಸ್ನಾತಿ ಯೋ ನರಃ ॥೯೨॥**

ಮಿಶ್ರಕತೀರ್ಥದಲ್ಲಿ ಸ್ನಾನಮಾಡುವುದರಿಂದ ಸಕಲತೀರ್ಥಗಳಲ್ಲಿಯೂ ಸ್ನಾನಮಾಡಿದ ಫಲವನ್ನು ಯಾತ್ರಿಕನು ಪಡೆಯುತ್ತಾನೆ.

**ತತೋ ವ್ಯಾಸವನಂ ಗಚ್ಛೇನ್ನಿಯತೋ ನಿಯತಾಶನಃ ।**
**ಮನೋಜವೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೯೩॥**

ಮಿಶ್ರಕತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಪ್ರಸಿದ್ಧವಾದ ವ್ಯಾಸವನಕ್ಕೆ ಪ್ರಯಾಣಮಾಡಬೇಕು. ವ್ಯಾಸ ವನದಲ್ಲಿರುವಾಗ ಯಾತ್ರಿಕನು ನಿಯತಾಹಾರನಾಗಿ, ಜಿತೇಂದ್ರಿಯನಾಗಿರ ಬೇಕು. ವ್ಯಾಸವನಕ್ಷೇತ್ರದಲ್ಲಿರುವ ಮನೋಜವತೀರ್ಥದಲ್ಲಿ ಸ್ನಾನಮಾಡುವು ದರಿಂದ ಸಹಸ್ರ ಗೋವುಗಳನ್ನು ದಾನಮಾಡಿದ ಪುಣ್ಯವು ಲಭ್ಯವಾಗುತ್ತದೆ.

**ಗತ್ವಾ ಮಧುವಟೀಂ ಚೈವ ದೇವ್ಯಾಸ್ತೀರ್ಥೇ ನರಃ ಶುಚಿಃ ।**
**ತತ್ರ ಸ್ನಾತ್ವಾರ್ಚಯಿತ್ವಾ ಚ ಪಿತೄನ್ದೇವಾಂಶ್ಚ ಪೂರುಷಃ ।**
**ಸ ದೇವ್ಯಾ ಸಮನುಜ್ಞಾತೋ ಗೋಸಹಸ್ರ ಫಲಂ ಲಭೇತ್ ॥೯೪॥**

ವ್ಯಾಸವನಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮಧುವಟೀ ಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಮಧುವಟೀಕ್ಷೇತ್ರದಲ್ಲಿ ದೇವೀ ತೀರ್ಥವಿದೆ. ಆ ದೇವೀತೀರ್ಥದಲ್ಲಿ ಸ್ನಾನಮಾಡಿ ಶುಚೀಭೂತನಾಗಿ ಪಿತೃ ಗಳನ್ನೂ, ದೇವಿಯನ್ನೂ ( ಇತರ ದೇವತೆಗಳನ್ನೂ ) ಅರ್ಚನೆಮಾಡುವವನು ದೇವಿಯ ಅನುಗ್ರಹವನ್ನು ಪಡೆಯುವುದಲ್ಲದೇ–ಒಂದು ಸಾವಿರ ಗೋದಾನ ಮಾಡಿದ ಫಲವನ್ನು ಪಡೆಯುತ್ತಾನೆ.

**ಕೌಶಿಕ್ಯಾಃ ಸಂಗಮೇ ಯಸ್ತು ದೃಷದ್ವತ್ಯಾಶ್ಚ ಭಾರತ ।**
**ಸ್ನಾತಿ ವೈ ನಿಯತಾಹಾರಃ ಸರ್ವಪಾಪೈಃ ಪ್ರಮುಚ್ಯತೇ ॥೯೫॥**

ಮಧುವಟೀತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಕೌಶಿಕೀ-ದೃಷದ್ವತೀನದಿಗಳ ಸಂಗಮಸ್ಥಾನಕ್ಕೆ ಪ್ರಯಾಣಮಾಡಬೇಕು. ಆ ಸಂಗಮಸ್ಥಾನದಲ್ಲಿ ಸ್ನಾನಮಾಡುವವನು ಸಕಲಪಾಪಗಳಿಂದಲೂ ವಿಮುಕ್ತ ನಾಗುತ್ತಾನೆ.

ಸಂಗಮಸ್ಥಾನಸ್ನಾನವನ್ನು ಮುಗಿಸಿದನಂತರ ವ್ಯಾಸಸ್ಥಲೀ ಎಂಬ ಪುಣ್ಯಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಸ್ಥಳದಲ್ಲಿ ಹಿಂದೆ ಪುತ್ರಶೋಕ ಪೀಡಿತರಾದ ವ್ಯಾಸರು ತಮ್ಮ ಶರೀರತ್ಯಾಗಮಾಡಲು ನಿರ್ಧರಿಸಿದಾಗ ದೇವತೆಗಳು ಬಂದು ಅವರನ್ನು ಸಮಾಧಾನಪಡಿಸಿದರು. ಆದುದರಿಂದ ಆ ಸ್ಥಳಕ್ಕೆ 'ವ್ಯಾಸಸ್ಥಲೀ' ಎಂದೇ ಹೆಸರಾಯಿತು.

**ಅಭಿಗತ್ವಾ ಸ್ಥಲೀಂ ತಸ್ಯ ಗೋಸಹಸ್ರಫಲಂ ಲಭೇತ್ ॥೯೭॥**

ವ್ಯಾಸಸ್ಥಲೀಕ್ಷೇತ್ರದ ಯಾತ್ರೆಮಾಡುವವನು ಸಹಸ್ರ ಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ.

**ಕಿಂದತ್ತಂ ಕೂಪಮಾಸಾದ್ಯ ತಿಲಪ್ರಸ್ಥಂ ಪ್ರದಾಯ ಚ ।**
**ಗಚ್ಛೇತ ಪರಮಾಂ ಸಿದ್ಧಿಮೃಣೈರ್ಮುಕ್ತಃ ಕುರೂದ್ವಹ ।**
**ವೇದೀತೀರ್ಥೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೯೯॥**

ವ್ಯಾಸಸ್ಥಲೀಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಕಿಂದತ್ತತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥಕ್ಷೇತ್ರದಲ್ಲಿ ತೊಂಬತ್ತಾರು ಮುಷ್ಟಿಗಳಷ್ಟು ಎಳ್ಳನ್ನು ದಾನಮಾಡುವುದರಿಂದ ಋಣ ವಿಮುಕ್ತನಾಗಿ ಸಕಲೇಷ್ಟಾರ್ಥಗಳನ್ನೂ ಪಡೆಯುತ್ತಾನೆ. ಕಿಂದತ್ತಕೂಪದ ಸಮೀಪದಲ್ಲಿಯೇ ವೇದೀತೀರ್ಥವಿದೆ. ಆ ತೀರ್ಥದಲ್ಲಿ ಸ್ನಾನಮಾಡುವವನು ಒಂದು ಸಹಸ್ರ ಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ.

**ಅಹಶ್ಚ ಸುದಿನಂ ಚೈವ ದ್ವೇ ತೀರ್ಥೇ ಲೋಕವಿಶ್ರುತೇ ।**
**ತಯೋಃ ಸ್ನಾತ್ವಾ ನರವ್ಯಾಘ್ರ ಸೂರ್ಯಲೋಕಮವಾಪ್ನುಯಾತ್ ॥**

ವೇದೀತೀರ್ಥವಲ್ಲದೇ ಅದೇ ಕ್ಷೇತ್ರದಲ್ಲಿ ಅಹಸ್ಸು ಮತ್ತು ಸುದಿನ ಗಳೆಂಬ ಲೋಕಪ್ರಸಿದ್ಧವಾದ ಮತ್ತೆರಡು ತೀರ್ಥಗಳೂ ಇವೆ. ಅವುಗಳಲ್ಲಿ ಸ್ನಾನಮಾಡುವುದರಿಂದ ಸೂರ್ಯಲೋಕವು ಲಭ್ಯವಾಗುತ್ತದೆ.

**ಮೃಗಧೂಮಂ ತತೋ ಗಚ್ಛೇತ್ತ್ರಿಷು ಲೋಕೇಷು ವಿಶ್ರುತಮ್ ।**
**ತತ್ರಾಭಿಷೇಕಂ ಕುರ್ವೀತ ಗಙ್ಗಾಯಾಂ ನೃಪಸತ್ತಮ ॥೧೦೧॥**
**ಅರ್ಚಯಿತ್ವಾ ಮಹಾದೇವಮಶ್ವಮೇಧಫಲಂ ಲಭೇತ್ ।**
**ದೇವ್ಯಾಸ್ತೀರ್ಥೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೧೦೨॥**

ಕಿಂದತ್ತತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ತ್ರಿಲೋಕಪ್ರಸಿದ್ಧವಾದ ಮೃಗಧೂಮಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪವಿತ್ರಕ್ಷೇತ್ರದಲ್ಲಿ ಪರಮಪವಿತ್ರಳಾದ ಗಂಗೆಯು ಪ್ರವಹಿಸುತ್ತಾಳೆ. ಅಲ್ಲಿನ ಗಂಗಾನದಿಯಲ್ಲಿ ಸ್ನಾನಮಾಡಿ ಮಹಾದೇವನನ್ನು ಭಕ್ತಿಪೂರ್ವಕವಾಗಿ ಅರ್ಚನೆಮಾಡುವುದರಿಂದ ಅಶ್ವಮೇಧಯಾಗವನ್ನು ಮಾಡಿದ ಪುಣ್ಯವು ಲಭ್ಯ ವಾಗುತ್ತದೆ. ಅಲ್ಲಿಯೇ ದೇವೀತೀರ್ಥವೆಂಬ ಮತ್ತೊಂದು ತೀರ್ಥವಿದೆ. ಆ

ತೀರ್ಥದಲ್ಲಿ ಸ್ನಾನಮಾಡುವುದರಿಂದ ಸಹಸ್ರಧೇನುಗಳನ್ನು ದಾನಮಾಡಿದ ಪುಣ್ಯಫಲವು ಲಭ್ಯವಾಗುತ್ತದೆ.

**ತತೋ ವಾಮನಕಂ ಗಚ್ಛೇತ್ತ್ರಿಷು ಲೋಕೇಷು ವಿಶ್ರುತಮ್ ।**
**ತತ್ರ ವಿಷ್ಣುಪದೇ ಸ್ನಾತ್ವಾ ಅರ್ಚಯಿತ್ವಾ ಚ ವಾಮನಮ್ ॥೧೦೩॥**

**ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕಂ ಸ ಗಚ್ಛತಿ ।**
**ಕುಲಮ್ಪುನೇ ನರಃ ಸ್ನಾತ್ವಾ ಪುನಾತಿ ಸ್ವಕುಲಂ ತತಃ ॥೧೦೪॥**

ಮೃಗಧೂಮಕ್ಷೇತ್ರದ ಯಾತ್ರೆಯಾದನಂತರ ತ್ರಿಲೋಕಪ್ರಸಿದ್ಧವಾದ ವಾಮನಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿರುವ ವಿಷ್ಣು ಪದತೀರ್ಥದಲ್ಲಿ ಸ್ನಾನಮಾಡಿ, ಕ್ಷೇತ್ರದ ಅಧಿದೇವತೆಯಾದ ವಾಮನ ಮೂರ್ತಿಯನ್ನು ಅರ್ಚನೆಮಾಡುವವನು ಸಕಲಪಾಪಗಳನ್ನೂ ಕಳೆದು ಕೊಂಡು ಅವಸಾನಾನಂತರದಲ್ಲಿ ವಿಷ್ಣುಲೋಕವನ್ನು ಸೇರುತ್ತಾನೆ. ವಿಷ್ಣು ತೀರ್ಥದ ಸಮೀಪದಲ್ಲಿಯೇ ಕುಲಂಪುನವೆಂಬ ಮತ್ತೊಂದು ತೀರ್ಥವಿದೆ. ಆ ತೀರ್ಥದಲ್ಲಿ ಸ್ನಾನಮಾಡುವವನ ವಂಶವೆಲ್ಲವೂ ಪವಿತ್ರವಾಗುತ್ತದೆ.

**ಪವನಸ್ಯ ಹ್ರದೇ ಸ್ನಾತ್ವಾ ಮರುತಾಂ ತೀರ್ಥಮುತ್ತಮಮ್ ।**
**ತತ್ರ ಸ್ನಾತ್ವಾ ನರವ್ಯಾಘ್ರ ವಿಷ್ಣುಲೋಕೇ ಮಹೀಯತೇ ॥೧೦೫॥**

**ಅಮರಾಣಾಂ ಹ್ರದೇ ಸ್ನಾತ್ವಾ ಸಮಭ್ಯರ್ಚ್ಯಾಮರಾಧಿಪಮ್ ।**
**ಅಮರಾಣಾಂ ಪ್ರಭಾವೇಣ ಸ್ವರ್ಗಲೋಕೇ ಮಹೀಯತೇ ॥೧೦೬॥**

**ಶಾಲಿಹೋತ್ರಸ್ಯ ತೀರ್ಥೇ ಚ ಶಾಲಿಸೂರ್ಯೇ ಯಥಾವಿಧಿ ।**
**ಸ್ನಾತ್ವಾ ನರವರಶ್ರೇಷ್ಠ ಗೋಸಹಸ್ರಫಲಂ ಲಭೇತ್ ॥೧೦೭॥**

ವಾಮನಕ್ಷೇತ್ರದ ಯಾತ್ರೆಯಾದನಂತರದಲ್ಲಿ ಮರುತ್ತುಗಳ ತೀರ್ಥ ಕ್ಷೇತ್ರವಾದ ಪವನಹ್ರದಕ್ಕೆ ಪ್ರಯಾಣಮಾಡಬೇಕು. ಪವನಹ್ರದದಲ್ಲಿ ಸ್ನಾನಮಾಡುವವನು ಅವಸಾನಾನಂತರದಲ್ಲಿ ವಿಷ್ಣುಲೋಕದಲ್ಲಿ ವಿರಾಜಿಸು ತ್ತಾನೆ. ಆ ಕ್ಷೇತ್ರದಲ್ಲಿಯೇ ಅಮರಹ್ರದವೆಂಬ ಮತ್ತೊಂದು ತೀರ್ಥವಿದೆ. ಆ ಪವಿತ್ರವಾದ ಹ್ರದದಲ್ಲಿ ಸ್ನಾನಮಾಡಿ ದೇವಾಧಿಪನಾದ ಇಂದ್ರನನ್ನು

ಭಕ್ತಿಪೂರ್ವಕವಾಗಿ ಅರ್ಚನೆಮಾಡುವವನು ಅವಸಾನಾನಂತರದಲ್ಲಿ ದೇವತೆಗಳ ಅನುಗ್ರಹದಿಂದಾಗಿ ಸ್ವರ್ಗಲೋಕದಲ್ಲಿ ಪುರಸ್ಕೃತನಾಗುತ್ತಾನೆ. ಆ ಕ್ಷೇತ್ರದಲ್ಲಿಯೇ ಇರುವ ಶಾಲಿಹೋತ್ರಮಹರ್ಷಿಯ ಶಾಲಿಸೂರ್ಯತೀರ್ಥದಲ್ಲಿ ಸ್ನಾನಮಾಡುವವನು ಸಹಸ್ರಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ.

**ಶ್ರೀಕುಞ್ಜಂ ಚ ಸರಸ್ವತ್ಯಾಸ್ತೀರ್ಥಂ ಭರತಸತ್ತಮ ।**
**ತತ್ರ ಸ್ನಾತ್ವಾ ನರಶ್ರೇಷ್ಠ ಅಗ್ನಿಷ್ಟೋಮಫಲಂ ಲಭೇತ್ ॥೧೦೮॥**

ಶಾಲಿಸೂರ್ಯತೀರ್ಥದಲ್ಲಿ ಸ್ನಾನವನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸರಸ್ವತೀನದಿಯ ತೀರದಲ್ಲಿರುವ ಶ್ರೀಕುಂಜತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯತೀರ್ಥದಲ್ಲಿ ಸ್ನಾನಮಾಡುವುದರಿಂದ ಅಗ್ನಿಷ್ಟೋಮಯಾಗಮಾಡಿದ ಫಲವು ಲಭ್ಯವಾಗುತ್ತದೆ.

ಅನಂತರದಲ್ಲಿ ನೈಮಿಷಕುಂಜಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಹಿಂದೆ ನೈಮಿಷಾರಣ್ಯದಲ್ಲಿ ವಾಸಮಾಡುತ್ತಿದ್ದ ಋಷಿ-ಮಹರ್ಷಿಗಳು ತೀರ್ಥಯಾತ್ರೆಯನ್ನು ಮಾಡಬೇಕೆಂದು ಸಂಕಲ್ಪಮಾಡಿ ಕುರುಕ್ಷೇತ್ರಕ್ಕೆ ತೆರಳಿದರು. ಅವರು ಸರಸ್ವತೀನದಿಯ ತೀರಕ್ಕೆ ಬಂದಾಗ ಸರಸ್ವತೀನದಿಯ ಕುಂಜವು ಅವರ ಸ್ನಾನಕ್ಕಾಗಿ ಸಿದ್ಧವಾಗಿದ್ದಿತು. (ಕುಂಜಶಬ್ದಕ್ಕೆ ಸಾಮಾನ್ಯವಾಗಿ 'ಬಳ್ಳಿಗಳ ಪೊದೆ' 'ಬಳ್ಳಿಗಳಿಂದ ಆವೃತವಾದ ಪ್ರದೇಶ' ಎಂದು ಅರ್ಥವಿದ್ದರೂ-ಇಲ್ಲಿ ಬಳಸಿರುವ 'ಕುಂಜ' ಶಬ್ದಕ್ಕೆ 'ಕಮಲದ ಬಳ್ಳಿಗಳಿಂದ ಕೂಡಿದ ಸರಸ್ವತೀನದಿಯ ತೀರ್ಥ' ಎಂದು ಅರ್ಥಮಾಡುವುದು ಸಾಧುವಾಗಿ ಕಾಣುತ್ತದೆ.) ಸರಸ್ವತೀನದಿಯ ಸಮೀಪದಲ್ಲಿದ್ದ ಆ ಕುಂಜದಲ್ಲಿ ನೈಮಿಷಾರಣ್ಯದಿಂದ ಬಂದ ಋಷಿ-ಮಹರ್ಷಿಗಳು ಸ್ನಾನಮಾಡಿ ವಿಶ್ರಮಿಸಿಕೊಂಡರಾದ ಕಾರಣ ಈ ಕುಂಜಕ್ಕೆ ನೈಮಿಷಕುಂಜವೆಂದೇ ಹೆಸರಾಯಿತು.

**ತಸ್ಮಿನ್ಕುಞ್ಜೇ ನರಃ ಸ್ನಾತ್ವಾ ಅಗ್ನಿಷ್ಟೋಮಫಲಂ ಲಭೇತ್ ॥**

ನೈಮಿಷಕುಂಜದಲ್ಲಿ ಸ್ನಾನಮಾಡುವವನು ಅಗ್ನಿಷ್ಟೋಮಯಾಗವನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

**ತತೋ ಗಚ್ಛೇತ ಧರ್ಮಜ್ಞ ಕನ್ಯಾತೀರ್ಥಮನುತ್ತಮಮ್ ।**
**ಕನ್ಯಾತೀರ್ಥೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೧೧೨॥**

ನೈಮಿಷಕುಂಜದಲ್ಲಿ ಸ್ನಾನಮಾಡಿದನಂತರ ಯಾತ್ರಿಕನು ಕನ್ಯಾತೀರ್ಥಕ್ಕೆ ಪ್ರಯಾಣಮಾಡಬೇಕು. ಆ ಕನ್ಯಾತೀರ್ಥದಲ್ಲಿ ಸ್ನಾನಮಾಡುವುದರಿಂದ ಸಹಸ್ರಧೇನುಗಳನ್ನು ದಾನಮಾಡಿದ ಪುಣ್ಯವು ಲಭಿಸುತ್ತದೆ.

**ತತೋ ಗಚ್ಛೇತ ರಾಜೇನ್ದ್ರ ಬ್ರಹ್ಮಣಸ್ತೀರ್ಥಮುತ್ತಮಮ್ ।**
**ತತ್ರ ವರ್ಣಾವರಃ ಸ್ನಾತ್ವಾ ಬ್ರಾಹ್ಮಣ್ಯಂ ಲಭತೇ ನರಃ ।**
**ಬ್ರಾಹ್ಮಣಶ್ಚ ವಿಶುದ್ಧಾತ್ಮಾ ಗಚ್ಛೇತ ಪರಮಾಂ ಗತಿಮ್ ॥೧೧೩॥**

ಕನ್ಯಾತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿದನಂತರ ಬ್ರಹ್ಮತೀರ್ಥಕ್ಕೆ ಪ್ರಯಾಣಮಾಡಬೇಕು. ಬ್ರಾಹ್ಮಣನನ್ನು ಬಿಟ್ಟು ಉಳಿದ ಕ್ಷತ್ರಿಯ-ವೈಶ್ಯ-ಶೂದ್ರರು ಆ ತೀರ್ಥದಲ್ಲಿ ಸ್ನಾನಮಾಡಿದಲ್ಲಿ ಬ್ರಾಹ್ಮಣ್ಯವನ್ನು ಪಡೆಯುತ್ತಾರೆ. ಬ್ರಾಹ್ಮಣನಾದವನು ಸ್ನಾನಮಾಡಿದಲ್ಲಿ ಆತ್ಮಶುದ್ಧಿಯನ್ನು ಹೊಂದಿ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುತ್ತಾನೆ.

**ತತೋ ಗಚ್ಛೇನ್ನರಶ್ರೇಷ್ಠ ಸೋಮತೀರ್ಥಮನುತ್ತಮಮ್ ।**
**ತತ್ರ ಸ್ನಾತ್ವಾ ನರೋ ರಾಜನ್ಸೋಮಲೋಕಮವಾಪ್ನುಯಾತ್ ॥೧೧೪॥**

ಬ್ರಹ್ಮತೀರ್ಥದ ಯಾತ್ರೆಯಾದನಂತರ ಯಾತ್ರಿಕನು ಉತ್ತಮೋತ್ತಮವಾದ ಸೋಮತೀರ್ಥಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನ ಮಾಡುವವನು ಅವಸಾನಾನಂತರದಲ್ಲಿ ಚಂದ್ರಲೋಕವನ್ನು ಸೇರುತ್ತಾನೆ.

ಸೋಮತೀರ್ಥದ ಯಾತ್ರೆಯನ್ನು ಮುಗಿಸಿಕೊಂಡು ಸಪ್ತಸಾರಸ್ವತ ತೀರ್ಥಕ್ಕೆ ಪ್ರಯಾಣಮಾಡಬೇಕು. ಆ ಸಪ್ತಸಾರಸ್ವತಮಹಾಕ್ಷೇತ್ರದಲ್ಲಿ ಮಂಕಣಕನೆಂಬ ಮಹರ್ಷಿಯು ಅನೇಕವರ್ಷಗಳ ಪರ್ಯಂತವಾಗಿ ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆದು ಲೋಕವಿಖ್ಯಾತನಾದನು. ಯುಧಿಷ್ಠಿರ! ಇಷ್ಟು ಮಾತ್ರವಲ್ಲದೇ ಮಂಕಣಕಮಹರ್ಷಿಯ ವಿಷಯವಾಗಿ ಮತ್ತೊಂದು ಇತಿಹಾಸವೂ ಇರುವುದು. ಆ ಮಹರ್ಷಿಯು ದರ್ಭೆಯನ್ನು ತರಲು ಹೋದಾಗ ಚೂಪಾದ ದರ್ಭೆಯು ಆತನ ಕೈಗೆ ತಗುಲಿ ಸ್ವಲ್ಪ ಗಾಯ ವಾಯಿತು. ಗಾಯಗೊಂಡ ಅವನ ಹಸ್ತದಿಂದ ರಕ್ತವು ಪ್ರವಹಿಸುವುದರ

ಬದಲಾಗಿ ಶಾಕರಸವು (ಕಾಯಿ-ಪಲ್ಲೆಗಳ ರಸ) ಪ್ರವಹಿಸತೊಡಗಿತು. ಆ ಅಚ್ಚರಿಯನ್ನು ಕಂಡು ಮಂಕಣಕನು ಕುಣಿದಾಡತೊಡಗಿದನು. ಅವನ ಕಣ್ಣುಗಳು ವಿಕಸಿತವಾದುವು. ಮಹಾತಪಸ್ವಿಯಾದ ಮಂಕಣಕನು ಆಶ್ಚರ್ಯ ಚಕಿತನಾಗಿ ಕುಣಿದಾಡತೊಡಗಿದಾಗ ಅವನ ಮಹಾತೇಜಸ್ಸಿನ ಪ್ರಭಾವ ದಿಂದಾಗಿ ಅವನ ಸುತ್ತಲೂ ಇದ್ದ ಸ್ಥಾವರ-ಜಂಗಮಗಳೂ ಕುಣಿದಾಡ ತೊಡಗಿದುವು. ಅವನ ತಪಸ್ಸಿನ ಪ್ರಭಾವವು ಸರ್ವತ್ರ ವ್ಯಾಪಿಸಿ ಪ್ರಪಂಚವೇ ಅವನ ಜೊತೆಯಲ್ಲಿ ನೃತ್ಯಮಾಡಲು ಪ್ರಾರಂಭಿಸಿರುವುದೋ–ಎಂಬ ಭ್ರಾಂತಿಯು ದೇವತೆಗಳಿಗೆ ಉಂಟಾಯಿತು. ಒಡನೆಯೇ ದೇವತೆಗಳು ಬ್ರಹ್ಮಪುರಸ್ಸರರಾಗಿ ಮಹಾದೇವನ ಬಳಿಗೆ ಹೋಗಿ ಅವನನ್ನು ನಾನಾರೀತಿ ಯಲ್ಲಿ ಸ್ತೋತ್ರಮಾಡಿ ಬೇಡಿಕೊಂಡರು. "ಮಹಾದೇವನೇ! ಮಹರ್ಷಿ ಮಂಕಣಕನು ನೃತ್ಯಮಾಡುತ್ತಿದ್ದರೆ ಅವನ ತಪಸ್ಸಿನ ಪ್ರಭಾವದಿಂದಾಗಿ ಸುತ್ತ ಮುತ್ತಲಿನ ಸ್ಥಾವರ-ಜಂಗಮಗಳೆಲ್ಲವೂ ಅವನ ಜೊತೆಯಲ್ಲಿ ನೃತ್ಯಮಾಡಲು ಉಪಕ್ರಮಿಸಿವೆ. ಆದುದರಿಂದ ನೀನೀಗಲೇ ದಯಮಾಡಿ ಆ ಮಹರ್ಷಿಯ ನೃತ್ಯವನ್ನು ನಿಲ್ಲಿಸು. ಅವನು ಮುಂದೆ ನೃತ್ಯವಾಡದಂತೆ ಮಾಡು."

ದೇವತೆಗಳ ಆ ಪ್ರಾರ್ಥನೆಗೆ ಪ್ರಸನ್ನನಾದ ಮಹಾದೇವನು ದೇವತೆ ಗಳಿಗೆ 'ತಥಾಸ್ತು' ಎಂದು ಅಭಯವಚನವನ್ನಿತ್ತು ಅವರಿಗೆ ಹಿತವನ್ನುಂಟು ಮಾಡುವ ಆಶಯದಿಂದ ಮಂಕಣಕಮಹರ್ಷಿಯ ಬಳಿಗೆ ಹೋಗಿ ಅವನೊಡನೆ ಹೇಳಿದನು :

"ಧರ್ಮಾತ್ಮನಾದ ಮಹರ್ಷಿಯೇ! ನೃತ್ಯವನ್ನೇಕೆ ಮಾಡುತ್ತಿರುವೆ? ನೀನು ಕುಣಿದಾಡಿ ಆನಂದಪಡುವ ಕಾರಣವಾದರೂ ಏನಿದೆ? ಅಷ್ಟೊಂದು ಹೆಚ್ಚಿನ ಸಂತೋಷದ ಕಾರಣವನ್ನು ತಿಳಿಸು."

ಬ್ರಾಹ್ಮಣವೇಷಧಾರಿಯಾದ ಮಹಾದೇವನನ್ನು ಕುರಿತು ಮಹರ್ಷಿಯು ನೈಜವಾದ ಉತ್ತರವನ್ನಿತ್ತನು :

"ಬ್ರಾಹ್ಮಣೋತ್ತಮನೇ! ನಾನೊಬ್ಬ ತಪಸ್ವಿಯು. ಧರ್ಮಮಾರ್ಗ ವನ್ನೇ ಅನುಸರಿಸಿ ನಡೆಯುತ್ತಿರುವೆನು. ನನ್ನ ಕೈಯಿನ ಗಾಯದಿಂದ ಹರಿಯು ತ್ತಿರುವ ಶಾಕರಸವನ್ನಾದರೂ ನೋಡು. ವಿಪ್ರನೇ! ರಕ್ತವು ಬರುವುದಕ್ಕೆ

ಬದಲಾಗಿ ಗಾಯದ ಮೂಲಕ ಶಾಕರಸವು ಬಂದುದೇ ನನ್ನ ಅಮಿತಾನಂದಕ್ಕೆ ಕಾರಣವಾಗಿದೆ. ಆನಂದಾಧಿಕ್ಯದಿಂದ ನೃತ್ಯಮಾಡುತ್ತಿದ್ದೇನೆ."

ಶಾಕರಸವು ಗಾಯದಿಂದ ಬಂದುದಕ್ಕೆ ಮೋಹಗೊಂಡ ಮಹರ್ಷಿಯನ್ನು ನೋಡಿ ಮಹಾದೇವನೊಮ್ಮೆ ನಸುನಕ್ಕು ಮಂಕಣಕನಿಗೆ ಹೇಳಿದನು:

"ಮಂಕಣಕ! ನಿನ್ನ ಗಾಯದಿಂದ ಶಾಕರಸವು ಬಂದಿರುವುದಕ್ಕೆ ನಾನು ಆಶ್ಚರ್ಯಪಡುವುದಿಲ್ಲ. ನೀನು ನನ್ನ ಹಸ್ತವನ್ನು ನೋಡು."

ಎಂದು ಹೇಳಿ ಬ್ರಾಹ್ಮಣವೇಷಧಾರಿಯಾದ ಮಹೇಶ್ವರನು ಬೆರಳಿನ ತುದಿಯಿಂದ ತನ್ನ ಎಡಗೈಯಿನ ಹೆಬ್ಬೆಟ್ಟನ್ನು ಗಟ್ಟಿಯಾಗಿ ಅಮುಕಿದನು. ಒಡನೆಯೇ ಹೆಬ್ಬೆಟ್ಟು ಗಾಯಗೊಂಡಿತು. ಗಾಯಗೊಂಡ ಸ್ಥಳದಿಂದ ರಕ್ತವು ಪ್ರವಹಿಸುವುದರ ಬದಲಾಗಿ ಮಂಜುಗೆಡ್ಡೆಗೆ ಸಮಾನವಾದ ಬಿಳಿಯ ಭಸ್ಮವು ಹೊರಹೊಮ್ಮಿತು. ಒಡನೆಯೇ ಮಂಕಣಕನು ಬಂದಿರುವವನು ಪರಶಿವನೇ ಎಂದು ನಿಶ್ಚಯಿಸಿ ಮಹಾದೇವನ ಪಾದಾರವಿಂದಗಳಲ್ಲಿ ಬಿದ್ದನು. ರುದ್ರನಿಗಿಂತಲೂ ಶ್ರೇಷ್ಠನಾದ ದೇವನು ಬೇರೊಬ್ಬನಿಲ್ಲವೆಂದು ಮಂಕಣಕನು ನಿರ್ಧರಿಸಿ, ಪರಮೇಶ್ವರನನ್ನು ಭಕ್ತಿಪೂರ್ವಕವಾಗಿ ಸ್ತೋತ್ರಮಾಡಲು ಉಪಕ್ರಮಿಸಿದನು :

## ಮಂಕಣಕಕೃತಶಿವಸ್ತೋತ್ರಮ್

**ಸುರಾಸುರಸ್ಯ ಜಗತೋ ಗತಿಸ್ತ್ವಮಸಿ ಶೂಲಧೃಕ್ ।**
**ತ್ವಯಾ ಸರ್ವಮಿದಂ ಸೃಷ್ಟಂ ತ್ರೈಲೋಕ್ಯಂ ಸಚರಾಚರಮ್ ॥೧೨೭॥**

**ತ್ವಮೇವ ಸರ್ವಾನ್ಗ್ರಸಸಿ ಪುನರೇವ ಯುಗಕ್ಷಯೇ ।**
**ದೇವೈರಪಿ ನ ಶಕ್ಯಸ್ತ್ವಂ ಪರಿಜ್ಞಾತುಂ ಕುತೋ ಮಯಾ ॥೧೨೮॥**

**ತ್ವಯಿ ಸರ್ವೇ ಪ್ರದೃಶ್ಯನ್ತೇ ಸುರಾ ಬ್ರಹ್ಮಾದಯೋಽನಘ ।**
**ಸರ್ವಸ್ತ್ವಮಸಿ ಲೋಕಾನಾಂ ಕರ್ತಾ ಕಾರಯಿತಾ ಚ ಹ ।**
**ತ್ವತ್ಪ್ರಸಾದಾತ್ಸುರಾಃ ಸರ್ವೇ ಮೋದನ್ತೀಹಾಕುತೋಭಯಾಃ ॥೧೨೯॥**

"ಮಹಾನುಭಾವ! ಶೂಲಪಾಣಿಯೇ! ನೀನು ದೇವತೆಗಳಿಗೂ, ಅಸುರರಿಗೂ ಮತ್ತು ಸಕಲಜಗತ್ತುಗಳಿಗೂ ಶರಣ್ಯನಾಗಿರುವೆ. ಚರಾಚರಾತ್ಮಕ

ವಾದ ಈ ತ್ರೈಲೋಕ್ಯವೂ ನಿನ್ನಿಂದಲೇ ಸೃಷ್ಟವಾಗಿದೆ. ಕಲ್ಪಾಂತರದಲ್ಲಿ ಎಲ್ಲವನ್ನೂ ನೀನೇ ಧ್ವಂಸಮಾಡುವೆ. 'ನೀನಾರು? ನಿನ್ನ ನಿಜಸ್ವರೂಪ ವೇನು?'–ಎಂಬುದನ್ನು ದೇವತೆಗಳೂ ಅರಿಯರು. ಹೀಗಿರುವಾಗ ನನ್ನಂತ ಹವನಿಂದ ನಿನ್ನ ಅಪಾರಮಹಿಮೆಯನ್ನು ತಿಳಿಯಲು ಹೇಗೆತಾನೇ ಸಾಧ್ಯ ವಾದೀತು? ಬ್ರಹ್ಮಪುರಸ್ಸರರಾದ ದೇವತೆಗಳೆಲ್ಲರೂ ನಿನ್ನಲ್ಲಿಯೇ ಇದ್ದಾರೆ. ಕಾರ್ಯ-ಕಾರಣಗಳೆರಡೂ ನೀನೇ ಆಗಿರುವೆ. ಕಾರ್ಯಮಾಡುವವನೂ– ಮಾಡಿಸುವವನೂ ನೀನೇ. ಸಕಲಲೋಕಗಳೂ ನಿನ್ನಲ್ಲಿಯೇ ಇವೆ. ಲೋಕ ಗಳೆಲ್ಲವೂ ನೀನೇ ಆಗಿರುತ್ತೀಯೆ. ನಿನ್ನ ದಿವ್ಯಾನುಗ್ರಹದಿಂದ ದೇವತೆಗಳು ಯಾವ ವಿಧವಾದ ಭೀತಿಯೂ ಇಲ್ಲದೇ ಆನಂದದಿಂದ ಕಾಲಕಳೆಯುತ್ತಾರೆ."

ಮಹರ್ಷಿಯು ಮಹಾದೇವನನ್ನು ಹೀಗೆ ಸ್ತೋತ್ರಮಾಡಿ ಪುನಃ ಪ್ರಾರ್ಥಿಸಿದನು :

**ತ್ವತ್ಪ್ರಸಾದಾನ್ಮಹಾದೇವ ತಪೋ ಮೇ ನ ಕ್ಷರೇತ ವೈ ॥೧೩೧॥**

"ದೇವದೇವನೇ! ನನ್ನ ತಪಸ್ಸಿಗೆ ಸ್ವಲ್ಪವೂ ಕುಂದುಂಟಾಗದಂತೆ ಅನುಗ್ರಹಿಸು, ಮಹಾನುಭಾವ!"

ಮಹರ್ಷಿಯ ಮಾತನ್ನು ಕೇಳಿ ಮಹಾದೇವನು ನಸುನಗುತ್ತಾ ಹೇಳಿದನು :

**ತಪಸ್ತೇ ವರ್ಧತಾಂ ವಿಪ್ರ ಮತ್ಪ್ರಸಾದಾತ್ಸಹಸ್ರಧಾ ।**
**ಆಶ್ರಮೇ ಚೇಹ ವತ್ಸ್ಯಾಮಿ ತ್ವಯಾ ಸಹ ಮಹಾಮುನೇ ॥೧೩೨॥**

"ಮಹಾಮುನಿಯೇ! ನನ್ನ ಅನುಗ್ರಹದಿಂದಾಗಿ ನಿನ್ನ ತಪಸ್ಸು ಸಾವಿರ ಪಾಲು ಅಭಿವೃದ್ಧಿಹೊಂದಲಿ. ನಾನು ನಿನ್ನೊಡನೆ ಈ ಆಶ್ರಮದಲ್ಲಿಯೇ ವಾಸಮಾಡುತ್ತೇನೆ.

**ಸಪ್ತಸಾರಸ್ವತೇ ಸ್ನಾತ್ವಾ ಅರ್ಚಯಿಷ್ಯನ್ತಿ ಯೇ ತು ಮಾಮ್ ।**
**ನ ತೇಷಾಂ ದುರ್ಲಭಂ ಕಿಂಚಿದಿಹಲೋಕೇ ಪರತ್ರ ಚ ।**
**ಸಾರಸ್ವತಂ ಚ ತೇ ಲೋಕಂ ಗಮಿಷ್ಯನ್ತಿ ನ ಸಂಶಯಃ ॥೧೩೩॥**

ಯಾತ್ರಿಕರು ನಿನ್ನ ಆಶ್ರಮದಲ್ಲಿರುವ ಈ ಸಪ್ತಸಾರಸ್ವತತೀರ್ಥದಲ್ಲಿ ಸ್ನಾನಮಾಡಿ, ನಿನ್ನ ಆಶ್ರಮವಾಸಿಯಾಗಿರುವ ನನ್ನನ್ನು ಭಕ್ತಿಯಿಂದ

ಪೂಜಿಸಿದರೆ-ಅವರು ಇಹಲೋಕದಲ್ಲಿ ತಮ್ಮ ಮನೋಭಿಲಾಷೆಗಳೆಲ್ಲವನ್ನೂ ಪೂರೈಸಿಕೊಂಡು ಅವಸಾನಾನಂತರದಲ್ಲಿ ಸದ್ಗತಿಯನ್ನು ಪಡೆಯುತ್ತಾರೆ. ಅವರಿಗೆ ಉತ್ತಮೋತ್ತಮವಾದ ಸಾರಸ್ವತಲೋಕವು ಸಿಕ್ಕುವುದರಲ್ಲಿ ಸಂಶಯವೇ ಇಲ್ಲ."

ಮಹಾದೇವನು ಹೀಗೆ ಹೇಳಿ ಅಲ್ಲಿಯೇ ಅಂತರ್ಧಾನಹೊಂದಿದನು.

ಯುಧಿಷ್ಠಿರ! ಸಪ್ತಸಾರಸ್ವತತೀರ್ಥದಲ್ಲಿ ಸ್ನಾನಮಾಡಿದನಂತರ ಯಾತ್ರಿಕನು ಮುಂದೆ ತ್ರಿಲೋಕಪ್ರಸಿದ್ಧವಾದ ಔಶನಸಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು. ಆ ಪುಣ್ಯಕ್ಷೇತ್ರದಲ್ಲಿ ಬ್ರಹ್ಮಪುರಸ್ಸರರಾದ ದೇವತೆಗಳೂ, ತಪೋಧನರಾದ ಮಹರ್ಷಿಗಳೂ ವಾಸಮಾಡುತ್ತಿದ್ದಾರೆ ಮತ್ತು ಕಾರ್ತಿಕೇಯನ ಸಾನ್ನಿಧ್ಯವು ತ್ರಿಸಂಧ್ಯೆಗಳಲ್ಲಿಯೂ ಅಲ್ಲಿರುತ್ತದೆ. ಭೃಗುವಂಶೋತ್ಪನ್ನನಾದ ಭಾರ್ಗವನಿಗೆ (ಶುಕ್ರಾಚಾರ್ಯನಿಗೆ) ಪ್ರಿಯವನ್ನುಂಟುಮಾಡುವ ಕಾರಣದಿಂದ ಷಣ್ಮುಖನು ಆ ಆಶ್ರಮದಲ್ಲಿಯೇ ಇದ್ದಾನೆ.

**ಕಪಾಲಮೋಚನಂ ತೀರ್ಥಂ ಸರ್ವಪಾಪಪ್ರಮೋಚನಮ್ ।**
**ತತ್ರ ಸ್ನಾತ್ವಾ ನರವ್ಯಾಘ್ರ ಸರ್ವಪಾಪೈಃ ಪ್ರಮುಚ್ಯತೇ ॥೧೩೭॥**

ಔಶನಸಕ್ಷೇತ್ರದಲ್ಲಿ ಕಪಾಲಮೋಚನವೆಂಬ ತೀರ್ಥವಿರುವುದು. ಆ ತೀರ್ಥದಲ್ಲಿ ಸ್ನಾನಮಾಡುವವನು ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

**ಅಗ್ನಿತೀರ್ಥಂ ತತೋ ಗಚ್ಛೇತ್ತತ್ರ ಸ್ನಾತ್ವಾ ನರರ್ಷಭ ।**
**ಅಗ್ನಿಲೋಕಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥೧೩೮॥**

ಕಪಾಲಮೋಚನದಲ್ಲಿ ಸ್ನಾನವನ್ನು ಮುಗಿಸಿಕೊಂಡು ಅಗ್ನಿತೀರ್ಥಕ್ಕೆ ಹೋಗಬೇಕು. ಅಗ್ನಿತೀರ್ಥದಲ್ಲಿ ಸ್ನಾನಮಾಡುವವನು ಅವಸಾನಾನಂತರದಲ್ಲಿ ಅಗ್ನಿಲೋಕವನ್ನು ಹೊಂದುವುದಲ್ಲದೇ–ತನ್ನ ವಂಶದವರೆಲ್ಲರನ್ನೂ ಉದ್ಧಾರಮಾಡುತ್ತಾನೆ.

**ವಿಶ್ವಾಮಿತ್ರಸ್ಯ ತತ್ರೈವ ತೀರ್ಥಂ ಭರತಸತ್ತಮ ।**
**ತತ್ರ ಸ್ನಾತ್ವಾ ನರಶ್ರೇಷ್ಠ ಬ್ರಾಹ್ಮಣ್ಯಮಧಿಗಚ್ಛತಿ ॥೧೩೯॥**

ಆ ಕ್ಷೇತ್ರದಲ್ಲಿಯೇ ವಿಶ್ವಾಮಿತ್ರತೀರ್ಥವೆಂಬ ಸುಪ್ರಸಿದ್ಧವಾದ

ಮತ್ತೊಂದು ತೀರ್ಥವಿದೆ. ಆ ತೀರ್ಥದಲ್ಲಿ ಸ್ನಾನಮಾಡುವವನು ಜನ್ಮಾಂತರದಲ್ಲಿ ಬ್ರಾಹ್ಮಣನಾಗಿ ಹುಟ್ಟುತ್ತಾನೆ.

**ಬ್ರಹ್ಮಯೋನಿಂ ಸಮಾಸಾದ್ಯ ಶುಚಿಃ ಪ್ರಯತಮಾನಸಃ ।**
**ತತ್ರ ಸ್ನಾತ್ವಾ ನರವ್ಯಾಘ್ರ ಬ್ರಹ್ಮಲೋಕಂ ಪ್ರಪದ್ಯತೇ ।**
**ಪುನಾತ್ಯಾಸಪ್ತಮಂ ಚೈವ ಕುಲಂ ನಾಸ್ತ್ಯತ್ರ ಸಂಶಯಃ ॥೧೪೧॥**

ವಿಶ್ವಾಮಿತ್ರತೀರ್ಥದಲ್ಲಿ ಸ್ನಾನಮಾಡಿಕೊಂಡು ಬ್ರಹ್ಮಯೋನಿಯೆಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಚಿತ್ತಶುದ್ಧಿಯಿಂದಲೂ ಜಿತೇಂದ್ರಿಯತ್ವದಿಂದಲೂ ಇದ್ದು ಆ ಬ್ರಹ್ಮಯೋನಿತೀರ್ಥದಲ್ಲಿ ಸ್ನಾನಮಾಡುವುದರಿಂದ ಅವಸಾನಾನಂತರದಲ್ಲಿ ಬ್ರಹ್ಮಲೋಕವು ಲಭ್ಯವಾಗುತ್ತದೆ ಮತ್ತು ಸ್ನಾನಮಾಡುವ ಯಾತ್ರಿಕನ ಹಿಂದಿನ ಮತ್ತು ಮುಂದಿನ ಏಳು ತಲೆಮಾರಿನವರು ಪವಿತ್ರರಾಗುತ್ತಾರೆ. ಇದರಲ್ಲಾವ ಸಂಶಯವೂ ಇಲ್ಲ. ಬ್ರಹ್ಮಯೋನಿ ತೀರ್ಥಸ್ನಾನವಾದನಂತರ ಯಾತ್ರಿಕನು ತ್ರಿಲೋಕಪ್ರಸಿದ್ಧವಾದ, ಕಾರ್ತಿಕೇಯನ ತೀರ್ಥವಾದ ಪೃಥೂದಕತೀರ್ಥಕ್ಕೆ ಪ್ರಯಾಣಮಾಡಬೇಕು. ಪುಣ್ಯತಮವಾದ ಪೃಥೂದಕತೀರ್ಥದಲ್ಲಿ ಸ್ನಾನಮಾಡಿ ಯಾತ್ರಿಕನು ದೇವ-ಪಿತೃಗಳ ಅರ್ಚನೆಯನ್ನು ಯಥಾವಿಧಿಯಾಗಿ ಮಾಡಬೇಕು.

**ಅಜ್ಞಾನಾಜ್ಜ್ಞಾನತೋ ವಾಪಿ ಸ್ತ್ರಿಯಾ ವಾ ಪುರುಷೇಣ ವಾ ।**
**ಯತ್ಕಿಂಚಿದಶುಭಂ ಕರ್ಮ ಕೃತಂ ಮಾನುಷಬುದ್ಧಿನಾ ॥೧೪೩॥**

**ತತ್ಸರ್ವಂ ನಶ್ಯತೇ ತತ್ರ ಸ್ನಾತಮಾತ್ರಸ್ಯ ಭಾರತ ।**
**ಅಶ್ವಮೇಧಫಲಂ ಚಾಸ್ಯ ಸ್ವರ್ಗಲೋಕಂ ಚ ಗಚ್ಛತಿ ॥೧೪೪॥**

ಪೃಥೂದಕತೀರ್ಥದಲ್ಲಿ ಸ್ನಾನಮಾಡುವ ಪುರುಷನ ಅಥವಾ ಸ್ತ್ರೀಯ–ತಿಳಿದೋ ಅಥವಾ ತಿಳಿಯದೆಯೋ ಮಾಡಿದ–ಸಕಲದೋಷಗಳೂ ನಿವಾರಣೆಯಾಗುತ್ತವೆ. ಅಶ್ವಮೇಧಯಾಗಮಾಡಿದ ಪುಣ್ಯವೂ ಲಭ್ಯವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಸ್ವರ್ಗವೂ ಲಭಿಸುತ್ತದೆ. ಆ ತೀರ್ಥದ ಹಿರಿಮೆಯ ವಿಷಯದಲ್ಲಿ ಋಷಿ-ಮಹರ್ಷಿಗಳು ಹೀಗೆ ಹೇಳುತ್ತಾರೆ :

**ಪುಣ್ಯಮಾಹುಃ ಕುರುಕ್ಷೇತ್ರಂ ಕುರುಕ್ಷೇತ್ರಾತ್ಸರಸ್ವತೀ ।**
**ಸರಸ್ವತ್ಯಾಶ್ಚ ತೀರ್ಥಾನಿ ತೀರ್ಥೇಭ್ಯಶ್ಚ ಪೃಥೂದಕಮ್ ॥೧೪೫॥**

"ಕುರುಕ್ಷೇತ್ರಯಾತ್ರೆಯೇ ಪುಣ್ಯಪ್ರದವಾದುದು. ಅದಕ್ಕಿಂತಲೂ ಸರಸ್ವತೀನದಿಯಲ್ಲಿ ಸ್ನಾನಮಾಡುವುದು ಹೆಚ್ಚು ಪುಣ್ಯಪ್ರದ. ಪುಷ್ಕರಾದಿ ತೀರ್ಥಗಳಲ್ಲಿ ಸ್ನಾನಮಾಡುವುದು ಸರಸ್ವತೀನದಿಯಲ್ಲಿ ಸ್ನಾನಮಾಡುವುದಕ್ಕಿಂತಲೂ ಹೆಚ್ಚು ಪುಣ್ಯಪ್ರದವಾದುದು. ಪೃಥೂದಕದಲ್ಲಿ ಸ್ನಾನಮಾಡುವುದರಿಂದ ಪುಷ್ಕರಾದಿ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಪ್ರಾಪ್ತವಾಗುವ ಪುಣ್ಯಕ್ಕಿಂತಲೂ ಹೆಚ್ಚು ಪುಣ್ಯವು ಲಭಿಸುತ್ತದೆ. ಅರ್ಥಾತ್ ಪೃಥೂದಕವು ಅತ್ಯಂತಶ್ರೇಷ್ಠವಾದ, ಹೆಚ್ಚು ಪುಣ್ಯಪ್ರದವಾದ ತೀರ್ಥವಾಗಿರುತ್ತದೆ.

**ಉತ್ತಮಂ ಸರ್ವತೀರ್ಥಾನಾಂ ಯಸ್ತ್ಯಜೇದಾತ್ಮನಸ್ತನುಮ್ ।**
**ಪೃಥೂದಕೇ ಜಪ್ಯಪರೋ ನೈವ ಶ್ವೋ ಮರಣಂ ತಪೇತ್ ॥೧೪೬॥**

ಅಂತಹ ಉತ್ತಮೋತ್ತಮವಾದ ಪೃಥೂದಕತೀರ್ಥದಲ್ಲಿ ಸ್ನಾನ ಮಾಡುತ್ತಾ, ಜಪಪರಾಯಣನಾಗಿ ದೇಹತ್ಯಾಗಮಾಡುವವನಿಗೆ ಪುನಃ ಜರಾ-ಮರಣಗಳ ಭಯವಿರುವುದಿಲ್ಲ. ಪುನರ್ಜನ್ಮವೂ ಇರುವುದಿಲ್ಲ. ದೇವತೆಯೇ ಆಗುತ್ತಾನೆ. ಪೃಥೂದಕತೀರ್ಥದ ಹಿರಿಮೆಯ ವಿಷಯವಾಗಿ ಮಹರ್ಷಿಗಳಾದ ಸನತ್ಕುಮಾರರೂ ಮತ್ತು ವ್ಯಾಸರೂ ಅನೇಕ ಗೀತೆಗಳನ್ನು ಹಾಡಿದ್ದಾರೆ. ನಿಯತವ್ರತನಾಗಿ, ಜಿತೇಂದ್ರಿಯನಾಗಿ ಪೃಥೂದಕಕ್ಕೆ ಹೋಗಬೇಕೆಂದು ಅವರು ಹೇಳಿದ್ದಾರೆ. ನಿಶ್ಚಯವಾಗಿ ಹೇಳುವುದಾದರೆ, ಯುಧಿಷ್ಠಿರ!

**ಪೃಥೂದಕಾತ್ತೀರ್ಥತಮಂ ನಾನ್ಯತ್ತೀರ್ಥಂ ಕುರೂದ್ವಹ ।**
**ತನ್ಮೇಧ್ಯಂ ತತ್ಪವಿತ್ರಂ ಚ ಪಾವನಂ ಚ ನ ಸಂಶಯಃ ॥೧೪೮॥**

**ತತ್ರ ಸ್ನಾತ್ವಾ ದಿವಂ ಯಾನ್ತಿ ಯೇಽಪಿ ಪಾಪಕೃತೋ ನರಾಃ ।**
**ಪೃಥೂದಕೇ ನರಶ್ರೇಷ್ಠ ಏವಮಾಹುರ್ಮನೀಷಿಣಃ ॥೧೪೯॥**

ಪೃಥೂದಕತೀರ್ಥಕ್ಕಿಂತಲೂ ಉತ್ತಮವಾದ ತೀರ್ಥವು ಮತ್ತೊಂದಿಲ್ಲ. ಈ ತೀರ್ಥವು ಆಶ್ರಿತರನ್ನು ಪೂತರನ್ನಾಗಿ ಮಾಡುತ್ತದೆ. ಆ ತೀರ್ಥದ ನಾಮೋಚ್ಚಾರಣೆಯೇ ಮಂಗಳಪ್ರದವಾದುದು. ಅದರಲ್ಲಿ ಸ್ನಾನ ಮಾಡುವವರ ಸಕಲಪಾಪಗಳೂ ಪರಿಹಾರವಾಗುತ್ತವೆ. ಮನೀಷಿಗಳಾದವರು ಪೃಥೂದಕ ತೀರ್ಥಸ್ನಾನದ ಫಲವನ್ನು ಕುರಿತು ಈ ರೀತಿಯಲ್ಲಿ ಹೇಳಿದ್ದಾರೆ:

'ಎಷ್ಟೇ ಪಾಪಿಷ್ಠರಾಗಿದ್ದರೂ ಪೃಥೂದಕದಲ್ಲಿ ಸ್ನಾನಮಾಡುವವರು ತಮ್ಮ ಪಾಪಗಳನ್ನು ಪರಿಹಾರಮಾಡಿಕೊಂಡು ಅವಸಾನಾನಂತರದಲ್ಲಿ ಸ್ವರ್ಗಲೋಕವನ್ನು ಸೇರುತ್ತಾರೆ.'

**ಮಧುಸ್ರವಂ ಚ ತತ್ರೈವ ತೀರ್ಥಂ ಭರತಸತ್ತಮ ।**
**ತತ್ರ ಸ್ನಾತ್ವಾ ನರೋ ರಾಜನ್ಗೋಸಹಸ್ರಫಲಂ ಲಭೇತ್ ॥೧೫೦॥**

ಯುಧಿಷ್ಠಿರ! ಪೃಥೂದಕತೀರ್ಥದ ಸಮೀಪದಲ್ಲಿಯೇ ಮಧುಸ್ರವ ವೆಂಬ ಮತ್ತೊಂದು ತೀರ್ಥವಿದೆ. ಪವಿತ್ರವಾದ ಆ ತೀರ್ಥದಲ್ಲಿ ಸ್ನಾನಮಾಡು ವುದರಿಂದ ಸಹಸ್ರಗೋವುಗಳನ್ನು ದಾನಮಾಡಿದ ಪುಣ್ಯವು ಲಭ್ಯವಾಗುತ್ತದೆ. ಮಧುಸ್ರವತೀರ್ಥಸ್ನಾನವನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಸುಪ್ರಸಿದ್ಧವಾದ ಸರಸ್ವತೀ-ಅರುಣಾನದಿಗಳ ಸಂಗಮಸ್ಥಾನಕ್ಕೆ ಪ್ರಯಾಣ ಮಾಡಬೇಕು.

**ತ್ರಿರಾತ್ರೋಪೋಷಿತಃ ಸ್ನಾತ್ವಾ ಮುಚ್ಯತೇ ಬ್ರಹ್ಮಹತ್ಯಯಾ ॥೧೫೧॥**

**ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ವಿನ್ದತಿ ಮಾನವಃ ।**
**ಆಸಪ್ತಮಂ ಕುಲಂ ಚೈವ ಪುನಾತಿ ಭರತರ್ಷಭ ॥೧೫೨॥**

ಆ ಸಂಗಮಸ್ಥಾನದಲ್ಲಿ ತ್ರಿಕಾಲಗಳಲ್ಲಿಯೂ ಸ್ನಾನಮಾಡುತ್ತಾ ಮೂರು ರಾತ್ರಿಗಳು ನಿರಶನವ್ರತದಿಂದಿದ್ದರೆ ಬ್ರಹ್ಮಹತ್ಯಾಪಾಪದಿಂದಲೂ ವಿಮುಕ್ತ ನಾಗುತ್ತಾನೆ. ಅಗ್ನಿಷ್ಟೋಮ ಮತ್ತು ಅತಿರಾತ್ರಯಾಗಗಳನ್ನು ಮಾಡಿದ ಫಲಕ್ಕಿಂತಲೂ ಅಧಿಕವಾದ ಫಲವನ್ನು ಪಡೆಯುತ್ತಾನೆ ಮತ್ತು ಅವನ ಹಿಂದಿನ ಮತ್ತು ಮುಂದಿನ ಏಳು ತಲೆಮಾರಿನವರನ್ನು ಉದ್ಧರಿಸಲು ಸಮರ್ಥನಾಗುತ್ತಾನೆ. ಆ ಸರಸ್ವತೀ-ಅರುಣಾಸಂಗಮಸ್ಥಾನದ ಸಮೀಪ ದಲ್ಲಿಯೇ ಅರ್ಧಕೀಲವೆಂಬ ಮತ್ತೊಂದು ತೀರ್ಥವಿದೆ. ಬ್ರಾಹ್ಮಣರ ಮೇಲಿನ ಅನುಕಂಪದಿಂದ ದರ್ಭಿಮಹರ್ಷಿಯು ಆ ತೀರ್ಥವನ್ನು ನಿರ್ಮಾಣ ಮಾಡಿದನು. ಯುಧಿಷ್ಠಿರ! ಬ್ರಾಹ್ಮಣನಾರೆಂಬುದಕ್ಕೆ ಉತ್ತರವಾಗಿ ಮಹರ್ಷಿ ಗಳು ಹೀಗೆ ಹೇಳಿದ್ದಾರೆ :

**ವ್ರತೋಪನಯನಾಭ್ಯಾಂ ಚಾಪ್ಯುಪವಾಸೇನ ವಾಪ್ಯುತ ।**
**ಕ್ರಿಯಾಮನ್ತ್ರೈಶ್ಚ ಸಂಯುಕ್ತೋ ಬ್ರಾಹ್ಮಣಃ ಸ್ಯಾನ್ನ ಸಂಶಯಃ ॥೧೫೪॥**

"ವ್ರತ, ಉಪನಯನ, ಉಪವಾಸ, ಸಂಧ್ಯಾದಿಕ್ರಿಯೆಗಳು, ವೇದಾಧ್ಯಯನ–ಇವುಗಳಿಂದ ಕೂಡಿರುವವನು ಬ್ರಾಹ್ಮಣನೆಂಬುದರಲ್ಲಿ ಸಂಶಯವಿಲ್ಲ."

**ಕ್ರಿಯಾಮನ್ತ್ರವಿಹೀನೋಽಪಿ ತತ್ರ ಸ್ನಾತ್ವಾ ನರರ್ಷಭ ।**
**ಚೀರ್ಣವ್ರತೋ ಭವೇದ್ವಿದ್ವಾನ್ದೃಷ್ಟಮೇತತ್ಪುರಾತನೈಃ ॥೧೫೫॥**

ಸಂಧ್ಯಾದಿಕ್ರಿಯೆಗಳನ್ನು ಮಾಡದಿದ್ದರೂ, ವೇದಾಭ್ಯಾಸವನ್ನು ಮಾಡದಿದ್ದರೂ ಅರ್ಧಕೀಲತೀರ್ಥದಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಸಂಧ್ಯಾದಿಕ್ರಿಯೆಗಳನ್ನು ಮಾಡಿದ, ವೇದಾಧ್ಯಯನಾದಿಗಳನ್ನು ಮಾಡಿದ ಫಲವನ್ನು ಪಡೆಯುತ್ತಾನೆಂಬುದು ಹಿಂದಿನವರಿಗೆ ಅನುಭವವೇದ್ಯವಾಗಿದೆ.

ದರ್ಭಿಮುನಿಯು ಬ್ರಾಹ್ಮಣರ ಮೇಲಿನ ಅನುಕಂಪದಿಂದ ಆ ತೀರ್ಥವನ್ನು ನಿರ್ಮಿಸಿದನಲ್ಲದೇ–ಚತುಸ್ಸಾಗರಗಳಿಂದಲೂ ಪುಣ್ಯೋದಕಗಳನ್ನು ತಂದು ಅಲ್ಲಿ ಸ್ಥಾಪಿಸಿರುತ್ತಾನೆ.

**ತೇಷು ಸ್ನಾತೋ ನರಶ್ರೇಷ್ಠ ನ ದುರ್ಗತಿಮವಾಪ್ನುಯಾತ್ ।**
**ಫಲಾನಿ ಗೋಸಹಸ್ರಾಣಾಂ ಚತುರ್ಣಾಂ ವಿನ್ದತೇ ಚ ಸಃ ॥೧೫೬॥**

ಆ ತೀರ್ಥಗಳಲ್ಲಿ ಸ್ನಾನಮಾಡಿದವನಿಗೆ ದುರ್ಗತಿಯೆಂಬುದೇ ಇಲ್ಲ. ನಾಲ್ಕು ಸಾವಿರ ಧೇನುಗಳನ್ನು ದಾನಮಾಡಿದ ಫಲವು ಲಭಿಸುತ್ತದೆ. ಆ ಕ್ಷೇತ್ರದ ತೀರ್ಥಯಾತ್ರೆಯನ್ನು ಮುಗಿಸಿದನಂತರ ಮುಂದೆ ಶತಸಹಸ್ರಕತೀರ್ಥಕ್ಕೆ ಪ್ರಯಾಣಮಾಡಬೇಕು. ಶತಸಹಸ್ರಕತೀರ್ಥದ ಸಮೀಪದಲ್ಲಿಯೇ ಸಹಸ್ರಕವೆಂಬ ಮತ್ತೊಂದು ತೀರ್ಥವಿರುವುದು. ಆ ತೀರ್ಥಗಳೆರಡೂ ಲೋಕಪ್ರಸಿದ್ಧವಾಗಿವೆ.

**ಉಭಯೋರ್ಹಿ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ।**
**ದಾನಂ ವಾಪ್ಯುಪವಾಸೋ ವಾ ಸಹಸ್ರಗುಣಿತಂ ಭವೇತ್ ॥೧೫೮॥**

ಆ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಸಹಸ್ರಗೋವುಗಳನ್ನು ದಾನಮಾಡಿದ ಪುಣ್ಯವು ಲಭ್ಯವಾಗುತ್ತದೆ. ಆ ಕ್ಷೇತ್ರದಲ್ಲಿ ಮಾಡುವ ದಾನವೂ ಮತ್ತು ಉಪವಾಸವ್ರತವೂ ಒಂದಕ್ಕೆ ಸಾವಿರದಷ್ಟು ಹೆಚ್ಚಿನ ಫಲವನ್ನು ಕೊಡುತ್ತವೆ.

**ತತೋ ಗಚ್ಛೇತ ರಾಜೇನ್ದ್ರ ರೇಣುಕಾತೀರ್ಥಮುತ್ತಮಮ್ ॥೧೫೯॥**

**ತೀರ್ಥಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ ।**
**ಸರ್ವಪಾಪವಿಶುದ್ಧಾತ್ಮಾ ಅಗ್ನಿಷ್ಟೋಮಫಲಂ ಲಭೇತ್ ॥೧೬೦॥**

ಶತಸಹಸ್ರಕ ಮತ್ತು ಸಾಹಸ್ರಕತೀರ್ಥಕ್ಷೇತ್ರಗಳ ಪ್ರವಾಸವನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ರೇಣುಕಾತೀರ್ಥಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು. ಪವಿತ್ರವಾದ ಆ ತೀರ್ಥದಲ್ಲಿ ಸ್ನಾನಮಾಡಿ ಪಿತೃಗಳನ್ನೂ, ದೇವತೆಗಳನ್ನೂ ಶುದ್ಧಮನಸ್ಕನಾಗಿ ಅರ್ಚನೆಮಾಡಬೇಕು. ಹೀಗೆ ಮಾಡುವವನು ಸಕಲಪಾಪಗಳಿಂದಲೂ ವಿಮುಕ್ತನಾಗಿ ಅಗ್ನಿಷ್ಟೋಮಯಾಗ ವನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

**ವಿಮೋಚನಮುಪಸ್ಪೃಶ್ಯ ಜಿತಮನ್ಯುರ್ಜಿತೇನ್ದ್ರಿಯಃ ।**
**ಪ್ರತಿಗ್ರಹಕೃತೈರ್ದೋಷೈಃ ಸರ್ವೈಃ ಸ ಪರಿಮುಚ್ಯತೇ ॥೧೬೧॥**

ರೇಣುಕಾತೀರ್ಥಸ್ನಾನವನ್ನು ಮುಗಿಸಿಕೊಂಡು ಅದರ ಸಮೀಪದಲ್ಲಿ ರುವ ವಿಮೋಚನತೀರ್ಥದಲ್ಲಿ ಸ್ನಾನಮಾಡಬೇಕು. ದಾನತೆಗೆದುಕೊಳ್ಳುವುದ ರಿಂದ ಪ್ರಾಪ್ತವಾಗುವ ಸಕಲದೋಷಗಳೂ ಸಹ ಆ ವಿಮೋಚನತೀರ್ಥದಲ್ಲಿ ಸ್ನಾನಮಾಡುವುದರಿಂದ ಪರಿಹಾರವಾಗುತ್ತವೆ.

**ತತಃ ಪಞ್ಚವಟೀಂ ಗತ್ವಾ ಬ್ರಹ್ಮಚಾರೀ ಜಿತೇನ್ದ್ರಿಯಃ ।**
**ಪುಣ್ಯೇನ ಮಹತಾ ಯುಕ್ತಃ ಸತಾಂ ಲೋಕೇ ಮಹೀಯತೇ ॥೧೬೨॥**

**ಯತ್ರ ಯೋಗೇಶ್ವರಃ ಸ್ಥಾಣುಃ ಸ್ವಯಮೇವ ವೃಷಧ್ವಜಃ ।**
**ತಮರ್ಚಯಿತ್ವಾ ದೇವೇಶಂ ಗಮನಾದೇವ ಸಿಧ್ಯತಿ ॥೧೬೩॥**

ಜಿತೇಂದ್ರಿಯನಾಗಿ, ನಿಯತಾಹಾರನಾಗಿ ಯಾತ್ರಿಕನು ಮುಂದೆ ಪಂಚವಟೀಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರವಾಸದಿಂದಲೇ ಯಾತ್ರಿಕನು ಮಹಾಪುಣ್ಯಶಾಲಿಯಾಗಿ ಪುಣ್ಯಪುರುಷರಿಂದ ಗೌರವಿಸಲ್ಪಡು ತ್ತಾನೆ. ಆ ಪಂಚವಟೀಕ್ಷೇತ್ರದಲ್ಲಿ, ಯೋಗೇಶ್ವರನಾದ, ವೃಷಧ್ವಜನಾದ ಸ್ಥಾಣುವಿದ್ದಾನೆ. (ಈಶ್ವರನ ಸಾನ್ನಿಧ್ಯವಿದೆ.) ದೇವೇಶನಾದ ಪರಮೇಶ್ವರನನ್ನು ಅಲ್ಲಿ ಪೂಜೆಮಾಡುವುದರಿಂದಲೇ ಸಕಲಸಿದ್ಧಿಯೂ ಉಂಟಾಗುತ್ತದೆ. ಆ ತೀರ್ಥಕ್ಕೆ ಹೋಗುವುದೇ ಸಿದ್ಧಿದಾಯಕವಾದುದು. ಅಲ್ಲಿಂದ ಮುಂದೆ ವರುಣನ ತೀರ್ಥವಾದ ತೈಜಸತೀರ್ಥಕ್ಕೆ ಪ್ರಯಾಣಮಾಡಬೇಕು. ಆ

ತೀರ್ಥವು ಸ್ವಯಂಪ್ರಭೆಯಿಂದ ಕೂಡಿದ್ದಾಗಿರುವುದು. ತೈಜಸತೀರ್ಥದ ಸಮೀಪದಲ್ಲಿಯೇ ಬ್ರಹ್ಮಪುರಸ್ಸರರಾದ ದೇವತೆಗಳು ಋಷಿ-ಮಹರ್ಷಿಗಳಿಂದೊಡಗೂಡಿದವರಾಗಿ ಗುಹನನ್ನು (ಷಣ್ಮುಖನನ್ನು) ದೇವಸೈನ್ಯದ ಅಧಿಪತಿಯನ್ನಾಗಿ (ಸೇನಾನಿಯನ್ನಾಗಿ) ಮಾಡಿದರು. ಆ ತೈಜಸತೀರ್ಥಕ್ಕೆ ಪೂರ್ವದಿಕ್ಕಿನಲ್ಲಿ ಕುರುತೀರ್ಥವೆಂಬ ಮತ್ತೊಂದು ಪ್ರಸಿದ್ಧವಾದ ತೀರ್ಥವಿದೆ.

**ಕುರುತೀರ್ಥೇ ನರಃ ಸ್ನಾತ್ವಾ ಬ್ರಹ್ಮಚಾರೀ ಜಿತೇನ್ದ್ರಿಯಃ ।**
**ಸರ್ವಪಾಪವಿಶುದ್ಧಾತ್ಮಾ ಬ್ರಹ್ಮಲೋಕಂ ಪ್ರಪದ್ಯತೇ ॥೧೬೬॥**

ನಿಯತವ್ರತನಾಗಿ, ನಿಯತಾಹಾರನಾಗಿ, ಬ್ರಹ್ಮಚರ್ಯವ್ರತದಿಂದಿದ್ದು ಆ ಕುರುತೀರ್ಥದಲ್ಲಿ ಸ್ನಾನಮಾಡುವ ಯಾತ್ರಿಕನು ಅವಸಾನಾನಂತರದಲ್ಲಿ ಬ್ರಹ್ಮಲೋಕವನ್ನು ಸೇರುತ್ತಾನೆ.

**ಸ್ವರ್ಗದ್ವಾರಂ ತತೋ ಗಚ್ಛೇನ್ನಿಯತೋ ನಿಯತಾಶನಃ ।**
**ಅಗ್ನಿಷ್ಟೋಮಮವಾಪ್ನೋತಿ ಬ್ರಹ್ಮಲೋಕಂ ಚ ಗಚ್ಛತಿ ॥೧೬೭॥**

ಕುರುತೀರ್ಥದ ಸ್ನಾನವನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಜಿತೇಂದ್ರಿಯನಾಗಿ, ನಿಯತಾಹಾರನಾಗಿ ಸ್ವರ್ಗದ್ವಾರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದ ಯಾತ್ರೆಮಾಡುವುದರಿಂದ ಅಗ್ನಿಷ್ಟೋಮಯಾಗಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಬ್ರಹ್ಮಲೋಕವನ್ನೂ ಹೊಂದುತ್ತಾನೆ.

**ತತೋ ಗಚ್ಛೇದನರಕಂ ತೀರ್ಥಸೇವೀ ನರಾಧಿಪ ।**
**ತತ್ರ ಸ್ನಾತ್ವಾ ನರೋ ರಾಜನ್ನ ದುರ್ಗತಿಮವಾಪ್ನುಯಾತ್ ॥೧೬೮॥**
**ತತ್ರ ಬ್ರಹ್ಮಾ ಸ್ವಯಂ ನಿತ್ಯಂ ದೇವೈಃ ಸಹ ಮಹೀಪತೇ ।**
**ಅನ್ವಾಸ್ತೇ ಪುರುಷವ್ಯಾಘ್ರ ನಾರಾಯಣಪುರೋಗಮೈಃ ॥೧೬೯॥**
**ಸಾನ್ನಿಧ್ಯಂ ತತ್ರ ರಾಜೇನ್ದ್ರ ರುದ್ರಪತ್ನ್ಯಾಃ ಕುರೂದ್ವಹ ।**
**ಅಭಿಗಮ್ಯ ಚ ತಾಂ ದೇವೀಂ ನ ದುರ್ಗತಿಮವಾಪ್ನುಯಾತ್ ॥೧೭೦॥**

ನರಾಧಿಪನೇ! ಸ್ವರ್ಗದ್ವಾರಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಅನರಕತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನ ಮಾಡುವವನಿಗೆ ದುರ್ಗತಿಯೇ ಇರುವುದಿಲ್ಲ. ಅಲ್ಲಿ ಚತುರ್ಮುಖಬ್ರಹ್ಮನು

ನಾರಾಯಣನೇ ಮೊದಲಾದ ದೇವತೆಗಳೊಡನೆ ಯಾವಾಗಲೂ ಇರುತ್ತಾನೆ. ಆ ಕ್ಷೇತ್ರದಲ್ಲಿಯೇ ಈಶ್ವರನ ಪತ್ನಿಯಾದ ಪಾರ್ವತಿಯೂ ಇದ್ದಾಳೆ. ಪಾರ್ವತೀದೇವಿಯನ್ನು ಸಂದರ್ಶಿಸಿ ಅರ್ಚಿಸುವವನು ಸದ್ಗತಿಯನ್ನು ಪಡೆಯುತ್ತಾನೆ.

**ತತ್ರೈವ ಚ ಮಹಾರಾಜ ವಿಶ್ವೇಶ್ವರಮುಮಾಪತಿಮ್ ।**
**ಅಭಿಗಮ್ಯ ಮಹಾದೇವಂ ಮುಚ್ಯತೇ ಸರ್ವಕಿಲ್ಬಿಷೈಃ ॥೧೭೧॥**

ಪಾರ್ವತಿಯ ಸಮೀಪದಲ್ಲಿಯೇ ಇರುವ ಉಮಾಪತಿಯಾದ ವಿಶ್ವೇಶ್ವರನ ದರ್ಶನವನ್ನು ಮಾಡುವವನು ಸಕಲಪಾಪಗಳಿಂದಲೂ ಮುಕ್ತನಾಗುತ್ತಾನೆ.

**ನಾರಾಯಣಂ ಚಾಭಿಗಮ್ಯ ಪದ್ಮನಾಭಮರಿಂದಮ ।**
**ರಾಜಮಾನೋ ಮಹಾರಾಜ ವಿಷ್ಣುಲೋಕಂ ಚ ಗಚ್ಛತಿ ॥೧೭೨॥**

ವಿಶ್ವೇಶ್ವರನ ಸಮೀಪದಲ್ಲಿ ಪದ್ಮನಾಭನಾದ ನಾರಾಯಣನೂ ಸನ್ನಿಹಿತನಾಗಿದ್ದಾನೆ. ಆ ದಿವ್ಯಮೂರ್ತಿಯನ್ನು ಸಂದರ್ಶಿಸುವವನು ವಿರಾಜಮಾನನಾಗಿ ಅವಸಾನಾನಂತರದಲ್ಲಿ ವಿಷ್ಣುಲೋಕಕ್ಕೆ ಹೋಗುತ್ತಾನೆ.

**ತೀರ್ಥೇಷು ಸರ್ವದೇವಾನಾಂ ಸ್ನಾತಃ ಸ ಪುರುಷರ್ಷಭ ।**
**ಸರ್ವದುಃಖೈಃ ಪರಿತ್ಯಕ್ತೋ ದ್ಯೋತತೇ ಶಶಿವನ್ನರಃ ॥೧೭೩॥**

ಆ ಕ್ಷೇತ್ರದಲ್ಲಿಯೇ ಸರ್ವದೇವತೀರ್ಥಗಳಿವೆ. ಆ ತೀರ್ಥಗಳಲ್ಲಿ ಸ್ನಾನ ಮಾಡುವವನು ಸರ್ವದುಃಖಗಳನ್ನೂ ನಿವಾರಣೆಮಾಡಿಕೊಂಡು ಹುಣ್ಣಿಮೆಯ ಚಂದ್ರನಂತೆ ಪ್ರಕಾಶಿಸುತ್ತಾನೆ.

**ತತಃ ಸ್ವಸ್ತಿಪುರಂ ಗಚ್ಛೇತ್ತೀರ್ಥಸೇವೀ ನರಾಧಿಪ ।**
**ಪ್ರದಕ್ಷಿಣಮುಪಾವೃತ್ಯ ಗೋಸಹಸ್ರಫಲಂ ಲಭೇತ್ ॥೧೭೪॥**

ಆ ಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಸ್ವಸ್ತಿಪುರಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಸ್ವಸ್ತಿಪುರಕ್ಷೇತ್ರವನ್ನು ಪ್ರದಕ್ಷಿಣೆ ಮಾಡುವುದರಿಂದಲೇ ಯಾತ್ರಿಕನು ಸಹಸ್ರಧೇನುಗಳನ್ನು ದಾನಮಾಡಿದ ಪುಣ್ಯವನ್ನು ಪಡೆಯುತ್ತಾನೆ.

**ಪಾವನಂ ತೀರ್ಥಮಾಸಾದ್ಯ ತರ್ಪಯೇತ್ಪಿತೃದೇವತಾಃ ।**
**ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಭಾರತ ॥೧೭೫॥**

ಸ್ವಸ್ತಿಪುರಕ್ಷೇತ್ರದ ಪ್ರವಾಸವನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಪಾವನತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡಿ ಪಿತೃದೇವತೆಗಳನ್ನು ಯಥಾವಿಧಿಯಾಗಿ ಅರ್ಚನೆಮಾಡುವುದರಿಂದ ಅಗ್ನಿಷ್ಟೋಮಯಾಗಮಾಡಿದ ಫಲವು ಪ್ರಾಪ್ತವಾಗುತ್ತದೆ.

**ಗಙ್ಗಾಹ್ರದಶ್ಚ ತತ್ರೈವ ಕೂಪಶ್ಚ ಭರತರ್ಷಭ ।**
**ತಿಸ್ರಃ ಕೋಟ್ಯಸ್ತು ತೀರ್ಥಾನಾಂ ತಸ್ಮಿನ್ಕೂಪೇ ಮಹೀಪತೇ ।**
**ತತ್ರ ಸ್ನಾತ್ವಾ ನರೋ ರಾಜನ್ಸ್ವರ್ಗಲೋಕಂ ಪ್ರಪದ್ಯತೇ ॥೧೭೬॥**

ಪಾವನತೀರ್ಥದ ಸಮೀಪದಲ್ಲಿಯೇ ಗಂಗಾಹ್ರದವೆಂಬ ಹೆಸರಿನ ಪುಣ್ಯಕೂಪವಿದೆ. ಗಂಗಾಹ್ರದಕೂಪದಲ್ಲಿ ಮೂರುಕೋಟಿ ತೀರ್ಥಗಳ ಸಾನ್ನಿಧ್ಯವಿರುವುದು. ಅಂತಹ ಪುಣ್ಯತೀರ್ಥದಲ್ಲಿ ಸ್ನಾನಮಾಡುವುದರಿಂದ ಅವಸಾನಾನಂತರದಲ್ಲಿ ಸ್ವರ್ಗಲೋಕಪ್ರಾಪ್ತಿಯಾಗುತ್ತದೆ.

**ಆಪಗಾಯಾಂ ನರಃ ಸ್ನಾತ್ವಾ ಅರ್ಚಯಿತ್ವಾ ಮಹೇಶ್ವರಮ್ ।**
**ಗಾಣಪತ್ಯಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥೧೭೭॥**

ಗಂಗಾಹ್ರದದ ಸಮೀಪದಲ್ಲಿರುವ ಆಪಗಾತೀರ್ಥದಲ್ಲಿ ಸ್ನಾನಮಾಡಿ ಆ ತೀರ್ಥದ ಸಮೀಪದಲ್ಲಿರುವ ಮಹೇಶ್ವರಮೂರ್ತಿಯನ್ನು ಅರ್ಚನೆ ಮಾಡುವವನು ಮುಂದೆ ಗಾಣಪತ್ಯವನ್ನು ಹೊಂದುತ್ತಾನೆ ಮತ್ತು ತನ್ನ ವಂಶದವರೆಲ್ಲರನ್ನೂ ಉದ್ಧರಿಸುತ್ತಾನೆ.

**ತತಃ ಸ್ಥಾಣುವಟಂ ಗಚ್ಛೇತ್ತ್ರಿಷು ಲೋಕೇಷು ವಿಶ್ರುತಮ್ ।**
**ತತ್ರ ಸ್ನಾತ್ವಾ ಸ್ಥಿತೋ ರಾತ್ರಿಂ ರುದ್ರಲೋಕಮವಾಪ್ನುಯಾತ್ ॥೧೭೮॥**

ಗಂಗಾಹ್ರದ, ಗಂಗಾಕೂಪ ಮತ್ತು ಆಪಗಾತೀರ್ಥಗಳ ಸ್ನಾನವನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ತ್ರಿಲೋಕಪ್ರಸಿದ್ಧವಾದ ಸ್ಥಾಣುವಟಕ್ಕೆ ಪ್ರಯಾಣಮಾಡಬೇಕು. ಸ್ಥಾಣುವಟತೀರ್ಥದಲ್ಲಿ ಸ್ನಾನಮಾಡಿ ಒಂದು ರಾತ್ರಿ ಜಾಗರಣೆಯಿಂದಿರುವವನು ಅವಸಾನಾನಂತರದಲ್ಲಿ ರುದ್ರಲೋಕವನ್ನು ಪಡೆಯುತ್ತಾನೆ.

**ಬದರೀಪಾಚನಂ ಗಚ್ಛೇದ್ವಸಿಷ್ಠಸ್ಯಾಶ್ರಮಂ ತತಃ ।**
**ಬದರೀಂ ಭಕ್ಷಯೇತ್ತತ್ರ ತ್ರಿರಾತ್ರೋಪೋಷಿತೋ ನರಃ ॥೧೭೯॥**

**ಸಮ್ಯಗ್ದ್ವಾದಶವರ್ಷಾಣಿ ಬದರೀಂ ಭಕ್ಷಯೇತ್ತು ಯಃ ।**
**ತ್ರಿರಾತ್ರೋಪೋಷಿತಸ್ತೇನ ಭವೇತ್ತುಲ್ಯೋ ನರಾಧಿಪ ॥೧೮೦॥**

ಸ್ಥಾಣುವಟಕ್ಷೇತ್ರದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ವಸಿಷ್ಠರ ದಿವ್ಯಾಶ್ರಮವಿರುವ ಬದರೀಪಾಚನಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಅಲ್ಲಿ ಮೂರು ದಿನಗಳು ಉಪವಾಸದಿಂದಿದ್ದು ಬದರೀ (ಎಲಚೀ) ಹಣ್ಣುಗಳನ್ನು ತಿನ್ನಬೇಕು. ಹನ್ನೆರಡು ವರ್ಷಗಳ ಪರ್ಯಂತವಾಗಿ ಎಲಚೀಹಣ್ಣುಗಳನ್ನು ತಿಂದುಕೊಂಡು ತಪಸ್ಸುಮಾಡಿದ ಫಲವು ಬದರೀಪಾಚನಕ್ಷೇತ್ರದಲ್ಲಿ ಮೂರು ದಿವಸಗಳು ಉಪವಾಸವಿದ್ದು ಎಲಚೀಹಣ್ಣುಗಳ ಭಕ್ಷಣದಿಂದಲೇ ಪ್ರಾಪ್ತವಾಗುತ್ತದೆ.

**ರುದ್ರಮಾರ್ಗಂ ಸಮಾಸಾದ್ಯ ತೀರ್ಥಸೇವೀ ನರಾಧಿಪ ।**
**ಅಹೋರಾತ್ರೋಪವಾಸೇನ ಶಕ್ರಲೋಕೇ ಮಹೀಯತೇ ॥೧೮೧॥**

ಬದರೀಪಾಚನತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ರುದ್ರಮಾರ್ಗವೆಂಬ ಪುಣ್ಯಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ಒಂದು ಹಗಲು ಮತ್ತು ಒಂದು ರಾತ್ರಿ ಉಪವಾಸಮಾಡುವವನು ಕಾಲಾನಂತರದಲ್ಲಿ ಇಂದ್ರಲೋಕದಲ್ಲಿ ಪುರಸ್ಕೃತನಾಗುತ್ತಾನೆ.

**ಏಕರಾತ್ರಂ ಸಮಾಸಾದ್ಯ ಏಕರಾತ್ರೋಷಿತೋ ನರಃ ।**
**ನಿಯತಃ ಸತ್ಯವಾದೀ ಚ ಬ್ರಹ್ಮಲೋಕೇ ಮಹೀಯತೇ ॥೧೮೨॥**

ಅಲ್ಲಿಂದ ಮುಂದೆ ಏಕರಾತ್ರತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ನಿಯತವ್ರತನಾಗಿ, ಸತ್ಯಭಾಷಿಯಾಗಿ ಒಂದು ರಾತ್ರಿಯನ್ನು ಕಳೆದರೂ ಸಾಕು ; ಅವಸಾನಾನಂತರದಲ್ಲಿ ಬ್ರಹ್ಮಲೋಕದಲ್ಲಿ ಪುರಸ್ಕೃತ ನಾಗುತ್ತಾನೆ.

ಏಕರಾತ್ರಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ತೇಜೋ ರಾಶಿಯಾದ, ಮಹಾತ್ಮನಾದ ಆದಿತ್ಯನ ಆಶ್ರಮಕ್ಕೆ ಪ್ರಯಾಣಮಾಡಬೇಕು.

**ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಪೂಜಯಿತ್ವಾ ವಿಭಾವಸುಮ್ ।**
**ಆದಿತ್ಯಲೋಕಂ ವ್ರಜತಿ ಕುಲಂ ಚೈವ ಸಮುದ್ಧರೇತ್ ॥೧೮೪॥**

ಆ ಆಶ್ರಮದಲ್ಲಿರುವ ತ್ರಿಲೋಕಪ್ರಸಿದ್ಧವಾದ ಸೂರ್ಯತೀರ್ಥದಲ್ಲಿ

ಸ್ನಾನಮಾಡಿ ಸೂರ್ಯದೇವನ ಆರಾಧನೆಯನ್ನು ಮಾಡುವವನು ಅವಸಾನಾನಂತರದಲ್ಲಿ ಸೂರ್ಯಲೋಕವನ್ನು ಸೇರುವನಲ್ಲದೇ–ತನ್ನ ವಂಶದವರೆಲ್ಲರನ್ನೂ ಉದ್ಧರಿಸುತ್ತಾನೆ.

**ಸೋಮತೀರ್ಥೇ ನರಃ ಸ್ನಾತ್ವಾ ತೀರ್ಥಸೇವೀ ನರಾಧಿಪ ।**
**ಸೋಮಲೋಕಮವಾಪ್ನೋತಿ ನರೋ ನಾಸ್ತ್ಯತ್ರ ಸಂಶಯಃ ॥೧೮೫॥**

ಆದಿತ್ಯತೀರ್ಥದಲ್ಲಿ ಸ್ನಾನಮಾಡಿದನಂತರ ಅದರ ಸಮೀಪದಲ್ಲಿಯೇ ಇರುವ ಸೋಮತೀರ್ಥದಲ್ಲಿ ಸ್ನಾನಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡುವವನು ಅವಸಾನಾನಂತರದಲ್ಲಿ ಚಂದ್ರಲೋಕವನ್ನು ಸೇರುತ್ತಾನೆ.

ಯುಧಿಷ್ಠಿರ! ಸೋಮತೀರ್ಥದ ಯಾತ್ರೆಯನ್ನು ಮುಗಿಸಿಕೊಂಡು ಅನಂತರದಲ್ಲಿ ಯಾತ್ರಿಕನು ಅತ್ಯಂತ ಶುಭಾವಹವಾದ, ಪರಮಪವಿತ್ರವಾದ, ಲೋಕಪ್ರಸಿದ್ಧವಾದ ದಧೀಚತೀರ್ಥಕ್ಕೆ ಪ್ರಯಾಣಮಾಡಬೇಕು.

ಆ ಪುಣ್ಯತೀರ್ಥದ ಸಮೀಪದಲ್ಲಿಯೇ ತಪೋನಿಧಿಯಾದ, ಸರಸ್ವತೀಪುತ್ರನಾದ ಅಂಗಿರಸನು ಜನ್ಮತಾಳಿ ತಪಸ್ಸುಮಾಡಿ ಸಾರಸ್ವತಲೋಕಕ್ಕೆ ಹೋದನು.

**ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ವಾಜಿಮೇಧಫಲಂ ಲಭೇತ್ ।**
**ಸಾರಸ್ವತೀಂ ಗತಿಂ ಚೈವ ಲಭತೇ ನಾತ್ರ ಸಂಶಯಃ ॥೧೮೮॥**

ದಧೀಚತೀರ್ಥದಲ್ಲಿ ಸ್ನಾನಮಾಡುವವನು ಅಶ್ವಮೇಧಯಾಗಮಾಡಿದ ಫಲವನ್ನು ಪಡೆಯುತ್ತಾನೆ ಮತ್ತು ಅವಸಾನಾನಂತರದಲ್ಲಿ ಸಾರಸ್ವತಲೋಕವನ್ನು ಪಡೆಯುತ್ತಾನೆ.

**ತತಃ ಕನ್ಯಾಶ್ರಮಂ ಗಚ್ಛೇನ್ನಿಯತೋ ಬ್ರಹ್ಮಚರ್ಯವಾನ್ ।**
**ತ್ರಿರಾತ್ರೋಪೋಷಿತೋ ರಾಜನ್ನಿಯತೋ ನಿಯತಾಶನಃ ।**
**ಲಭೇತ್ಕನ್ಯಾಶತಂ ದಿವ್ಯಂ ಸ್ವರ್ಗಲೋಕಂ ಚ ಗಚ್ಛತಿ ॥೧೮೯॥**

ದಧೀಚತೀರ್ಥದ ಸ್ನಾನವನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ನಿಯತವ್ರತನಾಗಿ, ನಿಯತಾಹಾರನಾಗಿ, ಬ್ರಹ್ಮಚರ್ಯವ್ರತಾನುಷ್ಠಾನಪರ

ನಾಗಿ ಕನ್ಯಾಶ್ರಮತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಅಲ್ಲಿ ನಿಯಮದಿಂದಿದ್ದು ಮೂರು ದಿನಗಳು ಉಪವಾಸವ್ರತವನ್ನು ಆಚರಿಸಿದರೆ ನೂರು ಜನ ದೇವಕನ್ಯೆಯರನ್ನು ಪಡೆಯುವುದು ಮಾತ್ರವಲ್ಲದೇ–ಅವಸಾನಾನಂತರದಲ್ಲಿ ಸ್ವರ್ಗಲೋಕಪ್ರಾಪ್ತಿಯೂ ಆಗುತ್ತದೆ. ಕನ್ಯಾತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಸನ್ನಿಹತೀ ಎಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯಕ್ಷೇತ್ರಕ್ಕೆ ಬ್ರಹ್ಮಪುರಸ್ಸರರಾದ ದೇವತೆಗಳೂ, ಋಷಿ-ಮಹರ್ಷಿಗಳೂ ಮತ್ತು ತಪೋಧನರೂ ಮಹತ್ತರವಾದ ಪುಣ್ಯದಿಂದ ಕೂಡಿದವರಾಗಿ ಪ್ರತಿಮಾಸವೂ ಆಗಮಿಸುತ್ತಾರೆ. (ಸನ್ನಿಹತೀ ಕ್ಷೇತ್ರದಲ್ಲಿ ಬ್ರಹ್ಮಾದಿದೇವತೆಗಳ ಮತ್ತು ಋಷಿ-ಮಹರ್ಷಿಗಳ ಸಾನ್ನಿಧ್ಯವಿರುತ್ತದೆ.)

**ಸಂನಿಹತ್ಯಾಮುಪಸ್ಪೃಶ್ಯ ರಾಹುಗ್ರಸ್ತೇ ದಿವಾಕರೇ ।**
**ಅಶ್ವಮೇಧಶತಂ ತೇನ ತತ್ರೇಷ್ಟಂ ಶಾಶ್ವತಂ ಭವೇತ್ ॥೧೯೭॥**

ಸೂರ್ಯಗ್ರಹಣಕಾಲದಲ್ಲಿ ಆ ಸನ್ನಿಹತೀತೀರ್ಥದಲ್ಲಿ ಸ್ನಾನಮಾಡುವುದರಿಂದ ನೂರು ಅಶ್ವಮೇಧಯಾಗಗಳನ್ನು ಮಾಡಿದ ಫಲವು ಪ್ರಾಪ್ತವಾಗುತ್ತದೆ. ಧರ್ಮಜ! ಆ ತೀರ್ಥದ ಮಹಿಮೆಯು ಅಪಾರವಾದುದು. ಪೃಥ್ವಿಯಲ್ಲಿರುವ ಮತ್ತು ಅಂತರಿಕ್ಷದಲ್ಲಿರುವ ಸಕಲನದೀ-ನದ-ಸರೋವರಗಳೂ, ವಾಪೀ-ಕೂಪ-ತಟಾಕಗಳೂ, ಚಿಲುಮೆಗಳೂ, ಸಕಲತೀರ್ಥಗಳೂ ಅಮಾವಾಸ್ಯೆಯ ದಿನ ಅಲ್ಲಿಗೆ ಬಂದು ಸೇರುತ್ತವೆ. ಪ್ರತಿ ಅಮಾವಾಸ್ಯೆಯಲ್ಲಿಯೂ ಸಕಲತೀರ್ಥಗಳ ಸಾನ್ನಿಧ್ಯವೂ ಇರುವ ಕಾರಣದಿಂದಲೇ ಆ ತೀರ್ಥಕ್ಕೆ 'ಸನ್ನಿಹತೀ' ಎಂದು ಹೆಸರಾಯಿತು. ಆ ತೀರ್ಥದಲ್ಲಿ ಸ್ನಾನಮಾಡಿದರೂ–ಆ ತೀರ್ಥವನ್ನು ಪ್ರಾಶನಮಾಡಿದರೂ ಸ್ವರ್ಗಲೋಕವೇ ಪ್ರಾಪ್ತಿಯಾಗುತ್ತದೆ. ಸೂರ್ಯನನ್ನು ರಾಹುವು ಗ್ರಹಣಮಾಡಿದ ಅಮಾವಾಸ್ಯೆಯಂದು ಯಾವ ಮಾನವನು ಆ ತೀರ್ಥದಲ್ಲಿ ಸ್ನಾನಮಾಡಿ ಶ್ರಾದ್ಧಮಾಡುವನೋ–ಅವನಿಗೆ ಪ್ರಾಪ್ತವಾಗುವ ಫಲವನ್ನು ವಿವರಿಸುತ್ತೇನೆ. ಏಕಾಗ್ರಚಿತ್ತನಾಗಿ ಕೇಳು :

**ಅಶ್ವಮೇಧಸಹಸ್ರಸ್ಯ ಸಮ್ಯಗಿಷ್ಟಸ್ಯ ಯತ್ಫಲಮ್ ।**
**ಸ್ನಾತ ಏವ ಸಮಾಪ್ನೋತಿ ಕೃತ್ವಾ ಶ್ರಾದ್ಧಂ ಚ ಮಾನವಃ ॥೧೯೮॥**

**ಯತ್ಕಿಂಚಿದ್ದುಷ್ಕೃತಂ ಕರ್ಮ ಸ್ತ್ರಿಯಾ ವಾ ಪುರುಷೇಣ ವಾ ।**
**ಸ್ನಾತಮಾತ್ರಸ್ಯ ತತ್ಸರ್ವಂ ನಶ್ಯತೇ ನಾತ್ರ ಸಂಶಯಃ ।**
**ಪದ್ಮವರ್ಣೇನ ಯಾನೇನ ಬ್ರಹ್ಮಲೋಕಂ ಪ್ರಪದ್ಯತೇ ॥೧೯೯॥**

ಸಹಸ್ರಾಶ್ವಮೇಧಯಾಗಗಳನ್ನು ನಿಯಮಪೂರ್ವಕವಾಗಿ ಮಾಡುವುದರಿಂದ ಯಾವ ಫಲವು ಲಭ್ಯವಾಗುವುದೋ–ಅದೇ ಫಲವು ಸನ್ನಿಹತೀಕ್ಷೇತ್ರದಲ್ಲಿ ಸೂರ್ಯಗ್ರಹಣದಂದು ಸ್ನಾನಮಾಡಿ ಶ್ರಾದ್ಧಮಾಡುವುದರಿಂದ ಪ್ರಾಪ್ತವಾಗುತ್ತದೆ. ಸ್ತ್ರೀಯೇ ಆಗಲೀ, ಪುರುಷನೇ ಆಗಲೀ–ಯಾವ ವಿಧವಾದ ಪಾಪಕರ್ಮಗಳನ್ನು ಮಾಡಿದ್ದರೂ ಆ ತೀರ್ಥದಲ್ಲಿ ಸ್ನಾನಮಾಡಿದ ಮಾತ್ರದಿಂದ ಅವರ ಪಾಪಗಳು ಪರಿಹಾರವಾಗುತ್ತವೆ ಮತ್ತು ಅವಸಾನಾನಂತರದಲ್ಲಿ ಕಮಲವರ್ಣದ ವಿಮಾನದಲ್ಲಿ ಕುಳಿತು ಬ್ರಹ್ಮಲೋಕಕ್ಕೆ ಹೋಗುತ್ತಾರೆ.

**ಅಭಿವಾದ್ಯ ತತೋ ಯಕ್ಷಂ ದ್ವಾರಪಾಲಂ ಮಚಕ್ರುಕಮ್ ।**
**ಕೋಟಿತೀರ್ಥಮುಪಸ್ಪೃಶ್ಯ ಲಭೇದ್ಬಹುಸುವರ್ಣಕಮ್ ॥೨೦೦॥**

ಸನ್ನಿಹತೀತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡನಂತರ ಯಾತ್ರಿಕನು ಕೋಟಿತೀರ್ಥಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡಿ ದ್ವಾರಪಾಲಕನಾದ ಮಚಕ್ರುಕನೆಂಬ ಯಕ್ಷನನ್ನು ಅಭಿವಾದನ ಮಾಡುವುದರಿಂದ ಬಹುಸುವರ್ಣವನ್ನು ದಾನಮಾಡಿದ ಫಲವು ಪ್ರಾಪ್ತವಾಗುತ್ತದೆ. ಧರ್ಮಜ! ಆ ಕೋಟಿತೀರ್ಥದ ಸಮೀಪದಲ್ಲಿಯೇ ಗಂಗಾಹ್ರದವೆಂಬ ಪುಣ್ಯತೀರ್ಥವಿದೆ.

**ತತ್ರ ಸ್ನಾಯೀತ ಧರ್ಮಜ್ಞ ಬ್ರಹ್ಮಚಾರೀ ಸಮಾಹಿತಃ ।**
**ರಾಜಸೂಯಾಶ್ವಮೇಧಾಭ್ಯಾಂ ಫಲಂ ವಿನ್ದತಿ ಮಾನವಃ ॥೨೦೧॥**

ನಿಯತವ್ರತನಿಷ್ಠನಾಗಿ ಬ್ರಹ್ಮಚರ್ಯದಿಂದಿರುತ್ತಾ ಯಾತ್ರಿಕನು ಆ ಗಂಗಾಹ್ರದದಲ್ಲಿ ಸ್ನಾನಮಾಡಬೇಕು. ಹೀಗೆ ಸ್ನಾನಮಾಡುವುದರಿಂದ ರಾಜಸೂಯ ಮತ್ತು ಅಶ್ವಮೇಧಯಾಗಗಳನ್ನು ಮಾಡುವುದರಿಂದ ಪ್ರಾಪ್ತವಾಗುವ ಫಲಕ್ಕಿಂತಲೂ ಅಧಿಕವಾದ ಫಲವು ಪ್ರಾಪ್ತವಾಗುತ್ತದೆ.

ಈ ಹಿಂದೆ ಹೇಳಿದ ತೀರ್ಥಕ್ಷೇತ್ರಗಳ ಯಾತ್ರಾಫಲಗಳೆಲ್ಲವನ್ನೂ ಕ್ರೋಢೀಕರಿಸಿ ಹೀಗೆ ಹೇಳಬಹುದು.

**ಪೃಥಿವ್ಯಾಂ ನೈಮಿಷಂ ತೀರ್ಥಮನ್ತರಿಕ್ಷೇ ಚ ಪುಷ್ಕರಮ್ ।**
**ತ್ರಯಾಣಾಮಪಿ ಲೋಕಾನಾಂ ಕುರುಕ್ಷೇತ್ರಂ ವಿಶಿಷ್ಯತೇ ॥೨೦೨॥**

**ಪಾಂಸವೋಽಪಿ ಕುರುಕ್ಷೇತ್ರಾದ್ವಾಯುನಾ ಸಮುದೀರಿತಾಃ ।**
**ಅಪಿ ದುಷ್ಕೃತಕರ್ಮಾಣಂ ನಯನ್ತಿ ಪರಮಾಂ ಗತಿಮ್ ॥೨೦೩॥**

**ದಕ್ಷಿಣೇನ ಸರಸ್ವತ್ಯಾ ಉತ್ತರೇಣ ದೃಷದ್ವತೀಮ್ ।**
**ಯೇ ವಸನ್ತಿ ಕುರುಕ್ಷೇತ್ರೇ ತೇ ವಸನ್ತಿ ತ್ರಿವಿಷ್ಟಪೇ ॥೨೦೪॥**

**ಕುರುಕ್ಷೇತ್ರಂ ಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಮ್ ।**
**ಅಪ್ಯೇಕಾಂ ವಾಚಮುತ್ಸೃಜ್ಯ ಸರ್ವಪಾಪೈಃ ಪ್ರಮುಚ್ಯತೇ ॥೨೦೫॥**

**ಬ್ರಹ್ಮವೇದೀ ಕುರುಕ್ಷೇತ್ರಂ ಪುಣ್ಯಂ ಬ್ರಹ್ಮರ್ಷಿಸೇವಿತಮ್ ।**
**ತಸ್ಮಿನ್ವಸನ್ತಿ ಯೇ ಮರ್ತ್ಯಾ ನ ತೇ ಶೋಚ್ಯಾಃ ಕಥಂಚನ ॥೨೦೬॥**

ಭೂಲೋಕದಲ್ಲಿ ನೈಮಿಷಕ್ಷೇತ್ರವೂ–ಅಂತರಿಕ್ಷಲೋಕದಲ್ಲಿ ಪುಷ್ಕರ ಕ್ಷೇತ್ರವೂ ಪ್ರಸಿದ್ಧವಾದ ತೀರ್ಥಗಳಾಗಿವೆ. ಆದರೆ ಮೂರು ಲೋಕಗಳ ಲ್ಲಿಯೂ ಕುರುಕ್ಷೇತ್ರವು ವಿಶಿಷ್ಟವಾದ ಪುಣ್ಯಕ್ಷೇತ್ರವೆಂದು ಪ್ರಸಿದ್ಧಿಯನ್ನು ಪಡೆದಿದೆ. (ನೈಮಿಷಕ್ಷೇತ್ರದಲ್ಲಿರುವ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಐಹಿಕವಾದ ಫಲವು ಪ್ರಾಪ್ತವಾಗುತ್ತದೆ. ಪುಷ್ಕರಕ್ಷೇತ್ರದ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಆಮುಷ್ಮಿಕವಾದ ಫಲವು ಪ್ರಾಪ್ತವಾಗುತ್ತದೆ. ಆದರೆ ಕುರುಕ್ಷೇತ್ರದಲ್ಲಿರುವ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಐಹಿಕ ಮತ್ತು ಆಮುಷ್ಮಿಕಫಲಗಳೆರಡೂ ಪ್ರಾಪ್ತವಾಗುತ್ತವೆ. ಆದುದರಿಂದ ಕುರುಕ್ಷೇತ್ರವು ಮೂರು ಲೋಕಗಳಲ್ಲಿಯೂ ಸುಪ್ರಸಿದ್ಧವಾದ ಕ್ಷೇತ್ರವಾಗಿರುತ್ತದೆ.) ಕುರು ಕ್ಷೇತ್ರದ ಮೇಲೆ ಗಾಳಿಯು ಬೀಸಿದಾಗ ಆ ಗಾಳಿಯು ಒಯ್ಯುವ ಧೂಳಿನ ಸ್ಪರ್ಶವಾದರೂ ಸಾಕು ; ಅನೇಕಮಹಾಪಾಪಗಳನ್ನು ಪರಿಹಾರಮಾಡಿ ಸದ್ಗತಿ ಯನ್ನುಂಟುಮಾಡಲು ಸಮರ್ಥವಾಗಿದೆಯೆಂದರೆ ಕುರುಕ್ಷೇತ್ರದ ಮಹಿಮೆಯು ಎಷ್ಟೆಂಬುದನ್ನು ಊಹಿಸಬಹುದಾಗಿದೆ. ಸರಸ್ವತೀನದಿಯಿಂದ ದಕ್ಷಿಣಕ್ಕೂ– ದೃಷದ್ವತೀನದಿಯಿಂದ ಉತ್ತರಕ್ಕೂ ವ್ಯಾಪಿಸಿರುವ ಕುರುಕ್ಷೇತ್ರದಲ್ಲಿ ಯಾರು ವಾಸಮಾಡುತ್ತಾರೆಯೋ–ಅವರಿಗೆ ಅವಸಾನಾನಂತರದಲ್ಲಿ ಸ್ವರ್ಗವಾಸವು ಸಿದ್ಧವಾಗಿಯೇ ಇರುವುದು. ಹಿಂದೆಯೇ ಒಮ್ಮೆ ಹೇಳಿದಂತೆ **"ಕುರುಕ್ಷೇತ್ರಂ**

ಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಮ್"–'ಕುರುಕ್ಷೇತ್ರಕ್ಕೆ ಹೋಗುತ್ತೇನೆ ಮತ್ತು ಕುರುಕ್ಷೇತ್ರದಲ್ಲಿಯೇ ವಾಸಮಾಡುತ್ತೇನೆ'–ಹೀಗೆ ಒಂದು ಬಾರಿ ಹೇಳಿದರೂ ಸಾಕು-ಸಕಲಮಹಾಪಾಪಗಳ ನಿರಸನವಾಗುತ್ತದೆ. ಕುರುಕ್ಷೇತ್ರವು ಬಹುಪುಣ್ಯಪ್ರದವಾದುದು. ಬ್ರಹ್ಮರ್ಷಿಗಳಿಂದ ಸಂಸೇವ್ಯಮಾನವಾದುದು ಮತ್ತು ಬ್ರಹ್ಮನ ಯಾಗಭೂಮಿ. ಅಂತಹ ಪುಣ್ಯಭೂಮಿಯಲ್ಲಿ ವಾಸಮಾಡುವ ಮಾನವರು ಖಂಡಿತವಾಗಿಯೂ ದುಃಖಪಡಬೇಕಾಗಿಲ್ಲ.

**ತರನ್ತುಕಾರನ್ತುಕಯೋರ್ಯದನ್ತರಂ**
**ರಾಮಹ್ರದಾನಾಂ ಚ ಮಚಕ್ರುಕಸ್ಯ ಚ ।**
**ಏತತ್ಕುರುಕ್ಷೇತ್ರಸಮನ್ತಪಞ್ಚಕಂ**
**ಪಿತಾಮಹಸ್ಯೋತ್ತರವೇದಿರುಚ್ಯತೇ ॥೨೦೮॥**

ಕುರುಕ್ಷೇತ್ರದ ಎಲ್ಲೆಯನ್ನು ಹಿರಿಯರು ಹೀಗೂ ಹೇಳುತ್ತಾರೆ : ತರಂತುಕ ಮತ್ತು ಅರಂತುಕ, ರಾಮಹ್ರದ ಮತ್ತು ಮಚಕ್ರುಕತೀರ್ಥಗಳ ಮಧ್ಯಭಾಗದಲ್ಲಿರುವ ಪುಣ್ಯಕ್ಷೇತ್ರವೇ ಕುರುಕ್ಷೇತ್ರ. ಅದೇ ಸಮಂತಪಂಚಕ. ಆ ಕ್ಷೇತ್ರವನ್ನು ಬ್ರಹ್ಮನ ಉತ್ತರವೇದಿಯೆಂದೂ ಹೇಳುತ್ತಾರೆ.

ಲ೩ನೆಯ ಅಧ್ಯಾಯವು ಮುಗಿಯಿತು.

ಲ೪ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ನಾನಾತೀರ್ಥಕ್ಷೇತ್ರಗಳ ಮಹಿಮೆ

ಧರ್ಮಜ! ಪುಲಸ್ತ್ಯರು ಮುಂದುವರಿದು ಭೀಷ್ಮನಿಗೆ ತೀರ್ಥಯಾತ್ರೆಗಳ ವಿಷಯವಾಗಿ ಹೇಳಿದರು. ಅವರು ಹೇಳಿದುದನ್ನೇ ನಾನೂ ನಿನಗೆ ಹೇಳುತ್ತಿದ್ದೇನೆ :

ಯಾತ್ರಿಕನು ಮುಂದೆ ಸುಪ್ರಸಿದ್ಧವಾದ ಧರ್ಮತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು.

ಆ ಕ್ಷೇತ್ರದಲ್ಲಿಯೇ ಹಿಂದೆ ಯಮಧರ್ಮರಾಜನು ಅನೇಕವರ್ಷಗಳ ಪರ್ಯಂತವಾಗಿ ಉತ್ತಮೋತ್ತಮವಾದ ತಪಸ್ಸುಮಾಡಿದನು. ಅವನಿಂದಲೇ ಪುಣ್ಯಪ್ರದವಾದ ಆ ತೀರ್ಥವು ನಿರ್ಮಿಸಲ್ಪಟ್ಟಿತು ಮತ್ತು ಆ ತೀರ್ಥವು ಅವನ ಹೆಸರಿನಿಂದಲೇ ಪ್ರಸಿದ್ಧಿಯನ್ನೂ ಹೊಂದಿತು.

**ತತ್ರ ಸ್ನಾತ್ವಾ ನರೋ ರಾಜನ್ಧರ್ಮಶೀಲಃ ಸಮಾಹಿತಃ ।**
**ಆಸಪ್ತಮಂ ಕುಲಂ ಚೈವ ಪುನೀತೇ ನಾತ್ರ ಸಂಶಯಃ ॥೩॥**

ಪರಿಶುದ್ಧಚಿತ್ತನಾಗಿ, ಧರ್ಮಶೀಲನಾಗಿ ಆ ತೀರ್ಥದಲ್ಲಿ ಸ್ನಾನಮಾಡುವವನ ಏಳು ತಲೆಮಾರಿನ ಜನರೆಲ್ಲರೂ ಪರಿಶುದ್ಧರಾಗುತ್ತಾರೆ. ಇದರಲ್ಲಾವ ಸಂಶಯವೂ ಇಲ್ಲ.

**ತತೋ ಗಚ್ಛೇತ ರಾಜೇನ್ದ್ರ ಜ್ಞಾನಪಾವನಮುತ್ತಮಮ್ ।**
**ಅಗ್ನಿಷ್ಟೋಮಮವಾಪ್ನೋತಿ ಮುನಿಲೋಕಂ ಚ ಗಚ್ಛತಿ ॥೪॥**

ಧರ್ಮತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಉತ್ತಮೋತ್ತಮವಾದ ಜ್ಞಾನಪಾವನತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಪವಿತ್ರವಾದ ಆ ಕ್ಷೇತ್ರದ ಯಾತ್ರೆಯನ್ನು ಮಾಡುವುದರಿಂದ ಅಗ್ನಿಷ್ಟೋಮಯಾಗಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಮುನಿಗಳಿಗೆ ಲಭ್ಯವಾಗುವ ಉತ್ತಮಲೋಕವೂ ಸಿಕ್ಕುತ್ತದೆ. ಜ್ಞಾನಪಾವನಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಸೌಗಂಧಿಕವನಕ್ಕೆ ಪ್ರಯಾಣಮಾಡಬೇಕು. ಆ ಸೌಗಂಧಿಕವನದಲ್ಲಿ ಬ್ರಹ್ಮಪುರಸ್ಸರರಾದ ದೇವತೆಗಳ, ಋಷಿ-ಮಹರ್ಷಿಗಳ, ಸಿದ್ಧ-ಚಾರಣ-ಗಂಧರ್ವ-ಕಿನ್ನರ-ಕಿಂಪುರುಷರ ಮತ್ತು ಸರ್ಪಾಧಿದೇವತೆಗಳ ಸಾನ್ನಿಧ್ಯವು ಸರ್ವದಾ ಇರುತ್ತದೆ.

**ತದ್ವನಂ ಪ್ರವಿಶನ್ನೇವ ಸರ್ವಪಾಪೈಃ ಪ್ರಮುಚ್ಯತೇ ॥೬॥**

ಆದುದರಿಂದಲೇ ಯಾತ್ರಿಕನು ಆ ವನಕ್ಕೆ ಪ್ರವೇಶಮಾಡಿದ ಮಾತ್ರದಿಂದಲೇ ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

**ಪ್ಲಕ್ಷಾದ್ದೇವೀ ಸೃತಾ ರಾಜನ್ಮಹಾಪುಣ್ಯಾ ಸರಸ್ವತೀ ।**
**ತತ್ರಾಭಿಷೇಕಂ ಕುರ್ವೀತ ವಲ್ಮೀಕಾನ್ನಿಃಸೃತೇ ಜಲೇ ।**
**ಅರ್ಚಯಿತ್ವಾ ಪಿತೄನ್ದೇವಾನಶ್ವಮೇಧಫಲಂ ಲಭೇತ್ ॥೭॥**

ಆ ವನದ ಸಮೀಪದಲ್ಲಿಯೇ ಪರಮಪವಿತ್ರವಾದ ಸರಸ್ವತೀನದಿಯಿರುವುದು. ಪಿಪ್ಪಲವೃಕ್ಷದ ಬುಡದಲ್ಲಿ ಹುತ್ತದಿಂದ ಹೊರಬರುವ ಆ ಸರಸ್ವತೀ ನದಿಯಲ್ಲಿ ಸ್ನಾನಮಾಡಿ ಪಿತೃಗಳನ್ನೂ–ದೇವತೆಗಳನ್ನೂ ಯಥಾವಿಧಿಯಾಗಿ

ಅರ್ಚನೆಮಾಡಿದಲ್ಲಿ ಅಶ್ವಮೇಧಯಾಗವನ್ನು ಮಾಡಿದ ಫಲವು ಪ್ರಾಪ್ತ ವಾಗುತ್ತದೆ.

**ಈಶಾನಾಧ್ಯುಷಿತಂ ನಾಮ ತತ್ರ ತೀರ್ಥಂ ಸುದುರ್ಲಭಮ್ ।**
**ಷಟ್ಸು ಶಮ್ಯಾನಿಪಾತೇಷು ವಲ್ಮೀಕಾದಿತಿ ನಿಶ್ಚಯಃ ॥೮॥**
**ಕಪಿಲಾನಾಂ ಸಹಸ್ರಂ ಚ ವಾಜಿಮೇಧಂ ಚ ವಿನ್ದತಿ ।**
**ತತ್ರ ಸ್ನಾತ್ವಾ ನರವ್ಯಾಘ್ರ ದೃಷ್ಟಮೇತತ್ಪುರಾತನೈಃ ॥೯॥**

ಸರಸ್ವತಿಯು ಪ್ರವಹಿಸುವ ಹುತ್ತದ ಸಮೀಪದಲ್ಲಿ ನಿಂತು ಯಜ್ಞದಲ್ಲಿ ಉಪಯೋಗಿಸುವ ಶಮ್ಯೆಯನ್ನು (ನೊಗದ ಗುಳ) ಆರು ಬಾರಿ ಎಸೆದರೆ ಎಷ್ಟುದೂರ ಹೋಗುವುದೋ–ಅಷ್ಟುದೂರದಲ್ಲಿ ಈಶಾನಾಧ್ಯುಷಿತವೆಂಬ ಸುದುರ್ಲಭವಾದ ತೀರ್ಥವಿದೆ. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ಒಂದು ಸಾವಿರ ಕಪಿಲವರ್ಣದ ಗೋವುಗಳನ್ನು ದಾನಮಾಡಿದ ಮತ್ತು ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುವುದೆಂದು ಪುರಾತನ ರಿಂದ ಉಕ್ತವಾಗಿದೆ.

**ಸುಗನ್ಧಾಂ ಶತಕುಮ್ಭಾಂ ಚ ಪಞ್ಚಯಜ್ಞಾಂ ಚ ಭಾರತ ।**
**ಅಭಿಗಮ್ಯ ನರಶ್ರೇಷ್ಠ ಸ್ವರ್ಗಲೋಕೇ ಮಹೀಯತೇ ॥೧೦॥**

ಈಶಾನಾಧ್ಯುಷಿತತೀರ್ಥದಲ್ಲಿ ಸ್ನಾನವನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸುಗಂಧಾ, ಶತಕುಂಭಾ ಮತ್ತು ಪಂಚಯಜ್ಞಾ ಎಂಬ ತೀರ್ಥ ಕ್ಷೇತ್ರಗಳಿಗೆ ಪ್ರಯಾಣಮಾಡಬೇಕು. ಆ ಕ್ಷೇತ್ರಗಳ ಯಾತ್ರೆಮಾಡುವವನು ಅವಸಾನಾನಂತರದಲ್ಲಿ ಸ್ವರ್ಗಲೋಕದಲ್ಲಿ ಪುರಸ್ಕೃತನಾಗುತ್ತಾನೆ.

**ತ್ರಿಶೂಲಖಾತಂ ತತ್ರೈವ ತೀರ್ಥಮಾಸಾದ್ಯ ಭಾರತ ॥೧೧॥**
**ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ ।**
**ಗಾಣಪತ್ಯಂ ಚ ಲಭತೇ ದೇಹಂ ತ್ಯಕ್ತ್ವಾ ನ ಸಂಶಯಃ ॥೧೨॥**

ಆ ಮೂರು ತೀರ್ಥಗಳ ಯಾತ್ರೆಯಾದನಂತರದಲ್ಲಿ ಆ ತೀರ್ಥಗಳ ಸಮೀಪದಲ್ಲಿಯೇ ಇರುವ ತ್ರಿಶೂಲಖಾತವೆಂಬ ತೀರ್ಥಕ್ಕೆ ಪ್ರಯಾಣಮಾಡ ಬೇಕು. ಆ ತೀರ್ಥದಲ್ಲಿ ಸ್ನಾನಮಾಡಿ ದೇವತೆಗಳನ್ನೂ–ಪಿತೃಗಳನ್ನೂ ಅರ್ಚನೆಮಾಡುವವನು ಅವಸಾನಾನಂತರದಲ್ಲಿ ಗಾಣಪತ್ಯಸ್ಥಾನವನ್ನು ಪಡೆ

ಯುತ್ತಾನೆ. ತ್ರಿಶೂಲಖಾತದ ತೀರ್ಥಸ್ನಾನವನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ದೇವಿಯ ಸಾನ್ನಿಧ್ಯವಿರುವ, ಪರಮಪವಿತ್ರವಾದ, ತ್ರಿಲೋಕ ಪ್ರಸಿದ್ಧವಾದ ಶಾಕಂಭರೀಕ್ಷೇತ್ರಕ್ಕೆ ಪ್ರಯಾಣಮಾಡಬೇಕು.

**ದಿವ್ಯಂ ವರ್ಷಸಹಸ್ರಂ ಹಿ ಶಾಕೇನ ಕಿಲ ಸುವ್ರತಾ ।**
**ಆಹಾರಂ ಸಾ ಕೃತವತೀ ಮಾಸಿ ಮಾಸಿ ನರಾಧಿಪ ॥೧೪॥**

**ಋಷಯೋಽಭ್ಯಾಗತಾಸ್ತತ್ರ ದೇವ್ಯಾ ಭಕ್ತ್ಯಾ ತಪೋಧನಾಃ ।**
**ಆತಿಥ್ಯಂ ಚ ಕೃತಂ ತೇಷಾಂ ಶಾಕೇನ ಕಿಲ ಭಾರತ ॥೧೫॥**

**ತತಃ ಶಾಕಮ್ಭರೀತ್ಯೇವ ನಾಮ ತಸ್ಯಾಃ ಪ್ರತಿಷ್ಠಿತಮ್ ।**
**ಶಾಕಮ್ಭರೀಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ॥೧೬॥**

**ತ್ರಿರಾತ್ರಮುಷಿತಃ ಶಾಕಂ ಭಕ್ಷಯಿತ್ವಾ ನರಃ ಶುಚಿಃ ।**
**ಶಾಕಾಹಾರಸ್ಯ ಯತ್ಕಿಂಚಿದ್ವರ್ಷೈರ್ದ್ವಾದಶಭಿಃ ಕೃತಮ್ ।**
**ತತ್ಫಲಂ ತಸ್ಯ ಭವತಿ ದೇವ್ಯಾಶ್ಛನ್ದೇನ ಭಾರತ ॥೧೭॥**

ಆ ದಿವ್ಯಕ್ಷೇತ್ರದಲ್ಲಿ ದೇವಿಯು ಸಹಸ್ರದಿವ್ಯವರ್ಷಗಳ ಪರ್ಯಂತವಾಗಿ ತಿಂಗಳಿಗೊಮ್ಮೆ ಶಾಕಾಹಾರವನ್ನು ಭುಂಜಿಸುತ್ತಾ ವ್ರತಾನುಷ್ಠಾನವನ್ನು ಮಾಡುತ್ತಿದ್ದಳು. ದೇವಿಯ ಭಕ್ತರಾದ ಅನೇಕ ಋಷಿ-ಮಹರ್ಷಿಗಳು ದೇವಿಯನ್ನು ಸಂದರ್ಶನಮಾಡಲು ಅಲ್ಲಿಗೆ ಬರುತ್ತಿದ್ದರು. ದೇವಿಯು ಅವರೆಲ್ಲರಿಗೂ ಶಾಕಾಹಾರವನ್ನಿತ್ತು ಸತ್ಕರಿಸುತ್ತಿದ್ದಳು. ಈ ಕಾರಣದಿಂದಾಗಿ ಋಷಿ-ಮಹರ್ಷಿಗಳು ದೇವಿಯನ್ನು 'ಶಾಕಂಭರೀ' ಎಂದೇ ಕರೆದರು. ಆ ಕ್ಷೇತ್ರಕ್ಕೂ ಶಾಕಂಭರೀಕ್ಷೇತ್ರವೆಂದೇ ಹೆಸರಾಯಿತು. ಆ ಕ್ಷೇತ್ರಕ್ಕೆ ಬಂದು ಯಾವನು ಬ್ರಹ್ಮಚರ್ಯವ್ರತನಿಷ್ಠನಾಗಿ, ಏಕಾಗ್ರಚಿತ್ತನಾಗಿ ಕೇವಲ ಶಾಕಾಹಾರವನ್ನೇ ಉಪಭುಂಜಿಸುತ್ತಾ ಮೂರು ರಾತ್ರಿಗಳು ದೇವಿಯನ್ನು ಉಪಾಸನೆ ಮಾಡುವನೋ–ಅವನಿಗೆ ಬೇರೆಯೆಡೆಯಲ್ಲಿ ಹನ್ನೆರಡು ವರ್ಷಗಳಕಾಲ ಇದೇ ನಿಯಮದಿಂದ ದೇವಿಯನ್ನು ಆರಾಧಿಸುವುದರಿಂದ ಪ್ರಾಪ್ತವಾಗುವ ಫಲವು ಆ ಮೂರು ದಿನಗಳ ಆರಾಧನೆಯಿಂದಲೇ ಪ್ರಾಪ್ತವಾಗುವುದು.

ಶಾಕಂಭರೀತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ತ್ರಿಲೋಕಪ್ರಸಿದ್ಧವಾದ ಸುವರ್ಣತೀರ್ಥಕ್ಷೇತ್ರಕ್ಕೆ ಪ್ರಯಾಣ

ಮಾಡಬೇಕು. ಅದೇ ಕ್ಷೇತ್ರದಲ್ಲಿಯೇ ಹಿಂದೆ ಮಹಾವಿಷ್ಣುವು ರುದ್ರನನ್ನು ಆರಾಧಿಸಿ ಅವನ ಅನುಗ್ರಹದಿಂದಾಗಿ ದೇವತೆಗಳಿಗೂ ಅಲಭ್ಯವಾದ ಅನೇಕ ವರಗಳನ್ನು ಪಡೆದನು. ಈಶ್ವರನು ವರಕೊಡುವ ಸಮಯದಲ್ಲಿ ವಿಷ್ಣುವನ್ನು ಕುರಿತು ಹೀಗೆ ಹೇಳಿದನು :

**ಅಪಿ ಚ ತ್ವಂ ಪ್ರಿಯತರೋ ಲೋಕೇ ಕೃಷ್ಣ ಭವಿಷ್ಯಸಿ ।**
**ತ್ವನ್ಮುಖಂ ಚ ಜಗತ್ಸರ್ವಂ ಭವಿಷ್ಯತಿ ನ ಸಂಶಯಃ ॥೨೦॥**

"ಕೃಷ್ಣ! ನೀನು ಪ್ರಪಂಚದಲ್ಲಿಯೇ ಅತ್ಯಂತಪ್ರೀತಿಪಾತ್ರನಾದ ದೇವನಾಗುವೆ. ಇದರಲ್ಲಾವ ಸಂಶಯವೂ ಇಲ್ಲ. ಈ ಪ್ರಪಂಚವೆಲ್ಲವೂ ನಿನ್ನ ಮುಖಸ್ವರೂಪವೇ ಆಗುವುದು. (ಜಗತ್ತಿಗೆ ಪ್ರಧಾನಭೂತನಾಗುವೆ.)"

**ತತ್ರಾಭಿಗಮ್ಯ ರಾಜೇನ್ದ್ರ ಪೂಜಯಿತ್ವಾ ವೃಷಧ್ವಜಮ್ ।**
**ಅಶ್ವಮೇಧಮವಾಪ್ನೋತಿ ಗಾಣಪತ್ಯಂ ಚ ವಿನ್ದತಿ ॥೨೧॥**

ಧರ್ಮಜ! ವಿಷ್ಣುವಿಗೆ ರುದ್ರನು ಹೀಗೆ ವರದಾನಮಾಡಿದ ಆ ದಿವ್ಯಕ್ಷೇತ್ರದ ಯಾತ್ರೆಮಾಡಿ ಆ ಕ್ಷೇತ್ರದ ಅಧಿದೇವತೆಯಾದ ರುದ್ರನನ್ನು ಆರಾಧಿಸುವುದರಿಂದ ಅಶ್ವಮೇಧಯಾಗವನ್ನು ಮಾಡಿದ ಫಲವು ಪ್ರಾಪ್ತವಾಗುವುದಲ್ಲದೇ ಜನ್ಮಾಂತರದಲ್ಲಿ ಗಾಣಪತ್ಯಸ್ಥಾನವೂ ಲಭ್ಯವಾಗುತ್ತದೆ.

**ಧೂಮಾವತೀಂ ತತೋ ಗಚ್ಛೇತ್ತ್ರಿರಾತ್ರೋಪೋಷಿತೋ ನರಃ ।**
**ಮನಸಾ ಪ್ರಾರ್ಥಿತಾನ್ಕಾಮಾಲ್ಲಭತೇ ನಾತ್ರ ಸಂಶಯಃ ॥೨೨॥**

ಸುವರ್ಣಕ್ಷೇತ್ರದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಧೂಮಾವತೀತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ಮೂರು ದಿನಗಳು ಉಪವಾಸವಿದ್ದು ನಿಯಮವ್ರತಾನುಷ್ಠಾನಪರನಾಗಿದ್ದರೆ ಮನೋವಾಂಛಿತವಾದ ಕಾಮನೆಗಳೆಲ್ಲವೂ ಸಿದ್ಧಿಸುವುವು.

**ದೇವ್ಯಾಸ್ತು ದಕ್ಷಿಣಾರ್ಧೇನ ರಥಾವರ್ತೋ ನರಾಧಿಪ ॥೨೩॥**

**ತತ್ರಾರೋಹೇತ ಧರ್ಮಜ್ಞ ಶ್ರದ್ಧಧಾನೋ ಜಿತೇನ್ದ್ರಿಯಃ ।**
**ಮಹಾದೇವಪ್ರಸಾದಾದ್ಧಿ ಗಚ್ಛೇತ ಪರಮಾಂ ಗತಿಮ್ ॥೨೪॥**

ಶಾಕಂಭರೀಪುಣ್ಯಕ್ಷೇತ್ರದ ದಕ್ಷಿಣಾರ್ಧದಲ್ಲಿ ಸುಪ್ರಸಿದ್ಧವಾದ ರಥಾವರ್ತವೆಂಬ ಪರ್ವತವಿದೆ. ಯಾತ್ರಿಕನಾದವನು ಆ ಪರ್ವತಕ್ಕೆ ಭಕ್ತಿಭಾವ

ದಿಂದಲೂ, ಜಿತೇಂದ್ರಿಯನಾಗಿಯೂ ಹತ್ತಿಹೋಗಬೇಕು. ಹೀಗೆ ಆ ಪರ್ವತವನ್ನು ಸಂದರ್ಶಿಸುವುದರಿಂದ ಮಹಾದೇವನ ಅನುಗ್ರಹವನ್ನು ಪಡೆದು ಅವಸಾನಾನಂತರದಲ್ಲಿ ಸದ್ಗತಿಯನ್ನು ಪಡೆಯುತ್ತಾನೆ.

**ಪ್ರದಕ್ಷಿಣಮುಪಾವೃತ್ಯ ಗಚ್ಛೇತ ಭರತರ್ಷಭ ।**
**ಧಾರಾಂ ನಾಮ ಮಹಾಪ್ರಾಜ್ಞಃ ಸರ್ವಪಾಪಪ್ರಮೋಚನೀಮ್ ।**
**ತತ್ರ ಸ್ನಾತ್ವಾ ನರವ್ಯಾಘ್ರ ನ ಶೋಚತಿ ನರಾಧಿಪ ॥೨೫॥**

ರಥಾವರ್ತದಿವ್ಯಕ್ಷೇತ್ರವನ್ನು ಪ್ರದಕ್ಷಿಣೆಮಾಡಿಕೊಂಡು ಮುಂದೆ ಪ್ರಾಜ್ಞನಾದ ಯಾತ್ರಿಕನು ಸುಪ್ರಸಿದ್ಧವಾದ ಧಾರಾತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು.

ಆ ತೀರ್ಥಕ್ಷೇತ್ರದ ಯಾತ್ರೆಯಿಂದಾಗಿ ಸಕಲಪಾಪಗಳೂ ಪರಿಹಾರವಾಗುತ್ತವೆ. ಧಾರಾತೀರ್ಥದಲ್ಲಿ ಸ್ನಾನಮಾಡುವುದರಿಂದ ಸಕಲದುಃಖಗಳೂ ಪರಿಹಾರವಾಗುತ್ತವೆ. ಧಾರಾತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಪರ್ವತರಾಜನಾದ ಹಿಮವಂತನಿಗೆ ನಮಸ್ಕಾರ ಮಾಡಿ, ಗಂಗಾನದಿಯ ಮೂಲಸ್ಥಾನಕ್ಕೆ ಪ್ರಯಾಣಮಾಡಬೇಕು. ಗಂಗಾನದಿಯ ಆ ಮೂಲಸ್ಥಾನವು ನಿಶ್ಚಯವಾಗಿಯೂ ಸ್ವರ್ಗಕ್ಕೆ ದ್ವಾರರೂಪವಾಗಿದೆ. ಯಾತ್ರಿಕನು ಏಕಾಗ್ರಚಿತ್ತನಾಗಿ ಗಂಗಾದ್ವಾರದಲ್ಲಿರುವ ಕೋಟಿತೀರ್ಥದಲ್ಲಿ ಸ್ನಾನಮಾಡಬೇಕು.

**ಪುಣ್ಡರೀಕಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ।**
**ಉಷ್ಯೈಕಾಂ ರಜನೀಂ ತತ್ರ ಗೋಸಹಸ್ರಫಲಂ ಲಭೇತ್ ॥೨೮॥**

ಕೋಟಿತೀರ್ಥಸ್ನಾನದಿಂದ ಪುಂಡರೀಕಯಾಗವನ್ನು ಮಾಡಿದ ಫಲವು ಪ್ರಾಪ್ತವಾಗುವುದಲ್ಲದೇ–ವಂಶವೂ ಉದ್ಧಾರವಾಗುತ್ತದೆ. ಆ ಕ್ಷೇತ್ರದಲ್ಲಿ ನಿಯಮಾನುಷ್ಠಾನಪರನಾಗಿ ಒಂದು ರಾತ್ರಿ ಇರುವುದರಿಂದ ಸಹಸ್ರಧೇನುಗಳನ್ನು ದಾನಮಾಡಿದ ಪುಣ್ಯವು ಲಭ್ಯವಾಗುತ್ತದೆ.

**ಸಪ್ತಗಙ್ಗೇ ತ್ರಿಗಙ್ಗೇ ಚ ಶಕ್ರಾವರ್ತೇ ಚ ತರ್ಪಯನ್ ।**
**ದೇವಾನ್ಪಿತೄಂಶ್ಚ ವಿಧಿವತ್ಪುಣ್ಯೇ ಲೋಕೇ ಮಹೀಯತೇ ॥೨೯॥**

ಅಲ್ಲಿಯೇ ಇರುವ ಸಪ್ತಗಂಗಾ, ತ್ರಿಗಂಗಾ ಮತ್ತು ಶಕ್ರಾವರ್ತತೀರ್ಥ

ಗಳಲ್ಲಿ ಸ್ನಾನಮಾಡಿ ದೇವತೆಗಳನ್ನೂ, ಪಿತೃದೇವತೆಗಳನ್ನೂ ವಿಧ್ಯುಕ್ತವಾದ ಕರ್ಮಗಳಿಂದ ತೃಪ್ತಿಪಡಿಸುವುದರಿಂದ ಅವಸಾನಾನಂತರದಲ್ಲಿ ಸತ್ಪುರುಷರಿಗೆ ಪ್ರಾಪ್ತವಾಗುವ ಪುಣ್ಯಲೋಕಗಳು ಲಭ್ಯವಾಗುತ್ತವೆ.

**ತತಃ ಕನಖಲೇ ಸ್ನಾತ್ವಾ ತ್ರಿರಾತ್ರೋಪೋಷಿತೋ ನರಃ ।**
**ಅಶ್ವಮೇಧಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥೩೦॥**

ಅನಂತರದಲ್ಲಿ ಯಾತ್ರಿಕನು ಕನಖಲತೀರ್ಥದಲ್ಲಿ ಸ್ನಾನಮಾಡಬೇಕು. ಅಲ್ಲಿ ಸ್ನಾನಮಾಡುವುದರಿಂದ ಮತ್ತು ಮೂರು ರಾತ್ರಿಗಳನ್ನು ಆ ಪುಣ್ಯ ಕ್ಷೇತ್ರದಲ್ಲಿ ಉಪವಾಸವ್ರತದಿಂದ ಕಳೆಯುವುದರಿಂದ ಯಾತ್ರಿಕನಿಗೆ ಅಶ್ವ ಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಅವಸಾನಾ ನಂತರದಲ್ಲಿ ಸ್ವರ್ಗಕ್ಕೂ ಹೋಗುತ್ತಾನೆ.

**ಕಪಿಲಾವಟಂ ತತೋ ಗಚ್ಛೇತ್ತೀರ್ಥಸೇವೀ ನರಾಧಿಪ ।**
**ಉಪೋಷ್ಯ ರಜನೀಂ ತತ್ರ ಗೋಸಹಸ್ರಫಲಂ ಲಭೇತ್ ॥೩೧॥**

ಕನಖಲತೀರ್ಥಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಕಪಿಲಾವಟಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ಒಂದು ರಾತ್ರಿ ನಿರಾಹಾರನಾಗಿ ನಿಯತವ್ರತನಾಗಿರುವವನು ಸಹಸ್ರಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ. ಕಪಿಲಾವಟಕ್ಷೇತ್ರದಲ್ಲಿ ನಾಗರಾಜನಾದ ಕಪಿಲನ ತೀರ್ಥವಿದೆ. ತ್ರಿಲೋಕಪ್ರಸಿದ್ಧವಾಗಿರುವ ಆ ತೀರ್ಥಕ್ಕೆ ನಾಗತೀರ್ಥವೆಂದೂ ಹೆಸರು.

**ತತ್ರಾಭಿಷೇಕಂ ಕುರ್ವೀತ ನಾಗತೀರ್ಥೇ ನರಾಧಿಪ ।**
**ಕಪಿಲಾನಾಂ ಸಹಸ್ರಸ್ಯ ಫಲಂ ವಿನ್ದತಿ ಮಾನವಃ ॥೩೨॥**

ನಾಗತೀರ್ಥದಲ್ಲಿ ಸ್ನಾನಮಾಡಬೇಕು. ಹೀಗೆ ಮಾಡುವುದರಿಂದ ಒಂದು ಸಾವಿರ ಕಪಿಲವರ್ಣದ ಧೇನುಗಳನ್ನು ದಾನಮಾಡಿದ ಫಲವು ಲಭ್ಯವಾಗುತ್ತದೆ.

**ತತೋ ಲಲಿತಕಂ ಗಚ್ಛೇಚ್ಛಾನ್ತನೋಸ್ತೀರ್ಥಮುತ್ತಮಮ್ ।**
**ತತ್ರ ಸ್ನಾತ್ವಾ ನರೋ ರಾಜನ್ನ ದುರ್ಗತಿಮವಾಪ್ನುಯಾತ್ ॥೩೪॥**

ನಾಗತೀರ್ಥದಲ್ಲಿ ಸ್ನಾನಮಾಡಿಕೊಂಡು ಮುಂದೆ ಯಾತ್ರಿಕನು ಶಾಂತನು

ವಿನ ತೀರ್ಥವಾದ ಲಲಿತಕಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡುವ ಮಾನವನಿಗೆ ದುರ್ಗತಿಯೇ ಇಲ್ಲ.

**ಗಙ್ಗಾಯಮುನಯೋರ್ಮಧ್ಯೇ ಸ್ನಾತಿ ಯಃ ಸಂಗಮೇ ನರಃ ।**
**ದಶಾಶ್ವಮೇಧಾನಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥೩೫॥**

ಲಲಿತಕತೀರ್ಥದಲ್ಲಿ ಸ್ನಾನಮಾಡಿಕೊಂಡು ಮುಂದೆ ಯಾತ್ರಿಕನು ಗಂಗಾ-ಯಮುನೆಯರ ಸಂಗಮಸ್ಥಾನಕ್ಕೆ ಪ್ರಯಾಣಮಾಡಬೇಕು. ಗಂಗಾ-ಯಮುನಾಸಂಗಮದಲ್ಲಿ ಸ್ನಾನಮಾಡಿದವನು ಹತ್ತು ಅಶ್ವಮೇಧಯಾಗಗಳನ್ನು ಮಾಡಿದ ಫಲವನ್ನು ಪಡೆಯುವನಲ್ಲದೇ–ತನ್ನ ವಂಶವನ್ನೂ ಪಾವನಗೊಳಿಸುತ್ತಾನೆ.

**ತತೋ ಗಚ್ಛೇತ ರಾಜೇನ್ದ್ರ ಸುಗನ್ಧಾಂ ಲೋಕವಿಶ್ರುತಾಮ್ ।**
**ಸರ್ವಪಾಪವಿಶುದ್ಧಾತ್ಮಾ ಬ್ರಹ್ಮಲೋಕೇ ಮಹೀಯತೇ ॥೩೬॥**

ಗಂಗಾ-ಯಮುನಾಸಂಗಮದಲ್ಲಿ ಸ್ನಾನವನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ತ್ರಿಲೋಕಪ್ರಸಿದ್ಧವಾದ ಸುಗಂಧಾಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯಕ್ಷೇತ್ರದ ಯಾತ್ರೆಯನ್ನು ಮಾಡುವವನು ಸಕಲಪಾಪಗಳಿಂದಲೂ ವಿಮುಕ್ತನಾಗಿ, ಅವಸಾನಾನಂತರದಲ್ಲಿ ಬ್ರಹ್ಮಲೋಕ ವನ್ನು ಹೊಂದಿ ಅಲ್ಲಿಯೂ ಪುರಸ್ಕೃತನಾಗುತ್ತಾನೆ.

**ರುದ್ರಾವರ್ತಂ ತತೋ ಗಚ್ಛೇತ್ತೀರ್ಥಸೇವೀ ನರಾಧಿಪ ।**
**ತತ್ರ ಸ್ನಾತ್ವಾ ನರೋ ರಾಜನ್ಸ್ವರ್ಗಲೋಕಂ ಚ ಗಚ್ಛತಿ ॥೩೭॥**

ಸುಗಂಧಾಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ರುದ್ರಾ ವರ್ತತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ರುದ್ರಾವರ್ತತೀರ್ಥದಲ್ಲಿ ಸ್ನಾನಮಾಡುವುದರಿಂದ ಅವಸಾನಾನಂತರದಲ್ಲಿ ಸ್ವರ್ಗಲೋಕವು ಪ್ರಾಪ್ತ ವಾಗುತ್ತದೆ.

**ಗಙ್ಗಾಯಾಶ್ಚ ನರಶ್ರೇಷ್ಠ ಸರಸ್ವತ್ಯಾಶ್ಚ ಸಂಗಮೇ ।**
**ಸ್ನಾತ್ವಾಶ್ವಮೇಧಂ ಪ್ರಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥೩೮॥**

ರುದ್ರಾವರ್ತತೀರ್ಥದ ಸಮೀಪದಲ್ಲಿರುವ ಗಂಗಾ-ಸರಸ್ವತೀನದಿಗಳ

ಸಂಗಮದಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧಯಾಗವನ್ನು ಮಾಡಿದ ಫಲವು ಪ್ರಾಪ್ತವಾಗುವುದಲ್ಲದೇ–ಅವಸಾನಾನಂತರದಲ್ಲಿ ಸ್ವರ್ಗಲೋಕವೂ ಲಭ್ಯವಾಗುತ್ತದೆ.

**ಭದ್ರಕರ್ಣೇಶ್ವರಂ ಗತ್ವಾ ದೇವಮರ್ಚ್ಯ ಯಥಾವಿಧಿ ।**
**ನ ದುರ್ಗತಿಮವಾಪ್ನೋತಿ ನಾಕಪೃಷ್ಠೇ ಚ ಪೂಜ್ಯತೇ ॥೩೯॥**

ಗಂಗಾ-ಸರಸ್ವತೀಸಂಗಮದಲ್ಲಿ ಸ್ನಾನವನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಭದ್ರಕರ್ಣೇಶ್ವರತೀರ್ಥಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ಮಹಾದೇವನ ಆರಾಧನೆಯನ್ನು ಮಾಡುವವನಿಗೆ ಮುಂದೆ ಅವನ ಜೀವನದಲ್ಲಿ ಯಾವ ವಿಧವಾದ ಈತಿಬಾಧೆಗಳೂ ಇರುವುದಿಲ್ಲ ಮತ್ತು ಅವಸಾನಾನಂತರದಲ್ಲಿ ಸ್ವರ್ಗಲೋಕದ ಪ್ರಾಪ್ತಿಯೂ ಆಗುತ್ತದೆ.

**ತತಃ ಕುಬ್ಜಾಮ್ರಕಂ ಗಚ್ಛೇತ್ತೀರ್ಥಸೇವೀ ನರಾಧಿಪ ।**
**ಗೋಸಹಸ್ರಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥೪೦॥**

ಭದ್ರಕರ್ಣೇಶ್ವರತೀರ್ಥಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಕುಬ್ಜಾಮ್ರಕತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಕುಬ್ಜಾಮ್ರಕ ತೀರ್ಥದಲ್ಲಿ ಸ್ನಾನಮಾಡುವುದರಿಂದ ಸಹಸ್ರಧೇನುಗಳನ್ನು ದಾನಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಸ್ವರ್ಗಲೋಕದ ಪ್ರಾಪ್ತಿಯೂ ಆಗುತ್ತದೆ.

**ಅರುನ್ಧತೀವಟಂ ಗಚ್ಛೇತ್ತೀರ್ಥಸೇವೀ ನರಾಧಿಪ ।**
**ಸಾಮುದ್ರಕಮುಪಸ್ಪೃಶ್ಯ ಬ್ರಹ್ಮಚಾರೀ ಸಮಾಹಿತಃ ॥೪೧॥**
**ಅಶ್ವಮೇಧಮವಾಪ್ನೋತಿ ತ್ರಿರಾತ್ರೋಪೋಷಿತೋ ನರಃ ।**
**ಗೋಸಹಸ್ರಫಲಂ ವಿನ್ದ್ಯಾತ್ಕುಲಂ ಚೈವ ಸಮುದ್ಧರೇತ್ ॥೪೨॥**

ಕುಬ್ಜಾಮ್ರಕಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಅರುಂಧತೀವಟವೆಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ತದೇಕಚಿತ್ತ ನಾಗಿ, ಅನುಷ್ಠಾನಪರನಾಗಿ, ಬ್ರಹ್ಮಚರ್ಯವ್ರತನಿಷ್ಠನಾಗಿ ಆ ಕ್ಷೇತ್ರದಲ್ಲಿರುವ ಸಾಮುದ್ರಕತೀರ್ಥದಲ್ಲಿ ಸ್ನಾನಮಾಡಿ, ಮೂರು ರಾತ್ರಿಗಳನ್ನು ನಿರಾಹಾರ ನಾಗಿ ಕಳೆಯುವವನಿಗೆ ಅಶ್ವಮೇಧಯಾಗಮಾಡಿದ ಫಲವೂ ಮತ್ತು

ಸಹಸ್ರಧೇನುಗಳನ್ನು ದಾನಮಾಡಿದ ಫಲವೂ ಲಭ್ಯವಾಗುವುದಲ್ಲದೇ ಯಾತ್ರಿಕನ ವಂಶವೂ ಪಾವನವಾಗುತ್ತದೆ.

**ಬ್ರಹ್ಮಾವರ್ತಂ ತತೋ ಗಚ್ಛೇದ್ಬ್ರಹ್ಮಚಾರೀ ಸಮಾಹಿತಃ ।**
**ಅಶ್ವಮೇಧಮವಾಪ್ನೋತಿ ಸೋಮಲೋಕಂ ಚ ಗಚ್ಛತಿ ॥೪೩॥**

ಅರುಂಧತೀವಟಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಬ್ರಹ್ಮಾವರ್ತತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ಬ್ರಹ್ಮಚರ್ಯವ್ರತಾನುಷ್ಠಾನಪರನಾಗಿ, ಏಕಾಗ್ರಚಿತ್ತನಾಗಿ ಬ್ರಹ್ಮನನ್ನು ಕುರಿತು ಧ್ಯಾನಮಾಡುವುದರಿಂದ ಅಶ್ವಮೇಧಯಾಗಮಾಡಿದ ಫಲವು ಲಭ್ಯವಾಗು ತ್ತದೆ ಮತ್ತು ಅವಸಾನಾನಂತರದಲ್ಲಿ ಚಂದ್ರಲೋಕವೂ ಪ್ರಾಪ್ತವಾಗುತ್ತದೆ.

**ಯಮುನಾಪ್ರಭವಂ ಗತ್ವಾ ಸಮುಪಸ್ಪೃಶ್ಯ ಯಾಮುನಮ್ ।**
**ಅಶ್ವಮೇಧಫಲಂ ಲಬ್ಧ್ವಾ ಸ್ವರ್ಗಲೋಕೇ ಮಹೀಯತೇ ॥೪೪॥**

ಬ್ರಹ್ಮಾವರ್ತದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಯಮುನಾಪ್ರಭವ (ಯಮುನೆಯ ಹುಟ್ಟುವ ಸ್ಥಳ) ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಯಮುನಾಜಲದಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧಯಾಗಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಸ್ವರ್ಗಲೋಕದಲ್ಲಿಯೂ ಪುರಸ್ಕಾರವು ಸಿಕ್ಕುತ್ತದೆ.

**ದರ್ವೀಸಂಕ್ರಮಣಂ ಪ್ರಾಪ್ಯ ತೀರ್ಥಂ ತ್ರೈಲೋಕ್ಯಪೂಜಿತಮ್ ।**
**ಅಶ್ವಮೇಧಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥೪೫॥**

ಯಮುನಾಪ್ರಭವತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ತ್ರಿಲೋಕಸಂಪೂಜ್ಯವಾದ ದರ್ವೀಸಂಕ್ರಮಣತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ದಿವ್ಯತೀರ್ಥದಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧಯಾಗಮಾಡಿದ ಫಲವು ಪ್ರಾಪ್ತವಾಗುವುದಲ್ಲದೇ– ಅವಸಾನಾನಂತರದಲ್ಲಿ ಸ್ವರ್ಗಲೋಕವೂ ಲಭ್ಯವಾಗುತ್ತದೆ.

**ಸಿನ್ಧೋಶ್ಚ ಪ್ರಭವಂ ಗತ್ವಾ ಸಿದ್ಧಗನ್ಧರ್ವಸೇವಿತಮ್ ।**
**ತತ್ರೋಷ್ಯ ರಜನೀಃ ಪಞ್ಚ ವಿನ್ದೇದ್ಬಹುಸುವರ್ಣಕಮ್ ॥೪೬॥**

ದರ್ವೀಸಂಕ್ರಮಣತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು

ಮುಂದೆ ಯಾತ್ರಿಕನು ಸಿದ್ಧ-ಚಾರಣರಿಂದ ಅನವರತವೂ ಸೇವಿಸಲ್ಪಡುವ ಸಿಂಧುಪ್ರಭವ (ಸಿಂಧೂನದಿಯ ಮೂಲಸ್ಥಳ) ತೀರ್ಥಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು. ಆ ಕ್ಷೇತ್ರದಲ್ಲಿ ಐದು ರಾತ್ರಿಗಳ ಪರ್ಯಂತವಾಗಿ ನಿಯತಾ ಹಾರನಾಗಿ ಅನುಷ್ಠಾನಪರನಾಗಿದ್ದರೆ ಬಹುಸುವರ್ಣವನ್ನು ದಾನಮಾಡಿದ ಫಲವು ಲಭ್ಯವಾಗುತ್ತದೆ.

**ಅಥ ವೇದೀಂ ಸಮಾಸಾದ್ಯ ನರಃ ಪರಮದುರ್ಗಮಾಮ್ ।**
**ಅಶ್ವಮೇಧಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥೪೭॥**

ಸಿಂಧುಪ್ರಭವತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಅತಿದುರ್ಗಮವಾದ ವೇದೀಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ವೇದೀಕ್ಷೇತ್ರಯಾತ್ರೆಯಿಂದ ಅಶ್ವಮೇಧಯಾಗಮಾಡಿದ ಫಲವು ಲಭ್ಯವಾಗುತ್ತದೆ. ಅವಸಾನಾನಂತರದಲ್ಲಿ ಸ್ವರ್ಗಲೋಕವೂ ಲಭ್ಯವಾಗುತ್ತದೆ.

**ಋಷಿಕುಲ್ಯಾಂ ಸಮಾಸಾದ್ಯ ವಾಸಿಷ್ಠಂ ಚೈವ ಭಾರತ ।**
**ವಾಸಿಷ್ಠೀಂ ಸಮತಿಕ್ರಮ್ಯ ಸರ್ವೇ ವರ್ಣಾ ದ್ವಿಜಾತಯಃ ॥೪೮॥**

**ಋಷಿಕುಲ್ಯಾಂ ಸಮಾಸಾದ್ಯ ನರಃ ಸ್ನಾತ್ವಾ ವಿಕಲ್ಮಷಃ ।**
**ದೇವಾನ್ಪಿತೄಂಶ್ಚಾರ್ಚಯಿತ್ವಾ ಋಷಿಲೋಕಂ ಪ್ರಪದ್ಯತೇ ॥೪೯॥**

**ಯದಿ ತತ್ರ ವಸೇನ್ಮಾಸಂ ಶಾಕಾಹಾರೋ ನರಾಧಿಪ ।**
**ಭೃಗುತುಙ್ಗಂ ಸಮಾಸಾದ್ಯ ವಾಜಿಮೇಧಫಲಂ ಲಭೇತ್ ॥೫೦॥**

ವೇದೀಕ್ಷೇತ್ರದ ಯಾತ್ರೆಯಾದನಂತರ ಋಷಿಕುಲ್ಯಾ ಮತ್ತು ವಾಸಿಷ್ಠ ತೀರ್ಥಕ್ಷೇತ್ರಗಳಿಗೆ ಪ್ರಯಾಣಮಾಡಬೇಕು. ವಾಸಿಷ್ಠತೀರ್ಥಕ್ಷೇತ್ರದ ಸೀಮೋಲ್ಲಂಘನಮಾಡಿದ ಸಕಲವರ್ಣದವರೂ ಜನ್ಮಾಂತರದಲ್ಲಿ ಬ್ರಾಹ್ಮಣ ರಾಗಿ ಜನ್ಮತಾಳುತ್ತಾರೆ. ಋಷಿಕುಲ್ಯಾತೀರ್ಥಕ್ಷೇತ್ರಕ್ಕೆ ಹೋಗಿ ಆ ತೀರ್ಥದಲ್ಲಿ ಅನುದಿನವೂ ಸ್ನಾನಮಾಡುತ್ತಾ ಒಂದು ಮಾಸಪರ್ಯಂತವಾಗಿ ಶಾಕಾಹಾರ ವನ್ನು ಉಪಭುಂಜಿಸುತ್ತಾ ನಿಯಮವ್ರತಾನುಷ್ಠಾನದಿಂದಿದ್ದು ದೇವತೆಗಳನ್ನೂ ಪಿತೃಗಳನ್ನೂ ಯಥಾವಿಧಿಯಾಗಿ ಅರ್ಚನೆಮಾಡಿದಲ್ಲಿ ಸಕಲಪಾಪಗಳೂ ಪರಿಹಾರವಾಗುತ್ತವೆ ಮತ್ತು ಅವಸಾನಾನಂತರದಲ್ಲಿ ಋಷಿ-ಮಹರ್ಷಿಗಳಿಗೆ ಪ್ರಾಪ್ತವಾಗುವ ಪುಣ್ಯಲೋಕಗಳೂ ಸಿಕ್ಕುತ್ತವೆ.

ಋಷಿಕುಲ್ಯಾತೀರ್ಥದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಭೃಗುತುಂಗತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಭೃಗು ತುಂಗಕ್ಷೇತ್ರದ ಯಾತ್ರೆಯಿಂದ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

**ಗತ್ವಾ ವೀರಪ್ರಮೋಕ್ಷಂ ಚ ಸರ್ವಪಾಪೈಃ ಪ್ರಮುಚ್ಯತೇ ॥೫೧॥**

ಭೃಗುತುಂಗಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ವೀರ ಪ್ರಮೋಕ್ಷತೀರ್ಥಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದ ಯಾತ್ರೆಯಿಂದ ಸಕಲಪಾಪಗಳೂ ಪರಿಹಾರವಾಗುತ್ತವೆ.

**ಕೃತ್ತಿಕಾಮಘಯೋಶ್ಚೈವ ತೀರ್ಥಮಾಸಾದ್ಯ ಭಾರತ ।**
**ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಮಾಪ್ನೋತಿ ಮಾನವಃ ॥೫೨॥**

ವೀರಪ್ರಮೋಕ್ಷಕ್ಷೇತ್ರದ ಯಾತ್ರೆಯಾದನಂತರ ಸುಪ್ರಸಿದ್ಧವಾದ ಕೃತ್ತಿಕಾ ಮತ್ತು ಮಘಾ ಎಂಬ ತೀರ್ಥಕ್ಷೇತ್ರಗಳಿಗೆ ಪ್ರಯಾಣಮಾಡಬೇಕು. ಆ ಎರಡು ಪುಣ್ಯತೀರ್ಥಗಳ ಸ್ನಾನದಿಂದ ಅಗ್ನಿಷ್ಟೋಮ ಮತ್ತು ಅತಿರಾತ್ರ ಯಾಗಗಳನ್ನು ಮಾಡುವುದರಿಂದ ಲಭ್ಯವಾಗುವ ಫಲಕ್ಕಿಂತಲೂ ಹೆಚ್ಚಿನ ಫಲವು ಲಭಿಸುತ್ತದೆ.

**ತತ್ರ ಸಂಧ್ಯಾಂ ಸಮಾಸಾದ್ಯ ವಿದ್ಯಾತೀರ್ಥಮನುತ್ತಮಮ್ ।**
**ಉಪಸ್ಪೃಶ್ಯ ಚ ವೈ ವಿದ್ಯಾಂ ಯತ್ರ ತತ್ರೋಪಪದ್ಯತೇ ॥೫೩॥**

ಕೃತ್ತಿಕಾ ಮತ್ತು ಮಘಾತೀರ್ಥಕ್ಷೇತ್ರಗಳ ಯಾತ್ರೆಯನ್ನು ಮುಗಿಸಿ ಕೊಂಡು ಮುಂದೆ ಯಾತ್ರಿಕನು ವಿದ್ಯಾ ಎಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು. ಆ ಪುಣ್ಯತೀರ್ಥದಲ್ಲಿ ಸಂಧ್ಯಾಕಾಲಗಳಲ್ಲಿ ಸ್ನಾನಮಾಡುವುದ ರಿಂದ ಸಕಲವಿದ್ಯೆಗಳಲ್ಲಿಯೂ ಪಾಂಡಿತ್ಯವು ಉಂಟಾಗುತ್ತದೆ.

**ಮಹಾಶ್ರಮೇ ವಸೇದ್ರಾತ್ರಿಂ ಸರ್ವಪಾಪಪ್ರಮೋಚನೇ ।**
**ಏಕಕಾಲಂ ನಿರಾಹಾರೋ ಲೋಕಾನಾವಸತೇ ಶುಭಾನ್ ॥೫೪॥**
**ಷಷ್ಠಕಾಲೋಪವಾಸೇನ ಮಾಸಮುಷ್ಯ ಮಹಾಲಯೇ ।**
**ಸರ್ವಪಾಪವಿಶುದ್ಧಾತ್ಮಾ ವಿನ್ದೇದ್ಬಹುಸುವರ್ಣಕಮ್ ।**
**ದಶಾಪರಾನ್ದಶ ಪೂರ್ವಾನ್ನರಾನುದ್ಧರತೇ ಕುಲಮ್ ॥೫೫॥**

ವಿದ್ಯಾ ತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸಕಲಪಾಪಪರಿಹಾರಕವಾದ ಮಹಾಶ್ರಮಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು. ಆ ಕ್ಷೇತ್ರದಲ್ಲಿ ಒಂದು ದಿವಸ ಏಕಭುಕ್ತನಾಗಿ ನಿಯಮವ್ರತಾನುಷ್ಠಾನಪರನಾಗಿ ಇರುವುದರಿಂದ ಅವಸಾನಾನಂತರದಲ್ಲಿ ಅನೇಕ ಪುಣ್ಯ ಲೋಕಗಳು ಲಭ್ಯವಾಗುತ್ತವೆ. ಮಹಾಶ್ರಮದಲ್ಲಿ (ಮಹಾಲಯಕ್ಷೇತ್ರದಲ್ಲಿ) ಮಹಾಲಯ ಅಮಾ ವಾಸ್ಯೆಯ ಒಂದು ತಿಂಗಳ ಕಾಲ ಮೂರು ದಿನ ಗಳಿಗೊಮ್ಮೆ ಉಪವಾಸಮಾಡುತ್ತಾ ವ್ರತನಿಷ್ಠನಾಗಿದ್ದರೆ ಸರ್ವಪಾಪಗಳೂ ಪರಿಹಾರವಾಗುತ್ತವೆ ಮತ್ತು ಬಹುಸುವರ್ಣವನ್ನು ದಾನಮಾಡಿದ ಫಲವನ್ನೂ ಪಡೆಯುತ್ತಾನೆ. ಯಾತ್ರೆಮಾಡುವವನ ಹಿಂದಿನ ಮತ್ತು ಮುಂದಿನ ಹತ್ತು ತಲೆಮಾರಿನವರೂ ಪೂತರಾಗುತ್ತಾರೆ.

**ಅಥ ವೇತಸಿಕಾಂ ಗತ್ವಾ ಪಿತಾಮಹನಿಷೇವಿತಾಮ್ ।**
**ಅಶ್ವಮೇಧಮವಾಪ್ನೋತಿ ಗಚ್ಛೇದೌಶನಸೀಂ ಗತಿಮ್ ॥೫೬॥**

ಮಹಾಶ್ರಮದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಬ್ರಹ್ಮನಿಂದ ಸಂಸೇವ್ಯಮಾನವಾದ ವೇತಸಿಕಾಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದ ಯಾತ್ರೆಯಿಂದ ಅಶ್ವಮೇಧಯಾಗಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಶುಕ್ರಾಚಾರ್ಯರು ಪಡೆದ ಉತ್ತಮಲೋಕಗಳೂ ಲಭಿಸುತ್ತವೆ.

**ಅಥ ಸುನ್ದರಿಕಾತೀರ್ಥಂ ಪ್ರಾಪ್ಯ ಸಿದ್ಧನಿಷೇವಿತಮ್ ।**
**ರೂಪಸ್ಯ ಭಾಗೀ ಭವತಿ ದೃಷ್ಟಮೇತತ್ಪುರಾತನೈಃ ॥೫೭॥**

ವೇತಸಿಕಾತೀರ್ಥಕ್ಷೇತ್ರದ ಯಾತ್ರೆಯಾದನಂತರ ಸಿದ್ಧಸಂಸೇವ್ಯಮಾನವಾದ ಸುಂದರಿಕಾತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ಶರೀರಸೌಂದರ್ಯವು ಹೆಚ್ಚುವುದನ್ನು ಪೂರ್ವಜರು ಪ್ರತ್ಯಕ್ಷವಾಗಿ ನೋಡಿದ್ದಾರೆ.

**ತತೋ ವೈ ಬ್ರಾಹ್ಮಣೀಂ ಗತ್ವಾ ಬ್ರಹ್ಮಚಾರೀ ಜಿತೇನ್ದ್ರಿಯಃ ।**
**ಪದ್ಮವರ್ಣೇನ ಯಾನೇನ ಬ್ರಹ್ಮಲೋಕಂ ಪ್ರಪದ್ಯತೇ ॥೫೮॥**

ಸುಂದರಿಕಾತೀರ್ಥದಲ್ಲಿ ಸ್ನಾನವನ್ನು ಮುಗಿಸಿಕೊಂಡು ಮುಂದೆ ಜಿತೇಂದ್ರಿಯನಾಗಿ, ನಿಯತಾಹಾರನಾಗಿ ಬ್ರಾಹ್ಮಣೀತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡುವವನು ಅವಸಾನಾ ನಂತರದಲ್ಲಿ ಕಮಲದ ಬಣ್ಣದ ವಿಮಾನದಲ್ಲಿ ಕುಳಿತು ಬ್ರಹ್ಮಲೋಕಕ್ಕೆ ಹೋಗಲು ಅರ್ಹತೆಯನ್ನು ಪಡೆಯುತ್ತಾನೆ. ಬ್ರಾಹ್ಮಣೀತೀರ್ಥಕ್ಷೇತ್ರದ ಯಾತ್ರೆಯಾದನಂತರ ಸಿದ್ಧಪುರುಷರಿಂದ ಅನವರತವೂ ಸೇವಿಸಲ್ಪಡುವ ಪುಣ್ಯಪ್ರದವಾದ ನೈಮಿಷಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ದಿವ್ಯಕ್ಷೇತ್ರದಲ್ಲಿ ದೇವಗಣಗಳೊಡನೆ ಬ್ರಹ್ಮನ ಸಾನ್ನಿಧ್ಯವು ಸರ್ವದಾ ಇರುತ್ತದೆ.

ನೈಮಿಷಂ ಮೃಗಯಾನಸ್ಯ ಪಾಪಸ್ಯಾರ್ಧಂ ಪ್ರಣಶ್ಯತಿ ।
ಪ್ರವಿಷ್ಟಮಾತ್ರಸ್ತು ನರಃ ಸರ್ವಪಾಪೈಃ ಪ್ರಮುಚ್ಯತೇ ॥೬೦॥

ತತ್ರ ಮಾಸಂ ವಸೇದ್ಧೀರೋ ನೈಮಿಷೇ ತೀರ್ಥತತ್ಪರಃ ।
ಪೃಥಿವ್ಯಾಂ ಯಾನಿ ತೀರ್ಥಾನಿ ತಾನಿ ತೀರ್ಥಾನಿ ನೈಮಿಷೇ ॥೬೧॥

ಕೃತಾಭಿಷೇಕಸ್ತತ್ರೈವ ನಿಯತೋ ನಿಯತಾಶನಃ ।
ಗವಾಂ ಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಭಾರತ ॥೬೨॥

ಪುನಾತ್ಯಾಸಪ್ತಮಂ ಚೈವ ಕುಲಂ ಭರತಸತ್ತಮ ।
ಯಸ್ತ್ಯಜೇನ್ನೈಮಿಷೇ ಪ್ರಾಣಾನುಪವಾಸಪರಾಯಣಃ ॥೬೩॥

ಸ ಮೋದೇತ್ಸರ್ವಲೋಕೇಷು ಏವಮಾಹುರ್ಮನೀಷಿಣಃ ।
ನಿತ್ಯಂ ಮೇಧ್ಯಂ ಚ ಪುಣ್ಯಂ ಚ ನೈಮಿಷಂ ನೃಪಸತ್ತಮ ॥೬೪॥

ನೈಮಿಷಕ್ಷೇತ್ರವನ್ನು ಹುಡುಕಿಕೊಂಡು ಹೊರಟಾಗಲೇ ಅರ್ಧಭಾಗ ದಷ್ಟು ಪಾಪವು ಪರಿಹಾರವಾಗುತ್ತದೆ. ನೈಮಿಷಕ್ಷೇತ್ರದೊಳಗೆ ಕಾಲಿಟ್ಟ ಮಾತ್ರದಿಂದ ಯಾತ್ರಿಕನು ಸಕಲಪಾಪಗಳನ್ನೂ ನಿವಾರಣೆಮಾಡಿಕೊಂಡು ಪೂತನಾಗುತ್ತಾನೆ. ಜಿತೇಂದ್ರಿಯನಾದ ಯಾತ್ರಿಕನು ನೈಮಿಷಕ್ಷೇತ್ರದಲ್ಲಿ ಒಂದು ತಿಂಗಳು ನಿಯತವ್ರತಾನುಷ್ಠಾನದಿಂದಿರಬೇಕು. ಏಕೆಂದರೆ : ಪ್ರಪಂಚದ ಸರ್ವತೀರ್ಥಗಳೂ ನೈಮಿಷತೀರ್ಥಕ್ಷೇತ್ರದಲ್ಲಿ ಸನ್ನಿಹಿತವಾಗಿರುತ್ತವೆ. ಆ ತೀರ್ಥದಲ್ಲಿ ಸ್ನಾನಮಾಡುತ್ತಾ ನಿಯತಾಹಾರನಾಗಿ ನಿಯಮ ವ್ರತಾನುಷ್ಠಾನದಿಂದ ಒಂದು ತಿಂಗಳ ಪರ್ಯಂತವಾಗಿದ್ದರೆ ಗೋಮೇಧ

ಯಾಗವನ್ನು ಮಾಡಿದ ಫಲವು ಪ್ರಾಪ್ತವಾಗುತ್ತದೆ ಮತ್ತು ಯಾತ್ರಿಕನ ಹಿಂದಿನ ಮತ್ತು ಮುಂದಿನ ಏಳು ತಲೆಮಾರಿನವರು ಪೂತರಾಗುತ್ತಾರೆ. ಆ ನೈಮಿಷಕ್ಷೇತ್ರದಲ್ಲಿ ಆಮರಣಾಂತವಾಗಿ ಉಪವಾಸವಿದ್ದು ದೇಹತ್ಯಾಗ ಮಾಡುವವನು ಶಾಶ್ವತವಾದ ಉತ್ತಮಲೋಕಗಳನ್ನು ಪಡೆದು ಸುಖಿಯಾಗಿರುತ್ತಾನೆಂದು ಜ್ಞಾನಿಗಳು ಹೇಳುತ್ತಾರೆ. ಆದುದರಿಂದ ನೈಮಿಷಕ್ಷೇತ್ರವು ಪರಮಪವಿತ್ರವಾದ ಮತ್ತು ಅತ್ಯಂತಪುಣ್ಯಪ್ರದವಾದ ಕ್ಷೇತ್ರವೆಂದು ಪ್ರಸಿದ್ಧವಾಗಿರುವುದು.

**ಗಜ್ಗೋದ್ಭೇದಂ ಸಮಾಸಾದ್ಯ ತ್ರಿರಾತ್ರೋಪೋಷಿತೋ ನರಃ ।**
**ವಾಜಪೇಯಮವಾಪ್ನೋತಿ ಬ್ರಹ್ಮಭೂತೋ ಭವೇತ್ಸದಾ ॥೬೫॥**

ನೈಮಿಷಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಗಂಗೋದ್ಭೇದಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ಮೂರು ದಿನಗಳ ಕಾಲ ನಿರಶನವ್ರತದಿಂದಿರುವುದರಿಂದ ವಾಜಪೇಯಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಬ್ರಹ್ಮಭಾವವನ್ನೇ ಹೊಂದುತ್ತಾನೆ.

**ಸರಸ್ವತೀಂ ಸಮಾಸಾದ್ಯ ತರ್ಪಯೇತ್ಪಿತೃದೇವತಾಃ ।**
**ಸಾರಸ್ವತೇಷು ಲೋಕೇಷು ಮೋದತೇ ನಾತ್ರ ಸಂಶಯಃ ॥೬೬॥**

ಗಂಗೋದ್ಭೇದಕ್ಷೇತ್ರದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಸರಸ್ವತೀತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಸರಸ್ವತೀ ತೀರ್ಥದಲ್ಲಿ ಸ್ನಾನಮಾಡಿ ದೇವತೆಗಳನ್ನೂ-ಪಿತೃಗಳನ್ನೂ ಯಥಾವಿಧಿಯಾಗಿ ಅರ್ಚಿಸುವವನು ಅವಸಾನಾನಂತರದಲ್ಲಿ ಸಾರಸ್ವತಲೋಕಗಳಲ್ಲಿ ವಿರಾಜಮಾನನಾಗುತ್ತಾನೆ.

**ತತಶ್ಚ ಬಾಹುದಾಂ ಗಚ್ಛೇದ್ಬ್ರಹ್ಮಚಾರೀ ಸಮಾಹಿತಃ ।**
**ತತ್ರೋಷ್ಯ ರಜನೀಮೇಕಾಂ ಸ್ವರ್ಗಲೋಕೇ ಮಹೀಯತೇ ।**
**ದೇವಸತ್ರಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಕೌರವ ॥೬೭॥**

ಸರಸ್ವತೀತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಬ್ರಹ್ಮಚರ್ಯವ್ರತನಿಷ್ಠನಾಗಿ, ಜಿತೇಂದ್ರಿಯನಾಗಿ ಬಾಹುದಾ

ಎಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಬಾಹುದಾಕ್ಷೇತ್ರದಲ್ಲಿ ನಿಯತಾಹಾರನಾಗಿ, ಅನುಷ್ಠಾನಪರನಾಗಿ ಬ್ರಹ್ಮಚಾರಿಯಾಗಿ ಒಂದು ರಾತ್ರಿ ಇರುವುದರಿಂದ ದೇವಸತ್ರಯಾಗವನ್ನು ಮಾಡಿದ ಫಲವು ಪ್ರಾಪ್ತವಾಗುತ್ತದೆ.

**ತತಃ ಕ್ಷೀರವತೀಂ ಗಚ್ಛೇತ್ಪುಣ್ಯಾಂ ಪುಣ್ಯತರೈರ್ವೃತಾಮ್ ।**
**ಪಿತೃದೇವಾರ್ಚನಪರೋ ವಾಜಪೇಯಮವಾಪ್ನುಯಾತ್ ॥೬೮॥**

ಬಾಹುದಾತೀರ್ಥಕ್ಷೇತ್ರದ ಯಾತ್ರೆಯಾದನಂತರ ಪುಣ್ಯವಂತರಿಂದ ಸರ್ವದಾ ಸಂಸೇವ್ಯಮಾನವಾದ ಪುಣ್ಯತಮವಾದ ಕ್ಷೀರವತೀಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಕ್ಷೀರವತೀತೀರ್ಥದಲ್ಲಿ ಸ್ನಾನಮಾಡಿ ಪಿತೃಗಳನ್ನೂ-ದೇವತೆಗಳನ್ನೂ ವಿಧಿವತ್ತಾಗಿ ಅರ್ಚನೆಮಾಡುವವನು ವಾಜಪೇಯಯಾಗವನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

**ವಿಮಲಾಶೋಕಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।**
**ತತ್ರೋಷ್ಯ ರಜನೀಮೇಕಾಂ ಸ್ವರ್ಗಲೋಕೇ ಮಹೀಯತೇ ॥೬೯॥**

ಕ್ಷೀರವತೀತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ವಿಮಲಾ-ಶೋಕಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ನಿಯತಾಹಾರನಾಗಿ, ಬ್ರಹ್ಮಚರ್ಯವ್ರತನಿಷ್ಠನಾಗಿ ಒಂದು ರಾತ್ರಿಯನ್ನು ಕಳೆಯುವವನು ಅವಸಾನಾನಂತರದಲ್ಲಿ ಸ್ವರ್ಗಲೋಕದಲ್ಲಿ ಪುರಸ್ಕಾರವನ್ನು ಹೊಂದುತ್ತಾನೆ. ವಿಮಲಾಶೋಕಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಸರಯೂನದಿಯ ತೀರದಲ್ಲಿರುವ ಗೋಪ್ರತಾರತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದ ಮಹಿಮೆಯಿಂದ ಶ್ರೀರಾಮನು ತನ್ನ ಸೇವಕರೊಡನೆಯೂ, ತನ್ನನ್ನನುಸರಿಸಿ ಬಂದ ಸೈನ್ಯ-ವಾಹನಗಳೊಡನೆಯೂ ಇಹಲೋಕವನ್ನು ತ್ಯಜಿಸಿ ಸ್ವರ್ಗಾರೋಹಣಮಾಡಿದನು.

**ರಾಮಸ್ಯ ಚ ಪ್ರಸಾದೇನ ವ್ಯವಸಾಯಾಚ್ಚ ಭಾರತ ।**
**ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಗೋಪ್ರತಾರೇ ನರಾಧಿಪ ।**
**ಸರ್ವಪಾಪವಿಶುದ್ಧಾತ್ಮಾ ಸ್ವರ್ಗಲೋಕೇ ಮಹೀಯತೇ ॥೭೩॥**

ಆ ತೀರ್ಥದಲ್ಲಿ ಸ್ನಾನಮಾಡುವವನು ಶ್ರೀರಾಮನ ಅನುಗ್ರಹದಿಂದಾಗಿ

ಸಕಲಪಾಪಗಳಿಂದಲೂ ವಿಮುಕ್ತನಾಗಿ ಅವಸಾನಾನಂತರದಲ್ಲಿ ಸ್ವರ್ಗವನ್ನು ಸೇರುತ್ತಾನೆ.

**ರಾಮತೀರ್ಥೇ ನರಃ ಸ್ನಾತ್ವಾ ಗೋಮತ್ಯಾಂ ಕುರುನನ್ದನ ।**
**ಅಶ್ವಮೇಧಮವಾಪ್ನೋತಿ ಪುನಾತಿ ಚ ಕುಲಂ ನರಃ ॥೭೪॥**

ಗೋಪ್ರತಾರತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಗೋಮತೀನದಿಯ ತೀರದಲ್ಲಿರುವ ರಾಮತೀರ್ಥಕ್ಕೆ ಪ್ರಯಾಣಮಾಡಬೇಕು. ರಾಮತೀರ್ಥದಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಯಾತ್ರಿಕನ ವಂಶವೂ ಪಾವನವಾಗುತ್ತದೆ.

**ಶತಸಾಹಸ್ರಕಂ ತೀರ್ಥಂ ತತ್ರೈವ ಭರತರ್ಷಭ ।**
**ತತ್ರೋಪಸ್ಪರ್ಶನಂ ಕೃತ್ವಾ ನಿಯತೋ ನಿಯತಾಶನಃ ।**
**ಗೋಸಹಸ್ರಫಲಂ ಪುಣ್ಯಂ ಪ್ರಾಪ್ನೋತಿ ಭರತರ್ಷಭ ॥೭೫॥**

ಧರ್ಮಜ! ಆ ತೀರ್ಥದ ಸಮೀಪದಲ್ಲಿಯೇ ಶತಸಾಹಸ್ರಕವೆಂಬ ಮತ್ತೊಂದು ತೀರ್ಥವಿದೆ. ಜಿತೇಂದ್ರಿಯನಾಗಿ, ನಿಯತಾಹಾರನಾಗಿ ಶತಸಾಹಸ್ರಕತೀರ್ಥದಲ್ಲಿ ಸ್ನಾನಮಾಡುವವನು ಒಂದು ಸಾವಿರ ಹಸುಗಳನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ.

**ತತೋ ಗಚ್ಛೇತ ರಾಜೇನ್ದ್ರ ಭರ್ತೃಸ್ಥಾನಮನುತ್ತಮಮ್ ।**
**ಅಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥೭೬॥**

ಶತಸಾಹಸ್ರಕಕ್ಷೇತ್ರದ ಪ್ರವಾಸವನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಉತ್ತಮೋತ್ತಮವಾದ ಭರ್ತೃಸ್ಥಾನವೆಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದ ಯಾತ್ರೆಯಿಂದ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

**ಕೋಟಿತೀರ್ಥೇ ನರಃ ಸ್ನಾತ್ವಾ ಅರ್ಚಯಿತ್ವಾ ಗುಹಂ ನೃಪ ।**
**ಗೋಸಹಸ್ರಫಲಂ ವಿನ್ದ್ಯಾತ್ತೇಜಸ್ವೀ ಚ ಭವೇನ್ನರಃ ॥೭೭॥**

ಭರ್ತೃಸ್ಥಾನತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಕೋಟಿತೀರ್ಥಕ್ಕೆ ಪ್ರಯಾಣಮಾಡಬೇಕು. ಸುಪ್ರಸಿದ್ಧವಾದ

ಕೋಟಿತೀರ್ಥದಲ್ಲಿ ಸ್ನಾನಮಾಡಿ, ಆ ತೀರ್ಥದ ಅಧಿದೇವತೆಯಾದ ಕಾರ್ತಿಕೇಯನನ್ನು ಭಕ್ತಿಯಿಂದ ಪೂಜಿಸುವುದರಿಂದ ಯಾತ್ರಿಕನು ಸಹಸ್ರಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುವನಲ್ಲದೇ–ತೇಜಸ್ವಿಯೂ ಆಗುತ್ತಾನೆ.

**ತತೋ ವಾರಾಣಸೀಂ ಗತ್ವಾ ಅರ್ಚಯಿತ್ವಾ ವೃಷಧ್ವಜಮ್ ।**
**ಕಪಿಲಾಹ್ರದೇ ನರಃ ಸ್ನಾತ್ವಾ ರಾಜಸೂಯಮವಾಪ್ನುಯಾತ್ ॥೭೮॥**

ಕೋಟಿತೀರ್ಥಕ್ಷೇತ್ರದ ಪ್ರವಾಸವನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸುಪ್ರಸಿದ್ಧವಾದ ವಾರಾಣಸೀತೀರ್ಥಕ್ಷೇತ್ರಕ್ಕೆ (ಕಾಶಿಗೆ) ಪ್ರಯಾಣಮಾಡಬೇಕು. ಆ ಪುಣ್ಯಕ್ಷೇತ್ರದಲ್ಲಿರುವ ಕಪಿಲಾಹ್ರದತೀರ್ಥದಲ್ಲಿ ಸ್ನಾನಮಾಡಿ ವಾರಾಣಸಿಯ ಅಧಿದೇವತೆಯಾದ ವೃಷಭಧ್ವಜನಾದ ಪರಶಿವನನ್ನು ಭಕ್ತಿಯಿಂದ ಅರ್ಚಿಸುವುದರಿಂದ ರಾಜಸೂಯಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

**ಅವಿಮುಕ್ತಂ ಸಮಾಸಾದ್ಯ ತೀರ್ಥಸೇವೀ ಕುರೂದ್ವಹ ।**
**ದರ್ಶನಾದ್ದೇವದೇವಸ್ಯ ಮುಚ್ಯತೇ ಬ್ರಹ್ಮಹತ್ಯಯಾ ।**
**ಪ್ರಾಣಾನುತ್ಸೃಜ್ಯ ತತ್ರೈವ ಮೋಕ್ಷಂ ಪ್ರಾಪ್ನೋತಿ ಮಾನವಃ ॥೭೯॥**

ವಾರಾಣಸೀತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಅವಿಮುಕ್ತತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥಕ್ಷೇತ್ರದಲ್ಲಿರುವ ದೇವದೇವನ ದಿವ್ಯದರ್ಶನಮಾತ್ರದಿಂದಲೇ ಬ್ರಹ್ಮಹತ್ಯಾದೋಷವೂ ನಿವಾರಣೆಯಾಗುತ್ತದೆ. ಆ ಪುಣ್ಯಕ್ಷೇತ್ರದಲ್ಲಿ ಪ್ರಾಣತ್ಯಾಗಮಾಡುವ ಮಾನವನಿಗೆ ಪುನರ್ಜನ್ಮವಿಲ್ಲ. ಮೋಕ್ಷವನ್ನೇ ಪಡೆಯುತ್ತಾನೆ.

**ಮಾರ್ಕಣ್ಡೇಯಸ್ಯ ರಾಜೇನ್ದ್ರ ತೀರ್ಥಮಾಸಾದ್ಯ ದುರ್ಲಭಮ್ ॥**

**ಗೋಮತೀಗಙ್ಗಯೋಶ್ಚೈವ ಸಂಗಮೇ ಲೋಕವಿಶ್ರುತೇ ।**
**ಅಗ್ನಿಷ್ಟೋಮಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥೮೧॥**

ಅವಿಮುಕ್ತತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಗೋಮತೀ-ಗಂಗಾನದಿಗಳ ಸಂಗಮಸ್ಥಾನದಲ್ಲಿರುವ ಸುಪ್ರ

ಸಿದ್ಧವಾದ ಮಾರ್ಕಂಡೇಯತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯಕ್ಷೇತ್ರದ ಯಾತ್ರೆಯನ್ನು ಮಾಡುವವನಿಗೆ ಅಗ್ನಿಷ್ಟೋಮಯಾಗವನ್ನು ಮಾಡಿದ ಫಲವು ಲಭ್ಯವಾಗುವುದಲ್ಲದೇ–ಯಾತ್ರೆಮಾಡಿದವನ ವಂಶಜರೆಲ್ಲರೂ ಪೂತರಾಗುತ್ತಾರೆ.

**ತತೋ ಗಯಾಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।**
**ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥೮೨॥**

ಮಾರ್ಕಂಡೇಯತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಜಿತೇಂದ್ರಿಯನಾಗಿ ಬ್ರಹ್ಮಚರ್ಯವ್ರತನಿಷ್ಠನಾಗಿ ಗಯಾಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯಕ್ಷೇತ್ರದ ಯಾತ್ರೆಯಿಂದ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಯಾತ್ರಿಕನ ವಂಶವೂ ಪಾವನವಾಗುತ್ತದೆ.

**ತತ್ರಾಕ್ಷಯವಟೋ ನಾಮ ತ್ರಿಷು ಲೋಕೇಷು ವಿಶ್ರುತಃ ।**
**ತತ್ರ ದತ್ತಂ ಪಿತೃಭ್ಯಸ್ತು ಭವತ್ಯಕ್ಷಯಮುಚ್ಯತೇ ॥೮೩॥**

ಗಯಾಕ್ಷೇತ್ರದಲ್ಲಿಯೇ ತ್ರಿಲೋಕಪ್ರಸಿದ್ಧವಾದ ಅಕ್ಷಯವಟವೆಂಬ ಅನಾದಿಯಾದ ಆಲದ ಮರವಿರುವ ಪುಣ್ಯಕ್ಷೇತ್ರವಿದೆ. ಆ ಸ್ಥಳದಲ್ಲಿ ಪಿತೃಗಳಿಗೆ ಮಾಡುವ ತರ್ಪಣಾದಿಗಳೂ, ಶ್ರಾದ್ಧಾದಿಗಳೂ ಅಕ್ಷಯವಾಗಿ ಉಳಿಯುವುದೆಂದು ತಿಳಿದವರು ಹೇಳುತ್ತಾರೆ. (ಅಕ್ಷಯವಟವೆಂಬ ಆಲದ ಮರವಿರುವ ಒಂದು ಕ್ಷೇತ್ರವು ಈಗಲೂ ಪ್ರಯಾಗದಲ್ಲಿಯೂ (ಅಲಹಾಬಾದಿನಲ್ಲಿ) ಇದೆ. ಅಲ್ಲಿಗೆ ಹೋದವರು ಪಾತಾಳಪುರೀಮಂದಿರದಲ್ಲಿರುವ ಆ ಮರದಡಿಯಲ್ಲಿ ಶ್ರಾದ್ಧಾದಿಗಳನ್ನು ಮಾಡುತ್ತಾರೆ. ಶ್ರೀರಾಮಚಂದ್ರನೂ ಅದೇ ಸ್ಥಳದಲ್ಲಿ ತನ್ನ ತಂದೆಯಾದ ದಶರಥಮಹಾರಾಜನಿಗೆ ಶ್ರಾದ್ಧವನ್ನು ಮಾಡಿದನೆಂಬ ಪ್ರತೀತಿಯಿದೆ.)

**ಮಹಾನದ್ಯಾಮುಪಸ್ಪೃಶ್ಯ ತರ್ಪಯೇತ್ಪಿತೃದೇವತಾಃ ।**
**ಅಕ್ಷಯಾನ್ಪ್ರಾಪ್ನುಯಾಲ್ಲೋಕಾನ್ಕುಲಂ ಚೈವ ಸಮುದ್ಧರೇತ್ ॥೮೪॥**

ಅಕ್ಷಯವಟದ ಸಮೀಪದಲ್ಲಿರುವ ಮಹಾನದಿಯಲ್ಲಿ ಸ್ನಾನಮಾಡಿ ದೇವತೆಗಳನ್ನೂ ಪಿತೃಗಳನ್ನೂ ಪೂಜಾ-ತರ್ಪಣ-ಶ್ರಾದ್ಧಾದಿಗಳಿಂದ ಅರ್ಚನೆ

ಮಾಡುವುದರಿಂದ ಶಾಶ್ವತವಾದ ಪುಣ್ಯಲೋಕಗಳು ಲಭ್ಯವಾಗುತ್ತವೆ ಮತ್ತು ಯಾತ್ರಿಕನ ವಂಶವೇ ಪಾವನವಾಗುತ್ತದೆ.

**ತತೋ ಬ್ರಹ್ಮಸರೋ ಗತ್ವಾ ಧರ್ಮಾರಣ್ಯೋಪಶೋಭಿತಮ್ ।**
**ಬ್ರಹ್ಮಲೋಕಮವಾಪ್ನೋತಿ ಪ್ರಭಾತಾಮೇವ ಶರ್ವರೀಮ್ ॥೮೫॥**

ಗಯಾತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಧರ್ಮಾರಣ್ಯದಲ್ಲಿ ವಿರಾಜಮಾನವಾಗಿರುವ ಬ್ರಹ್ಮಸರವೆಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ದಿವ್ಯಕ್ಷೇತ್ರದಲ್ಲಿ ಪರಬ್ರಹ್ಮ ಧ್ಯಾನಾಸಕ್ತನಾಗಿ ಒಂದು ರಾತ್ರಿಯನ್ನು ಕಳೆದರೆ ಬೆಳಗಾಗುವುದರೊಳಗಾಗಿಯೇ–ಯಾತ್ರಿಕನು ಬ್ರಹ್ಮಲೋಕವನ್ನೇ ಪಡೆಯುತ್ತಾನೆ.

**ಬ್ರಹ್ಮಣಾ ತತ್ರ ಸರಸಿ ಯೂಪಶ್ರೇಷ್ಠಃ ಸಮುಚ್ಛ್ರಿತಃ ।**
**ಯೂಪಂ ಪ್ರದಕ್ಷಿಣಂ ಕೃತ್ವಾ ವಾಜಪೇಯಫಲಂ ಲಭೇತ್ ॥೮೬॥**

ಬ್ರಹ್ಮಸರದಲ್ಲಿ ಬ್ರಹ್ಮನು ಒಂದು ಯೂಪಸ್ತಂಭವನ್ನು ನಿರ್ಮಿಸಿರುವನು. ಆ ಯೂಪಸ್ತಂಭವನ್ನು ಪ್ರದಕ್ಷಿಣೆಮಾಡುವುದರಿಂದ ವಾಜಪೇಯ ಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

**ತತೋ ಗಚ್ಛೇತ ರಾಜೇನ್ದ್ರ ಧೇನುಕಂ ಲೋಕವಿಶ್ರುತಮ್ ।**
**ಏಕರಾತ್ರೋಷಿತೋ ರಾಜನ್ಪ್ರಯಚ್ಛೇತ್ತಿಲಧೇನುಕಾಮ್ ।**
**ಸರ್ವಪಾಪವಿಶುದ್ಧಾತ್ಮಾ ಸೋಮಲೋಕಂ ವ್ರಜೇದ್ಧ್ರುವಮ್ ॥೮೭॥**

ಧರ್ಮಾರಣ್ಯದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಲೋಕಪ್ರಸಿದ್ಧವಾದ ಧೇನುಕತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯಕ್ಷೇತ್ರದಲ್ಲಿ ನಿಯಮಾನುಷ್ಠಾನದಿಂದ ಒಂದು ರಾತ್ರಿ ಇದ್ದು ಎಳ್ಳಿನಿಂದ ಮಾಡಿದ ಗೋವಿನ ಪ್ರತಿಕೃತಿಯನ್ನು ದಾನಮಾಡಿದರೆ ಸಕಲಪಾಪಗಳೂ ಪರಿಹಾರವಾಗುತ್ತವೆ ಮತ್ತು ಅವಸಾನಾನಂತರದಲ್ಲಿ ಚಂದ್ರಲೋಕವನ್ನೂ ಪಡೆಯುತ್ತಾನೆ.

ಧರ್ಮಜ! ಧೇನುಕಕ್ಷೇತ್ರದಲ್ಲಿ ಒಂದು ಪರ್ವತವಿದೆ. 'ಕಪಿಲಾ' ಎಂಬ ಕಾಮಧೇನುವು ತನ್ನ ಕರುವಿನೊಡನೆ ಆ ಪರ್ವತದಲ್ಲಿ ಸಂಚರಿಸು

ತ್ತಿದ್ದಿತೆಂಬ ಸ್ಥಳಪುರಾಣವಿದೆ. ಕಪಿಲಾಧೇನುವು ತನ್ನ ಕರುವಿನೊಡನೆ ಅಲ್ಲಿ ಇದ್ದಿತೆಂಬುದಕ್ಕೆ ಸಾಕ್ಷಿಯಾಗಿ ಆ ಹಸು-ಕರುಗಳ ಹೆಜ್ಜೆಗಳ ಗುರುತುಗಳು ಇಂದಿಗೂ ಅಚ್ಚಳಿಯದೇ ಕಾಣುವುವು. ಅದೇ ಸ್ಥಳದಲ್ಲಿಯೇ ಒಂದು ಸರೋವರವೂ ಇದೆ.

**ತೇಷೂಪಸ್ಪೃಶ್ಯ ರಾಜೇನ್ದ್ರ ಪದೇಷು ನೃಪಸತ್ತಮ ।**
**ಯತ್ಕಿಂಚಿದಶುಭಂ ಕರ್ಮ ತತ್ಪ್ರಣಶ್ಯತಿ ಭಾರತ ॥೯೦॥**

ಆ ಹೆಜ್ಜೆಗಳಿರುವ ಪುಣ್ಯತೀರ್ಥದಲ್ಲಿ ಸ್ನಾನಮಾಡುವುದರಿಂದ ದುಷ್ಕರ್ಮಗಳಿಂದ ಪ್ರಾಪ್ತವಾಗುವ ಪಾಪಗಳೆಲ್ಲವೂ ಪರಿಹಾರವಾಗುತ್ತವೆ.

ಧೇನುಕಕ್ಷೇತ್ರದ ಯಾತ್ರೆಯಾದನಂತರ ಗೃಧ್ರವಟಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು. ಅದು ಸ್ಥಾಣುವಿನ ಸಾನ್ನಿಧ್ಯವಿರುವ ಪುಣ್ಯಕ್ಷೇತ್ರ. ಆ ಕ್ಷೇತ್ರದಲ್ಲಿ ನಖಶಿಖಾಂತವಾಗಿ ಭಸ್ಮಧಾರಣೆಮಾಡಿಕೊಂಡು ಪರಮೇಶ್ವರನನ್ನು ಅರ್ಚಿಸಬೇಕು.

**ಬ್ರಾಹ್ಮಣೇನ ಭವೇಚ್ಚೀರ್ಣಂ ವ್ರತಂ ದ್ವಾದಶವಾರ್ಷಿಕಮ್ ।**
**ಇತರೇಷಾಂ ತು ವರ್ಣಾನಾಂ ಸರ್ವಪಾಪಂ ಪ್ರಣಶ್ಯತಿ ॥೯೨॥**

ಯಾತ್ರಿಕನು ಬ್ರಾಹ್ಮಣನಾದಲ್ಲಿ ಹನ್ನೆರಡು ವರ್ಷಗಳ ಕಾಲ ನಿಯಮ ದಿಂದ ವ್ರತಾನುಷ್ಠಾನಮಾಡಿದ ಮಹಾಫಲವನ್ನು ಆ ದಿವ್ಯಕ್ಷೇತ್ರದ ದರ್ಶನ ಮಾತ್ರದಿಂದಲೇ ಪಡೆಯುತ್ತಾನೆ. ಯಾತ್ರಿಕನು ಬೇರೆಯ ವರ್ಣದವನಾಗಿ ದ್ದಲ್ಲಿ ಸರ್ವಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಗೃಧ್ರವಟಕ್ಷೇತ್ರದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಸುಶ್ರಾವ್ಯವಾದ ಗಾನದಿಂದ ನಿನಾದಿತವಾಗುತ್ತಿರುವ ಉದಯಪರ್ವತಕ್ಕೆ ಪ್ರಯಾಣ ಮಾಡಬೇಕು. ಯುಧಿಷ್ಠಿರ! ಆ ಪರ್ವತದಲ್ಲಿ ಈಗಲೂ ಸಾವಿತ್ರಿಯ ಪಾದಗಳ ಗುರುತುಗಳು ಕಾಣಿಸುತ್ತವೆ.

**ತತ್ರ ಸಂಧ್ಯಾಮುಪಾಸೀತ ಬ್ರಾಹ್ಮಣಃ ಸಂಶಿತವ್ರತಃ ।**
**ತೇನ ಹ್ಯುಪಾಸ್ತಾ ಭವತಿ ಸಂಧ್ಯಾ ದ್ವಾದಶವಾರ್ಷಿಕೀ ॥೯೪॥**

ಬ್ರಾಹ್ಮಣನಾದವನು ಅಲ್ಲಿ ತ್ರಿಸಂಧ್ಯೆಗಳಲ್ಲಿಯೂ ಸಂಧ್ಯೋಪಾಸನೆ

ಯನ್ನು ಮಾಡಿದರೆ ಹನ್ನೆರಡುವರ್ಷಗಳ ಕಾಲ ಅವಿಚ್ಛಿನ್ನವಾಗಿ ತ್ರಿಕಾಲ ಸಂಧ್ಯಾವಂದನೆಯನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

**ಯೋನಿದ್ವಾರಂ ಚ ತತ್ರೈವ ವಿಶ್ರುತಂ ಭರತರ್ಷಭ ।**
**ತತ್ರಾಭಿಗಮ್ಯ ಮುಚ್ಯೇತ ಪುರುಷೋ ಯೋನಿಸಂಕಟಾತ್ ॥೯೫॥**

ಉದಯಪರ್ವತದ ಸಮೀಪದಲ್ಲಿಯೇ ಸುಪ್ರಸಿದ್ಧವಾದ ಯೋನಿ ದ್ವಾರವೆಂಬ ಪುಣ್ಯಕ್ಷೇತ್ರವಿದೆ. ಆ ಪುಣ್ಯಕ್ಷೇತ್ರದ ಯಾತ್ರೆಮಾಡುವುದರಿಂದ ಮಾನವನು ಯೋನಿಯಲ್ಲಿ ಹುಟ್ಟುವ ಸಂಕಟದಿಂದ ಪಾರಾಗುತ್ತಾನೆ. (ಅವನಿಗೆ ಪುನರ್ಜನ್ಮವಿರುವುದಿಲ್ಲ.) ಧರ್ಮಜ! ಗಯಾಕ್ಷೇತ್ರದ ಮಹತ್ತ್ವವನ್ನು ಪುನಃ ಹೇಳಬಯಸುತ್ತೇನೆ.

**ಕೃಷ್ಣಶುಕ್ಲಾವುಭೌ ಪಕ್ಷೌ ಗಯಾಯಾಂ ಯೋ ವಸೇನ್ನರಃ ।**
**ಪುನಾತ್ಯಾಸಪ್ತಮಂ ರಾಜನ್ಕುಲಂ ನಾಸ್ತ್ಯತ್ರ ಸಂಶಯಃ ॥೯೬॥**

ಗಯಾಕ್ಷೇತ್ರದಲ್ಲಿ ಶುಕ್ಲ-ಕೃಷ್ಣಪಕ್ಷಗಳೆರಡರಲ್ಲಿಯೂ ಇದ್ದು ವ್ರತಾನು ಷ್ಠಾನವನ್ನು ಮಾಡುವವನು ಹಿಂದಿನ ಮತ್ತು ಮುಂದಿನ ಏಳು ತಲೆಮಾರು ಗಳ ತನ್ನ ವಂಶಜರನ್ನು ಪೂತರನ್ನಾಗಿ ಮಾಡಲು ಸಮರ್ಥನಾಗುತ್ತಾನೆ.

**ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।**
**ಯಜೇತ ವಾಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥೯೭॥**

ಮಾನವನು ಬಹುಪುತ್ರರನ್ನು ಪಡೆಯಬೇಕು. ಏಕೆಂದರೆ : ಬಹು ಮಂದಿ ಮಕ್ಕಳಲ್ಲಿ ಒಬ್ಬನಾದರೂ ಗಯಾಯಾತ್ರೆಯನ್ನು ಮಾಡಬಹುದು. ಅಥವಾ ಅಶ್ವಮೇಧಯಾಗವನ್ನು ಮಾಡಬಹುದು ಅಥವಾ ಕೃಷ್ಣವರ್ಣದ ವೃಷಭವನ್ನಾದರೂ ಉತ್ಸರ್ಜನಮಾಡಬಹುದು. ಆಗ ಅವನ ವಂಶದವ ರೆಲ್ಲರೂ ಪೂತರಾಗುತ್ತಾರೆ. ಇದರಲ್ಲಾವ ಸಂಶಯವೂ ಇಲ್ಲ. ಧರ್ಮಜ!

**ತತಃ ಫಲ್ಗುಂ ವ್ರಜೇದ್ರಾಜಂಸ್ತೀರ್ಥಸೇವೀ ನರಾಧಿಪ ।**
**ಅಶ್ವಮೇಧಮವಾಪ್ನೋತಿ ಸಿದ್ಧಿಂ ಚ ಮಹತೀಂ ವ್ರಜೇತ್ ॥೯೮॥**

ಯೋನಿದ್ವಾರದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸುಪ್ರಸಿದ್ಧವಾದ ಫಲ್ಗುಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ

ಕ್ಷೇತ್ರದ ಯಾತ್ರೆಯಿಂದಾಗಿ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಸಕಲಕಾರ್ಯಸಿದ್ಧಿಯೂ ಉಂಟಾಗುತ್ತದೆ.

ಯುಧಿಷ್ಠಿರ! ಫಲ್ಗುಕ್ಷೇತ್ರದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಅನಂತರದಲ್ಲಿ ಏಕಾಗ್ರಚಿತ್ತನಾದ ಯಾತ್ರಿಕನು ಧರ್ಮಪ್ರಸ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ಯಮಧರ್ಮನ ಸಾನ್ನಿಧ್ಯವು ಸರ್ವ ಕಾಲದಲ್ಲಿಯೂ ಇರುತ್ತದೆ.

**ತತ್ರ ಕೂಪೋದಕಂ ಕೃತ್ವಾ ತೇನ ಸ್ನಾತಃ ಶುಚಿಸ್ತಥಾ ।**
**ಪಿತೄನ್ದೇವಾಂಸ್ತು ಸಂತರ್ಪ್ಯ ಮುಕ್ತಪಾಪೋ ದಿವಂ ವ್ರಜೇತ್ ॥**

ಧರ್ಮಪ್ರಸ್ಥಕ್ಷೇತ್ರದಲ್ಲಿರುವ ಬಾವಿಯ ತೀರ್ಥವನ್ನು ಸೇದಿಕೊಂಡು ಆ ನೀರಿನಿಂದ ಸ್ನಾನಮಾಡಿ ದೇವತೆಗಳನ್ನೂ–ಪಿತೃಗಳನ್ನೂ ಯಥಾವಿಧಿಯಾಗಿ ಅರ್ಚನೆಮಾಡುವುದರಿಂದ ಸಕಲಪಾಪಗಳಿಂದಲೂ ವಿಮುಕ್ತಿ ಹೊಂದಿ, ಅವಸಾನಾನಂತರದಲ್ಲಿ ಸ್ವರ್ಗಲೋಕವನ್ನೂ ಪಡೆಯುತ್ತಾನೆ.

**ಮತಙ್ಗಸ್ಯಾಶ್ರಮಸ್ತತ್ರ ಮಹರ್ಷೇರ್ಭಾವಿತಾತ್ಮನಃ ।**
**ತಂ ಪ್ರವಿಶ್ಯಾಶ್ರಮಂ ಶ್ರೀಮಚ್ಛ್ರಮಶೋಕವಿನಾಶನಮ್ ॥೧೦೧॥**
**ಗವಾಮಯನಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ।**
**ಧರ್ಮಂ ತತ್ರಾಭಿಸಂಸ್ಪೃಶ್ಯ ವಾಜಿಮೇಧಮವಾಪ್ನುಯಾತ್ ॥೧೦೨॥**

ಧರ್ಮಪ್ರಸ್ಥದ ಸಮೀಪದಲ್ಲಿಯೇ ಜಿತೇಂದ್ರಿಯರಾದ ಮಹರ್ಷಿಗಳಾದ ಮತಂಗರ ದಿವ್ಯಾಶ್ರಮವಿರುವುದು. ಆ ಆಶ್ರಮವು ಶ್ರಮ-ಶೋಕ ವಿನಾಶಕವಾಗಿರುವುದು. ಆ ಆಶ್ರಮಭೂಮಿಗೆ ಪ್ರವೇಶಿಸಿದ ಮಾತ್ರದಿಂದಲೇ ಆಯಾಸವೆಲ್ಲವೂ ಪರಿಹಾರವಾಗುವುದು ಮತ್ತು ಗವಾಮಯನಯಜ್ಞವನ್ನು ಮಾಡಿದ ಫಲವು ಲಭ್ಯವಾಗುವುದು. ಆ ಆಶ್ರಮದಲ್ಲಿರುವ ಧರ್ಮಮೂರ್ತಿಯ ವಿಗ್ರಹವನ್ನು ಸ್ಪರ್ಶಮಾಡಿದ ಮಾತ್ರದಿಂದಲೇ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

**ತತೋ ಗಚ್ಛೇತ ರಾಜೇನ್ದ್ರ ಬ್ರಹ್ಮಸ್ಥಾನಮನುತ್ತಮಮ್ ।**
**ತತ್ರಾಭಿಗಮ್ಯ ರಾಜೇನ್ದ್ರ ಬ್ರಹ್ಮಾಣಂ ಪುರುಷರ್ಷಭ ।**
**ರಾಜಸೂಯಾಶ್ವಮೇಧಾಭ್ಯಾಂ ಫಲಂ ವಿನ್ದತಿ ಮಾನವಃ ॥೧೦೩॥**

ಮತಂಗಾಶ್ರಮದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಬ್ರಹ್ಮಸ್ಥಾನತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಮಹಾ ಕ್ಷೇತ್ರದಲ್ಲಿರುವ ಬ್ರಹ್ಮಮೂರ್ತಿಯನ್ನು ಪೂಜಾ-ಸ್ತೋತ್ರಗಳಿಂದ ಆರಾಧಿಸುವುದರಿಂದ ರಾಜಸೂಯ ಮತ್ತು ಅಶ್ವಮೇಧಗಳೆರಡನ್ನೂ ಮಾಡುವುದರಿಂದ ಪ್ರಾಪ್ತವಾಗುವ ಫಲವು ಲಭ್ಯವಾಗುತ್ತದೆ.

**ತತೋ ರಾಜಗೃಹಂ ಗಚ್ಛೇತ್ತೀರ್ಥಸೇವೀ ನರಾಧಿಪ ।**
**ಉಪಸ್ಪೃಶ್ಯ ತತಸ್ತತ್ರ ಕಕ್ಷೀವಾನಿವ ಮೋದತೇ ॥೧೦೪॥**

ಬ್ರಹ್ಮಸ್ಥಾನತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ರಾಜಗೃಹತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಅಲ್ಲಿರುವ ಪುಣ್ಯತೀರ್ಥದಲ್ಲಿ ಸ್ನಾನಮಾಡುವವನು ಅವಸಾನಾನಂತರದಲ್ಲಿ ಕಕ್ಷಿವಂತನಂತೆ ಸ್ವರ್ಗಸುಖವನ್ನು ಅನುಭವಿಸುತ್ತಾನೆ.

**ಯಕ್ಷಿಣ್ಯಾ ನೈತ್ಯಕಂ ತತ್ರ ಪ್ರಾಶ್ನೀತ ಪುರುಷಃ ಶುಚಿಃ ।**
**ಯಕ್ಷಿಣ್ಯಾಸ್ತು ಪ್ರಸಾದೇನ ಮುಚ್ಯತೇ ಬ್ರಹ್ಮಹತ್ಯಯಾ ॥೧೦೫॥**

ಆ ಕ್ಷೇತ್ರದಲ್ಲಿ ಒಬ್ಬಳು ಯಕ್ಷಿಣಿಯಿರುವಳು. ಆ ಯಕ್ಷಿಣಿಗೆ ಭಕ್ಷ್ಯ-ಫಲಾದಿಗಳನ್ನು ನಿವೇದನಮಾಡಿ, ಅನಂತರದಲ್ಲಿ ಆ ಭಕ್ಷ್ಯ-ಫಲಗಳನ್ನು ಶುಚೀಭೂತನಾಗಿ ಭಕ್ಷಣಮಾಡುವುದರಿಂದ ಯಕ್ಷಿಣಿಯ ಅನುಗ್ರಹವನ್ನು ಪಡೆದು ಬ್ರಹ್ಮಹತ್ಯಾಪಾಪದಿಂದಲೂ ವಿಮುಕ್ತನಾಗುತ್ತಾನೆ.

**ಮಣಿನಾಗಂ ತತೋ ಗತ್ವಾ ಗೋಸಹಸ್ರಫಲಂ ಲಭೇತ್ ॥೧೦೬॥**

ರಾಜಗೃಹದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಮಣಿನಾಗತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯಕ್ಷೇತ್ರದ ಯಾತ್ರೆಯಿಂದ ಒಂದು ಸಾವಿರ ಹಸುಗಳನ್ನು ದಾನಮಾಡಿದ ಪುಣ್ಯವು ಲಭ್ಯವಾಗುತ್ತದೆ.

**ತೈರ್ಥಿಕಂ ಭುಞ್ಜತೇ ಯಸ್ತು ಮಣಿನಾಗಸ್ಯ ಭಾರತ ।**
**ದಷ್ಟಸ್ಯಾಶೀವಿಷೇಣಾಪಿ ನ ತಸ್ಯ ಕ್ರಮತೇ ವಿಷಮ್ ।**
**ತತ್ರೋಷ್ಯ ರಜನೀಮೇಕಾಂ ಗೋಸಹಸ್ರಫಲಂ ಲಭೇತ್ ॥೧೦೭॥**

ಮಣಿನಾಗತೀರ್ಥದಲ್ಲಿ ಮತ್ತೊಂದು ವೈಶಿಷ್ಟ್ಯವಿದೆ, ಮಹಾರಾಜ!

ಆ ತೀರ್ಥವನ್ನು ಪ್ರಾಶನಮಾಡಿದರೆ ಅಥವಾ ಆ ತೀರ್ಥದಲ್ಲಿರುವ ಮೂಲಿಕೆಯನ್ನು ತಿಂದರೆ ನಾಗರಹಾವು ಕಚ್ಚಿದರೂ ವಿಷವು ಏರುವುದಿಲ್ಲ. (ದೇಹದೊಳಗೆ ವ್ಯಾಪಿಸುವುದಿಲ್ಲ.) ಆ ಕ್ಷೇತ್ರದಲ್ಲಿ ನಿರಾಹಾರನಾಗಿ, ಜಿತೇಂದ್ರಿಯನಾಗಿ ಒಂದು ರಾತ್ರಿಯನ್ನು ಕಳೆಯುವುದರಿಂದ ಸಹಸ್ರಧೇನು ಗಳನ್ನು ದಾನಮಾಡಿದ ಫಲವು ಬರುತ್ತದೆ.

**ತತೋ ಗಚ್ಛೇತ ಬ್ರಹ್ಮರ್ಷೇರ್ಗೌತಮಸ್ಯ ವನಂ ಪ್ರಿಯಮ್ ॥೧೦೮॥**

**ಅಹಲ್ಯಾಯಾ ಹ್ರದೇ ಸ್ನಾತ್ವಾ ವ್ರಜೇತ ಪರಮಾಂ ಗತಿಮ್ ।**
**ಅಭಿಗಮ್ಯಾಶ್ರಮಂ ರಾಜನ್ವಿನ್ದತೇ ಶ್ರಿಯಮಾತ್ಮನಃ ॥೧೦೯॥**

ಮಣಿನಾಗತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಬ್ರಹ್ಮರ್ಷಿಗಳಾದ ಗೌತಮರ ಆಶ್ರಮವಿರುವ ಪರಮಪ್ರಿಯವಾದ ಪುಣ್ಯಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಆಶ್ರಮದ ಸಮೀಪದಲ್ಲಿರುವ ಅಹಲ್ಯಾಹ್ರದದಲ್ಲಿ ಸ್ನಾನಮಾಡಿ ಗೌತಮರ ಆಶ್ರಮವನ್ನು ಪ್ರವೇಶಿಸು ವುದರಿಂದ ಆತ್ಮಶ್ರೀಯುಂಟಾಗುತ್ತದೆ. (ತೇಜಸ್ವಿಯಾಗುತ್ತಾನೆ.)

**ತತ್ರೋದಪಾನಂ ಧರ್ಮಜ್ಞ ತ್ರಿಷು ಲೋಕೇಷು ವಿಶ್ರುತಮ್ ।**
**ತತ್ರಾಭಿಷೇಕಂ ಕೃತ್ವಾ ತು ವಾಜಿಮೇಧಮವಾಪ್ನುಯಾತ್ ॥೧೧೦॥**

ಗೌತಮಾಶ್ರಮದ ಸಮೀಪದಲ್ಲಿಯೇ ತ್ರಿಲೋಕಪ್ರಸಿದ್ಧವಾದ ಒಂದು ಬಾವಿಯಿದೆ. ಆ ಉದಪಾನದಲ್ಲಿ ( ಬಾವಿಯಲ್ಲಿ ) ಸ್ನಾನಮಾಡುವುದರಿಂದ ಅಶ್ವಮೇಧಯಾಗಮಾಡಿದ ಫಲವು ಲಭ್ಯವಾಗುತ್ತದೆ.

**ಜನಕಸ್ಯ ತು ರಾಜರ್ಷೇಃ ಕೂಪಸ್ತ್ರಿದಶಪೂಜಿತಃ ।**
**ತತ್ರಾಭಿಷೇಕಂ ಕೃತ್ವಾ ತು ವಿಷ್ಣುಲೋಕಮವಾಪ್ನುಯಾತ್ ॥೧೧೧॥**

ಆ ಆಶ್ರಮದ ಮತ್ತೊಂದು ಕಡೆಯಲ್ಲಿ ದೇವತೆಗಳಿಂದಲೂ ಪೂಜಿಸ ಲ್ಪಡುವ ರಾಜರ್ಷಿಯಾದ ಜನಕನ ತೀರ್ಥವಿದೆ. ಆ ಪುಣ್ಯತೀರ್ಥದಲ್ಲಿ ಸ್ನಾನ ಮಾಡುವವನು ಅವಸಾನಾನಂತರದಲ್ಲಿ ವಿಷ್ಣುಲೋಕವನ್ನು ಪಡೆಯುತ್ತಾನೆ.

**ತತೋ ವಿನಶನಂ ಗಚ್ಛೇತ್ಸರ್ವಪಾಪಪ್ರಮೋಚನಮ್ ।**
**ವಾಜಪೇಯಮವಾಪ್ನೋತಿ ಸೋಮಲೋಕಂ ಚ ಗಚ್ಛತಿ ॥೧೧೨॥**

ಗೌತಮಮಹರ್ಷಿಗಳ ಆಶ್ರಮದ ಪ್ರವಾಸವನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ವಿನಶನತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥಕ್ಷೇತ್ರದ ಯಾತ್ರೆಮಾಡುವುದರಿಂದ ಆ ಕ್ಷೇತ್ರದ ಹೆಸರಿಗೆ ಅನುಗುಣವಾಗಿ ಯಾತ್ರಿಕನ ಸಕಲಪಾಪಗಳೂ ವಿನಾಶವಾಗುವುದಲ್ಲದೇ–ವಾಜಪೇಯ ಯಾಗವನ್ನು ಮಾಡಿದ ಫಲವೂ ಲಭಿಸಿ ಅವಸಾನಾನಂತರದಲ್ಲಿ ಸೋಮ ಲೋಕವೂ ಸಿಕ್ಕುತ್ತದೆ.

**ಗಣ್ಡಕೀಂ ತು ಸಮಾಸಾದ್ಯ ಸರ್ವತೀರ್ಥಜಲೋದ್ಭವಾಮ್ ।**
**ವಾಜಪೇಯಮವಾಪ್ನೋತಿ ಸೂರ್ಯಲೋಕಂ ಚ ಗಚ್ಛತಿ ॥೧೧೩॥**

ವಿನಶನತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸಕಲತೀರ್ಥಗಳಿಂದ ಪ್ರಾದುರ್ಭೂತವಾದ ಗಂಡಕೀನದಿಯ ಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ನದಿಯ ತೀರ್ಥದಲ್ಲಿ ಸ್ನಾನಮಾಡುವವನು ವಾಜಪೇಯಯಾಗಮಾಡಿದ ಫಲವನ್ನು ಪಡೆಯುವನಲ್ಲದೇ– ಅವಸಾನಾನಂತರದಲ್ಲಿ ಸೂರ್ಯಲೋಕವನ್ನೂ ಸೇರುತ್ತಾನೆ.

**ತತೋ ವಿಶಲ್ಯಾಮಾಸಾದ್ಯ ನದೀಂ ತ್ರೈಲೋಕ್ಯವಿಶ್ರುತಾಮ್ ।**
**ಅಗ್ನಿಷ್ಟೋಮಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥೧೧೪॥**

ಗಂಡಕೀತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ತ್ರಿಲೋಕಪ್ರಸಿದ್ಧವಾದ ವಿಶಲ್ಯಾನದೀತೀರಕ್ಕೆ ಪ್ರಯಾಣಮಾಡಬೇಕು. ಆ ನದಿಯಲ್ಲಿ ಸ್ನಾನಮಾಡುವವನಿಗೆ ಅಗ್ನಿಷ್ಟೋಮಯಾಗಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಸ್ವರ್ಗಲೋಕದ ಪ್ರಾಪ್ತಿ ಯಾಗುತ್ತದೆ.

**ತತೋಽಧಿವಙ್ಗಂ ಧರ್ಮಜ್ಞ ಸಮಾವಿಶ್ಯ ತಪೋವನಮ್ ।**
**ಗುಹ್ಯಕೇಷು ಮಹಾರಾಜ ಮೋದತೇ ನಾತ್ರ ಸಂಶಯಃ ॥೧೧೫॥**

ವಿಶಲ್ಯಾನದಿಯ ಸ್ನಾನವನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಅಧಿವಂಗತಪೋವನಕ್ಕೆ ಪ್ರಯಾಣಮಾಡಬೇಕು. ಆ ತಪೋವನವನ್ನು ಪ್ರವೇಶಿಸುವವನು ಅವಸಾನಾನಂತರದಲ್ಲಿ ಗುಹ್ಯಕರೊಡನೆ ಆನಂದವನ್ನು ಅನುಭವಿಸುತ್ತಾನೆ.

**ಕಮ್ಪನಾಂ ತು ಸಮಾಸಾದ್ಯ ನದೀಂ ಸಿದ್ಧನಿಷೇವಿತಾಮ್ ।**
**ಪುಣ್ಡರೀಕಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥೧೧೬॥**

ಅಧಿವಂಗತಪೋವನದ ಪ್ರವಾಸಾನಂತರದಲ್ಲಿ ಸಿದ್ಧರಿಂದ ಸಂಸೇವ್ಯ ಮಾನವಾದ ಕಂಪನಾನದಿಯ ತೀರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯ ನದಿಯಲ್ಲಿ ಸ್ನಾನಮಾಡುವುದರಿಂದ ಪುಂಡರೀಕಯಾಗಮಾಡಿದ ಫಲವು ಲಭ್ಯವಾಗುವುದಲ್ಲದೇ–ಅವಸಾನಾನಂತರದಲ್ಲಿ ಸ್ವರ್ಗಲೋಕವೂ ಪ್ರಾಪ್ತ ವಾಗುತ್ತದೆ.

**ಅಥ ಮಾಹೇಶ್ವರೀಂ ಧಾರಾಂ ಸಮಾಸಾದ್ಯ ಧರಾಧಿಪ ।**
**ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥೧೧೭॥**

ಕಂಪನಾನದಿಯ ಸ್ನಾನಾನಂತರದಲ್ಲಿ ಯಾತ್ರಿಕನು ಮುಂದೆ ಮಾಹೇ ಶ್ವರೀಧಾರೆಗೆ ಪ್ರಯಾಣಮಾಡಬೇಕು. ಮಾಹೇಶ್ವರೀಧಾರೆಯಲ್ಲಿ ಸ್ನಾನ ಮಾಡುವುದರಿಂದ ಅಶ್ವಮೇಧಯಾಗಮಾಡಿದ ಫಲವು ಪ್ರಾಪ್ತವಾಗುತ್ತದೆ ಮತ್ತು ಸ್ನಾನಮಾಡಿದವನ ವಂಶವೂ ಪಾವನವಾಗುತ್ತದೆ.

**ದಿವೌಕಸಾಂ ಪುಷ್ಕರಿಣೀಂ ಸಮಾಸಾದ್ಯ ನರಾಧಿಪ ।**
**ನ ದುರ್ಗತಿಮವಾಪ್ನೋತಿ ವಾಜಿಮೇಧಂ ಚ ವಿನ್ದತಿ ॥೧೧೮॥**

ಮಾಹೇಶ್ವರೀಧಾರೆಯಲ್ಲಿ ತೀರ್ಥಸ್ನಾನಮಾಡಿಕೊಂಡು ಮುಂದೆ ಸುಪ್ರಸಿದ್ಧವಾದ ದೇವಪುಷ್ಕರಿಣಿಗೆ ಪ್ರಯಾಣಮಾಡಬೇಕು. ಆ ಪುಷ್ಕರಿಣಿ ಯಲ್ಲಿ ಸ್ನಾನಮಾಡುವುದರಿಂದ ಮನುಷ್ಯನಿಗೆ ದುರ್ಗತಿಯು ಪ್ರಾಪ್ತವಾಗು ವುದಿಲ್ಲ ಮತ್ತು ಅಶ್ವಮೇಧಯಾಗಮಾಡಿದ ಫಲವೂ ಲಭ್ಯವಾಗುತ್ತದೆ.

**ಅಥ ಸೋಮಪದಂ ಗಚ್ಛೇದ್ಬ್ರಹ್ಮಚಾರೀ ಸಮಾಹಿತಃ ।**
**ಮಾಹೇಶ್ವರಪದೇ ಸ್ನಾತ್ವಾ ವಾಜಿಮೇಧಫಲಂ ಲಭೇತ್ ॥೧೧೯॥**

ದೇವಪುಷ್ಕರಿಣೀತೀರ್ಥಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಜಿತೇಂದ್ರಿಯನಾಗಿ ಬ್ರಹ್ಮಚರ್ಯವ್ರತನಿಷ್ಠನಾಗಿ ಸೋಮಪದ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಅಲ್ಲಿರುವ ಮಾಹೇಶ್ವರಪದದಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧಯಾಗಮಾಡಿದ ಫಲವು ಲಭ್ಯವಾಗು ತ್ತದೆ. ಆ ಮಾಹೇಶ್ವರಪದತೀರ್ಥದಲ್ಲಿ ಕೋಟಿತೀರ್ಥಗಳ ಸಾನ್ನಿಧ್ಯವಿರು

ವುದು. ಅಂತಹ ಪರಮಪವಿತ್ರವಾದ ತೀರ್ಥವನ್ನು ಅಸುರನೊಬ್ಬನು ಆಮೆಯ ರೂಪವನ್ನು ಧರಿಸಿದವನಾಗಿ ತನ್ನ ಬೆನ್ನಿನ ಮೇಲೆ ಹೊತ್ತುಕೊಂಡು ಹೋಗುತ್ತಿದ್ದನು. ದೇವತೆಗಳಿಂದ ಪ್ರಾರ್ಥಿತನಾದ ವಿಷ್ಣುವು ಒಡನೆಯೇ ಆ ಅಸುರನ ಬಳಿಗೆ ಹೋಗಿ ಅವನನ್ನು ಸಂಹರಿಸಿ ಮಾಹೇಶ್ವರತೀರ್ಥವನ್ನು ಹಿಂದಿದ್ದ ಸ್ಥಳದಲ್ಲಿಯೇ ಪುನಃ ಪ್ರತಿಷ್ಠಾಪನೆ ಮಾಡಿದನು.

**ತತ್ರಾಭಿಷೇಕಂ ಕುರ್ವೀತ ತೀರ್ಥಕೋಟ್ಯಾಂ ಯುಧಿಷ್ಠಿರ ।**
**ಪುಣ್ಡರೀಕಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥೧೨೨॥**

ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ಪುಂಡರೀಕಯಾಗವನ್ನು ಮಾಡಿದ ಫಲವು ಪ್ರಾಪ್ತವಾಗುವುದಲ್ಲದೇ–ಅವಸಾನಾನಂತರದಲ್ಲಿ ವಿಷ್ಣು ಲೋಕವೂ ಪ್ರಾಪ್ತವಾಗುತ್ತದೆ.

ಸೋಮಪದತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ನಾರಾಯಣಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ನಾರಾಯಣಕ್ಷೇತ್ರದಲ್ಲಿ ಮಹಾವಿಷ್ಣುವಿನ ಸಾನ್ನಿಧ್ಯವು ಸರ್ವಕಾಲದಲ್ಲಿಯೂ ಇರುತ್ತದೆ. ಬ್ರಹ್ಮನೇ ಮೊದಲಾದ ದೇವತೆಗಳೂ, ತಪೋಧನರಾದ ಋಷಿ-ಮಹರ್ಷಿಗಳೂ, ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶರುದ್ರರೂ ಪುಣ್ಯತಮವಾದ ಆ ಮಹಾಕ್ಷೇತ್ರದಲ್ಲಿ ಮಹಾವಿಷ್ಣುವನ್ನು ಆರಾಧಿಸುತ್ತಿರು ತ್ತಾರೆ. ಅದ್ಭುತಕರ್ಮನಾದ ಮಹಾವಿಷ್ಣುವು ಆ ನಾರಾಯಣಕ್ಷೇತ್ರದಲ್ಲಿ 'ಶಾಲಗ್ರಾಮ' ಎಂಬ ಹೆಸರಿನಿಂದ ವಿಖ್ಯಾತನಾಗಿರುತ್ತಾನೆ.

**ಅಭಿಗಮ್ಯ ತ್ರಿಲೋಕೇಶಂ ವರದಂ ವಿಷ್ಣುಮವ್ಯಯಮ್ ।**
**ಅಶ್ವಮೇಧಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥೧೨೪॥**

ವರದನಾದ, ತ್ರಿಲೋಕೇಶನಾದ, ಜರಾಮೃತ್ಯುರಹಿತನಾದ, ಕ್ಷಯ ರಹಿತನಾದ ಮಹಾವಿಷ್ಣುವಿನ ಸಾನ್ನಿಧ್ಯವನ್ನು ಸೇರಿ ಅವನನ್ನು ಅನನ್ಯಭಕ್ತಿ ಯಿಂದ ಪೂಜಿಸಿದರೆ ಅಶ್ವಮೇಧಯಾಗವನ್ನು ಮಾಡಿದ ಫಲವು ಪ್ರಾಪ್ತವಾ ಗುತ್ತದೆ ಮತ್ತು ಅವಸಾನಾನಂತರದಲ್ಲಿ ಮಹಾವಿಷ್ಣುವಿನ ಲೋಕವೂ ಲಭ್ಯವಾಗುತ್ತದೆ.

**ತತ್ರೋದಪಾನಂ ಧರ್ಮಜ್ಞ ಸರ್ವಪಾಪಪ್ರಮೋಚನಮ್ ।**
**ಸಮುದ್ರಾಸ್ತತ್ರ ಚತ್ವಾರಃ ಕೂಪೇ ಸನ್ನಿಹಿತಾಃ ಸದಾ ॥೧೨೬॥**

**ತತ್ರೋಪಸ್ಪೃಶ್ಯ ರಾಜೇನ್ದ್ರ ನ ದುರ್ಗತಿಮವಾಪ್ನುಯಾತ್ ॥೧೨೭॥**

ನಾರಾಯಣಕ್ಷೇತ್ರದಲ್ಲಿಯೇ ಸರ್ವಪಾಪನಾಶಕವಾದ ಒಂದು ಬಾವಿಯಿದೆ. ಆ ಉದಪಾನದಲ್ಲಿ ನಾಲ್ಕು ಸಮುದ್ರಗಳ ಸಾನ್ನಿಧ್ಯವಿರುತ್ತದೆ. ಅದರಲ್ಲಿ ಸ್ನಾನಮಾಡಿದವನಿಗೆ ದುರ್ಗತಿಯೆಂಬುದೇ ಇಲ್ಲ.

**ಅಭಿಗಮ್ಯ ಮಹಾದೇವಂ ವರದಂ ರುದ್ರಮವ್ಯಯಮ್ ।**
**ವಿರಾಜತಿ ಯಥಾ ಸೋಮೋ ಮೇಘೈರ್ಮುಕ್ತೋ ನರಾಧಿಪ ॥೧೨೮॥**

ಆ ಉದಪಾನದ ಸಮೀಪದಲ್ಲಿರುವ, ವರದನಾದ, ಕ್ಷಯರಹಿತನಾದ, ಮಹಾದೇವನನ್ನು ಅರ್ಚನೆಮಾಡುವವನು–ಮೋಡದಿಂದ ಹೊರಬಂದ ಚಂದ್ರನಂತೆ–ಸಕಲಪಾಪಗಳಿಂದಲೂ ಮುಕ್ತನಾಗಿ ಕಾಂತಿಮಂತನಾಗುತ್ತಾನೆ.

**ಜಾತಿಸ್ಮರಮುಪಸ್ಪೃಶ್ಯ ಶುಚಿಃ ಪ್ರಯತಮಾನಸಃ ।**
**ಜಾತಿಸ್ಮರತ್ವಮಾಪ್ನೋತಿ ಸ್ನಾತ್ವಾ ತತ್ರ ನ ಸಂಶಯಃ ॥೧೨೯॥**

ಆ ಕ್ಷೇತ್ರದಲ್ಲಿ ಜಾತಿಸ್ಮರವೆಂಬ ಮತ್ತೊಂದು ತೀರ್ಥವಿದೆ. ಜಿತೇಂದ್ರಿಯನಾಗಿ ಅನುಷ್ಠಾನಪರನಾಗಿದ್ದು ಆ ತೀರ್ಥದಲ್ಲಿ ಸ್ನಾನಮಾಡುವವನಿಗೆ ತನ್ನ ಪೂರ್ವಜನ್ಮಗಳ ಸ್ಮರಣೆಯುಂಟಾಗುತ್ತದೆ.

**ಮಾಹೇಶ್ವರಪುರಂ ಗತ್ವಾ ಅರ್ಚಯಿತ್ವಾ ವೃಷಧ್ವಜಮ್ ।**
**ಈಪ್ಸಿತಾಲ್ಲಭತೇ ಕಾಮಾನುಪವಾಸಾನ್ನ ಸಂಶಯಃ ॥೧೩೦॥**

ನಾರಾಯಣಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಮಾಹೇಶ್ವರಪುರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿರುವ ವೃಷಧ್ವಜನಾದ ಈಶ್ವರನನ್ನು ಪೂಜಿಸುವುದರಿಂದಲೂ ಮತ್ತು ಅಲ್ಲಿ ಉಪವಾಸಮಾಡುವುದರಿಂದಲೂ ಯಾತ್ರಿಕನ ಸಕಲಕಾಮನೆಗಳೂ ಪೂರ್ಣವಾಗುತ್ತವೆ. ಇದರಲ್ಲಾವ ಸಂಶಯವೂ ಇಲ್ಲ.

**ತತಸ್ತು ವಾಮನಂ ಗತ್ವಾ ಸರ್ವಪಾಪಪ್ರಮೋಚನಮ್ ।**
**ಅಭಿಗಮ್ಯ ಹರಿಂ ದೇವಂ ನ ದುರ್ಗತಿಮವಾಪ್ನುಯಾತ್ ॥೧೩೧॥**

ಮಾಹೇಶ್ವರಪುರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸಕಲಪಾಪಹರವಾದ ವಾಮನಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿರುವ ದೇವದೇವನಾದ ಶ್ರೀಹರಿಯನ್ನು ಸಂದರ್ಶಿಸುವುದರಿಂದ ಸದ್ಗತಿಯುಂಟಾಗುತ್ತದೆ.

**ಕುಶಿಕಸ್ಯಾಶ್ರಮಂ ಗಚ್ಛೇತ್ಸರ್ವಪಾಪಪ್ರಮೋಚನಮ್ ।**
**ಕೌಶಿಕೀಂ ತತ್ರ ಗಚ್ಛೇತ ಮಹಾಪಾಪಪ್ರಣಾಶಿನೀಮ್ ।**
**ರಾಜಸೂಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥೧೩೨॥**

ವಾಮನಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸಕಲಪಾಪಹರವಾದ ಕುಶಿಕಮಹರ್ಷಿಗಳ ದಿವ್ಯಾಶ್ರಮವಿರುವ ಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಆಶ್ರಮದ ಸಮೀಪದಲ್ಲಿರುವ ಪರಮ ಪವಿತ್ರವಾದ ಕೌಶಿಕೀನದಿಯಲ್ಲಿ ಸ್ನಾನಮಾಡುವುದರಿಂದ ರಾಜಸೂಯ ಯಾಗವನ್ನು ಮಾಡಿದ ಫಲವು ಲಭಿಸುತ್ತದೆ.

**ತತೋ ಗಚ್ಛೇತ ರಾಜೇನ್ದ್ರ ಚಮ್ಪಕಾರಣ್ಯಮುತ್ತಮಮ್ ।**
**ತತ್ರೋಷ್ಯ ರಜನೀಮೇಕಾಂ ಗೋಸಹಸ್ರಫಲಂ ಲಭೇತ್ ॥೧೩೩॥**

ಕುಶಿಕಾಶ್ರಮಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಉತ್ತಮೋತ್ತಮವಾದ ಚಂಪಕಾರಣ್ಯಕ್ಕೆ ಪ್ರಯಾಣಮಾಡಬೇಕು. ಪುಣ್ಯತಮವಾದ ಆ ಕ್ಷೇತ್ರದಲ್ಲಿ ನಿಯತಾಹಾರನಾಗಿ, ಅನುಷ್ಠಾನಪರನಾಗಿ ಒಂದು ರಾತ್ರಿ ಕಳೆಯುವುದರಿಂದ ಸಹಸ್ರಗೋವುಗಳನ್ನು ದಾನಮಾಡಿದ ಫಲವು ಲಭ್ಯವಾಗುತ್ತದೆ.

**ಅಥ ಜ್ಯೇಷ್ಠಿಲಮಾಸಾದ್ಯ ತೀರ್ಥಂ ಪರಮದುರ್ಲಭಮ್ ।**
**ತತ್ರೋಷ್ಯ ರಜನೀಮೇಕಾಂ ಗೋಸಹಸ್ರಫಲಂ ಲಭೇತ್ ॥೧೩೪॥**

ಚಂಪಕಾರಣ್ಯದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಪರಮ ದುರ್ಲಭವಾದ ಜ್ಯೇಷ್ಠಿಲತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ

ಪುಣ್ಯಕ್ಷೇತ್ರದಲ್ಲಿ ಒಂದು ರಾತ್ರಿ ಕಳೆಯುವುದರಿಂದ ಒಂದು ಸಾವಿರ ಗೋವುಗಳನ್ನು ದಾನಮಾಡಿದ ಫಲವು ಲಭ್ಯವಾಗುತ್ತದೆ.

**ತತ್ರ ವಿಶ್ವೇಶ್ವರಂ ದೃಷ್ಟ್ವಾ ದೇವ್ಯಾ ಸಹ ಮಹಾದ್ಯುತಿಮ್ ।**
**ಮಿತ್ರಾವರುಣಯೋರ್ಲೋಕಾನಾಪ್ನೋತಿ ಪುರುಷರ್ಷಭ ।**
**ತ್ರಿರಾತ್ರೋಪೋಷಿತಸ್ತತ್ರ ಅಗ್ನಿಷ್ಟೋಮಫಲಂ ಲಭೇತ್ ॥೧೩೫॥**

ಜ್ಯೇಷ್ಠಿಲತೀರ್ಥದ ಸಮೀಪದಲ್ಲಿ ಪಾರ್ವತೀಸಮೇತನಾದ ಪರಮೇಶ್ವರನ ಸಾನ್ನಿಧ್ಯವಿರುವುದು. ಆ ದಿವ್ಯತೇಜೋಮೂರ್ತಿಯನ್ನು ಸಂದರ್ಶಿಸುವವನು ಅವಸಾನಾನಂತರದಲ್ಲಿ ಮಿತ್ರಾ-ವರುಣರ ಲೋಕವನ್ನು ಸೇರುತ್ತಾನೆ. ಪರಮೇಶ್ವರನ ಸಾನ್ನಿಧ್ಯದಲ್ಲಿ ಅನುಷ್ಠಾನಪರನಾಗಿ ಉಪವಾಸ ದಿಂದ ಮೂರು ದಿವಸಗಳ ಪರ್ಯಂತವಾಗಿ ಇರುವವನಿಗೆ ಅಗ್ನಿಷ್ಟೋಮ ಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

**ಕನ್ಯಾಸಂವೇದ್ಯಮಾಸಾದ್ಯ ನಿಯತೋ ನಿಯತಾಶನಃ ।**
**ಮನೋಃ ಪ್ರಜಾಪತೇರ್ಲೋಕಾನಾಪ್ನೋತಿ ಪುರುಷರ್ಷಭ ॥೧೩೬॥**

ಈ ರೀತಿಯಾಗಿ ಜ್ಯೇಷ್ಠಿಲತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿ ಕೊಂಡು ಯಾತ್ರಿಕನು ನಿಯತಾಹಾರನಾಗಿ, ಏಕಾಗ್ರಚಿತ್ತನಾಗಿ ಕನ್ಯಾ ಸಂವೇದ್ಯವೆಂಬ ಪುಣ್ಯಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯಕ್ಷೇತ್ರದ ಪ್ರವಾಸದಿಂದ ಅವಸಾನಾನಂತರದಲ್ಲಿ ಮನುಪ್ರಜಾಪತಿಯ ಪುಣ್ಯಲೋಕ ಗಳು ಪ್ರಾಪ್ತವಾಗುತ್ತವೆ.

**ಕನ್ಯಾಯಾಂ ಯೇ ಪ್ರಯಚ್ಛನ್ತಿ ದಾನಮಣ್ವಪಿ ಭಾರತ ।**
**ತದಕ್ಷಯ್ಯಮಿತಿ ಪ್ರಾಹುರ್ಋಷಯಃ ಸಂಶಿತವ್ರತಾಃ ॥೧೩೭॥**

'ಕನ್ಯಾಸಂವೇದ್ಯವೆಂಬ ಪುಣ್ಯಕ್ಷೇತ್ರದಲ್ಲಿ ಅಣುವಿನಷ್ಟು ದಾನಮಾಡಿ ದರೂ ಅಕ್ಷಯವಾದ ಪುಣ್ಯವು ಪ್ರಾಪ್ತವಾಗುತ್ತದೆ'–ಎಂದು ಅನುಷ್ಠಾನ ಪರರಾದ ಮಹರ್ಷಿಗಳು ಆ ಕ್ಷೇತ್ರದ ವಿಷಯವಾಗಿ ಹೇಳುತ್ತಾರೆ.

**ನಿಶ್ಚೀರಾಂ ಚ ಸಮಾಸಾದ್ಯ ತ್ರಿಷು ಲೋಕೇಷು ವಿಶ್ರುತಾಮ್ ।**
**ಅಶ್ವಮೇಧಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥೧೩೮॥**

**ಯೇ ತು ದಾನಂ ಪ್ರಯಚ್ಛನ್ತಿ ನಿಶ್ಚೀರಾಸಙ್ಗಮೇ ನರಾಃ ।**
**ತೇ ಯಾನ್ತಿ ನರಶಾರ್ದೂಲ ಶಕ್ರಲೋಕಮನಾಮಯಮ್ ॥೧೪೯॥**

ಕನ್ಯಾಸಂವೇದ್ಯಪುಣ್ಯಕ್ಷೇತ್ರದ ಪ್ರವಾಸವನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ತ್ರಿಲೋಕಪ್ರಸಿದ್ಧವಾದ ನಿಶ್ಚೀರಾನದಿಯ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ನದಿಯಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧಯಾಗವನ್ನು ಮಾಡಿದ ಪುಣ್ಯವು ಲಭ್ಯವಾಗುವುದಲ್ಲದೇ–ಅವಸಾನಾನಂತರದಲ್ಲಿ ವಿಷ್ಣುಲೋಕವೂ ಪ್ರಾಪ್ತವಾಗುತ್ತದೆ. ನಿಶ್ಚೀರಾ ಸಂಗಮಸ್ಥಾನದಲ್ಲಿ ಯಾರು ದಾನಮಾಡುವರೋ–ಅವರು ಅವಸಾನಾ ನಂತರದಲ್ಲಿ ಶೋಕರೋಗರಹಿತವಾದ ಇಂದ್ರಲೋಕಕ್ಕೆ ಹೋಗುತ್ತಾರೆ.

**ತತ್ರಾಶ್ರಮೋ ವಸಿಷ್ಠಸ್ಯ ತ್ರಿಷು ಲೋಕೇಷು ವಿಶ್ರುತಃ ।**
**ತತ್ರಾಭಿಷೇಕಂ ಕುರ್ವಾಣೋ ವಾಜಪೇಯಮವಾಪ್ನುಯಾತ್ ॥೧೫೦॥**

ನಿಶ್ಚೀರಾನದಿಯ ತೀರದಲ್ಲಿಯೇ ಪುಣ್ಯತಮವಾದ, ತ್ರಿಲೋಕಪ್ರಸಿದ್ಧ ವಾದ ವಸಿಷ್ಠಾಶ್ರಮವಿರುವುದು. ವಸಿಷ್ಠಾಶ್ರಮದ ಸಮೀಪದಲ್ಲಿರುವ ಪುಣ್ಯತೀರ್ಥದಲ್ಲಿ ಸ್ನಾನಮಾಡುವುದರಿಂದ ವಾಜಪೇಯಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

**ದೇವಕೂಟಂ ಸಮಾಸಾದ್ಯ ಬ್ರಹ್ಮರ್ಷಿಗಣಸೇವಿತಮ್ ।**
**ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥೧೫೧॥**

ನಿಶ್ಚೀರಾನದಿತೀರದಲ್ಲಿರುವ ಪುಣ್ಯಕ್ಷೇತ್ರದ ಯಾತ್ರೆಯನ್ನು ಮುಗಿಸಿ ಕೊಂಡು ಮುಂದೆ ಮಹರ್ಷಿಗಳಿಂದ ಸಂಸೇವ್ಯಮಾನವಾದ ದೇವಕೂಟ ವೆಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದ ಯಾತ್ರೆಯಿಂದ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುವುದಲ್ಲದೇ ಯಾತ್ರಿಕನ ವಂಶವೂ ಪಾವನವಾಗುತ್ತದೆ.

**ತತೋ ಗಚ್ಛೇತ ರಾಜೇನ್ದ್ರ ಕೌಶಿಕಸ್ಯ ಮುನೇರ್ಹ್ರದಮ್ ।**
**ಯತ್ರ ಸಿದ್ಧಿಂ ಪರಾಂ ಪ್ರಾಪ್ತೋ ವಿಶ್ವಾಮಿತ್ರೋಽಥ ಕೌಶಿಕಃ ॥೧೫೨॥**

**ತತ್ರ ಮಾಸಂ ವಸೇದ್ವೀರ ಕೌಶಿಕ್ಯಾಂ ಭರತರ್ಷಭ ।**
**ಅಶ್ವಮೇಧಸ್ಯ ಯತ್ಪುಣ್ಯಂ ತನ್ಮಾಸೇನಾಧಿಗಚ್ಛತಿ ॥೧೫೩॥**

ದೇವಕೂಟಕ್ಷೇತ್ರದ ಯಾತ್ರೆಯಾದನಂತರ ಯಾತ್ರಿಕನು ಕೌಶಿಕಹ್ರದಕ್ಕೆ ಪ್ರಯಾಣಮಾಡಬೇಕು. ಕುಶಿಕಸುತನಾದ ವಿಶ್ವಾಮಿತ್ರನು ಹಿಂದೆ ಅದೇ ಕ್ಷೇತ್ರದಲ್ಲಿ ತಪಸ್ಸುಮಾಡಿ ಸಿದ್ಧಿಯನ್ನು ಪಡೆದನು. ಆ ದಿವ್ಯಕ್ಷೇತ್ರದಲ್ಲಿ ಒಂದು ಮಾಸಪರ್ಯಂತವಾಗಿ ನಿಯಮಾನುಷ್ಠಾನಪರನಾಗಿ ನಿಯತಾಹಾರನಾಗಿದ್ದರೆ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

**ಸರ್ವತೀರ್ಥವರೇ ಚೈವ ಯೋ ವಸೇತ ಮಹಾಹ್ರದೇ ।**
**ನ ದುರ್ಗತಿಮವಾಪ್ನೋತಿ ವಿನ್ದೇದ್ಬಹುಸುವರ್ಣಕಮ್ ॥೧೪೪॥**

ವಿಶ್ವಾಮಿತ್ರಹ್ರದದ ಯಾತ್ರೆಯನ್ನು ಮುಗಿಸಿಕೊಂಡು ಉತ್ತಮೋತ್ತಮ ವಾದ ಮಹಾಹ್ರದತೀರ್ಥಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯತೀರ್ಥದಲ್ಲಿ ವಾಸಮಾಡುವುದರಿಂದ ದುರ್ಗತಿಯು ತಪ್ಪುವುದಲ್ಲದೇ–ಬಹುಸುವರ್ಣ ವನ್ನು ದಾನಮಾಡಿದ ಪುಣ್ಯವೂ ಲಭ್ಯವಾಗುತ್ತದೆ.

**ಕುಮಾರಮಭಿಗಮ್ಯಾಥ ವೀರಾಶ್ರಮನಿವಾಸಿನಮ್ ।**
**ಅಶ್ವಮೇಧಮವಾಪ್ನೋತಿ ನರೋ ನಾಸ್ತ್ಯತ್ರ ಸಂಶಯಃ ॥೧೪೫॥**

ಮಹಾಹ್ರದದ ಯಾತ್ರೆಯಾದನಂತರ ವೀರಾಶ್ರಮನಿವಾಸಿಯಾದ ಕಾರ್ತಿಕೇಯನ ಬಳಿಗೆ ಪ್ರಯಾಣಮಾಡಬೇಕು. ಆ ಕ್ಷೇತ್ರದ ಯಾತ್ರೆಯಿಂದ ಅಶ್ವಮೇಧಯಾಗಮಾಡಿದ ಫಲವು ಲಭ್ಯವಾಗುತ್ತದೆ.

**ಅಗ್ನಿಧಾರಾಂ ಸಮಾಸಾದ್ಯ ತ್ರಿಷು ಲೋಕೇಷು ವಿಶ್ರುತಾಮ್ ॥೧೪೬॥**
**ತತ್ರಾಭಿಷೇಕಂ ಕುರ್ವಾಣೋ ಹ್ಯಗ್ನಿಷ್ಟೋಮಮವಾಪ್ನುಯಾತ್ ।**
**ಅಧಿಗಮ್ಯ ಮಹಾದೇವಂ ವರದಂ ವಿಷ್ಣುಮವ್ಯಯಮ್ ॥೧೪೭॥**

ಅನಂತರದಲ್ಲಿ ತ್ರಿಲೋಕಪ್ರಸಿದ್ಧವಾದ ಅಗ್ನಿಧಾರೆಗೆ ಪ್ರಯಾಣಮಾಡ ಬೇಕು. ಅಗ್ನಿಧಾರೆಯಲ್ಲಿ ಸ್ನಾನಮಾಡಿ, ಅಲ್ಲಿರುವ ವರದನಾದ ವಿಷ್ಣು ಮೂರ್ತಿಯನ್ನು ಸಂದರ್ಶಿಸಿ, ಭಕ್ತಿಪೂರ್ವಕವಾಗಿ ಅರ್ಚನೆಮಾಡುವುದರಿಂದ ಅಗ್ನಿಷ್ಟೋಮಯಾಗಮಾಡಿದ ಫಲವು ಲಭ್ಯವಾಗುತ್ತದೆ.

**ಪಿತಾಮಹಸರೋ ಗತ್ವಾ ಶೈಲರಾಜಸಮೀಪತಃ ।**
**ತತ್ರಾಭಿಷೇಕಂ ಕುರ್ವಾಣೋ ಹ್ಯಗ್ನಿಷ್ಟೋಮಮವಾಪ್ನುಯಾತ್ ॥೧೪೮॥**

ಅನಂತರದಲ್ಲಿ ಪರ್ವತರಾಜನಾದ ಹಿಮವತ್ಪರ್ವತದ ಸಮೀಪದಲ್ಲಿರುವ ಬ್ರಹ್ಮಸರಸ್ಸಿಗೆ ಪ್ರಯಾಣಮಾಡಬೇಕು. ಆ ಬ್ರಹ್ಮಸರಸ್ಸಿನಲ್ಲಿ ಸ್ನಾನಮಾಡುವುದರಿಂದ ಅಗ್ನಿಷ್ಟೋಮಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

**ಪಿತಾಮಹಸ್ಯ ಸರಸಃ ಪ್ರಸ್ರುತಾ ಲೋಕಪಾವನೀ ।**
**ಕುಮಾರಧಾರಾ ತತ್ರೈವ ತ್ರಿಷು ಲೋಕೇಷು ವಿಶ್ರುತಾ ॥೧೪೯॥**

**ಯತ್ರ ಸ್ನಾತ್ವಾ ಕೃತಾರ್ಥೋಽಸ್ಮೀತ್ಯಾತ್ಮಾನಮವಗಚ್ಛತಿ ।**
**ಷಷ್ಠಕಾಲೋಪವಾಸೇನ ಮುಚ್ಯತೇ ಬ್ರಹ್ಮಹತ್ಯಯಾ ॥೧೫೦॥**

ಬ್ರಹ್ಮಸರಸ್ಸಿನಿಂದ ಹರಿದುಬರುವ, ತ್ರಿಲೋಕಪ್ರಸಿದ್ಧವಾದ, ಲೋಕಪಾವನಿಯಾದ ಕುಮಾರಧಾರೆಯೂ ಅಲ್ಲಿಯೇ ಇರುವುದು. ಕುಮಾರಧಾರೆಯಲ್ಲಿ ಸ್ನಾನಮಾಡುವುದರಿಂದ 'ಕೃತಾರ್ಥನಾದೆ'ನೆಂಬ ಮಾನಸಿಕ ತೃಪ್ತಿಯು ಯಾತ್ರಿಕನಿಗುಂಟಾಗುತ್ತದೆ. ಆ ತೀರ್ಥದ ಸಮೀಪದಲ್ಲಿ ಅನುಷ್ಠಾನಪರನಾಗಿ ಮೂರು ದಿನಗಳು (ಮೂರು ದಿನಗಳಿಗೊಮ್ಮೆ ) ಉಪವಾಸದಿಂದ ಕಳೆದರೆ ಬ್ರಹ್ಮಹತ್ಯಾದೋಷವೂ ಪರಿಹಾರವಾಗುತ್ತದೆ.

**ತತೋ ಗಚ್ಛೇತ ಧರ್ಮಜ್ಞ ತೀರ್ಥಸೇವನತತ್ಪರಃ ।**
**ಶಿಖರಂ ವೈ ಮಹಾದೇವ್ಯಾ ಗೌರ್ಯಾಸ್ತ್ರೈಲೋಕ್ಯವಿಶ್ರುತಮ್ ॥೧೫೧॥**

**ಸಮಾರುಹ್ಯ ನರಶ್ರೇಷ್ಠ ಸ್ತನಕುಣ್ಡೇಷು ಸಂವಿಶೇತ್ ।**
**ಸ್ತನಕುಣ್ಡಮುಪಸ್ಪೃಶ್ಯ ವಾಜಪೇಯಫಲಂ ಲಭೇತ್ ॥೧೫೨॥**

**ತತ್ರಾಭಿಷೇಕಂ ಕುರ್ವಾಣಃ ಪಿತೃದೇವಾರ್ಚನೇ ರತಃ ।**
**ಹಯಮೇಧಮವಾಪ್ನೋತಿ ಶಕ್ರಲೋಕಂ ಚ ಗಚ್ಛತಿ ॥೧೫೩॥**

ಕುಮಾರಧಾರೆಯಲ್ಲಿ ಸ್ನಾನವನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ತ್ರಿಲೋಕಪ್ರಸಿದ್ಧವಾದ ಗೌರೀಶಿಖರಕ್ಕೆ ಹೋಗಬೇಕು. ಆ ಶಿಖರವನ್ನು ಹತ್ತಿ ಅಲ್ಲಿರುವ ಸ್ತನಕುಂಡಕ್ಕೆ ಹೋಗಬೇಕು. ಸ್ತನಕುಂಡತೀರ್ಥದಲ್ಲಿ ಸ್ನಾನಮಾಡುವುದರಿಂದ ವಾಜಪೇಯಯಾಗಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಇಂದ್ರಲೋಕದ ಪ್ರಾಪ್ತಿಯೂ ಆಗುತ್ತದೆ.

**ತಾಮ್ರಾರುಣಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।**
**ಅಶ್ವಮೇಧಮವಾಪ್ನೋತಿ ಬ್ರಹ್ಮಲೋಕಂ ಚ ಗಚ್ಛತಿ ॥೧೫೪॥**

ಸ್ತನಕುಂಡದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ತಾಮ್ರಾರುಣತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧಯಾಗಮಾಡಿದ ಫಲವು ಲಭಿಸುವುದಲ್ಲದೇ ಅವಸಾನಾನಂತರದಲ್ಲಿ ಬ್ರಹ್ಮಲೋಕಪ್ರಾಪ್ತಿಯೂ ಆಗುತ್ತದೆ.

**ನನ್ದಿನ್ಯಾಂ ಚ ಸಮಾಸಾದ್ಯ ಕೂಪಂ ದೇವನಿಷೇವಿತಮ್ ।**
**ನರಮೇಧಸ್ಯ ಯತ್ಪುಣ್ಯಂ ತದಾಪ್ನೋತಿ ನರಾಧಿಪ ॥೧೫೫॥**

ತಾಮ್ರಾರುಣತೀರ್ಥಯಾತ್ರೆಯನ್ನು ಮುಗಿಸಿಕೊಂಡು ನಂದಿನೀ ತೀರ್ಥಕ್ಕೆ ಪ್ರಯಾಣಮಾಡಬೇಕು. ದೇವತೆಗಳಿಂದಲೂ ಸೇವ್ಯಮಾನವಾದ ನಂದಿನೀತೀರ್ಥದಲ್ಲಿರುವ ಆ ಕೂಪದಲ್ಲಿ ಸ್ನಾನಮಾಡುವುದರಿಂದ ನರಮೇಧಯಜ್ಞಮಾಡಿದ ಪುಣ್ಯವು ಲಭ್ಯವಾಗುತ್ತದೆ.

**ಕಾಲಿಕಾಸಂಗಮೇ ಸ್ನಾತ್ವಾ ಕೌಶಿಕ್ಯರುಣಯೋರ್ಗತಃ ।**
**ತ್ರಿರಾತ್ರೋಪೋಷಿತೋ ರಾಜನ್ಸರ್ವಪಾಪೈಃ ಪ್ರಮುಚ್ಯತೇ ॥೧೫೬॥**

ನಂದಿನೀತೀರ್ಥದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಕೌಶಿಕೀ ಮತ್ತು ಅರುಣಾನದಿಗಳು ಸೇರುವ ಕಾಲಿಕಾಸಂಗಮಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು. ಆ ಸಂಗಮದಲ್ಲಿ ಅನುಷ್ಠಾನಪರನಾಗಿ ಮೂರು ರಾತ್ರಿಗಳು ಉಪವಾಸದಿಂದ ಕಳೆದಲ್ಲಿ ಸಕಲಪಾಪಗಳೂ ಪರಿಹಾರವಾಗುತ್ತವೆ.

**ಉರ್ವಶೀತೀರ್ಥಮಾಸಾದ್ಯ ತತಃ ಸೋಮಾಶ್ರಮಂ ಬುಧಃ ।**
**ಕುಮ್ಭಕರ್ಣಾಶ್ರಮಂ ಗತ್ವಾ ಪೂಜ್ಯತೇ ಭುವಿ ಮಾನವಃ ॥೧೫೭॥**

ಕಾಲಿಕಾಸಂಗಮದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಉರ್ವಶೀತೀರ್ಥ-ಸೋಮಾಶ್ರಮ-ಕುಂಭಕರ್ಣಾಶ್ರಮಗಳೆಂಬ ಪುಣ್ಯಕ್ಷೇತ್ರಗಳನ್ನು ಅನುಕ್ರಮವಾಗಿ ಯಾತ್ರೆಮಾಡಬೇಕು. ಆ ಪುಣ್ಯಕ್ಷೇತ್ರಗಳ ಯಾತ್ರೆಯಿಂದ ಯಾತ್ರಿಕನು ಭೂಮಂಡಲದಲ್ಲಿಯೇ ಪೂಜ್ಯನಾಗುತ್ತಾನೆ.

**ಕೋಕಾಮುಖಮುಪಸ್ಪೃಶ್ಯ ಬ್ರಹ್ಮಚಾರೀ ಯತವ್ರತಃ ।**
**ಜಾತಿಸ್ಮರತ್ವಮಾಪ್ನೋತಿ ದೃಷ್ಟಮೇತತ್ಪುರಾತನೈಃ ॥೧೫೮॥**

ಆ ಪುಣ್ಯಕ್ಷೇತ್ರಗಳ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಕೋಕಾ ಮುಖವೆಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಬ್ರಹ್ಮಚರ್ಯವ್ರತ

ನಿಷ್ಠನಾಗಿ ನಿಯತಾಹಾರನಾಗಿ ಆ ಕೋಕಾಮುಖದಲ್ಲಿ ಸ್ನಾನಮಾಡಿದರೆ ಪೂರ್ವಜನ್ಮದ ಸ್ಮರಣೆಯುಂಟಾಗುವುದು. ಇದನ್ನು ನಮ್ಮ ಪೂರ್ವಜರು ಪ್ರತ್ಯಕ್ಷಾನುಭವದಿಂದ ಕಂಡಿದ್ದಾರೆ.

**ಪ್ರಾಙ್ನದೀಂ ಚ ಸಮಾಸಾದ್ಯ ಕೃತಾತ್ಮಾ ಭವತಿ ದ್ವಿಜಃ ।**
**ಸರ್ವಪಾಪವಿಶುದ್ಧಾತ್ಮಾ ಶಕ್ರಲೋಕಂ ಚ ಗಚ್ಛತಿ ॥೧೫೯॥**

ಕೋಕಾಮುಖದ ತೀರ್ಥಸ್ನಾನವನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ನಂದಾ (ಪ್ರಾಙ್ನದೀ) ನದಿಯ ತೀರ್ಥಕ್ಕೆ ಪ್ರಯಾಣಮಾಡಬೇಕು. ಆ ನದಿಯಲ್ಲಿ ಸ್ನಾನಮಾಡುವುದರಿಂದ ಯಾತ್ರಿಕನು ಸಕಲಪಾಪಗಳನ್ನೂ ಕಳೆದುಕೊಂಡು ಅವಸಾನಾನಂತರದಲ್ಲಿ ಇಂದ್ರಲೋಕವನ್ನೂ ಸೇರುತ್ತಾನೆ.

**ಋಷಭದ್ವೀಪಮಾಸಾದ್ಯ ಮೇಧ್ಯಂ ಕ್ರೌಞ್ಚನಿಷೂದನಮ್ ।**
**ಸರಸ್ವತ್ಯಾಮುಪಸ್ಪೃಶ್ಯ ವಿಮಾನಸ್ಥೋ ವಿರಾಜತೇ ॥೧೬೦॥**

ಅನಂತರ ಕ್ರೌಂಚಪಕ್ಷಿಗಳ ವಾಸಕ್ಕೆ ಅನರ್ಹವಾದ ನಿರ್ಮಲವಾದ ಋಷಭದ್ವೀಪಕ್ಕೆ ಪ್ರಯಾಣಮಾಡಬೇಕು. ಆ ದ್ವೀಪದಲ್ಲಿರುವ ಸರಸ್ವತೀ ತೀರ್ಥದಲ್ಲಿ ಸ್ನಾನಮಾಡುವವನು ಅವಸಾನಾನಂತರದಲ್ಲಿ ಸ್ವರ್ಗಲೋಕದಲ್ಲಿ ವಿಮಾನಾರೂಢನಾಗಿ ವಿರಾಜಿಸುತ್ತಾನೆ.

**ಔದ್ದಾಲಕಂ ಮಹಾರಾಜ ತೀರ್ಥಂ ಮುನಿನಿಷೇವಿತಮ್ ।**
**ತತ್ರಾಭಿಷೇಕಂ ಕೃತ್ವಾ ವೈ ಸರ್ವಪಾಪೈಃ ಪ್ರಮುಚ್ಯತೇ ॥೧೬೧॥**

ಋಷಭದ್ವೀಪದ ಯಾತ್ರೆಯನ್ನು ಮುಗಿಸಿಕೊಂಡು ಮುನಿಸೇವಿತವಾದ ಔದ್ದಾಲಕತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ಸಕಲಪಾಪಗಳೂ ಪರಿಹಾರವಾಗುತ್ತವೆ.

**ಧರ್ಮತೀರ್ಥಂ ಸಮಾಸಾದ್ಯ ಪುಣ್ಯಂ ಬ್ರಹ್ಮರ್ಷಿಸೇವಿತಮ್ ।**
**ವಾಜಪೇಯಮವಾಪ್ನೋತಿ ವಿಮಾನಸ್ಥಶ್ಚ ಪೂಜ್ಯತೇ ॥೧೬೨॥**

ಔದ್ದಾಲಕತೀರ್ಥಕ್ಷೇತ್ರದ ಯಾತ್ರೆಯಾದನಂತರ ಬ್ರಹ್ಮರ್ಷಿಗಳಿಂದ ಸೇವಿಸಲ್ಪಡುವ ಬಹುಪುಣ್ಯಪ್ರದವಾದ ಧರ್ಮತೀರ್ಥಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು. ಧರ್ಮತೀರ್ಥದಲ್ಲಿ ಸ್ನಾನಮಾಡುವುದರಿಂದ ವಾಜಪೇಯ

ಯಾಗವನ್ನು ಮಾಡಿದ ಫಲವು ಲಭ್ಯವಾಗುವುದಲ್ಲದೇ–ಅವಸಾನಾನಂತರ ದಲ್ಲಿ ಸ್ವರ್ಗಲೋಕಪ್ರಾಪ್ತಿಯೂ ಆಗುತ್ತದೆ.

**ಅಥ ಚಮ್ಪಾಂ ಸಮಾಸಾದ್ಯ ಭಾಗೀರಥ್ಯಾಂ ಕೃತೋದಕಃ ।**
**ದಣ್ಡಾರ್ಕಮಭಿಗಮ್ಯೈವ ಗೋಸಹಸ್ರಫಲಂ ಲಭೇತ್ ॥೧೬೩॥**

ಧರ್ಮತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಚಂಪಾಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿರುವ ಭಾಗೀರಥಿನದಿಯಲ್ಲಿ ಮಿಂದು ದಂಡಾರ್ಕ (ದಂಡಾಪರ್ಣ) ಕ್ಷೇತ್ರಕ್ಕೆ ಪ್ರಯಾಣಮಾಡಿದರೆ ಸಾವಿರ ಗೋವುಗಳನ್ನು ದಾನಮಾಡಿದ ಫಲವು ಲಭ್ಯವಾಗುತ್ತದೆ.

**ಲಲಿತಿಕಾಂ ತತೋ ಗಚ್ಛೇತ್ಪುಣ್ಯಾಂ ಪುಣ್ಯೋಪಸೇವಿತಾಮ್ ।**
**ವಾಜಪೇಯಮವಾಪ್ನೋತಿ ವಿಮಾನಸ್ಥಶ್ಚ ಪೂಜ್ಯತೇ ॥೧೬೪॥**

ದಂಡಾರ್ಕಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸತ್ಪುರುಷರಿಂದ ಸೇವಿಸಲ್ಪಡುತ್ತಿರುವ ಲಲಿತಿಕಾಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದ ಯಾತ್ರೆಯಿಂದ ವಾಜಪೇಯಯಾಗ ಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಯಾತ್ರಿಕನು ಸ್ವರ್ಗದಲ್ಲಿಯೂ ಪುರಸ್ಕೃತನಾಗುತ್ತಾನೆ.”

ಆ೪ನೆಯ ಅಧ್ಯಾಯವು ಮುಗಿಯಿತು.

ಆ೫ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಗಂಗಾಸಾಗರ-ಅಯೋಧ್ಯಾ-ಚಿತ್ರಕೂಟಾದಿಗಳ ಮಹಿಮೆ ಮತ್ತು ಗಂಗೆಯ ಮಹಿಮೆ

ನಾರದರು ಧರ್ಮಜನಿಗೆ ಹೇಳುತ್ತಾರೆ :

“ಯುಧಿಷ್ಠಿರ! ಪುಲಸ್ತ್ಯರು ಭೀಷ್ಮನಿಗೆ ಹೇಳಿದ ಪುಣ್ಯತೀರ್ಥಗಳ ಪ್ರವಚನವನ್ನು ಮುಂದುವರಿಸಿ ಹೇಳುತ್ತೇನೆ ; ತದೇಕಚಿತ್ತನಾಗಿ ಕೇಳು.

**ಅಥ ಸಂಧ್ಯಾಂ ಸಮಾಸಾದ್ಯ ಸಂವೇದ್ಯಂ ತೀರ್ಥಮುತ್ತಮಮ್ ।**
**ಉಪಸ್ಪೃಶ್ಯ ನರೋ ವಿದ್ಯಾಂ ಲಭತೇ ನಾತ್ರ ಸಂಶಯಃ ॥೧॥**

ಹಿಂದೆ ಹೇಳಿದಂತೆ ಲಲಿತಿಕಾಕ್ಷೇತ್ರದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸಂಧ್ಯಾಕ್ಷೇತ್ರಕ್ಕೆ ಹೋಗಿ ಅಲ್ಲಿರುವ ಉತ್ತಮೋತ್ತಮವಾದ ಸಂವೇದ್ಯತೀರ್ಥದಲ್ಲಿ ಸ್ನಾನಮಾಡುವುದರಿಂದ ವಿದ್ಯಾಲಾಭವನ್ನು ಪಡೆಯುತ್ತಾನೆ. ಇದರಲ್ಲಾವ ಸಂಶಯವೂ ಇಲ್ಲ.

**ರಾಮಸ್ಯ ಚ ಪ್ರಭಾವೇಣ ತೀರ್ಥಂ ರಾಜನ್ಕೃತಂ ಪುರಾ ।**
**ತಲ್ಲೌಹಿತ್ಯಂ ಸಮಾಸಾದ್ಯ ವಿನ್ದ್ಯಾದ್ಬಹುಸುವರ್ಣಕಮ್ ॥೨॥**

ಸಂಧ್ಯಾಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಪರಶುರಾಮನ ಪ್ರಭಾವದಿಂದ ಪ್ರಾದುರ್ಭೂತವಾದ ಲೌಹಿತ್ಯ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ಬಹುಸುವರ್ಣವನ್ನು ದಾನಮಾಡಿದ ಫಲವು ಲಭ್ಯವಾಗುತ್ತದೆ.

**ಕರತೋಯಾಂ ಸಮಾಸಾದ್ಯ ತ್ರಿರಾತ್ರೋಪೋಷಿತೋ ನರಃ ।**
**ಅಶ್ವಮೇಧಮವಾಪ್ನೋತಿ ಪ್ರಜಾಪತಿಕೃತೋ ವಿಧಿಃ ॥೩॥**

ಲೌಹಿತ್ಯತೀರ್ಥಕ್ಷೇತ್ರದ ಯಾತ್ರೆಯಾದನಂತರ ಯಾತ್ರಿಕನು ಕರತೋಯಾ ಎಂಬ ಪುಣ್ಯನದಿಯ ತೀರಕ್ಕೆ ಪ್ರಯಾಣಮಾಡಬೇಕು. ಆ ನದಿಯ ತೀರದಲ್ಲಿ ಮೂರು ದಿವಸಗಳು ಅನುಷ್ಠಾನಪರನಾಗಿ ಉಪವಾಸದಿಂದ ಕಳೆದಲ್ಲಿ ಅಶ್ವಮೇಧಯಾಗಮಾಡಿದ ಫಲವು ಲಭ್ಯವಾಗುವುದೆಂದು ಬ್ರಹ್ಮನೇ ನಿಯಮಮಾಡಿರುವನು.

**ಗಙ್ಗಾಯಾಸ್ತತ್ರ ರಾಜೇನ್ದ್ರ ಸಾಗರಸ್ಯ ಚ ಸಂಗಮೇ ।**
**ಅಶ್ವಮೇಧಂ ದಶಗುಣಂ ಪ್ರವದನ್ತಿ ಮನೀಷಿಣಃ ॥೪॥**

ಕರತೋಯಾನದಿಯಲ್ಲಿ ಸ್ನಾನಾನುಷ್ಠಾನಗಳನ್ನು ಮುಗಿಸಿಕೊಂಡು ಮುಂದೆ ಗಂಗಾ-ಸಾಗರಸಂಗಮಸ್ಥಾನಕ್ಕೆ ಪ್ರಯಾಣಮಾಡಬೇಕು. ಗಂಗಾ-ಸಾಗರಸಂಗಮದಲ್ಲಿ ಸ್ನಾನಮಾಡುವುದರಿಂದ ಹತ್ತು ಅಶ್ವಮೇಧಯಾಗಗಳನ್ನು ಮಾಡಿದ ಫಲವು ಲಭ್ಯವಾಗುವುದೆಂದು ತಿಳಿದವರು ಹೇಳುತ್ತಾರೆ.

**ಗಙ್ಗಾಯಾಸ್ತ್ವಪರಂ ಪಾರಂ ಪ್ರಾಪ್ಯ ಯಃ ಸ್ನಾತಿ ಮಾನವಃ ।**
**ತ್ರಿರಾತ್ರಮುಷಿತೋ ರಾಜನ್ಸರ್ವಪಾಪೈಃ ಪ್ರಮುಚ್ಯತೇ ॥೫॥**

ಗಂಗಾನದಿಯನ್ನು ದಾಟಿ ಆಚೆಯ ತೀರಪ್ರದೇಶದಲ್ಲಿ ಸ್ನಾನಮಾಡಿ

ಕರ್ಮಾನುಷ್ಠಾನಗಳನ್ನು ಮಾಡುತ್ತಾ ಮೂರು ರಾತ್ರಿಗಳನ್ನು ಕಳೆಯುವವನು ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

**ತತೋ ವೈತರಣೀಂ ಗಚ್ಛೇತ್ಸರ್ವಪಾಪಪ್ರಮೋಚನೀಮ್ ।**
**ವಿರಜಂ ತೀರ್ಥಮಾಸಾದ್ಯ ವಿರಾಜತಿ ಯಥಾ ಶಶೀ ॥೬॥**

**ಪ್ರತರೇಚ್ಚ ಕುಲಂ ಪುಣ್ಯಂ ಸರ್ವಪಾಪಂ ವ್ಯಪೋಹತಿ ।**
**ಗೋಸಹಸ್ರಫಲಂ ಲಬ್ಧ್ವಾ ಪುನಾತಿ ಸ್ವಕುಲಂ ನರಃ ॥೭॥**

ಗಂಗಾನದಿಯ ಯಾತ್ರೆಯನ್ನು ಮುಗಿಸಿಕೊಂಡನಂತರ ವೈತರಣೀ ನದಿಯ ತೀರಕ್ಕೆ ಪ್ರಯಾಣಮಾಡಬೇಕು. ವೈತರಣೀನದಿಯಲ್ಲಿ ಸ್ನಾನ ಮಾಡುವುದರಿಂದ ಸಕಲಪಾಪಗಳೂ ಪರಿಹಾರವಾಗುವುವು. ಅಲ್ಲಿಂದ ಮುಂದೆ ವಿರಜತೀರ್ಥಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ಯಾತ್ರಿಕನು ಶಶಿಯಂತೆ ವಿರಾಜಮಾನನಾಗುತ್ತಾನೆ. ಯಾತ್ರಿಕನ ವಂಶವೂ ಉದ್ಧಾರವಾಗುತ್ತದೆ ಮತ್ತು ಯಾತ್ರಿಕನು ಸಕಲ ಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಒಂದು ಸಾವಿರ ಗೋವುಗಳನ್ನು ದಾನಮಾಡಿದ ಪುಣ್ಯವೂ ಲಭ್ಯವಾಗುತ್ತದೆ.

**ಶೋಣಸ್ಯ ಜ್ಯೋತಿರಥ್ಯಾಯಾಃ ಸಂಗಮೇ ನಿಯತಃ ಶುಚಿಃ ।**
**ತರ್ಪಯಿತ್ವಾ ಪಿತೄನ್ದೇವಾನಗ್ನಿಷ್ಟೋಮಫಲಂ ಲಭೇತ್ ॥೮॥**

ವಿರಜತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಶೋಣ ಮತ್ತು ಜ್ಯೋತಿರಥ್ಯಾನದಿಗಳ ಸಂಗಮಸ್ಥಾನಕ್ಕೆ ಪ್ರಯಾಣಮಾಡಬೇಕು. ಆ ಸಂಗಮಸ್ಥಾನದಲ್ಲಿ ಸ್ನಾನಮಾಡಿ ಶುಚೀಭೂತನಾಗಿ ದೇವ-ಪಿತೃಗಳನ್ನು ಅರ್ಚಿಸುವವನು ಅಗ್ನಿಷ್ಟೋಮಯಾಗಮಾಡಿದ ಫಲವನ್ನು ಪಡೆಯುತ್ತಾನೆ.

**ಶೋಣಸ್ಯ ನರ್ಮದಾಯಾಶ್ಚ ಪ್ರಭವೇ ಕುರುನನ್ದನ ।**
**ವಂಶಗುಲ್ಮ ಉಪಸ್ಪೃಶ್ಯ ವಾಜಿಮೇಧಫಲಂ ಲಭೇತ್ ॥೯॥**

ಅಲ್ಲಿಂದ ಮುಂದೆ ಶೋಣ ಮತ್ತು ನರ್ಮದಾನದಿಗಳ ಮೂಲಸ್ಥಾನವಾದ ವಂಶಗುಲ್ಮವೆಂಬ ಪುಣ್ಯಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ವಂಶಗುಲ್ಮ

ತೀರ್ಥದಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

**ಋಷಭಂ ತೀರ್ಥಮಾಸಾದ್ಯ ಕೋಸಲಾಯಾಂ ನರಾಧಿಪ ।**
**ವಾಜಪೇಯಮವಾಪ್ನೋತಿ ತ್ರಿರಾತ್ರೋಪೋಷಿತೋ ನರಃ ।**
**ಗೋಸಹಸ್ರಫಲಂ ವಿನ್ದ್ಯಾತ್ಕುಲಂ ಚೈವ ಸಮುದ್ಧರೇತ್ ॥೧೦॥**

ಅಲ್ಲಿಂದ ಮುಂದೆ ಅಯೋಧ್ಯೆಯಲ್ಲಿರುವ ಋಷಭತೀರ್ಥಕ್ಕೆ ಪ್ರಯಾಣಮಾಡಬೇಕು. ಆ ಋಷಭತೀರ್ಥದಲ್ಲಿ ಸ್ನಾನಮಾಡಿ ಅನುಷ್ಠಾನ ಪರನಾಗಿ ಮೂರು ರಾತ್ರಿಗಳು ಉಪವಾಸದಿಂದ ಕಳೆಯುವುದರಿಂದ ವಾಜಪೇಯಯಾಗವನ್ನು ಮಾಡಿದ ಮತ್ತು ಸಹಸ್ರಗೋವುಗಳನ್ನು ದಾನಮಾಡಿದ ಫಲವು ಲಭ್ಯವಾಗುವುದಲ್ಲದೇ–ಯಾತ್ರಿಕನ ವಂಶವೂ ಉದ್ಧಾರವಾಗುತ್ತದೆ.

**ಕೋಸಲಾಂ ತು ಸಮಾಸಾದ್ಯ ಕಾಲತೀರ್ಥಮುಪಸ್ಪೃಶೇತ್ ।**
**ವೃಷಭೈಕಾದಶಫಲಂ ಲಭತೇ ನಾತ್ರ ಸಂಶಯಃ ॥೧೧॥**

ಅಲ್ಲಿಂದ ಮುಂದೆ ಅದೇ ಕೋಸಲಾಕ್ಷೇತ್ರದಲ್ಲಿರುವ ಕಾಲತೀರ್ಥಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯತೀರ್ಥದಲ್ಲಿ ಸ್ನಾನಮಾಡುವುದರಿಂದ ಹನ್ನೊಂದು ವೃಷಭಗಳನ್ನು ದಾನಮಾಡಿದ ಪುಣ್ಯವು ಲಭ್ಯವಾಗುತ್ತದೆ.

**ಪುಷ್ಪವತ್ಯಾಮುಪಸ್ಪೃಶ್ಯ ತ್ರಿರಾತ್ರೋಪೋಷಿತೋ ನರಃ ।**
**ಗೋಸಹಸ್ರಫಲಂ ಲಬ್ಧ್ವಾ ಪುನಾತಿ ಸ್ವಕುಲಂ ನೃಪ ॥೧೨॥**

ಅಲ್ಲಿಂದ ಮುಂದೆ ಪುಷ್ಪವತೀ ಎಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು. ಪುಷ್ಪವತೀತೀರ್ಥದಲ್ಲಿ ಸ್ನಾನಮಾಡಿ ಅನುಷ್ಠಾನಪರನಾಗಿ ಮೂರು ರಾತ್ರಿಗಳು ಉಪವಾಸದಿಂದ ಕಳೆಯುವುದರಿಂದ ಯಾತ್ರಿಕನ ವಂಶವೇ ಉದ್ಧಾರವಾಗುತ್ತದೆ ಮತ್ತು ಯಾತ್ರಿಕನಿಗೆ ಒಂದು ಸಾವಿರ ಗೋವುಗಳನ್ನು ದಾನಮಾಡಿದ ಫಲವು ಲಭ್ಯವಾಗುತ್ತದೆ.

**ತತೋ ಬದರಿಕಾತೀರ್ಥೇ ಸ್ನಾತ್ವಾ ಭರತಸತ್ತಮ ।**
**ದೀರ್ಘಮಾಯುರವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥೧೩॥**

ಪುಷ್ಪವತೀತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ

ಯಾತ್ರಿಕನು ಬದರಿಕಾತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಬದರಿಕಾ ತೀರ್ಥದಲ್ಲಿ ಸ್ನಾನಮಾಡುವುದರಿಂದ ದೀರ್ಘಾಯುಷ್ಯವುಂಟಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಸ್ವರ್ಗಲೋಕವೂ ಪ್ರಾಪ್ತವಾಗುತ್ತದೆ.

ಅನಂತರ ಚಂಪಾಕ್ಷೇತ್ರದಲ್ಲಿರುವ ಭಾಗೀರಥೀನದಿಯಲ್ಲಿ ತರ್ಪಣ ಮಾಡಿ, ದಂಡಕ್ಷೇತ್ರಕ್ಕೆ ಹೋಗುವುದರಿಂದ ಸಹಸ್ರಗೋವುಗಳನ್ನು ದಾನ ಮಾಡಿದ ಫಲವು ಲಭಿಸುತ್ತದೆ. ಬಳಿಕ ಪುಣ್ಯಶೋಭಿತವಾದ ಲಪೇಟಿಕಾ ತೀರ್ಥದಲ್ಲಿ ಸ್ನಾನಮಾಡುವುದರಿಂದ ವಾಜಪೇಯಯಾಗದ ಫಲವು ಲಭಿಸು ತ್ತದೆ ಮತ್ತು ಯಾತ್ರಿಕನು ಸರ್ವದೇವತೆಗಳಿಂದಲೂ ಪೂಜ್ಯನಾಗುತ್ತಾನೆ.

**ತತೋ ಮಹೇನ್ದ್ರಮಾಸಾದ್ಯ ಜಾಮದಗ್ನ್ಯನಿಷೇವಿತಮ್ ।**
**ರಾಮತೀರ್ಥೇ ನರಃ ಸ್ನಾತ್ವಾ ಅಶ್ವಮೇಧಫಲಂ ಲಭೇತ್ ॥೧೬॥**

ಲಪೇಟಿಕಾಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಪರಶುರಾಮನಿಂದ ಸಂಸೇವ್ಯಮಾನವಾದ ಮಹೇಂದ್ರಪರ್ವತಕ್ಕೆ ಪ್ರಯಾಣಮಾಡಬೇಕು. ಮಹೇಂದ್ರಪರ್ವತದಲ್ಲಿರುವ ಪುಣ್ಯತಮವಾದ ರಾಮತೀರ್ಥದಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

**ಮತಙ್ಗಸ್ಯ ತು ಕೇದಾರಸ್ತತ್ರೈವ ಕುರುನನ್ದನ ।**
**ತತ್ರ ಸ್ನಾತ್ವಾ ಕುರುಶ್ರೇಷ್ಠ ಗೋಸಹಸ್ರಫಲಂ ಲಭೇತ್ ॥೧೭॥**

ಆ ಮಹೇಂದ್ರಪರ್ವತದಲ್ಲಿಯೇ ಮತಂಗಮಹರ್ಷಿಯ ಕೇದಾರ ವೆಂಬ ಪುಣ್ಯತೀರ್ಥವೂ ಇದೆ. ಆ ಪುಣ್ಯತೀರ್ಥದಲ್ಲಿ ಸ್ನಾನಮಾಡುವುದರಿಂದ ಸಹಸ್ರಗೋವುಗಳನ್ನು ದಾನಮಾಡಿದ ಪುಣ್ಯವು ಲಭ್ಯವಾಗುತ್ತದೆ.

**ಶ್ರೀಪರ್ವತಂ ಸಮಾಸಾದ್ಯ ನದೀತೀರಮುಪಸ್ಪೃಶೇತ್ ।**
**ಅಶ್ವಮೇಧಮವಾಪ್ನೋತಿ ಪೂಜಯಿತ್ವಾ ವೃಷಧ್ವಜಮ್ ॥೧೮॥**

ಮಹೇಂದ್ರಪರ್ವತದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಶ್ರೀಶೈಲಕ್ಕೆ ಪ್ರಯಾಣಮಾಡಬೇಕು. ಆ ಶ್ರೀಶೈಲದಲ್ಲಿರುವ ಪುಣ್ಯನದಿಯಲ್ಲಿ ಸ್ನಾನಮಾಡಿ ಅಲ್ಲಿರುವ ಪರಶಿವಮೂರ್ತಿಯನ್ನು ಆರಾಧಿ ಸುವುದರಿಂದ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

ಶ್ರೀಶೈಲದ ಶಿಖರದಲ್ಲಿ ಪಾರ್ವತೀಸಮೇತನಾದ ಪರಮೇಶ್ವರನ ದಿವ್ಯಸಾನ್ನಿಧ್ಯ ವಿದೆ. ಬ್ರಹ್ಮಸಮೇತರಾದ ಸಕಲದೇವತೆಗಳೂ ಸದಾಕಾಲದಲ್ಲಿಯೂ ಅಲ್ಲಿರು ತ್ತಾರೆ.

**ತತ್ರ ದೇವಹ್ರದೇ ಸ್ನಾತ್ವಾ ಶುಚಿಃ ಪ್ರಯತಮಾನಸಃ ।**
**ಅಶ್ವಮೇಧಮವಾಪ್ನೋತಿ ಪರಾಂ ಸಿದ್ಧಿಂ ಚ ಗಚ್ಛತಿ ॥೨೦॥**

ಅಲ್ಲಿರುವ ದೇವಕುಂಡದಲ್ಲಿ ಏಕಾಗ್ರಚಿತ್ತನಾಗಿ ಸ್ನಾನಮಾಡುವುದರಿಂದ ಅಶ್ವಮೇಧಯಾಗವನ್ನು ಮಾಡಿದ ಪುಣ್ಯವು ಲಭ್ಯವಾಗುತ್ತದೆ ಮತ್ತು ಸಕಲಸಿದ್ಧಿಗಳೂ ಉಂಟಾಗುತ್ತವೆ.

**ಋಷಭಂ ಪರ್ವತಂ ಗತ್ವಾ ಪಾಣ್ಡ್ಯೇ ದೈವತಪೂಜಿತಮ್ ।**
**ವಾಜಪೇಯಮವಾಪ್ನೋತಿ ನಾಕಪೃಷ್ಠೇ ಚ ಮೋದತೇ ॥೨೧॥**

ಶ್ರೀಶೈಲದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಪಾಂಡ್ಯ ದೇಶದಲ್ಲಿರುವ ಋಷಭಪರ್ವತಕ್ಕೆ ಪ್ರಯಾಣಮಾಡಬೇಕು. ಋಷಭ ಪರ್ವತದ ಯಾತ್ರೆಯಿಂದ ವಾಜಪೇಯಯಾಗಮಾಡಿದ ಫಲವು ಲಭ್ಯವಾಗು ತ್ತದೆ ಮತ್ತು ಅವಸಾನಾನಂತರದಲ್ಲಿ ಸ್ವರ್ಗಸುಖವೂ ಲಭಿಸುತ್ತದೆ.

**ತತೋ ಗಚ್ಛೇತ ಕಾವೇರೀಂ ವೃತಾಮಪ್ಸರಸಾಂ ಗಣೈಃ ।**
**ತತ್ರ ಸ್ನಾತ್ವಾ ನರೋ ರಾಜನ್ಗೋಸಹಸ್ರಫಲಂ ಲಭೇತ್ ॥೨೨॥**

ಋಷಭಪರ್ವತದ ಯಾತ್ರೆಯನ್ನು ಮುಗಿಸಿಕೊಂಡು ಅಪ್ಸರೆಯರಿಂದ ಸಂಸೇವ್ಯಮಾನವಾದ ಕಾವೇರೀನದೀತೀರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯನದಿಯಲ್ಲಿ ಸ್ನಾನಮಾಡುವುದರಿಂದ ಸಹಸ್ರಗೋವುಗಳನ್ನು ದಾನ ಮಾಡಿದ ಫಲವು ಲಭ್ಯವಾಗುತ್ತದೆ.

**ತತಸ್ತೀರೇ ಸಮುದ್ರಸ್ಯ ಕನ್ಯಾತೀರ್ಥಮುಪಸ್ಪೃಶೇತ್ ।**
**ತತ್ರೋಪಸ್ಪೃಶ್ಯ ರಾಜೇನ್ದ್ರ ಸರ್ವಪಾಪೈಃ ಪ್ರಮುಚ್ಯತೇ ॥೨೩॥**

ಕಾವೇರೀನದಿಯಲ್ಲಿ ಸ್ನಾನಮಾಡಿದನಂತರ ಸಮುದ್ರತೀರದಲ್ಲಿರುವ ಕನ್ಯಾತೀರ್ಥಕ್ಷೇತ್ರಕ್ಕೆ (ಕನ್ಯಾಕುಮಾರೀ) ಪ್ರಯಾಣಮಾಡಬೇಕು. ಕನ್ಯಾ ತೀರ್ಥದಲ್ಲಿ ಸ್ನಾನಮಾಡುವುದರಿಂದ ಯಾತ್ರಿಕನು ಸರ್ವಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

ಯುಧಿಷ್ಠಿರ! ಕನ್ಯಾತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಗೋಕರ್ಣಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಸಮುದ್ರಮಧ್ಯದಲ್ಲಿರುವ ಆ ಗೋಕರ್ಣಕ್ಷೇತ್ರವು ತ್ರಿಲೋಕಪ್ರಸಿದ್ಧವಾದುದು. ಆ ಕ್ಷೇತ್ರದಲ್ಲಿ ಬ್ರಹ್ಮಾದಿದೇವತೆಗಳೂ, ತಪೋಧನರಾದ ಮಹರ್ಷಿಗಳೂ, ಭೂತಗಣಗಳೂ, ಯಕ್ಷ-ಪಿಶಾಚರೂ, ಕಿನ್ನರ-ಕಿಂಪುರುಷರೂ, ಸಿದ್ಧ-ಚಾರಣ ಗಂಧರ್ವರೂ, ನಾಗ-ಪನ್ನಗರೂ, ನದೀ-ನದ-ಸರೋವರಗಳ ಮತ್ತು ಸಮುದ್ರ-ಪರ್ವತಗಳ ಅಧಿದೇವತೆಗಳೆಲ್ಲರೂ ಸರ್ವಕಾಲದಲ್ಲಿಯೂ ಉಮಾಕಾಂತನಾದ ಪರಶಿವನ ಪೂಜೆಯಲ್ಲಿ ನಿರತರಾಗಿರುತ್ತಾರೆ.

**ತತ್ರೇಶಾನಂ ಸಮಭ್ಯರ್ಚ್ಯ ತ್ರಿರಾತ್ರೋಪೋಷಿತೋ ನರಃ ।**
**ಅಶ್ವಮೇಧಮವಾಪ್ನೋತಿ ಗಾಣಪತ್ಯಂ ಚ ವಿನ್ದತಿ ।**
**ಉಷ್ಯ ದ್ವಾದಶರಾತ್ರಂ ತು ಪೂತಾತ್ಮಾ ಚ ಭವೇನ್ನರಃ ॥೨೭॥**

ಆ ಗೋಕರ್ಣಕ್ಷೇತ್ರದಲ್ಲಿ ಮೂರು ದಿನಗಳು ಉಪವಾಸವ್ರತದಿಂದಿದ್ದು ಮಹೇಶನನ್ನು ಭಕ್ತಿಪೂರ್ವಕವಾಗಿ ಪೂಜಿಸುವವನಿಗೆ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಜನ್ಮಾಂತರದಲ್ಲಿ ಗಾಣಪತ್ಯಸ್ಥಾನವೂ ಪ್ರಾಪ್ತವಾಗುತ್ತದೆ. ಹನ್ನೆರಡು ದಿವಸಗಳು ಅನುಷ್ಠಾನಪರನಾಗಿ ಆ ದಿವ್ಯಕ್ಷೇತ್ರದಲ್ಲಿರುವುದರಿಂದ ಸಕಲಪಾಪಗಳೂ ಪರಿಹಾರವಾಗುತ್ತವೆ.

**ತತ ಏವ ಚ ಗಾಯತ್ರ್ಯಾಃ ಸ್ಥಾನಂ ತ್ರೈಲೋಕ್ಯಪೂಜಿತಮ್ ।**
**ತ್ರಿರಾತ್ರಮುಷಿತಸ್ತತ್ರ ಗೋಸಹಸ್ರಫಲಂ ಲಭೇತ್ ॥೨೮॥**

**ನಿದರ್ಶನಂ ಚ ಪ್ರತ್ಯಕ್ಷಂ ಬ್ರಾಹ್ಮಣಾನಾಂ ನರಾಧಿಪ ।**
**ಗಾಯತ್ರೀಂ ಪಠತೇ ಯಸ್ತು ಯೋನಿಸಂಕರಜಸ್ತಥಾ ॥೨೯॥**

**ಗಾಥಾ ಚ ಗಾಥಿಕಾ ಚಾಪಿ ತಸ್ಯ ಸಮ್ಪದ್ಯತೇ ನೃಪ ।**
**ಅಬ್ರಾಹ್ಮಣಸ್ಯ ಸಾವಿತ್ರೀಂ ಪಠತಸ್ತು ಪ್ರಣಶ್ಯತಿ ॥೩೦॥**

ದಿವ್ಯಕ್ಷೇತ್ರವಾದ ಗೋಕರ್ಣದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ತ್ರಿಲೋಕಪ್ರಸಿದ್ಧವಾದ ಗಾಯತ್ರೀಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು. ಆ ಪುಣ್ಯಕ್ಷೇತ್ರದಲ್ಲಿ ಅನುಷ್ಠಾನಪರನಾಗಿ ಮೂರು ದಿವಸಗಳು ಕಳೆಯುವುದರಿಂದ ಒಂದು ಸಾವಿರ ಗೋವುಗಳನ್ನು ದಾನಮಾಡಿದ

ಫಲವು ಪ್ರಾಪ್ತವಾಗುತ್ತದೆ. ಯುಧಿಷ್ಠಿರ! ಆ ಗಾಯತ್ರೀಕ್ಷೇತ್ರದಲ್ಲಿ ಮತ್ತೊಂದು ವೈಶಿಷ್ಟ್ಯವನ್ನೂ ನಾವು ಕಾಣಬಹುದಾಗಿದೆ. ಬ್ರಾಹ್ಮಣತ್ವವನ್ನು ನಿಶ್ಚಯಿಸಲು ಅದೊಂದು ಪ್ರತ್ಯಕ್ಷವಾದ ನಿದರ್ಶನಸ್ಥಳವಾಗಿದೆ. ಸಂಕರಯೋನಿಯಲ್ಲಿ ಹುಟ್ಟಿರುವ ಬ್ರಾಹ್ಮಣನು ಅಲ್ಲಿ ಗಾಯತ್ರೀಮಂತ್ರವನ್ನು ಹೇಳಿದರೆ ಸ್ವರಾದಿಗಳು ಸ್ಖಾಲಿತ್ಯಹೊಂದಿ ಅದು ಕೇವಲ ಶ್ಲೋಕರೂಪವಾಗುತ್ತದೆ. ಬ್ರಾಹ್ಮಣನಲ್ಲದವನು ಗಾಯತ್ರಿಯನ್ನು ಪಠಿಸಿದರೆ ಅದು ಲುಪ್ತವೇ ಆಗುತ್ತದೆ. (ಫಲಿಸುವುದಿಲ್ಲ.)

**ಸಂವರ್ತಸ್ಯ ತು ವಿಪ್ರರ್ಷೇರ್ವಾಪೀಮಾಸಾದ್ಯ ದುರ್ಲಭಾಮ್ ।**
**ರೂಪಸ್ಯ ಭಾಗೀ ಭವತಿ ಸುಭಗಶ್ಚ ಪ್ರಜಾಯತೇ ॥೩೧॥**

ಗಾಯತ್ರೀಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಬ್ರಹ್ಮರ್ಷಿಯಾದ ಸಂವರ್ತನ ಅತಿದುರ್ಲಭವಾದ ಉದಪಾನ ವಿರುವ ಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಉದಪಾನದಲ್ಲಿ ಸ್ನಾನಮಾಡು ವುದರಿಂದ ಶರೀರದ ಕಾಂತಿಯು ಹೆಚ್ಚುವುದಲ್ಲದೇ–ಅವನು ಸೌಭಾಗ್ಯ ಶಾಲಿಯೂ ಆಗುತ್ತಾನೆ.

**ತತೋ ವೇಣಾಂ ಸಮಾಸಾದ್ಯ ತ್ರಿರಾತ್ರೋಪೋಷಿತೋ ನರಃ ।**
**ಮಯೂರಹಂಸಸಂಯುಕ್ತಂ ವಿಮಾನಂ ಲಭತೇ ನರಃ ॥೩೨॥**

ಅನಂತರದಲ್ಲಿ ವೇಣಾ (ಕೃಷ್ಣಾ) ನದಿಯ ಕಡೆಗೆ ಪ್ರಯಾಣಮಾಡ ಬೇಕು. ಆ ನದಿಯಲ್ಲಿ ಸ್ನಾನಮಾಡುತ್ತಾ ಅನುಷ್ಠಾನಪರನಾಗಿ ಮೂರು ರಾತ್ರಿಗಳು ಉಪವಾಸದಿಂದ ಕಳೆದಲ್ಲಿ ಯಾತ್ರಿಕನು ಅವಸಾನಾನಂತರದಲ್ಲಿ ಮಯೂರ-ಹಂಸಗಳಿಂದ ಯುಕ್ತವಾದ ವಿಮಾನದಲ್ಲಿ ಕುಳಿತು ಸ್ವರ್ಗಾ ರೋಹಣಮಾಡುತ್ತಾನೆ.

**ತತೋ ಗೋದಾವರೀಂ ಪ್ರಾಪ್ಯ ನಿತ್ಯಂ ಸಿದ್ಧನಿಷೇವಿತಾಮ್ ।**
**ಗವಾಂ ಮೇಧಮವಾಪ್ನೋತಿ ವಾಸುಕೇರ್ಲೋಕಮುತ್ತಮಮ್ ॥೩೩॥**
**ವೇಣಾಯಾಃ ಸಂಗಮೇ ಸ್ನಾತ್ವಾ ವಾಜಿಮೇಧಫಲಂ ಲಭೇತ್ ।**
**ವರದಾಸಂಗಮೇ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೩೪॥**

ವೇಣಾನದಿಯ ಸ್ನಾನವನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ

ಸಿದ್ಧರಿಂದ ಸಂಸೇವ್ಯಮಾನವಾದ ಗೋದಾವರೀತೀರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯನದಿಯಲ್ಲಿ ಸ್ನಾನಮಾಡುವುದರಿಂದ ಗೋಮೇಧಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ವಾಸುಕಿಯ ಲೋಕವು ಸಿಕ್ಕುತ್ತದೆ. ವೇಣಾನದಿಯ ಸಂಗಮಸ್ಥಾನದಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧಯಾಗವನ್ನು ಮಾಡಿದ ಫಲವೂ ಮತ್ತು ವರದಾನದಿಯ ಸಂಗಮಸ್ಥಾನದಲ್ಲಿ ಸ್ನಾನಮಾಡುವುದರಿಂದ ಸಹಸ್ರಧೇನುಗಳನ್ನು ದಾನಮಾಡಿದ ಫಲವೂ ಲಭ್ಯವಾಗುತ್ತದೆ.

**ಬ್ರಹ್ಮಸ್ಥಾನಂ ಸಮಾಸಾದ್ಯ ತ್ರಿರಾತ್ರೋಪೋಷಿತೋ ನರಃ ।**
**ಗೋಸಹಸ್ರಫಲಂ ವಿನ್ದ್ಯಾತ್ಸ್ವರ್ಗಲೋಕಂ ಚ ಗಚ್ಛತಿ ॥೩೫॥**

ಗೋದಾವರೀಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಬ್ರಹ್ಮಸ್ಥಾನಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ದಿವ್ಯಕ್ಷೇತ್ರದಲ್ಲಿ ಮೂರು ರಾತ್ರಿಗಳು ನಿಯಮಾನುಷ್ಠಾನದಿಂದಿದ್ದು ಉಪವಾಸಮಾಡುವುದರಿಂದ ಸಹಸ್ರಗೋವುಗಳನ್ನು ದಾನಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಅವಸಾನಾನಂತರದಲ್ಲಿ ಸ್ವರ್ಗಲೋಕವೂ ಲಭಿಸುತ್ತದೆ.

**ಕುಶಪ್ಲವನಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।**
**ತ್ರಿರಾತ್ರಮುಷಿತಃ ಸ್ನಾತ್ವಾ ಅಶ್ವಮೇಧಫಲಂ ಲಭೇತ್ ॥೩೬॥**

ಅಲ್ಲಿಂದ ಮುಂದೆ ಕುಶಪ್ಲವನತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡುತ್ತಾ ಬ್ರಹ್ಮಚರ್ಯವ್ರತನಿಷ್ಠನಾಗಿ, ಜಿತೇಂದ್ರಿಯನಾಗಿ, ಅನುಷ್ಠಾನಪರನಾಗಿ ಮೂರು ರಾತ್ರಿಗಳನ್ನು ಆ ಕ್ಷೇತ್ರದಲ್ಲಿ ಕಳೆಯುವುದರಿಂದ ಅಶ್ವಮೇಧಯಾಗಮಾಡಿದ ಫಲವು ಲಭ್ಯವಾಗುತ್ತದೆ.

**ತತೋ ದೇವಹ್ರದೇಽರಣ್ಯೇ ಕೃಷ್ಣವೇಣಾಜಲೋದ್ಭವೇ ।**
**ಜಾತಿಸ್ಮರಹ್ರದೇ ಸ್ನಾತ್ವಾ ಭವೇಜ್ಜಾತಿಸ್ಮರೋ ನರಃ ॥೩೭॥**

**ಯತ್ರ ಕ್ರತುಶತೈರಿಷ್ಟ್ವಾ ದೇವರಾಜೋ ದಿವಂ ಗತಃ ।**
**ಅಗ್ನಿಷ್ಟೋಮಫಲಂ ವಿನ್ದ್ಯಾದ್ಗಮನಾದೇವ ಭಾರತ ॥೩೮॥**

ಅನಂತರದಲ್ಲಿ ಪರಮಪವಿತ್ರವಾದ ಕೃಷ್ಣವೇಣಾನದಿಯ ನೀರಿನಿಂದ

ಉದ್ಭೂತವಾದ, ರಮ್ಯವಾದ ಕಾಡಿನಲ್ಲಿರುವ ದೇವಹ್ರದದಲ್ಲಿಯೂ ಮತ್ತು ಅದರ ಸಮೀಪದಲ್ಲಿರುವ ಜಾತಿಸ್ಮರಹ್ರದದಲ್ಲಿಯೂ ಸ್ನಾನಮಾಡುವುದರಿಂದ ಜನ್ಮಾಂತರದ ಸ್ಮರಣೆಯುಂಟಾಗುತ್ತದೆ. ಆ ಪವಿತ್ರಕ್ಷೇತ್ರದಲ್ಲಿಯೇ ದೇವೇಂದ್ರನು ನೂರು ಅಶ್ವಮೇಧಯಾಗಗಳನ್ನು ಮಾಡಿ ಶತಕ್ರತುವೆಂಬ ಹೆಸರು ಪಡೆದು ಸ್ವರ್ಗಲೋಕಕ್ಕೆ ತೆರಳಿದನು. ಯುಧಿಷ್ಠಿರ! ಆ ಪುಣ್ಯಸ್ಥಳಕ್ಕೆ ಪ್ರವೇಶಮಾಡುವುದರಿಂದಲೇ ಅಗ್ನಿಷ್ಟೋಮಯಾಗವನ್ನು ಮಾಡಿದ ಫಲವು ಲಭ್ಯವಾಗುತ್ತದೆ.

**ಸರ್ವದೇವಹ್ರದೇ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೬೯॥**

ಆ ಕ್ಷೇತ್ರದಲ್ಲಿಯೇ ಸರ್ವದೇವಹ್ರದವೆಂಬ ಮತ್ತೊಂದು ತೀರ್ಥವಿದೆ. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ಸಹಸ್ರಗೋವುಗಳನ್ನು ದಾನ ಮಾಡಿದ ಫಲವು ಲಭ್ಯವಾಗುತ್ತದೆ.

**ತತೋಽವಾಪೀಂ ಮಹಾಪುಣ್ಯಾಂ ಪಯೋಷ್ಣೀಂ ಸರಿತಾಂ ವರಾಮ್ ।**
**ಪಿತೃದೇವಾರ್ಚನರತೋ ಗೋಸಹಸ್ರಫಲಂ ಲಭೇತ್ ॥೭೦॥**

ಅಲ್ಲಿಂದ ಮುಂದೆ ಮಹಾಪುಣ್ಯವತಿಯಾದ ಪಯೋಷ್ಣೀಸರಿತ್ತಿಗೆ ಪ್ರಯಾಣಮಾಡಬೇಕು. ಆ ನದಿಯಲ್ಲಿ ಸ್ನಾನಮಾಡಿ ದೇವ-ಪಿತೃಗಳನ್ನು ಯಥಾವಿಧಿಯಾಗಿ ಪೂಜಿಸುವವನು ಸಹಸ್ರಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ.

**ದಣ್ಡಕಾರಣ್ಯಮಾಸಾದ್ಯ ಪುಣ್ಯಂ ರಾಜನ್ನುಪಸ್ಪೃಶೇತ್ ।**
**ಗೋಸಹಸ್ರಫಲಂ ತಸ್ಯ ಸ್ನಾತಮಾತ್ರಸ್ಯ ಭಾರತ ॥೭೧॥**

ಅಲ್ಲಿಂದ ಮುಂದೆ ಯಾತ್ರಿಕನು ಸುಪ್ರಸಿದ್ಧವಾದ ದಂಡಕಾರಣ್ಯಕ್ಕೆ ಪ್ರಯಾಣಮಾಡಿ ಅಲ್ಲಿರುವ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಬೇಕು. ಅದರಿಂದ ಸಹಸ್ರಗೋವುಗಳನ್ನು ದಾನಮಾಡಿದ ಪುಣ್ಯವು ಲಭ್ಯವಾಗುತ್ತದೆ.

**ಶರಭಙ್ಗಾಶ್ರಮಂ ಗತ್ವಾ ಶುಕಸ್ಯ ಚ ಮಹಾತ್ಮನಃ ।**
**ನ ದುರ್ಗತಿಮವಾಪ್ನೋತಿ ಪುನಾತಿ ಚ ಕುಲಂ ನರಃ ॥೭೨॥**

ಅಲ್ಲಿಂದ ಮುಂದೆ ಶರಭಂಗಾಶ್ರಮಕ್ಕೂ ಮತ್ತು ಶುಕ್ರಾಶ್ರಮಕ್ಕೂ

ಪ್ರಯಾಣಮಾಡಬೇಕು. ಆ ಪುಣ್ಯಕ್ಷೇತ್ರಗಳ ಯಾತ್ರೆಯಿಂದ ಮಾನವನಿಗೆ ದುರ್ಗತಿಯುಂಟಾಗುವುದಿಲ್ಲ ಮತ್ತು ಯಾತ್ರಿಕನ ಕುಲವೂ ಪಾವನವಾಗುತ್ತದೆ.

**ತತಃ ಶೂರ್ಪಾರಕಂ ಗಚ್ಛೇಜ್ಜಾಮದಗ್ನ್ಯನಿಷೇವಿತಮ್ ।**
**ರಾಮತೀರ್ಥೇ ನರಃ ಸ್ನಾತ್ವಾ ವಿನ್ದ್ಯಾದ್ಬಹುಸುವರ್ಣಕಮ್ ॥೪೩॥**

ಯಾತ್ರಿಕನು ಅಲ್ಲಿಂದ ಮುಂದೆ ಜಮದಗ್ನಿಯ ಮಗನಾದ ಪರಶುರಾಮನ ಆಶ್ರಮಭೂಮಿಯಾಗಿದ್ದ ಶೂರ್ಪಾರಕಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಅಲ್ಲಿರುವ ರಾಮತೀರ್ಥದಲ್ಲಿ ಸ್ನಾನಮಾಡುವುದರಿಂದ ಬಹುಸುವರ್ಣವನ್ನು ದಾನಮಾಡಿದ ಫಲವು ಲಭ್ಯವಾಗುತ್ತದೆ.

**ಸಪ್ತಗೋದಾವರೇ ಸ್ನಾತ್ವಾ ನಿಯತೋ ನಿಯತಾಶನಃ ।**
**ಮಹತ್ಪುಣ್ಯಮವಾಪ್ನೋತಿ ದೇವಲೋಕಂ ಚ ಗಚ್ಛತಿ ॥೪೪॥**

ಆ ಕ್ಷೇತ್ರದಲ್ಲಿಯೇ ಇರುವ ಸಪ್ತಗೋದಾವರತೀರ್ಥದಲ್ಲಿ ನಿಯತಾಹಾರನಾಗಿ, ಅನುಷ್ಠಾನಪರನಾಗಿ ಸ್ನಾನಮಾಡುವುದರಿಂದ, ಯಾತ್ರಿಕನು ಮಹಾಪುಣ್ಯವನ್ನು ಪಡೆಯುತ್ತಾನೆ ಮತ್ತು ಅವಸಾನಾನಂತರದಲ್ಲಿ ದೇವಲೋಕಕ್ಕೆ ಹೋಗುತ್ತಾನೆ.

**ತತೋ ದೇವಪಥಂ ಗತ್ವಾ ನಿಯತೋ ನಿಯತಾಶನಃ ।**
**ದೇವಸತ್ರಸ್ಯ ಯತ್ಪುಣ್ಯಂ ತದೇವಾಪ್ನೋತಿ ಮಾನವಃ ॥೪೫॥**

ಅಲ್ಲಿಂದ ಮುಂದೆ ಯಾತ್ರಿಕನು ದೇವಪಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿ ನಿಯತಾಹಾರನಾಗಿ ಜಿತೇಂದ್ರಿಯನಾಗಿರುವುದರಿಂದ ದೇವಸತ್ರಯಾಗಮಾಡಿದ ಫಲವು ಲಭ್ಯವಾಗುತ್ತದೆ.

ಅಲ್ಲಿಂದ ಮುಂದೆ ಯಾತ್ರಿಕನು ಸುಪ್ರಸಿದ್ಧವಾದ ತುಂಗಕಾರಣ್ಯಕ್ಕೆ ಪ್ರಯಾಣಮಾಡಬೇಕು. ಯುಧಿಷ್ಠಿರ! ಆ ತುಂಗಕಾರಣ್ಯದಲ್ಲಿಯೇ ಹಿಂದೆ ಸಾರಸ್ವತಮಹರ್ಷಿಯು ಇತರ ಮುನಿಗಳಿಗೆ ವೇದಗಳನ್ನು ಅಧ್ಯಯನಮಾಡಿಸಿದನು. ಹೀಗೆ ಅಧ್ಯಯನಮಾಡಿಸಿದ ವೇದಗಳೆಲ್ಲವೂ ಕಾಲಾಂತರದಲ್ಲಿ ಋಷಿಗಳ ಸ್ಮೃತಿಪಥದಿಂದ ನಷ್ಟವಾದಾಗ ಅಂಗಿರಸನ ಮಗನಾದ ಆಂಗಿರಸನು ಆ ಋಷಿಗಳ ಉತ್ತರೀಯಗಳಲ್ಲಿ ಸೂಕ್ಷ್ಮರೂಪವನ್ನು ಹೊಂದಿ ಕುಳಿತು ಪ್ರಣವಪೂರ್ವಕವಾಗಿ ವೇದಗಳೆಲ್ಲವನ್ನೂ ಪಠಣಮಾಡಿದನು. ಒಡನೆಯೇ

ಋಷಿಗಳು ತಾವು ಹಿಂದೆ ಸಾರಸ್ವತಮಹರ್ಷಿಯಿಂದ ಅಧ್ಯಯನಮಾಡಿದ ವೇದಗಳೆಲ್ಲವನ್ನೂ ಪುನಃ ಪಡೆದರು. (ವೇದಗಳು ಜ್ಞಾಪಕಕ್ಕೆ ಬಂದುವು.) ಆ ತುಂಗಕಾರಣ್ಯದ ವಿಷಯದಲ್ಲಿ ಇನ್ನೂ ಒಂದು ಐತಿಹ್ಯವಿದೆ. ಋಷಿ-ಮಹರ್ಷಿಗಳು, ವರುಣ, ಅಗ್ನಿ, ಪ್ರಜಾಪತಿ, ನಾರಾಯಣರೂಪನಾದ ಹರಿ, ಮಹಾದೇವ, ಚತುರ್ಮುಖಬ್ರಹ್ಮಾ–ಇವರೆಲ್ಲರೂ ದೇವತೆಗಳೊಡನೆ ತುಂಗಕಾರಣ್ಯದಲ್ಲಿದ್ದ ಭೃಗುಮಹರ್ಷಿಯ ಬಳಿಗೆ ಹೋಗಿ ಸಕಲಪ್ರಜೆಗಳ ಕ್ಷೇಮಾರ್ಥವಾಗಿ ಒಂದು ಯಾಗಮಾಡುವಂತೆ ಪ್ರೇರಣೆಮಾಡಿದರು. ಭೃಗುಮಹರ್ಷಿಯು ಅವರೆಲ್ಲರ ಅಪೇಕ್ಷೆಯಂತೆ ಪವಿತ್ರವಾದ ಆ ತುಂಗ ಕಾರಣ್ಯದಲ್ಲಿಯೇ ಪುನರಾಧಾನಮಾಡಿ, ಯಜ್ಞೇಶ್ವರನನ್ನು ಯಥಾವಿಧಿಯಾಗಿ ಆಜ್ಯಹವಿಸ್ಸುಗಳಿಂದ ತೃಪ್ತಿಗೊಳಿಸಿದನು. ಅನಂತರದಲ್ಲಿ ದೇವತೆಗಳೂ ಮತ್ತು ಋಷಿ-ಮಹರ್ಷಿಗಳೂ ಸ್ವಸ್ಥಾನಗಳಿಗೆ ತೆರಳಿದರು.

**ತದರಣ್ಯಂ ಪ್ರವಿಷ್ಟಸ್ಯ ತುಙ್ಗಕಂ ರಾಜಸತ್ತಮ ।**
**ಪಾಪಂ ಪ್ರಣಶ್ಯತ್ಯಖಿಲಂ ಸ್ತ್ರಿಯೋ ವಾ ಪುರುಷಸ್ಯ ವಾ ॥೫೩॥**

**ತತ್ರ ಮಾಸಂ ವಸೇದ್ಧೀರೋ ನಿಯತೋ ನಿಯತಾಶನಃ ।**
**ಬ್ರಹ್ಮಲೋಕಂ ವ್ರಜೇದ್ರಾಜನ್ಕುಲಂ ಚೈವ ಸಮುದ್ಧರೇತ್ ॥೫೪॥**

ಪರಮಪವಿತ್ರವಾದ ಆ ತುಂಗಕಾರಣ್ಯಕ್ಕೆ ಪ್ರವೇಶಿಸುವ ಪುರುಷನ ಅಥವಾ ಹೆಂಗಸಿನ ಸಕಲಪಾಪಗಳೂ ಕೂಡಲೇ ವಿನಾಶಹೊಂದುತ್ತವೆ. ಆ ತೀರ್ಥಕ್ಷೇತ್ರದಲ್ಲಿ ಜಿತೇಂದ್ರಿಯನಾಗಿ ನಿಯತಾಹಾರನಾಗಿ ಒಂದು ತಿಂಗಳು ವಾಸಮಾಡುವವನು ಅವಸಾನಾನಂತರದಲ್ಲಿ ಬ್ರಹ್ಮಲೋಕವನ್ನು ಸೇರುತ್ತಾನೆ ಮತ್ತು ಅವನ ವಂಶವೂ ಕೂಡ ಉದ್ಧಾರವಾಗುತ್ತದೆ.

**ಮೇಧಾವಿಕಂ ಸಮಾಸಾದ್ಯ ಪಿತೄನ್ದೇವಾಂಶ್ಚ ತರ್ಪಯೇತ್ ।**
**ಅಗ್ನಿಷ್ಟೋಮಮವಾಪ್ನೋತಿ ಸ್ಮೃತಿಂ ಮೇಧಾಂ ಚ ವಿನ್ದತಿ ॥೫೫॥**

ತುಂಗಕಾರಣ್ಯತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಮೇಧಾವಿಕವೆಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡ ಬೇಕು. ಆ ಕ್ಷೇತ್ರದಲ್ಲಿ ದೇವ-ಪಿತೃಗಳನ್ನು ವಿಧಿಪೂರ್ವಕವಾಗಿ ಅರ್ಚನೆ

ಮಾಡುವುದರಿಂದ ಅಗ್ನಿಷ್ಟೋಮಯಾಗಮಾಡಿದ ಫಲವು ಪ್ರಾಪ್ತವಾಗುವುದಲ್ಲದೇ–ಯಾತ್ರಿಕನಿಗೆ ಸ್ಮರಣಶಕ್ತಿಯೂ, ಮೇಧಾಶಕ್ತಿಯೂ ಹೆಚ್ಚುತ್ತದೆ.

**ಅತ್ರ ಕಾಲಞ್ಜರಂ ನಾಮ ಪರ್ವತಂ ಲೋಕವಿಶ್ರುತಮ್ ।**
**ತತ್ರ ದೇವಹ್ರದೇ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೫೭॥**

**ಯೋ ಸ್ನಾತಃ ಸಾಧಯೇತ್ತತ್ರ ಗಿರೌ ಕಾಲಞ್ಜರೇ ನೃಪ ।**
**ಸ್ವರ್ಗಲೋಕೇ ಮಹೀಯೇತ ನರೋ ನಾಸ್ತ್ಯತ್ರ ಸಂಶಯಃ ॥೫೮॥**

ಆ ಕ್ಷೇತ್ರದಲ್ಲಿಯೇ ಕಾಲಂಜರವೆಂಬ ತ್ರಿಲೋಕಪ್ರಸಿದ್ಧವಾದ ಪರ್ವತವಿರುವುದು. ಆ ಪರ್ವತದಲ್ಲಿ ದೇವಹ್ರದವೆಂಬ ಪುಣ್ಯತೀರ್ಥವಿರುವುದು. ಆ ದೇವಹ್ರದತೀರ್ಥದಲ್ಲಿ ಸ್ನಾನಮಾಡುವುದರಿಂದ ಒಂದು ಸಾವಿರ ಗೋವುಗಳನ್ನು ದಾನಮಾಡಿದ ಫಲವು ಲಭಿಸುತ್ತದೆ. ಎಲ್ಲಿ ಸ್ನಾನಮಾಡದಿದ್ದರೂ ಕಾಲಂಜರಪರ್ವತದಲ್ಲಿರುವ ದೇವಹ್ರದದಲ್ಲಿ ಸ್ನಾನಮಾಡಿದವನು ಅವಸಾನಾನಂತರದಲ್ಲಿ ಸ್ವರ್ಗಲೋಕದಲ್ಲಿ ಪುರಸ್ಕಾರವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸ್ವಲ್ಪವೂ ಸಂಶಯವಿಲ್ಲ.

ಮೇಧಾವಿಕತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಪರ್ವತಶ್ರೇಷ್ಠವಾದ ಚಿತ್ರಕೂಟದಲ್ಲಿ ಪ್ರವಹಿಸುವ, ಸಕಲಪಾಪಗಳನ್ನೂ ನಾಶಮಾಡುವ, ಪರಮಪಾವನವಾದ ಮಂದಾಕಿನೀತೀರಕ್ಕೆ ಪ್ರಯಾಣಮಾಡಬೇಕು.

**ತತ್ರಾಭಿಷೇಕಂ ಕುರ್ವಾಣಃ ಪಿತೃದೇವಾರ್ಚನೇ ರತಃ ।**
**ಅಶ್ವಮೇಧಮವಾಪ್ನೋತಿ ಗತಿಂ ಚ ಪರಮಾಂ ವ್ರಜೇತ್ ॥೫೯॥**

ಮಂದಾಕಿನಿಯಲ್ಲಿ ಮಿಂದು ದೇವತೆಗಳನ್ನೂ–ಪಿತೃಗಳನ್ನೂ ಯಥಾವಿಧಿಯಾಗಿ ಪೂಜಿಸುವುದರಿಂದ ಅಶ್ವಮೇಧಯಾಗಮಾಡಿದ ಫಲವು ಲಭ್ಯವಾಗುವುದಲ್ಲದೇ–ಅವಸಾನಾನಂತರದಲ್ಲಿ ಸದ್ಗತಿಯೂ ಸಿಕ್ಕುತ್ತದೆ.

**ತತೋ ಗಚ್ಛೇತ ಧರ್ಮಜ್ಞ ಭರ್ತೃಸ್ಥಾನಮನುತ್ತಮಮ್ ।**
**ಯತ್ರ ನಿತ್ಯಂ ಮಹಾಸೇನೋ ಗುಹಃ ಸನ್ನಿಹಿತೋ ನೃಪ ।**
**ತತ್ರ ಗತ್ವಾ ನೃಪಶ್ರೇಷ್ಠ ಗಮನಾದೇವ ಸಿಧ್ಯತಿ ॥೬೦॥**

ಯುಧಿಷ್ಠಿರ! ಚಿತ್ರಕೂಟಪರ್ವತದ ತೀರ್ಥಯಾತ್ರೆಯನ್ನು ಮುಗಿಸಿ

ಕೊಂಡು ಯಾತ್ರಿಕನು ಮುಂದೆ ಉತ್ತಮೋತ್ತಮವಾದ ಭರ್ತೃಸ್ಥಾನವೆಂಬ ತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಪುಣ್ಯಕ್ಷೇತ್ರದಲ್ಲಿ ದೇವ ಸೇನಾಪತಿಯಾದ ಕಾರ್ತಿಕೇಯನ ಸಾನ್ನಿಧ್ಯವು ಸದಾಕಾಲದಲ್ಲಿಯೂ ಇರುತ್ತದೆ. ಆ ತೀರ್ಥಕ್ಷೇತ್ರವನ್ನು ಪ್ರವೇಶಮಾಡಿದ ಮಾತ್ರದಿಂದಲೇ ಸಕಲ ಕಾರ್ಯಗಳ ಸಿದ್ಧಿಯೂ ಉಂಟಾಗುತ್ತದೆ.

**ಕೋಟಿತೀರ್ಥೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೬೧॥**

ಆ ಪುಣ್ಯಕ್ಷೇತ್ರದ ಸಮೀಪದಲ್ಲಿರುವ ಕೋಟಿತೀರ್ಥದಲ್ಲಿ ಸ್ನಾನ ಮಾಡುವುದರಿಂದ ಒಂದು ಸಾವಿರ ಹಸುಗಳನ್ನು ದಾನಮಾಡಿದ ಫಲವು ಲಭ್ಯವಾಗುತ್ತದೆ.

**ಪ್ರದಕ್ಷಿಣಮುಪಾವೃತ್ಯ ಜ್ಯೇಷ್ಠಸ್ಥಾನಂ ವ್ರಜೇನ್ನರಃ ।**
**ಅಭಿಗಮ್ಯ ಮಹಾದೇವಂ ವಿರಾಜತಿ ಯಥಾ ಶಶೀ ॥೬೨॥**

ಕೋಟಿತೀರ್ಥದಲ್ಲಿ ಮಿಂದು ಪವಿತ್ರವಾದ ಆ ತೀರ್ಥಕ್ಕೆ ಪ್ರದಕ್ಷಿಣೆ ಮಾಡಿ ಮುಂದೆ ಜ್ಯೇಷ್ಠಸ್ಥಾನವೆಂಬ ಪವಿತ್ರಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದಲ್ಲಿರುವ ಮಹಾದೇವನ ಸಂದರ್ಶನದಿಂದ ಯಾತ್ರಿಕನು ಚಂದ್ರನಂತೆ ಕಾಂತಿಮಂತನಾಗುತ್ತಾನೆ. ಅಲ್ಲಿಯೇ ಲೋಕಪ್ರಸಿದ್ಧವಾದ ಒಂದು ಬಾವಿ ಇದೆ. ಆ ಪವಿತ್ರಕೂಪದಲ್ಲಿ ನಾಲ್ಕು ಸಮುದ್ರಗಳ ಪುಣ್ಯೋದಕಗಳೂ ಇವೆ.

**ತತೋಪಸ್ಪೃಶ್ಯ ರಾಜೇನ್ದ್ರ ಪಿತೃದೇವಾರ್ಚನೇ ರತಃ ।**
**ನಿಯತಾತ್ಮಾ ನರಃ ಪೂತೋ ಗಚ್ಛೇತ ಪರಮಾಂ ಗತಿಮ್ ॥೬೪॥**

ಯಾವ ಯಾತ್ರಿಕನು ಆ ಪವಿತ್ರಕೂಪದಲ್ಲಿ ಸ್ನಾನಮಾಡಿ, ನಿಯಮ ವ್ರತನಿಷ್ಠನಾಗಿದ್ದು, ದೇವ-ಪಿತೃಗಳನ್ನು ಅರ್ಚಿಸುವನೋ–ಅವನಿಗೆ ಸದ್ಗತಿಯು ಸಿಕ್ಕುತ್ತದೆ. ಜ್ಯೇಷ್ಠಸ್ಥಾನಕ್ಷೇತ್ರದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಯಾತ್ರಿಕನು ಮುಂದೆ ಸುಪ್ರಸಿದ್ಧವಾದ ಶೃಂಗವೇರಪುರಕ್ಕೆ ಪ್ರಯಾಣಮಾಡಬೇಕು. ಆ ಪವಿತ್ರಕ್ಷೇತ್ರದ ಸಮೀಪದಲ್ಲಿಯೇ ಹಿಂದೆ ದಶರಥನ ಮಗನಾದ ಶ್ರೀರಾಮನು ಗಂಗಾನದಿಯನ್ನು ದಾಟಿದನು.

**ತಸ್ಮಿಂಸ್ತೀರ್ಥೇ ಮಹಾಬಾಹೋ ಸ್ನಾತ್ವಾ ಪಾಪೈಃ ಪ್ರಮುಚ್ಯತೇ ॥**

ಶೃಂಗವೇರಪುರದಲ್ಲಿರುವ ಆ ಪುಣ್ಯತೀರ್ಥದಲ್ಲಿ ಸ್ನಾನಮಾಡುವುದರಿಂದ ಯಾತ್ರಿಕನು ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

**ಗಙ್ಗಾಯಾಂ ತು ನರಃ ಸ್ನಾತ್ವಾ ಬ್ರಹ್ಮಚಾರೀ ಸಮಾಹಿತಃ ।**
**ವಿಧೂತಪಾಪ್ಮಾ ಭವತಿ ವಾಜಪೇಯಂ ಚ ವಿನ್ದತಿ ॥೬೬॥**

ಜಿತೇಂದ್ರಿಯನಾಗಿ ಬ್ರಹ್ಮಚರ್ಯವ್ರತನಿಷ್ಠನಾಗಿ ಗಂಗಾನದಿಯಲ್ಲಿ ಸ್ನಾನಮಾಡುವುದರಿಂದ ಸಕಲಪಾಪಗಳೂ ಪರಿಹಾರವಾಗುವುದು ಮಾತ್ರವಲ್ಲದೇ–ವಾಜಪೇಯಯಾಗವನ್ನು ಮಾಡಿದ ಫಲವೂ ಲಭ್ಯವಾಗುತ್ತದೆ.

**ತತೋ ಮುಞ್ಜವಟಂ ಗಚ್ಛೇತ್ ಸ್ಥಾನಂ ದೇವಸ್ಯ ಧೀಮತಃ ।**
**ಅಭಿಗಮ್ಯ ಮಹಾದೇವಮಭಿವಾದ್ಯ ಚ ಭಾರತ ॥೬೭॥**

**ಪ್ರದಕ್ಷಿಣಮುಪಾವೃತ್ಯ ಗಾಣಪತ್ಯಮವಾಪ್ನುಯಾತ್ ।**
**ತಸ್ಮಿಂಸ್ತೀರ್ಥೇ ತು ಜಾಹ್ನವ್ಯಾಂ ಸ್ನಾತ್ವಾ ಪಾಪೈಃ ಪ್ರಮುಚ್ಯತೇ ॥೬೮॥**

ಶೃಂಗವೇರಪುರದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಮಹಾದೇವನ ಕ್ಷೇತ್ರವಾದ ಮುಂಜವಟಕ್ಕೆ ಪ್ರಯಾಣಮಾಡಬೇಕು. ಆ ಕ್ಷೇತ್ರದ ಅಧಿದೇವತೆಯಾದ ಮಹಾದೇವನನ್ನು ಸಂದರ್ಶನ ಮಾಡಿ, ಭಕ್ತಿಪೂರ್ವಕವಾಗಿ ಪೂಜೆಮಾಡಿ, ಪ್ರದಕ್ಷಿಣ-ನಮಸ್ಕಾರಗಳನ್ನು ಮಾಡುವುದರಿಂದ ಜನ್ಮಾಂತರದಲ್ಲಿ ಗಾಣಪತ್ಯಸ್ಥಾನವು ಪ್ರಾಪ್ತವಾಗುತ್ತದೆ. ಅಲ್ಲಿಯೂ ಗಂಗಾದೇವಿಯು 'ಜಾಹ್ನವೀ' ಎಂಬ ಹೆಸರಿನಿಂದ ಪ್ರವಹಿಸುತ್ತಾಳೆ. ಆ ಕ್ಷೇತ್ರದಲ್ಲಿ ಪ್ರವಹಿಸುವ ಆ ಪುಣ್ಯನದಿಯಲ್ಲಿ ಸ್ನಾನಮಾಡುವುದರಿಂದ ಯಾತ್ರಿಕನು ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಮುಂಜವಟತೀರ್ಥಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಯಾತ್ರಿಕನು ಸಕಲಮಹರ್ಷಿಗಳಿಂದಲೂ ಸಂಸ್ತೂಯಮಾನವಾದ ಪ್ರಯಾಗ ಪುಣ್ಯಕ್ಷೇತ್ರಕ್ಕೆ ಪ್ರಯಾಣಮಾಡಬೇಕು. ಬ್ರಹ್ಮಪ್ರಮುಖರಾದ ದೇವತೆಗಳೂ, ಅಷ್ಟದಿಕ್ಪಾಲಕರೂ, ಲೋಕಪಾಲಕರೂ, ಸಿದ್ಧ-ಚಾರಣರೂ, ಪಿತೃದೇವತೆಗಳೂ, ಅನೇಕಾನೇಕ ಋಷಿ-ಮಹರ್ಷಿಗಳೂ, ಸನತ್ಕುಮಾರ-ಸನತ್ಸುಜಾತರೂ, ನಿಷ್ಕಳಂಕರಾದ ಬ್ರಹ್ಮರ್ಷಿಗಳೂ, ಅಂಗಿರಸರೂ, ನಾಗ-ಸುಪರ್ಣ-ಸಿದ್ಧರೂ, ಸರ್ಪಗಳೂ, ನದೀ ಮತ್ತು ಸಮುದ್ರಗಳ ಅಧಿದೇವತೆಗಳೂ,

ಗಂಧರ್ವರೂ, ಅಪ್ಸರೆಯರೂ, ಬ್ರಹ್ಮಪುರಸ್ಕೃತನಾದ ಶ್ರೀಮಹಾವಿಷ್ಣುವೂ ಆ ಕ್ಷೇತ್ರದಲ್ಲಿ ಸರ್ವಕಾಲದಲ್ಲಿಯೂ ಇರುತ್ತಾರೆ. ಆ ಕ್ಷೇತ್ರದಲ್ಲಿ ಮೂರು ಅಗ್ನಿಕುಂಡಗಳಿವೆ. ಅವುಗಳ ಮಧ್ಯದಲ್ಲಿ ಗಂಗಾದೇವಿಯು ಬಹಳ ವೇಗವಾಗಿ ಪ್ರವಹಿಸುತ್ತಾಳೆ.

**ತಪನಸ್ಯ ಸುತಾ ದೇವೀ ತ್ರಿಷು ಲೋಕೇಷು ವಿಶ್ರುತಾ ।**
**ಯಮುನಾ ಗಙ್ಗಯಾ ಸಾರ್ಧಂ ಸಂಗತಾ ಲೋಕಪಾವನೀ ॥೭೪॥**

**ಗಙ್ಗಾಯಮುನಯೋರ್ಮಧ್ಯಂ ಪೃಥಿವ್ಯಾ ಜಘನಂ ಸ್ಮೃತಮ್ ।**
**ಪ್ರಯಾಗಂ ಜಘನಸ್ಥಾನಮುಪಸ್ಥಮೃಷಯೋ ವಿದುಃ ॥೭೫॥**

ಅದೇ ಕ್ಷೇತ್ರದಲ್ಲಿ ಲೋಕಪಾವನೆಯಾದ, ಸೂರ್ಯನ ಮಗಳಾದ, ಲೋಕಪ್ರಸಿದ್ಧಳಾದ ಯಮುನೆಯು ಗಂಗೆಯೊಡನೆ ಸೇರುತ್ತಾಳೆ. ಗಂಗಾ-ಯಮುನಾನದಿಗಳ ಮಧ್ಯದಲ್ಲಿರುವ ಭೂಭಾಗಕ್ಕೆ ಪೃಥ್ವಿಯ ಸೊಂಟದ ಪ್ರದೇಶವೆಂದು ಹೇಳುತ್ತಾರೆ. (ಹರಿದ್ವಾರವು ಮೊದಲುಗೊಂಡು ಪ್ರಯಾಗದವರೆಗೂ ಇರುವ ಪ್ರದೇಶವು ಭೂಮಿಯ ಕಟಿಪ್ರದೇಶವೆಂದು ಪ್ರಸಿದ್ಧವಾಗಿದೆ.) ಯುಧಿಷ್ಠಿರ! ಆ ಪ್ರಯಾಗಪುಣ್ಯಕ್ಷೇತ್ರವು ಭೂಮಾತೆಯ ಯೋನಿರೂಪವಾಗಿದೆ. ಪ್ರಯಾಗ, ಪ್ರತಿಷ್ಠಾನ, ಕಂಬಲ, ಅಶ್ವತರ ಮತ್ತು ಭೋಗವತೀ–ಇವುಗಳು ಬ್ರಹ್ಮನ ಯಜ್ಞವೇದಿಕೆಗಳಾಗಿವೆ. ಆ ಪುಣ್ಯ ಕ್ಷೇತ್ರದಲ್ಲಿ ವೇದಗಳೂ, ಯಜ್ಞಗಳೂ ಮೂರ್ತಿಮತ್ತಾಗಿ ನೆಲೆಸಿವೆ. ತಪೋನಿಷ್ಠರಾದ ಮಹರ್ಷಿಗಳು ಆ ಪುಣ್ಯಕ್ಷೇತ್ರದಲ್ಲಿ ಬ್ರಹ್ಮೋಪಾಸನೆಯನ್ನು ಮಾಡುತ್ತಿರುತ್ತಾರೆ. ಆ ಪುಣ್ಯಭೂಮಿಯಲ್ಲಿ ದೇವತೆಗಳೂ ಮತ್ತು ಭೂಮಿಯ ರಾಜರೂ ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿರುತ್ತಾರೆ.

**ತತಃ ಪುಣ್ಯತಮಂ ನಾಮ ತ್ರಿಷು ಲೋಕೇಷು ಭಾರತ ।**
**ಪ್ರಯಾಗಂ ಸರ್ವತೀರ್ಥೇಭ್ಯಃ ಪ್ರವದನ್ತ್ಯಧಿಕಂ ವಿಭೋ ॥೭೯॥**

**ಗಮನಾತ್ತಸ್ಯ ತೀರ್ಥಸ್ಯ ನಾಮಸಂಕೀರ್ತನಾದಪಿ ।**
**ಮೃತ್ಯುಕಾಲಭಯಾಚ್ಚಾಪಿ ನರಃ ಪಾಪಾತ್ಪ್ರಮುಚ್ಯತೇ ॥೮೦॥**

ಈ ಕಾರಣಗಳಿಂದಾಗಿ ಪ್ರಯಾಗತೀರ್ಥಕ್ಷೇತ್ರವು ಎಲ್ಲ ತೀರ್ಥಗಳಿಗಿಂತಲೂ ಪರಮಶ್ರೇಷ್ಠವಾದುದೆಂದೂ, ಪರಮಪವಿತ್ರವಾದುದೆಂದೂ, ಮೂರು

ಲೋಕಗಳಲ್ಲಿಯೂ ಪುಣ್ಯತಮವಾದುದೆಂದೂ ತಿಳಿದವರು ಹೇಳುತ್ತಾರೆ. ಪ್ರಯಾಗತೀರ್ಥಕ್ಷೇತ್ರಕ್ಕೆ ಪ್ರಯಾಣಮಾಡಿದರೂ, ಪ್ರಯಾಗಕ್ಷೇತ್ರದ ಮಹಿಮೆಯನ್ನು ಸ್ತೋತ್ರಮಾಡಿದರೂ, ಅಷ್ಟೇಕೆ ನಾಮೋಚ್ಚಾರಣೆಯನ್ನು ಮಾಡಿದರೂ ಸಾಕು ನರನು ಅಪಮೃತ್ಯುವಿನಿಂದ ಪಾರಾಗುವನಲ್ಲದೇ–ಸಕಲ ಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

**ತತ್ರಾಭಿಷೇಕಂ ಯಃ ಕುರ್ಯಾತ್ಸಂಗಮೇ ಲೋಕವಿಶ್ರುತೇ ।**
**ಪುಣ್ಯಂ ಸ ಫಲಮಾಪ್ನೋತಿ ರಾಜಸೂಯಾಶ್ವಮೇಧಯೋಃ ॥೮೧॥**

ಆ ಕ್ಷೇತ್ರದಲ್ಲಿರುವ ವಿಶ್ವವಿಖ್ಯಾತವಾದ ಗಂಗಾ-ಯಮುನೆಯರ ಸಂಗಮಸ್ಥಾನದಲ್ಲಿ ಸ್ನಾನಮಾಡಿದರೆ ರಾಜಸೂಯ ಮತ್ತು ಅಶ್ವಮೇಧ ಯಾಗಗಳನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

**ಏಷಾ ಯಜನಭೂಮಿರ್ಹಿ ದೇವಾನಾಮಭಿಸಂಸ್ಕೃತಾ ।**
**ತತ್ರ ದತ್ತಂ ಸೂಕ್ಷ್ಮಮಪಿ ಮಹದ್ಭವತಿ ಭಾರತ ॥೮೨॥**

ಪ್ರಯಾಗತೀರ್ಥಕ್ಷೇತ್ರವು ದೇವತೆಗಳ ಸುಸಂಸ್ಕೃತವಾದ ಯಾಗ ಭೂಮಿಯಾಗಿರುವುದರಿಂದ ಆ ಕ್ಷೇತ್ರವು ದೇವತೆಗಳಿಂದ ಅನವರತವಾಗಿ ಪೂಜಿಸಲ್ಪಡುತ್ತಿದೆ. ಆ ಪುಣ್ಯಕ್ಷೇತ್ರದಲ್ಲಿ ಸ್ವಲ್ಪವನ್ನೇ ದಾನಮಾಡಿದರೂ ಮಹಾಫಲವು ಲಭಿಸುತ್ತದೆ.

**ನ ವೇದವಚನಾತ್ತಾತ ನ ಲೋಕವಚನಾದಪಿ ।**
**ಮತಿರುತ್ಕ್ರಮಣೀಯಾ ತೇ ಪ್ರಯಾಗಮರಣಂ ಪ್ರತಿ ॥೮೩॥**

ಯುಧಿಷ್ಠಿರ! ವೇದೋಕ್ತಿಗಳಾಗಲೀ, ಹಿರಿಯರ ವಚನಗಳಾಗಲೀ ಪ್ರಯಾಗಕ್ಷೇತ್ರದಲ್ಲಿ ಜೀವತೊರೆಯಬೇಕೆಂಬ ಆಕಾಂಕ್ಷೆಯಿಂದ ನಿನ್ನನ್ನು ಪರಾಙ್ಮುಖನಾಗುವಂತೆ ಮಾಡದಿರಲಿ. ನೀನು ಪ್ರಯಾಗಕ್ಷೇತ್ರದಲ್ಲಿಯೇ ಇಹಲೋಕವನ್ನು ತ್ಯಜಿಸುವ ಆಕಾಂಕ್ಷೆಯುಳ್ಳವನಾಗು.

(ವೇದಗಳಾಗಲೀ, ಹಿರಿಯರ ವಚನಗಳಾಗಲೀ–ಪ್ರಯಾಗಕ್ಷೇತ್ರದಲ್ಲಿ ಜೀವತೊರೆಯಕೂಡದೆಂದು ಎಲ್ಲೂ ಸೂಚಿಸಿಲ್ಲ. ಹೀಗಿರುವಾಗ ಇಲ್ಲಿ ನಾರ ದರು ಯಾವ ಅಭಿಪ್ರಾಯದಿಂದ ಹೇಳಿದ್ದಾರೆಂಬ ವಿಷಯದಲ್ಲಿ ಜಿಜ್ಞಾಸೆ ಮಾಡಬೇಕಾಗಿದೆ. ನಾರದರು ಆ ಪುಣ್ಯಕ್ಷೇತ್ರದಲ್ಲಿ ಆತ್ಮಹತ್ಯೆಯನ್ನು ಮಾಡಿ

ಕೊಳ್ಳಲು ಯುಧಿಷ್ಠಿರನಿಗೆ ಸೂಚಿಸಿದರೇ? ಯಾವ ಪುಣ್ಯಕ್ಷೇತ್ರದಲ್ಲಿಯೇ ಆದರೂ ಆತ್ಮಹತ್ಯೆಯು ದೋಷವಿಶಿಷ್ಟವಾದುದು.

**ಜಲೇ ವಾಪಿ ಸ್ಥಲೇ ವಾಪಿ ಶಸ್ತ್ರೇಣೋದ್ಬಿಧ್ಯ ವಾ ಪುನಃ ।**
**ನರಕಂ ತೇ ಪ್ರಯಾನ್ತ್ಯಾಶು ಆತ್ಮಾನಂ ಘಾತಯನ್ತಿ ಯೇ ॥**

'ನೀರಿನಲ್ಲಿ ಬಿದ್ದಾಗಲೀ, ನೇಣುಹಾಕಿಕೊಂಡಾಗಲೀ, ಕತ್ತಿಯಿಂದ ಕತ್ತರಿಸಿಕೊಂಡಾಗಲೀ ಆತ್ಮಹತ್ಯೆಯನ್ನು ಮಾಡಿಕೊಂಡರೆ ಅಂತಹವರು ಒಡನೆಯೇ ನರಕಕ್ಕೆ ಹೋಗುತ್ತಾರೆ.' ಹೀಗೆಂಬ ಸ್ಮೃತಿವಚನವಿದೆ.

ಋಗ್ವೇದದಲ್ಲಿ ಗಂಗಾ-ಯಮುನಾಸಂಗಮಸ್ಥಾನದಲ್ಲಿ (ಪ್ರಯಾಗ ಕ್ಷೇತ್ರದಲ್ಲಿ) ಅವಸಾನಹೊಂದಿದರೆ ಬ್ರಹ್ಮಲೋಕವು ಪ್ರಾಪ್ತಿಯಾಗುವುದೆಂದೂ ಹೇಳಿದೆ.

**ಸಿತಾಸಿತೇ ಸರಿತೇ ಯತ್ರ ಸಂಗತೇ**
**ತತ್ರಾಪ್ಲುತಾಸೋ ದಿವಮುತ್ಪತನ್ತಿ ।**
**ಯೇ ವೈ ತನ್ವಂ ವಿಸೃಜನ್ತಿ ಧೀರಾ-**
**ಸ್ತೇ ಜನಾಸೋ ಅಮೃತತ್ವಂ ಭಜನ್ತೇ ॥**

ಬಿಳುಪಾದ (ಗಂಗಾ) ಕಪ್ಪಾದ (ಯಮುನಾ) ನದಿಗಳು ಯಾವ ಪವಿತ್ರ ಸ್ಥಳದಲ್ಲಿ ಸೇರುತ್ತವೆಯೋ ಅಲ್ಲಿ ಸ್ನಾನಮಾಡುವವರು ಮರಣಾನಂತರದಲ್ಲಿ ಸ್ವರ್ಗಲೋಕಕ್ಕೆ ಹಾರಿಹೋಗುತ್ತಾರೆ. ಯಾರು ಗಂಗಾ-ಯಮುನೆಯರು ಸಂಗಮವಾಗುವ ಪುಣ್ಯಕ್ಷೇತ್ರದಲ್ಲಿ ಶರೀರವನ್ನು ವಿಸರ್ಜಿಸುವರೋ ಅವರು ಅಮೃತತ್ವವನ್ನು ಅಥವಾ ಮೋಕ್ಷವನ್ನು ಹೊಂದುತ್ತಾರೆ.

ಹೀಗಿರುವುದರಿಂದ ನಾರದರು ಹೇಳಿದ ಅಭಿಪ್ರಾಯವು ಹೀಗಿರಬಹುದಾಗಿದೆ : ವೇದೋಕ್ತವಾದ ಮತ್ತು ಹಿರಿಯರಿಂದ ಆಚರಿತವಾದ ಯಜ್ಞ-ಯಾಗಾದಿಗಳೇ ಉತ್ತಮಲೋಕಪ್ರದಗಳೆಂಬ ಭ್ರಾಂತಿಯಿಂದ ಪ್ರಯಾಗ ಕ್ಷೇತ್ರವನ್ನು ಕೇವಲ ಸಂದರ್ಶನಮಾಡಿ ಹೊರಟುಹೋಗಬೇಡ. ಅಲ್ಲಿಯೇ ಅವಸಾನಪರ್ಯಂತವಾಗಿದ್ದು ದೇಹವನ್ನು ತೊರೆದರೆ ಯಜ್ಞ-ಯಾಗಾದಿಗಳನ್ನು ಮಾಡಿ ಪಡೆಯುವ ಫಲಕ್ಕಿಂತಲೂ ಅಧಿಕವಾದ ಉತ್ತಮಫಲಗಳೇ ಪ್ರಾಪ್ತವಾಗುತ್ತವೆ.)

**ದಶ ತೀರ್ಥಸಹಸ್ರಾಣಿ ಷಷ್ಟಿಃ ಕೋಟ್ಯಸ್ತಥಾಪರಾಃ ।**
**ಯೇಷಾಂ ಸಾಂನಿಧ್ಯಮತ್ರೈವ ಕೀರ್ತಿತಂ ಕುರುನನ್ದನ ॥೮೪॥**

**ಚತುರ್ವಿದ್ಯೇ ಚ ಯತ್ಪುಣ್ಯಂ ಸತ್ಯವಾದಿಷು ಚೈವ ಯತ್ ।**
**ಸ್ನಾತ ಏವ ತದಾಪ್ನೋತಿ ಗಙ್ಗಾಯಮುನಸಂಗಮೇ ॥೮೫॥**

ಯುಧಿಷ್ಠಿರ! ಪ್ರಯಾಗಕ್ಷೇತ್ರದಲ್ಲಿ ಅರುವತ್ತುಕೋಟಿ ಹತ್ತುಸಾವಿರ ಪುಣ್ಯತೀರ್ಥಗಳ ಸಾನ್ನಿಧ್ಯವಿರುವುದು. ಗಂಗಾ-ಯಮುನಾಸಂಗಮಸ್ಥಾನದಲ್ಲಿ ಸ್ನಾನಮಾಡುವುದರಿಂದ ನಾಲ್ಕು ವೇದಗಳನ್ನು ಅಧ್ಯಯನಮಾಡಿ ಆತ್ಮವಿದ್ಯೆಯನ್ನು ತಿಳಿದ ಮಹಾಫಲವು ಲಭಿಸುತ್ತದೆ. ಆಮರಣಾಂತವಾಗಿ ಸತ್ಯನಿಷ್ಠನಾಗಿರುವವನು ಪಡೆಯುವ ಪುಣ್ಯವು ಆ ಸಂಗಮದಲ್ಲಿ ಸ್ನಾನ ಮಾಡಿದ ಮಾತ್ರದಿಂದಲೇ ಲಭ್ಯವಾಗುತ್ತದೆ.

**ತತ್ರ ಭೋಗವತೀ ನಾಮ ವಾಸುಕೇಸ್ತೀರ್ಥಮುತ್ತಮಮ್ ।**
**ತತ್ರಾಭಿಷೇಕಂ ಯಃ ಕುರ್ಯಾತ್ಸೋಽಶ್ವಮೇಧಫಲಂ ಲಭೇತ್ ॥೮೬॥**

ಧರ್ಮಜ! ನಾನು ಹಿಂದೆ ಹೇಳಿದಂತೆ ಆ ಪ್ರಯಾಗಕ್ಷೇತ್ರದಲ್ಲಿ ಭೋಗವತೀ ಎಂಬ ವಾಸುಕಿಯ ತೀರ್ಥವಿದೆ. ಆ ತೀರ್ಥದಲ್ಲಿ ಸ್ನಾನಮಾಡುವವನು ಅಶ್ವಮೇಧಯಾಗಮಾಡಿದ ಫಲವನ್ನು ಪಡೆಯುತ್ತಾನೆ.

**ತತ್ರ ಹಂಸಪ್ರಪತನಂ ತೀರ್ಥಂ ತ್ರೈಲೋಕ್ಯವಿಶ್ರುತಮ್ ।**
**ದಶಾಶ್ವಮೇಧಿಕಂ ಚೈವ ಗಙ್ಗಾಯಾಂ ಕುರುನನ್ದನ ॥೮೭॥**

ಪ್ರಯಾಗಕ್ಷೇತ್ರದಲ್ಲಿರುವ ಗಂಗಾನದಿಯಲ್ಲಿ ಹಂಸಪ್ರಪತನವೆಂಬ ತೀರ್ಥವಿದೆ ಮತ್ತು ಗಂಗಾನದಿಯ ದಡದಲ್ಲಿ ದಶಾಶ್ವಮೇಧಿಕವೆಂಬ ಪುಣ್ಯ ತೀರ್ಥವೂ ಇದೆ.

**ಕುರುಕ್ಷೇತ್ರಸಮಾ ಗಙ್ಗಾ ಯತ್ರ ತತ್ರಾವಗಾಹಿತಾ ।**
**ವಿಶೇಷೋ ವೈ ಕನಖಲೇ ಪ್ರಯಾಗೇ ಪರಮಂ ಮಹತ್ ॥೮೮॥**

**ಯದ್ಯಕಾರ್ಯಶತಂ ಕೃತ್ವಾ ಕೃತಂ ಗಙ್ಗಾಭಿಷೇಚನಮ್ ।**
**ಸರ್ವಂ ತತ್ತಸ್ಯ ಗಙ್ಗಾಮ್ಭೋ ದಹತ್ಯಗ್ನಿರಿವೇನ್ಧನಮ್ ॥೮೯॥**

ಗಂಗಾನದಿಯು ಪ್ರವಹಿಸುವ ಯಾವ ಸ್ಥಳದಲ್ಲಿ ಸ್ನಾನಮಾಡಿದರೂ

ಕುರುಕ್ಷೇತ್ರದ ಯಾತ್ರೆಯನ್ನು ಮಾಡಿದ ಫಲವು ಲಭ್ಯವಾಗುತ್ತದೆ. ಆದರೆ ಕನಖಲಕ್ಷೇತ್ರದ ಯಾತ್ರೆಯು ಅದಕ್ಕಿಂತಲೂ ಹೆಚ್ಚು ಪುಣ್ಯಪ್ರದವಾದುದು. ಪ್ರಯಾಗತೀರ್ಥಕ್ಷೇತ್ರದ ಯಾತ್ರೆಯು ಕನಖಲಕ್ಷೇತ್ರದ ಯಾತ್ರೆಗಿಂತಲೂ ಮಿಗಿಲಾದುದೆಂಬುದರಲ್ಲಿ ಸಂಶಯವೇ ಇಲ್ಲ. ಧರ್ಮಜ! ನೂರು ಅಕಾರ್ಯಗಳನ್ನು ಮಾಡಿದ್ದರೂ ಗಂಗಾನದಿಯಲ್ಲಿ ಸ್ನಾನಮಾಡುವುದರಿಂದ ಪವಿತ್ರವಾದ ಗಂಗಾತೀರ್ಥವು–ಬೆಂಕಿಯು ಕಟ್ಟಿಗೆಯನ್ನು ಭಸ್ಮಮಾಡುವ ರೀತಿಯಲ್ಲಿ–ಅವನ ಅಪರಾಧಗಳೆಲ್ಲವನ್ನೂ ದಹಿಸಿಬಿಡುತ್ತದೆ. (ಗಂಗಾನದಿಯಲ್ಲಿ ಮಿಂದವನು ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ.)

**ಸರ್ವಂ ಕೃತಯುಗೇ ಪುಣ್ಯಂ ತ್ರೇತಾಯಾಂ ಪುಷ್ಕರಂ ಸ್ಮೃತಮ್ ।**
**ದ್ವಾಪರೇಽಪಿ ಕುರುಕ್ಷೇತ್ರಂ ಗಙ್ಗಾ ಕಲಿಯುಗೇ ಸ್ಮೃತಾ ॥೯೦॥**

ಕೃತಯುಗದಲ್ಲಿ ಸಕಲತೀರ್ಥಗಳೂ ಪವಿತ್ರವಾದುವುಗಳೇ ಆಗಿರುತ್ತವೆ. (ಯಾವ ತೀರ್ಥದಲ್ಲಿ ಸ್ನಾನಮಾಡಿದರೂ ಸಕಲಪಾಪಗಳೂ ಪರಿಹಾರವಾಗಿ ಸದ್ಗತಿಯು ಸಿಕ್ಕುತ್ತದೆ.) ತ್ರೇತಾಯುಗದಲ್ಲಿ ಪುಷ್ಕರತೀರ್ಥವು ಸಕಲ ಪಾಪಹರವಾದ ಪುಣ್ಯತೀರ್ಥವೆನಿಸಿಕೊಂಡಿದೆ. ದ್ವಾಪರಯುಗದಲ್ಲಿ ಕುರುಕ್ಷೇತ್ರವು ಸಕಲಪಾಪಹರವಾದ ಪುಣ್ಯಕ್ಷೇತ್ರವಾಗಿದೆ. ಕಲಿಯುಗದಲ್ಲಿ ಗಂಗಾನದಿಯು ಸಕಲಪಾಪಹರವಾದ ಪುಣ್ಯನದಿಯಾಗಿದೆ.

**ಪುಷ್ಕರೇ ತು ತಪಸ್ತಪ್ಯೇದ್ದಾನಂ ದದ್ಯಾನ್ಮಹಾಲಯೇ ।**
**ಮಲಯೇ ತ್ವಗ್ನಿಮಾರೋಹೇದ್ಭೃಗುತುಙ್ಗೇ ತ್ವನಾಶನಮ್ ॥೯೧॥**

**ಪುಷ್ಕರೇ ತು ಕುರುಕ್ಷೇತ್ರೇ ಗಙ್ಗಾಯಾಂ ಮಧ್ಯಮೇಷು ಚ ।**
**ಸ್ನಾತ್ವಾ ತಾರಯತೇ ಜನ್ತುಃ ಸಪ್ತಸಪ್ತಾವರಾಂಸ್ತಥಾ ॥೯೨॥**

ಪುಷ್ಕರತೀರ್ಥದಲ್ಲಿ ತಪಸ್ಸನ್ನು ಮಾಡಬೇಕು. ಮಹಾಲಯತೀರ್ಥಕ್ಷೇತ್ರದಲ್ಲಿ ದಾನಕೊಡಬೇಕು. ಮಲಯಪರ್ವತದಲ್ಲಿ ಚಿತಾರೋಹಣಮಾಡಬೇಕು. (ಪ್ರಾಣತ್ಯಾಗಮಾಡಬೇಕು.) ಭೃಗುತುಂಗಕ್ಷೇತ್ರದಲ್ಲಿ ಆಮರಣಾಂತವಾಗಿ ಉಪವಾಸಮಾಡಿ ಪ್ರಾಣತ್ಯಾಗಮಾಡಬೇಕು. ಪುಷ್ಕರದಲ್ಲಿ, ಕುರುಕ್ಷೇತ್ರದಲ್ಲಿ ಮತ್ತು ಪ್ರಯಾಗಾದಿ ಗಂಗಾನದಿಯ ತೀರ್ಥಕ್ಷೇತ್ರಗಳಲ್ಲಿ ಸ್ನಾನಮಾಡಿದವನ ಹಿಂದಿನ ಮತ್ತು ಮುಂದಿನ ಏಳು ತಲೆಮಾರಿನವರು

ಪಾವನರಾಗುತ್ತಾರೆ. ಆ ಸಂಗಮಸ್ಥಳದ ಮತ್ತು ಗಂಗಾನದಿಯ ಮಹಿಮೆ ಯನ್ನು ಮತ್ತೂ ಹೇಳುತ್ತೇನೆ. ಕೇಳು ; ಯುಧಿಷ್ಠಿರ!

**ಪುನಾತಿ ಕೀರ್ತಿತಾ ಪಾಪಂ ದೃಷ್ಟ್ವಾ ಭದ್ರಂ ಪ್ರಯಚ್ಛತಿ ।**
**ಅವಗಾಢಾ ಚ ಪೀತಾ ಚ ಪುನಾತ್ಯಾಸಪ್ತಮಂ ಕುಲಮ್ ॥೯೩॥**

**ಯಾವದಸ್ಥಿ ಮನುಷ್ಯಸ್ಯ ಗಙ್ಗಾಯಾಃ ಸ್ಪೃಶತೇ ಜಲಮ್ ।**
**ತಾವತ್ಸ ಪುರುಷೋ ರಾಜನ್ಸ್ವರ್ಗಲೋಕೇ ಮಹೀಯತೇ ॥೯೪॥**

**ಯಥಾ ಪುಣ್ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।**
**ಉಪಾಸ್ಯ ಪುಣ್ಯಂ ಲಬ್ಧ್ವಾ ಚ ಭವತ್ಯಮರಲೋಕಭಾಕ್ ॥೯೫॥**

ಸ್ತೋತ್ರಮಾಡುವುದರಿಂದ ಗಂಗಾದೇವಿಯು ಪ್ರಸನ್ನಳಾಗಿ ಸಕಲ ಪಾಪಗಳಿಂದಲೂ ವಿಮುಕ್ತನನ್ನಾಗಿ ಮಾಡಿ ಪಾವನನನ್ನಾಗಿ ಮಾಡುತ್ತಾಳೆ. ಅವಳ ದರ್ಶನವನ್ನು ಮಾಡಿದರೆ ಮಂಗಳವನ್ನುಂಟುಮಾಡುತ್ತಾಳೆ. ಅವಳಲ್ಲಿ ಮಿಂದರೆ ಮತ್ತು ಅವಳ ತೀರ್ಥವನ್ನು ಪ್ರಾಶನಮಾಡಿದರೆ ಮಿಂದವನ ಮತ್ತು ತೀರ್ಥಪ್ರಾಶನವನ್ನು ಮಾಡಿದವನ ಏಳು ತಲೆಮಾರಿನವರನ್ನೂ ಪರಿಶುದ್ಧರನ್ನಾಗಿ ಮಾಡುತ್ತಾಳೆ. ಗಂಗೆಯಲ್ಲಿ ಅಸ್ಥಿಪ್ರಕ್ಷೇಪಮಾಡುವುದರಲ್ಲಿಯೂ ಒಂದು ಐತಿಹ್ಯವಿದೆ. ಧರ್ಮಜ! ಯಾತ್ರಿಕನು ಪುಣ್ಯತೀರ್ಥಗಳನ್ನೂ, ಪುಣ್ಯಕ್ಷೇತ್ರಗಳನ್ನೂ ಸಂದರ್ಶಿಸಿ ಪುಣ್ಯವನ್ನು ಪಡೆದು ಸ್ವರ್ಗಲೋಕವನ್ನು ಪಡೆಯಬಹುದು. ಆದರೆ ಮೃತನಾದವನ ಅಸ್ಥಿಯು ಗಂಗೆಯಲ್ಲಿ ಬಿಡಲ್ಪಟ್ಟಿದ್ದೇ ಆದರೆ ಅವನು ಪುಣ್ಯಕ್ಷೇತ್ರಗಳನ್ನು ಸಂದರ್ಶಿಸದಿದ್ದರೂ ಗಂಗಾಜಲದಲ್ಲಿ ಅಸ್ಥಿಯಿರುವಷ್ಟು ಕಾಲವೂ ಸ್ವರ್ಗಲೋಕದಲ್ಲಿರುತ್ತಾನೆ. (ಪವಿತ್ರಳಾದ ಗಂಗೆಯೊಡನೆ ಅಸ್ಥಿಸಂಸ್ಪರ್ಶವಿರುವುದರಿಂದಲೇ ಮಹಾಪುಣ್ಯವು ಲಭಿಸುತ್ತದೆ.) ಧರ್ಮಜ! ಗಂಗೆಯ ವಿಷಯದಲ್ಲಿ ಬ್ರಹ್ಮನು ಹೀಗೆ ಹೇಳಿದ್ದಾನೆ.

**ನ ಗಙ್ಗಾಸದೃಶಂ ತೀರ್ಥಂ ನ ದೇವಃ ಕೇಶವಾತ್ಪರಃ ।**
**ಬ್ರಾಹ್ಮಣೇಭ್ಯಃ ಪರಂ ನಾಸ್ತಿ ಏವಮಾಹ ಪಿತಾಮಹಃ ॥೯೬॥**

'ಗಂಗೆಗೆ ಸದೃಶವಾದ ಬೇರೊಂದು ತೀರ್ಥವಿಲ್ಲ. ಕೇಶವನಿಗಿಂತಲೂ ಶ್ರೇಷ್ಠನಾದ ಬೇರೊಬ್ಬ ದೇವನಿಲ್ಲ. ಬ್ರಾಹ್ಮಣರಿಗಿಂತಲೂ ಶ್ರೇಷ್ಠರಾದವರಿಲ್ಲ.'

**ಯತ್ರ ಗಙ್ಗಾ ಮಹಾರಾಜ ಸ ದೇಶಸ್ತತ್ತಪೋವನಮ್ ।**
**ಸಿದ್ಧಿಕ್ಷೇತ್ರಂ ಚ ತಜ್ಜ್ಞೇಯಂ ಗಙ್ಗಾತೀರಸಮಾಶ್ರಿತಮ್ ॥೯೭॥**

ಮಹಾರಾಜ! ಗಂಗೆಯು ಎಲ್ಲಿ ಪ್ರವಹಿಸುವಳೋ–ಆ ಪ್ರದೇಶವೇ (ತೀರಪ್ರದೇಶವೇ) ಪರಮಪವಿತ್ರವಾದ ತಪೋವನ. ಆ ಪ್ರದೇಶವೇ ಸಿದ್ಧಿ ಕ್ಷೇತ್ರ. ಎಲ್ಲ ತಪಸ್ಸುಗಳೂ ಅಲ್ಲಿ ಸಿದ್ಧಿಸುವುವು.

**ಇದಂ ಸತ್ಯಂ ದ್ವಿಜಾತೀನಾಂ ಸಾಧೂನಾಮಾತ್ಮಜಸ್ಯ ಚ ।**
**ಸುಹೃದಾಂ ಚ ಜಪೇತ್ಕರ್ಣೇ ಶಿಷ್ಯಸ್ಯಾನುಗತಸ್ಯ ಚ ॥೯೮॥**

ಪುಣ್ಯಕ್ಷೇತ್ರಗಳ ಈ ಸತ್ಯಸಿದ್ಧಾಂತವನ್ನು ದ್ವಿಜರಿಗೂ, ಸಾಧುಗಳಿಗೂ, ಮಗನಿಗೂ ಮತ್ತು ಸ್ನೇಹಿತರಿಗೂ ಕಿವಿಯಲ್ಲಿ (ಉಪದೇಶರೂಪದಲ್ಲಿ) ಹೇಳಬೇಕು. ಗುರುಶುಶ್ರೂಷಾನಿರತನಾಗಿರುವ ಶಿಷ್ಯನಿಗೂ ಹೇಳಬೇಕು. (ಇದು ಮಂತ್ರೋಪದೇಶದಷ್ಟು ಪರಮರಹಸ್ಯವಾದುದು.)

**ಇದಂ ಧನ್ಯಮಿದಂ ಮೇಧ್ಯಮಿದಂ ಸ್ವರ್ಗ್ಯಮನುತ್ತಮಮ್ ।**
**ಇದಂ ಪುಣ್ಯಮಿದಂ ರಮ್ಯಂ ಪಾವನಂ ಧರ್ಮ್ಯಮುತ್ತಮಮ್ ॥೯೯॥**
**ಮಹರ್ಷೀಣಾಮಿದಂ ಗುಹ್ಯಂ ಸರ್ವಪಾಪಪ್ರಮೋಚನಮ್ ।**
**ಅಧೀತ್ಯ ದ್ವಿಜಮಧ್ಯೇ ಚ ನಿರ್ಮಲಃ ಸ್ವರ್ಗಮಾಪ್ನುಯಾತ್ ॥೧೦೦॥**

ಪುಣ್ಯಕ್ಷೇತ್ರಗಳ ಈ ಸುಚರಿತ್ರವು ಐಶ್ವರ್ಯಪ್ರಾಪಕವಾದುದು ; ಪವಿತ್ರವಾದುದು ; ಸ್ವರ್ಗಪ್ರಾಪಕವಾದುದು ; ಪುಣ್ಯಪ್ರದವಾದುದು ; ಕೇಳಲೂ ಮತ್ತು ಹೇಳಲೂ ಅತಿರಮ್ಯವಾದುದು ; ಪರಮಪಾವನವಾದುದು; ಧರ್ಮಮೂಲವಾದುದು. ಋಷಿ-ಮಹರ್ಷಿಗಳಿಗೆ ಸಕಲಪಾಪ ಹಾರಿಯಾದ ಈ ತೀರ್ಥಕ್ಷೇತ್ರಗಳ ವಿಷಯವು ಅತಿರಹಸ್ಯವಾದ ಗುಹ್ಯವಾದ ಚರಿತ್ರೆಯಾಗಿದೆ. ದ್ವಿಜರ ಮಧ್ಯದಲ್ಲಿ ಈ ತೀರ್ಥಕ್ಷೇತ್ರಗಳ ಸುಚರಿತ್ರೆಯನ್ನು ಹೇಳುವುದರಿಂದಲೇ ಸಕಲಪಾಪಗಳೂ ಪರಿಹಾರವಾಗಿ ಅವಸಾನಾನಂತರ ದಲ್ಲಿ ಸ್ವರ್ಗಲೋಕವೂ ಪ್ರಾಪ್ತವಾಗುತ್ತದೆ.

**ಶ್ರೀಮತ್ಸ್ವರ್ಗ್ಯಂ ತಥಾ ಪುಣ್ಯಂ ಸಪತ್ನಶಮನಂ ಶಿವಮ್ ।**
**ಮೇಧಾಜನನಮಗ್ರ್ಯಂ ವೈ ತೀರ್ಥವಂಶಾನುಕೀರ್ತನಮ್ ॥೧೦೧॥**

ಪುಣ್ಯತೀರ್ಥಗಳ ಮತ್ತು ಪುಣ್ಯಕ್ಷೇತ್ರಗಳ ಕೀರ್ತನೆಯ ಶ್ರವಣವೂ

ಸಂಪತ್ಪ್ರದವಾದುದು ; ಸ್ವರ್ಗಪ್ರಾಪಕವಾದುದು ; ಮಹಾಪುಣ್ಯಪ್ರಾಪಕವಾದುದು ; ಶತ್ರುನಾಶಕವಾದುದು ; ಮೇಧಾಶಕ್ತಿಯನ್ನುಂಟುಮಾಡುವುದೂ ಆಗಿದೆ. ಮಹಾರಾಜ! ಇದರ ಫಲಶ್ರುತಿಯನ್ನು ಇನ್ನೂ ಹೇಳುವೆನು :

**ಅಪುತ್ರೋ ಲಭತೇ ಪುತ್ರಮಧನೋ ಧನಮಾಪ್ನುಯಾತ್ ।**
**ಮಹೀಂ ವಿಜಯತೇ ರಾಜಾ ವೈಶ್ಯೋ ಧನಮವಾಪ್ನುಯಾತ್ ।**
**ಶೂದ್ರೋ ಯಥೇಪ್ಸಿತಾನ್ಕಾಮಾನ್ಬ್ರಾಹ್ಮಣಃ ಪಾರಗಃ ಪಠನ್ ॥**

ಶುಚೀಭೂತನಾಗಿ ಆ ಪುಣ್ಯಕ್ಷೇತ್ರಗಳ ಮತ್ತು ಪುಣ್ಯತೀರ್ಥಗಳ ಚರಿತ್ರೆಯನ್ನು ಕೇಳಿದ್ದೇ ಆದರೆ–ಮಕ್ಕಳಿಲ್ಲದವನು ಮಕ್ಕಳನ್ನು ಪಡೆಯುತ್ತಾನೆ. ದರಿದ್ರನು ಧನವಂತನಾಗುತ್ತಾನೆ. ರಾಜನು ರಾಜ್ಯವನ್ನು ಗೆದ್ದುಕೊಳ್ಳಲು ಸಮರ್ಥನಾಗುತ್ತಾನೆ. ವೈಶ್ಯನು ಅತ್ಯಂತಧನಿಕನಾಗುತ್ತಾನೆ. ಶೂದ್ರನು ತನ್ನ ಕಾಮನೆಗಳೆಲ್ಲವನ್ನೂ ಪಡೆಯುತ್ತಾನೆ. ಬ್ರಾಹ್ಮಣನು ಸಕಲವಿದ್ಯಾಪಾರಂಗತನಾಗುತ್ತಾನೆ.

**ಯಶ್ಚೇದಂ ಶೃಣುಯಾನ್ನಿತ್ಯಂ ತೀರ್ಥಪುಣ್ಯಂ ನರಃ ಶುಚಿಃ ।**
**ಜಾತೀಃ ಸ ಸ್ಮರತೇ ಬಹ್ವೀರ್ನಾಕಪೃಷ್ಠೇ ಚ ಮೋದತೇ ॥೧೦೩॥**

**ಗಮ್ಯಾನ್ಯಪಿ ಚ ತೀರ್ಥಾನಿ ಕೀರ್ತಿತಾನ್ಯಗಮಾನಿ ಚ ।**
**ಮನಸಾ ತಾನಿ ಗಚ್ಛೇತ ಸರ್ವತೀರ್ಥಸಮೀಕ್ಷಯಾ ॥೧೦೪॥**

ತೀರ್ಥಗಳನ್ನೂ–ಪುಣ್ಯಕ್ಷೇತ್ರಗಳನ್ನೂ ಪ್ರತಿನಿತ್ಯವೂ ಸ್ಮರಣೆಮಾಡುವುದರಿಂದಲೂ, ಯಾತ್ರಾಫಲವನ್ನು ಪಠನಮಾಡುವುದರಿಂದಲೂ, ಶ್ರವಣಮಾಡುವುದರಿಂದಲೂ ಪೂರ್ವಜನ್ಮಗಳನ್ನು ಸ್ಮರಿಸುವ ಶಕ್ತಿಯುಂಟಾಗುತ್ತದೆ. ಅವಸಾನಾನಂತರದಲ್ಲಿ ಸ್ವರ್ಗಲೋಕದಲ್ಲಿ ಆನಂದಿಸುತ್ತಾನೆ. ನಾನೀಗ ಹೇಳಿರುವ ಪುಣ್ಯಕ್ಷೇತ್ರಗಳಲ್ಲಿ ಯಾವನಿಗೆ ಆ ತೀರ್ಥಕ್ಷೇತ್ರಗಳ ಯಾತ್ರೆ ಮಾಡಬೇಕೆಂಬ ಆಕಾಂಕ್ಷೆಯುಂಟಾಗುವುದೋ–ಅವನು ದುರ್ಗಮವಾದ ಕೆಲವು ಕ್ಷೇತ್ರಗಳಿಗೆ ಹೋಗಲಾಗದಿದ್ದರೆ ಮನಸ್ಸಿನಲ್ಲಾದರೂ ಅವುಗಳನ್ನು ಸ್ಮರಿಸಿಕೊಳ್ಳಬೇಕು. ಪುಣ್ಯಕ್ಷೇತ್ರಗಳ ಯಾತ್ರೆಯ ಪುಣ್ಯಪ್ರಾಪ್ತಿಗಾಗಿ ಅಷ್ಟವಸುಗಳೂ, ಸಾಧ್ಯರೂ, ಏಕಾದಶರುದ್ರರೂ, ದ್ವಾದಶಾದಿತ್ಯರೂ, ಸಪ್ತಮರುತ್ತುಗಳೂ, ಅಶ್ವಿನೀದೇವತೆಗಳೂ, ದೇವಸಮಾನರಾದ ಋಷಿ-ಮಹರ್ಷಿ

ಗಳೂ ಆ ಪುಣ್ಯಕ್ಷೇತ್ರಗಳ ಯಾತ್ರೆಮಾಡಿ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿರುತ್ತಾರೆ. ನಾನು ಮೇಲೆ ಹೇಳಿದ ರೀತಿಯಲ್ಲಿ ನೀನೂ ಬ್ರಹ್ಮಚರ್ಯವ್ರತಾನುಷ್ಠಾನದಿಂದಿದ್ದು, ನಿಯತಾಹಾರನಾಗಿ, ಜಿತೇಂದ್ರಿಯನಾಗಿ ಆ ತೀರ್ಥಕ್ಷೇತ್ರಗಳ ಯಾತ್ರೆಮಾಡುವವನಾಗು. ಯುಧಿಷ್ಠಿರ! ನಿನ್ನ ಪುಣ್ಯವನ್ನು ಹೆಚ್ಚಿಸಿಕೊ. ಪೂತಾತ್ಮರಿಂದ, ಆಸ್ತಿಕರಿಂದ, ಸಾತ್ವಿಕರಿಂದ ಮಾತ್ರವೇ ಪುಣ್ಯತೀರ್ಥಗಳ ಯಾತ್ರೆಯನ್ನು ಮಾಡಲು ಸಾಧ್ಯವಾಗುವುದು.

**ಪ್ರಾಪ್ಯನ್ತೇ ತಾನಿ ತೀರ್ಥಾನಿ ಸದ್ಭಿಃ ಶಾಸ್ತ್ರಾನುದರ್ಶಿಭಿಃ ।**
**ನಾವ್ರತೀ ನಾಕೃತಾತ್ಮಾ ಚ ನಾಶುಚಿರ್ನ ಚ ತಸ್ಕರಃ ।**
**ಸ್ನಾತಿ ತೀರ್ಥೇಷು ಕೌರವ್ಯ ನ ಚ ವಕ್ರಮತಿರ್ನರಃ ॥೧೦೮॥**

ಕೌರವನೇ! ತೀರ್ಥಯಾತ್ರೆಯನ್ನು ಮಾಡುವವರು ಪರಿಶುದ್ಧಮನಸ್ಕರಾಗಿರಬೇಕು. ಆಸ್ತಿಕರಾಗಿರಬೇಕು ಮತ್ತು ವೇದವಿಹಿತವಾದ ಕರ್ಮಾನುಷ್ಠಾನಗಳಲ್ಲಿ ನಂಬಿಕೆಯುಳ್ಳವರಾಗಿರಬೇಕು. ಆದುದರಿಂದ ಈ ತೀರ್ಥಗಳು ಶಾಸ್ತ್ರಜ್ಞರಾದ ಸತ್ಪುರುಷರಿಗೆ ಮಾತ್ರವೇ ಲಭ್ಯವಾಗುತ್ತವೆ. ನಿಯಮಾನುಷ್ಠಾನವಿಲ್ಲದವನೂ, ಜಿತೇಂದ್ರಿಯನಲ್ಲದವನೂ, ವೇದಶಾಸ್ತ್ರದಲ್ಲಿ ನಂಬಿಕೆಯಿಲ್ಲದವನೂ, ಚೋರನೂ ಮತ್ತು ವಕ್ರಬುದ್ಧಿಯುಳ್ಳವನೂ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಲಾರನು ಮತ್ತು ಪುಣ್ಯಕ್ಷೇತ್ರಗಳ ಯಾತ್ರೆಯನ್ನೂ ಮಾಡಲಾರನು."

ಧರ್ಮಜ! ಪುಲಸ್ತ್ಯರು ಭೀಷ್ಮನನ್ನು ಕುರಿತು ಹೇಳಿದರು :

"ಭೀಷ್ಮ! ನೀನು ಯಾವಾಗಲೂ ಧರ್ಮನಿಷ್ಠನಾಗಿರುವೆ ಮತ್ತು ಸುವ್ರತನಾಗಿಯೂ ಇರುವೆ. ನಿನ್ನಿಂದ ಅಥವಾ ನಿನ್ನ ಧರ್ಮಾನುಷ್ಠಾನದಿಂದ ನಿನ್ನ ಪಿತೃ-ಪಿತಾಮಹ-ಪ್ರಪಿತಾಮಹರೂ ಬ್ರಹ್ಮಪ್ರಮುಖರಾದ ದೇವತೆಗಳೂ, ಋಷಿ-ಮಹರ್ಷಿಗಳೂ ಸುಪ್ರೀತರಾಗಿದ್ದಾರೆ. ಇಂದ್ರನಿಗೆ ಸಮಾನನಾಗಿರುವ ನೀನು ಈ ಕ್ಷೇತ್ರಗಳ ಶ್ರವಣದಿಂದ ವಸುಗಳ ಲೋಕವನ್ನು ಪಡೆಯುವೆ ಮತ್ತು ಈ ಭೂಮಿಯಲ್ಲಿ ಶಾಶ್ವತವಾದ ಕೀರ್ತಿಯನ್ನೂ ಪಡೆಯುವೆ."

ನಾರದರು ಧರ್ಮಜನಿಗೆ ಹೇಳುತ್ತಾರೆ :

"ಯುಧಿಷ್ಠಿರ! ನಾನು ಮೇಲೆ ಹೇಳಿದ ರೀತಿಯಲ್ಲಿ ಭೀಷ್ಮನ ವಿಷಯದಲ್ಲಿ ಪರಮಪ್ರೀತರಾಗಿದ್ದ ಪುಲಸ್ತ್ಯರು ಪುಣ್ಯಕ್ಷೇತ್ರಗಳ ಮತ್ತು ಪುಣ್ಯ

ತೀರ್ಥಗಳ ರಹಸ್ಯವನ್ನು ಹೇಳಿ ಭೀಷ್ಮನ ಅನುಮತಿಯನ್ನು ಪಡೆದು ಅಲ್ಲಿಯೇ ಅಂತರ್ಧಾನಹೊಂದಿದರು.

ಶಾಸ್ತ್ರತತ್ತ್ವಾರ್ಥದರ್ಶಿಯಾದ ಭೀಷ್ಮನೂ ಪುಲಸ್ತ್ಯರ ಪ್ರವಚನದಂತೆ ಅನುಕ್ರಮವಾಗಿ ಭೂಮಿಯನ್ನು ಪ್ರದಕ್ಷಿಣೆಮಾಡಿದನು. ಅಂತೆಯೇ ಭೀಷ್ಮನ ತೀರ್ಥಯಾತ್ರೆಯು ಪ್ರಯಾಗದಲ್ಲಿ ಪರಿಸಮಾಪ್ತವಾಯಿತು.

ಧರ್ಮಜ! ತೀರ್ಥಯಾತ್ರೆಮಾಡುವುದು ಮಹಾಪುಣ್ಯಪ್ರದವಾದುದು. ಸಕಲಪಾಪಪರಿಹಾರಕವಾದುದು.

**ಅನೇನ ವಿಧಿನಾ ಯಸ್ತು ಪೃಥಿವೀಂ ಸಂಚರಿಷ್ಯತಿ ।**
**ಅಶ್ವಮೇಧಶತಸ್ಯಾಗ್ರ್ಯಂ ಫಲಂ ಪ್ರೇತ್ಯ ಸ ಭೋಕ್ಷ್ಯತಿ ॥೧೧೫॥**

ನಾನು ಮೇಲೆ ಹೇಳಿದಂತೆ ಪುಲಸ್ತ್ಯರು ಭೀಷ್ಮನಿಗೆ ಉಪದೇಶಿಸಿದ ಕ್ರಮದಲ್ಲಿ ಬ್ರಹ್ಮಚರ್ಯವ್ರತನಿಷ್ಠನಾಗಿ, ನಿಯತಾಹಾರನಾಗಿ ಯಾವನು ತೀರ್ಥಯಾತ್ರೆಯನ್ನು ಮಾಡುವನೋ–ಅವನಿಗೆ ನೂರು ಅಶ್ವಮೇಧಯಾಗ ಗಳನ್ನು ಮಾಡಿದ ಫಲವು ಲಭ್ಯವಾಗುತ್ತದೆ ಮತ್ತು ಆ ಫಲದಿಂದ ಮುಕ್ತಿ ಯನ್ನೂ ಪಡೆಯುತ್ತಾನೆ. ಅವನಿಗೆ ಅಣಿಮಾದ್ಯಷ್ಟಸಿದ್ಧಿಗಳೂ ಪ್ರಾಪ್ತವಾಗು ತ್ತವೆ. ಭೀಷ್ಮನು ಯಾವ ರೀತಿಯಲ್ಲಿ ತೀರ್ಥಯಾತ್ರೆಮಾಡಿ ಅನಂತವಾದ ಫಲವನ್ನು ಪಡೆದನೋ ಅದಕ್ಕಿಂತಲೂ ಎಂಟು ಪಾಲು ಹೆಚ್ಚಾದ ಫಲವನ್ನು ನೀನು ಪಡೆಯುವೆ. ಏಕೆಂದರೆ : ನೀನು ನಿನ್ನನ್ನೇ ಅನುಸರಿಸಿ ಬಂದಿರುವ ಈ ತಪಸ್ವಿಗಳನ್ನೂ ತೀರ್ಥಯಾತ್ರೆಗೆ ಕರೆದುಕೊಂಡು ಹೋಗಲಿರುವೆ.

ಧರ್ಮಜ! ತೀರ್ಥಯಾತ್ರೆಯ ಸಮಯದಲ್ಲಿ ಬಹಳ ಜಾಗರೂಕತೆ ಯಿಂದಿರಬೇಕು. ಆ ಕ್ಷೇತ್ರಗಳೆಲ್ಲವೂ ರಾಕ್ಷಸರಿಂದ ಆವೃತವಾಗಿರುತ್ತವೆ. ನಿನ್ನಂತಹ ಧರ್ಮಾತ್ಮನನ್ನುಳಿದು ಮತ್ತಾರೂ ಅತಿದುರ್ಗಮವಾದ ಕೆಲವು ತೀರ್ಥಗಳ ಯಾತ್ರೆಯನ್ನು ಮಾಡಲಾರರು.

**ಇದಂ ದೇವರ್ಷಿಚರಿತಂ ಸರ್ವತೀರ್ಥಾಭಿಸಂವೃತಮ್ ।**
**ಯಃ ಪಠೇತ್ಕಲ್ಯಮುತ್ಥಾಯ ಸರ್ವಪಾಪೈಃ ಪ್ರಮುಚ್ಯತೇ ॥೧೧೮॥**

ಸರ್ವತೀರ್ಥಗಳಿಗೆ ಮತ್ತು ದೇವರ್ಷಿಗಳಿಗೆ ಸಂಬಂಧಿಸಿದ ಈ ದಿವ್ಯ ಚರಿತವನ್ನು ಪ್ರತಿನಿತ್ಯವೂ ಪ್ರಾತಃಕಾಲದಲ್ಲಿ ಯಾರು ಪಠನಮಾಡುತ್ತಾರೆಯೋ–ಅವರ ಸಕಲಪಾಪಗಳೂ ಪರಿಹಾರವಾಗುತ್ತವೆ. ವಾಲ್ಮೀಕಿ, ಕಶ್ಯಪ, ಆತ್ರೇಯ, ಕುಂಡಜಠರ, ವಿಶ್ವಾಮಿತ್ರ, ಗೌತಮ, ಅಸಿತ, ದೇವಲ, ಮಾರ್ಕಂಡೇಯ, ಗಾಲವ, ಭರದ್ವಾಜ, ವಸಿಷ್ಠ, ಉದ್ದಾಲಕ, ಶೌನಕ ಮತ್ತು ಅವನ ಮಗ, ತಪಸ್ವಿಗಳಲ್ಲಿ ಶ್ರೇಷ್ಠರೆನಿಸಿದ ವ್ಯಾಸರು, ದುರ್ವಾಸರು, ಜಾಬಾಲಿಗಳು–ಇವರೇ ಮುಂತಾದ ಮಹರ್ಷಿಗಳೆಲ್ಲರೂ ನಿನ್ನನ್ನೇ (ನಿನ್ನ ತೀರ್ಥಯಾತ್ರೆಯನ್ನೇ) ನಿರೀಕ್ಷಣೆಮಾಡುತ್ತಿರುತ್ತಾರೆ. ಅವರೊಡನೆ ನೀನು ತೀರ್ಥಗಳ ಯಾತ್ರೆಯನ್ನು ಮಾಡುವವನಾಗು. ಲೋಮಶರೆಂಬ ಮಹರ್ಷಿಗಳು ಈಗ ನಿನ್ನ ಬಳಿಗೆ ಬರಲಿದ್ದಾರೆ. ಅವರ ಜೊತೆಯಲ್ಲಿ ತೀರ್ಥಯಾತ್ರೆಗೆ ಹೊರಡು. ನಾನೂ ಕೂಡ ಆ ವೇಳೆಗೆ ನಿನ್ನ ಬಳಿಗೆ ಬರುತ್ತೇನೆ. ಅನುಕ್ರಮವಾಗಿ ತೀರ್ಥಯಾತ್ರೆಗಳನ್ನು ಮಾಡುವುದರಿಂದ ಮಹಾಭಿಷನಿಗೆ ಪ್ರಾಪ್ತವಾದ ಶಾಶ್ವತವಾದ ಯಶಸ್ಸನ್ನು ನೀನೂ ಪಡೆಯುವೆ. ಯಯಾತಿ-ಪುರೂರವರು ಯಾವ ರೀತಿಯಲ್ಲಿ ಧರ್ಮಾಚರಣೆಯಿಂದ ಶ್ರೇಯಃ-ಪ್ರೇಯಗಳನ್ನು ಪಡೆದರೋ–ಅದೇ ರೀತಿಯಲ್ಲಿ ನೀನೂ ಸದಾ ಧರ್ಮನಿರತನಾಗಿರುವುದರಿಂದ ಶಾಶ್ವತವಾದ ಯಶಸ್ಸನ್ನು ಪಡೆಯುವೆ. ಭಗೀರಥ-ರಾಮಾದಿಗಳು ಹೇಗೆ ರಾಜವಂಶದಲ್ಲಿ ಪ್ರಸಿದ್ಧಿಹೊಂದಿದರೋ ಅದೇ ರೀತಿಯಲ್ಲಿ ನೀನೂ ನಿನ್ನ ವಂಶಕ್ಕೆ ತಿಲಕಪ್ರಾಯನಾಗುವೆ. ನೀನು ರಾಜರೆಲ್ಲರಿಗಿಂತಲೂ ಅಧಿಕನಾಗಿ ಸೂರ್ಯನಂತೆ ಸ್ವಯಂಪ್ರಭೆಯಿಂದ (ಆತ್ಮತೇಜಸ್ಸಿನಿಂದ) ಪ್ರಕಾಶಿಸುವೆ. ಮನು, ಇಕ್ಷ್ವಾಕು, ಯಶೋವಂತನಾದ ಪೂರು, ವೈನ್ಯ–ಮುಂತಾದವರು ಯಾವ ರೀತಿಯಲ್ಲಿ ಪ್ರಸಿದ್ಧಿಹೊಂದಿದರೋ ಅದೇ ರೀತಿಯಲ್ಲಿ ನೀನೂ ಧರ್ಮಿಷ್ಠನೆಂದೂ, ಧರ್ಮಾತ್ಮನೆಂದೂ ಪ್ರಸಿದ್ಧಿಯನ್ನೂ ಪಡೆಯುವೆ. ಹಿಂದೆ ಯಾವ ರೀತಿಯಲ್ಲಿ ವೃತ್ರಹಂತಕನಾದ ದೇವರಾಜನಾದ ಇಂದ್ರನು ಶತ್ರುಗಳೆಲ್ಲರನ್ನೂ ಧ್ವಂಸಮಾಡಿ ನಿಶ್ಚಿಂತನಾಗಿ ಮೂರು ಲೋಕಗಳನ್ನೂ ಆಳತೊಡಗಿದನೋ–ಅದೇ ರೀತಿಯಲ್ಲಿ ನೀನೂ ನಿನ್ನ ಶತ್ರುಗಳೆಲ್ಲರನ್ನೂ ಧ್ವಂಸಮಾಡಿ ಪ್ರಜೆಗಳನ್ನಾಳುವೆ.

ರಾಜೀವಲೋಚನನೇ! ನೀನು ಸ್ವಧರ್ಮಾನುಸಾರವಾಗಿ ಈ ವಿಶ್ವವೆಲ್ಲವನ್ನೂ ಪುನಃ ಗೆದ್ದು ಕಾರ್ತವೀರ್ಯಾರ್ಜುನನಂತೆ ಖ್ಯಾತಿವಂತನಾಗುವೆ."

ಜನಮೇಜಯ! ಈ ರೀತಿಯಲ್ಲಿ ನಾರದರು ಧರ್ಮರಾಜನನ್ನು ಪುಣ್ಯತೀರ್ಥಗಳ ಮತ್ತು ಪುಣ್ಯಕ್ಷೇತ್ರಗಳ ಪ್ರವಚನದಿಂದ ಸಂತೈಸಿ, ಆತನ ಅನುಜ್ಞೆಯನ್ನು ಪಡೆದು ಅಲ್ಲಿಯೇ ಅಂತರ್ಹಿತರಾದರು. ನಾರದರು ಹೊರಟುಹೋದ ಬಳಿಕ ಯುಧಿಷ್ಠಿರನು ಪುಣ್ಯತೀರ್ಥಗಳನ್ನೂ ಮತ್ತು ಅವುಗಳ ಯಾತ್ರೆಯಿಂದ ಲಭಿಸುವ ಫಲಗಳನ್ನೂ ಮನಸ್ಸಿನಲ್ಲಿಯೇ ಸ್ಮರಣೆ ಮಾಡುತ್ತಾ ತನ್ನ ಸುತ್ತಲೂ ಇದ್ದ ಮಹರ್ಷಿಗಳೊಡನೆ ತೀರ್ಥಯಾತ್ರೆಯ ವಿಷಯವಾಗಿ ಪುನಃ ಪ್ರಸ್ತಾಪಮಾಡಿದನು.

ಎಂಬತ್ತೈದನೆಯ ಅಧ್ಯಾಯವು ಮುಗಿಯಿತು.

೮೬ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ತೀರ್ಥಕ್ಷೇತ್ರಗಳ ವಿಷಯವಾಗಿ ಧೌಮ್ಯರೊಡನೆ ಯುಧಿಷ್ಠಿರನ ಸಮಾಲೋಚನೆ

ಜನಮೇಜಯ! ತೀರ್ಥಯಾತ್ರೆಯ ವಿಷಯವಾಗಿ ಯುಧಿಷ್ಠಿರನು ತನ್ನ ತಮ್ಮಂದಿರ ಅಭಿಪ್ರಾಯಗಳನ್ನು ತಿಳಿದನಂತರ ಬ್ರಹ್ಮಸಮಾನರಾದ ಪುರೋಹಿತರಾದ ಧೌಮ್ಯರನ್ನು ಕುರಿತು ಹೇಳಿದನು : "ಬ್ರಾಹ್ಮಣೋತ್ತಮರೇ! ನಾನು ಶಸ್ತ್ರಾಸ್ತ್ರಗಳ ಪ್ರಾಪ್ತಿಗಾಗಿ ಪುರುಷವ್ಯಾಘ್ರನೂ, ಸತ್ಯಪರಾಕ್ರಮನೂ, ಮಹಾಬಾಹುವೂ, ಮಹಾತ್ಮನೂ ಆದ ನನ್ನ ತಮ್ಮನಾದ ಅರ್ಜುನನನ್ನು ಕಳುಹಿಸಿಕೊಟ್ಟೆನು. ನನ್ನ ತಮ್ಮನ ಗುಣಾತಿಶಯಗಳನ್ನು ಎಷ್ಟು ಬಾರಿ ಹೇಳಿದರೂ ನನಗೆ ತೃಪ್ತಿಯೇ ಇಲ್ಲ. ಧೌಮ್ಯರೇ! ನಮ್ಮ ಅರ್ಜುನನು ಮಹಾವೀರನು ; ನಮ್ಮನ್ನು ಕಂಡರೆ ಅವನಿಗೆ ಹೆಚ್ಚು ಮಮತೆ; ನಮ್ಮಲ್ಲಿಯೇ ಅನುರಕ್ತನಾಗಿರುತ್ತಾನೆ. ಮಹಾಸಮರ್ಥನು. ಅವನ ಸಾಮರ್ಥ್ಯವೂ ಅಪಾರವಾದುದು. ಮೇಲಾಗಿ ತಪೋಧನನು. ಮಾಡಬೇಕಾದ ಕಾರ್ಯವನ್ನು ಮಾಡಿ ತೋರಿಸುವ ಸ್ವಭಾವದವನು. (ಕೇವಲ ಮಾತಿನಲ್ಲಿಯೇ ಮುಗಿಸುವವನಲ್ಲ.) ಬಾಣಪ್ರಯೋಗದಲ್ಲಿ ಅವನ ಕೈಚಳಕವು ಅನುಪಮವಾದುದು. ಅವನ ವಿಷಯದಲ್ಲಿ ಹೆಚ್ಚೇನು ಹೇಳಲಿ? ಆತನು

ಎಲ್ಲ ವಿಷಯಗಳಲ್ಲಿಯೂ ವಾಸುದೇವನಿಗೆ ಅನುರೂಪನಾಗಿರುತ್ತಾನೆ. ಶತ್ರು ವಿಧ್ವಂಸಕರಾದ ಕೃಷ್ಣರಿಬ್ಬರೂ ಯಾರೆಂಬುದನ್ನು ತ್ರಿಕಾಲಜ್ಞಾನಿಗಳಾದ ವ್ಯಾಸರು ತಿಳಿದುಕೊಂಡಿರುವಂತೆಯೇ ನಾನೂ ಚೆನ್ನಾಗಿ ತಿಳಿದುಕೊಂಡಿರುತ್ತೇನೆ.

**ತ್ರಿಯುಗೌ ಪುಣ್ಡರೀಕಾಕ್ಷೌ ವಾಸುದೇವಧನಂಜಯೌ ।**
**ನಾರದೋಽಪಿ ತಥಾ ವೇದ ಯೋಽಪ್ಯಶಂಸತ್ಸದಾ ಮಮ ॥೫॥**

ಇಬ್ಬರೂ ಮೂರು ಯುಗಗಳಿಂದಲೂ ಜೊತೆಯಲ್ಲಿಯೇ ಇದ್ದಾರೆ. ಕೃತಯುಗದಲ್ಲಿ ಧರ್ಮನ ಭಾರ್ಯೆಯಾದ ಮೂರ್ತಿ ಎಂಬುವಳಲ್ಲಿ ನರ-ನಾರಾಯಣರಾಗಿ ಜನಿಸಿದ್ದರು. ಅವರೇ ಈ ದ್ವಾಪರಯುಗದ ಅಂತ್ಯದಲ್ಲಿ ವಾಸುದೇವ-ಧನಂಜಯರಾಗಿ ಜನಿಸಿದ್ದಾರೆ. ಆ ಮಹಾನುಭಾವರು ಸಮಗ್ರ ವಾದ (ಐಶ್ವರ್ಯ, ಜ್ಞಾನ, ಯಶಸ್ಸು, ಸಂಪತ್ತು, ವೈರಾಗ್ಯ, ಧರ್ಮಗಳೆಂಬ) ಆರು ಐಶ್ವರ್ಯಗಳಿಂದ ಕೂಡಿದವರಾಗಿದ್ದಾರೆ. ಕೃಷ್ಣಾರ್ಜುನರು ಷಡಂಗ ಪೂರ್ಣರಾಗಿದ್ದಾರೆ. (ಸರ್ವಜ್ಞತೆ, ತೃಪ್ತಿ, ಅನಾದಿಬೋಧ, ಸ್ವತಂತ್ರತೆ, ಸಂಸಾರದಲ್ಲಿದ್ದೂ ನಿರ್ಲಿಪ್ತತೆಯಿಂದಿರುವುದು, ಅನಂತಶಕ್ತಿಯನ್ನು ಹೊಂದಿರುವುದು–ಇವುಗಳಿಗೆ ಮಹೇಶ್ವರನ ಷಡಂಗಗಳೆಂದು ಹೆಸರು.) ಪುಂಡರೀಕಾಕ್ಷರಾದ, ವಿಷ್ಣುವಿಗೆ ಸಮಾನರಾದ ವಾಸುದೇವ-ಧನಂಜಯರು ಯಾರೆಂಬ ರಹಸ್ಯವನ್ನು ನಾರದರು ತಿಳಿದಿದ್ದಾರೆ. ಅವರು ಬಂದಾಗಲೆಲ್ಲಾ ಕೃಷ್ಣಾರ್ಜುನರ ಅಮಿತವಾದ ಗುಣಗಳನ್ನು ಪ್ರಶಂಸೆಮಾಡುತ್ತಲೇ ಇರುತ್ತಾರೆ. ಹಿಂದೆ ನರ-ನಾರಾಯಣರೆಂಬ ಋಷಿಗಳ ರೂಪದಲ್ಲಿದ್ದವರು ಇಂದು ವಾಸುದೇವ-ಧನಂಜಯರಾಗಿರುವರೆಂಬ ರಹಸ್ಯವನ್ನು ನಾನೂ ತಿಳಿದಿದ್ದೇನೆ. ನರನ ಅಘಟಿತಘಟನಾಸಾಮರ್ಥ್ಯವನ್ನು ಮನಗಂಡೇ ನಾನು ಅವನನ್ನು ಈ ಮಹಾಕಾರ್ಯದಲ್ಲಿ ನಿಯೋಜಿಸಿದ್ದೇನೆ.

ಪರಾಕ್ರಮದಲ್ಲಿ ತ್ರೈಲೋಕ್ಯಾಧಿಪತಿಯಾದ ಇಂದ್ರನಿಗೇನೂ ಕಡಿಮೆ ಯಿಲ್ಲದ ಸುರೇಂದ್ರಸುತನಾದ ಅರ್ಜುನನನ್ನು ದೇವತೆಗಳಿಗೆ ಅಧಿಪತಿಯಾದ ಶಕ್ರನನ್ನು ಸಂದರ್ಶಿಸುವುದಕ್ಕೂ ಮತ್ತು ಅವನಿಂದ ಶಸ್ತ್ರಾಸ್ತ್ರಗಳನ್ನು ಪಡೆಯುವುದಕ್ಕೂ ಕಳುಹಿಸಿದ್ದೇನೆ.

ದುರ್ಯೋಧನನ ಪಕ್ಷದಲ್ಲಿ ಭೀಷ್ಮ-ದ್ರೋಣರಿಬ್ಬರು ಅತಿರಥರು. ಕೃಪ, ಮಹಾಪರಾಕ್ರಮಿಯಾದ ಅಶ್ವತ್ಥಾಮ ಇವರು ಮಹಾರಥರು. ಅವರನ್ನು ಸೈನ್ಯಾಧಿಪತ್ಯದಲ್ಲಿ ಧೃತರಾಷ್ಟ್ರನ ಮಗನಾದ ದುರ್ಯೋಧನನು ನಿಯೋಜಿಸಿರುತ್ತಾನೆ. ಅವರೆಲ್ಲರೂ ವೇದವಿದರೂ, ಶೂರರೂ, ಸರ್ವಾಸ್ತ್ರ ಕೋವಿದರೂ ಆಗಿರುತ್ತಾರೆ. ಮಹಾಬಲವುಳ್ಳ ಆ ಸೇನಾನಾಯಕರು ನಮ್ಮ ಅರ್ಜುನನೊಡನೆ ಯುದ್ಧಮಾಡಲು ಸದಾ ಸಿದ್ಧರಾಗಿರುತ್ತಾರೆ.

ಸೂತಪುತ್ರನಾದ ಕರ್ಣನು ಸಕಲದಿವ್ಯಾಸ್ತ್ರಗಳನ್ನೂ ತಿಳಿದವನಾಗಿರುತ್ತಾನೆ. ಅವನು ಮಹಾರಥನು.

**ಯೋಽಸ್ತ್ರವೇಗಾನಿಲಬಲಃ ಶರಾರ್ಚಿಸ್ತಲನಿಃಸ್ವನಃ।**
**ರಜೋಧೂಮೋಽಸ್ತ್ರಸಮ್ಪಾತೋ ಧಾರ್ತರಾಷ್ಟ್ರಾನಿಲೋದ್ಧತಃ ॥೧೦॥**

**ನಿಸೃಷ್ಟ ಇವ ಕಾಲೇನ ಯುಗಾನ್ತೇ ಜ್ವಲನೋ ಮಹಾನ್ ।**
**ಮಮ ಸೈನ್ಯಮಯಂ ಕಕ್ಷಂ ಪ್ರಧಕ್ಷ್ಯತಿ ನ ಸಂಶಯಃ ॥೧೧॥**

ಕರ್ಣನೇ ಪ್ರಳಯಾಗ್ನಿ. ಅಸ್ತ್ರವೇಗವೆಂಬ ಗಾಳಿಯೇ ಅವನ ಬಲ. ಬಾಣಗಳೇ ಕರ್ಣಾಗ್ನಿಯ ಜ್ವಾಲೆಗಳು. ಕೈತಟ್ಟುವುದೇ ಛಟ-ಛಟಾತ್ಕಾರ. ರಜೋಗುಣವೇ ಹೊಗೆ. ಅಸ್ತ್ರಗಳೇ ಅಗ್ನಿಯ ಪ್ರಸರಿಸುವಿಕೆ. ಕೌರವನೆಂಬ ವಾಯುವು ಈ ಅಗ್ನಿಯನ್ನು ಮತ್ತಷ್ಟು ಜ್ವಲಿಸುವಂತೆ ಮಾಡುತ್ತದೆ. ಪ್ರಳಯಕಾಲದಲ್ಲಿ ಕಾಲನಿಂದ ಸೃಷ್ಟಿಸಲ್ಪಟ್ಟ ಮಹತ್ತಾದ ಅಗ್ನಿಯು ಪ್ರಪಂಚವನ್ನು ದಹಿಸುವಂತೆ ಕರ್ಣಾಗ್ನಿಯು ನನ್ನ ಸೈನ್ಯವೆಂಬ ಪೊದೆಯನ್ನು ಸುಟ್ಟುಬಿಡುತ್ತದೆ.

**ತಂ ಸ ಕೃಷ್ಣಾನಿಲೋದ್ಧೂತೋ ದಿವ್ಯಾಸ್ತ್ರಜ್ವಲನೋ ಮಹಾನ್ ।**
**ಶ್ವೇತವಾಜಿಬಲಾಕಾಭೃದ್ಗಾಣ್ಡೀವೇನ್ದ್ರಾಯುಧೋಲ್ಬಣಃ ॥೧೨॥**

**ಸಂರಬ್ಧಃ ಶರಧಾರಾಭಿಃ ಸುದೀಪ್ತಂ ಕರ್ಣಪಾವಕಮ್ ।**
**ಅರ್ಜುನೋದೀರಿತೋ ಮೇಘಃ ಶಮಯಿಷ್ಯತಿ ಸಂಯುಗೇ ॥೧೩॥**

ಅಂತಹ ಪ್ರಳಯಾಗ್ನಿಯ ಕಿಚ್ಚನ್ನು ಶಮನಮಾಡಬೇಕಾದರೆ–ಅರ್ಜುನ ರೂಪವಾದ ಮೋಡದಿಂದ ಮಾತ್ರವೇ ಸಾಧ್ಯವಾದೀತು. ಆ ಮೋಡವನ್ನು

ಕೃಷ್ಣರೂಪವಾದ ವಾಯುವು ಪ್ರೇರಣಮಾಡಬೇಕು. ಕೃಷ್ಣವಾಯುವಿನಿಂದ ಸುವ್ಯವಸ್ಥಿತವಾಗಿ ನಿಯಂತ್ರಿತವಾದ ಅರ್ಜುನಮೇಘವು ದಿವ್ಯಾಸ್ತ್ರಗಳೆಂಬ ಮಿಂಚಿನಿಂದ (ಸಿಡಿಲಿನಿಂದ) ಕೂಡಿದ್ದಾಗಿ, ಬಿಳಿಯ ಕುದುರೆಗಳೆಂಬ ಬೆಳ್ಳಕ್ಕಿಗಳನ್ನು ಧರಿಸಿ, ಗಾಂಡೀವವೆಂಬ ಕಾಮನಬಿಲ್ಲಿನಿಂದ ಉಗ್ರವಾಗಿ ಧಾರಾಕಾರವಾಗಿ ಮಳೆಯ ರೂಪದಲ್ಲಿ ಸುರಿಸುವ ಬಾಣವೃಷ್ಟಿಯಿಂದ ಕರ್ಣನೆಂಬ ಪ್ರಳಯಾಗ್ನಿಯನ್ನು ಯುದ್ಧದಲ್ಲಿ ಆರಿಸಿಬಿಡಬಲ್ಲುದು.

ಪರಪುರಂಜಯನಾದ ನಮ್ಮ ಅರ್ಜುನನು ದೇವೇಂದ್ರನಿಂದ ಸಾಕ್ಷಾತ್ತಾಗಿ ದಿವ್ಯಾಸ್ತ್ರಗಳನ್ನು ಪಡೆದು ಬರುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ದಿವ್ಯಾಸ್ತ್ರಗಳನ್ನು ಪಡೆಯುವುದು ಮಾತ್ರವಲ್ಲದೇ ಅವುಗಳ ರಹಸ್ಯವನ್ನೂ ತಿಳಿದುಕೊಂಡು ಬರುತ್ತಾನೆ. ಇಂದ್ರನಿಂದ ಸಕಲದಿವ್ಯಾಸ್ತ್ರಗಳನ್ನೂ ಪಡೆದು ಬರುವ ಅವನೊಬ್ಬನೇ ಶತ್ರುಗಳನ್ನು ಎದುರಿಸಲು ಸಮರ್ಥನೆಂದು ನನಗನಿಸುತ್ತಿದೆ. ಏಕೆಂದರೆ : ನಮ್ಮ ಶತ್ರುಪಕ್ಷದಲ್ಲಿರುವವರೆಲ್ಲರೂ ಹಿಂದೆ ನಾನು ಹೇಳಿದಂತೆ ಅತಿರಥ-ಮಹಾರಥರು. ಧನುರ್ವಿದ್ಯೆಯಲ್ಲಿ ನಿಪುಣರು. ಅಂತಹವರನ್ನು ಯುದ್ಧದಲ್ಲಿ ಪರಾಜಯಗೊಳಿಸಲು ಅರ್ಜುನನೊಬ್ಬನನ್ನುಳಿದು ಮತ್ತಾರಿಂದಲೂ ಸಾಧ್ಯವಾಗಲಾರದು. ಪುರೋಹಿತರೇ! ಸಕಲ ದಿವ್ಯಾಸ್ತ್ರಗಳನ್ನೂ ದೇವೇಂದ್ರನಿಂದ ಪಡೆದುಬರುವ ನಮ್ಮ ಅರ್ಜುನನನ್ನು ನಾವು ಅತ್ಯಲ್ಪಕಾಲದಲ್ಲಿಯೇ ಕಾಣುತ್ತೇವೆಂಬ ಪೂರ್ಣಭರವಸೆಯು ನಮಗಿರುವುದು. ಹೇಗೆಂದರೆ : ನಮ್ಮ ಪಾರ್ಥನು ಯಾವ ಕಾರ್ಯವನ್ನೇ ಕೈಗೊಂಡರೂ ಅದು ಎಷ್ಟೇ ದುರಾಸದವಾದರೂ ಆ ಕಾರ್ಯವನ್ನು ಪೂರ್ಣಮಾಡದೇ ಬಿಡತಕ್ಕ ಸ್ವಭಾವದವನಲ್ಲ. ಆದುದರಿಂದ ಅವನು ದಿವ್ಯಾಸ್ತ್ರಗಳನ್ನು ಪಡೆದೇ ಬರುತ್ತಾನೆ. ಆದರೆ ಅವನು ಬರುವವರೆಗೂ ನಾವು ದ್ರೌಪದಿಯೊಡನೆ ಈ ಕಾಮ್ಯಕವನದಲ್ಲಿಯೇ ಶಾಂತರಾಗಿ ಕುಳಿತಿರಲಾಗುವುದಿಲ್ಲ. ಅವನಿಗಾಗಿ ನಮ್ಮ ಮನಸ್ಸು ಕ್ಷಣ-ಕ್ಷಣದಲ್ಲಿಯೂ ಕಾತರಪಡುತ್ತಿರುವುದು. ನಾವು ಅವನೊಡನೆ ಅನೇಕವರ್ಷಗಳು ಸುಖವಾಗಿ ಕಳೆದ ಕಾಮ್ಯಕವನವಿದು. ಆದುದರಿಂದ ಪವಿತ್ರತಮವಾಗಿಯೂ, ಸುಂದರವಾಗಿಯೂ, ಕಂದ-ಮೂಲ-ಫಲಗಳಿಂದ ಸಮೃದ್ಧವಾಗಿಯೂ ಮತ್ತು ಪುಣ್ಯಪುರುಷರಿಂದ ಸಂಸೇವ್ಯಮಾನವಾಗಿಯೂ ಇರುವ ಬೇರೊಂದು ಅರಣ್ಯವನ್ನು ಸೂಚಿಸಿರಿ. ಧೌಮ್ಯರೇ! ಅಲ್ಲಿಗೆ ಹೋಗಿ

ಚಾತಕಪಕ್ಷಿಗಳು (ಅಥವಾ ಮಳೆಯನ್ನು ಅಪೇಕ್ಷಿಸುವ ರೈತರು) ನೀರಿಗಾಗಿ ಮೋಡವನ್ನು ನಿರೀಕ್ಷಿಸುತ್ತಾ ಕುಳಿತಿರುವಂತೆ–ವೀರನಾದ ಅರ್ಜುನನ ಆಗಮನದ ನಿರೀಕ್ಷಣೆಯಲ್ಲೇ ಕಾಲಕಳೆಯೋಣ. ಬ್ರಾಹ್ಮಣರಿಂದ ಪ್ರಶಂಸನೀಯವಾಗಿರುವ, ನದೀ-ನದ-ಸರೋವರಗಳಿಂದಲೂ, ಪರ್ವತಗಳಿಂದಲೂ ಕೂಡಿರುವ ವಿಧ-ವಿಧವಾದ ಆಶ್ರಮಗಳ ವಿವರಣೆಯನ್ನು ಹೇಳಿರಿ. ಧೌಮ್ಯರೇ! ಅವುಗಳಲ್ಲಿ ನಮಗೆ ವಾಸಿಸಲು ಯೋಗ್ಯವಾದ ಆಶ್ರಮವು ಯಾವುದೆಂಬುದನ್ನು ನಿರ್ಧರಿಸಿ ಅಲ್ಲಿಗೆ ಹೊರಟುಹೋಗೋಣ.

ಬ್ರಾಹ್ಮಣೋತ್ತಮರೇ! ಅರ್ಜುನನಿಲ್ಲದ ಈ ಕಾಮ್ಯಕವನವು ನನಗೆ ಶೋಭಾಯಮಾನವಾಗಿ ಕಾಣುತ್ತಿಲ್ಲ. ಇಲ್ಲಿ ನಾನು ಬೇಸತ್ತಿದ್ದೇನೆ. ನಾನು ಬೇರೆಲ್ಲಿಗಾದರೂ ಹೋಗಬೇಕೆಂದು ನಿಶ್ಚಯಿಸಿಬಿಟ್ಟಿದ್ದೇನೆ."

೮೬ನೆಯ ಅಧ್ಯಾಯವು ಮುಗಿಯಿತು.

೮೭ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಧೌಮ್ಯರಿಂದ ಪೂರ್ವದೇಶದ ಕ್ಷೇತ್ರಗಳ ವಿವರಣೆ

ಬೃಹಸ್ಪತಿಗೆ ಸಮಾನರಾದ ಧೌಮ್ಯರು ದಿವ್ಯಾಶ್ರಮಗಳ ಪುಣ್ಯಕಥಾ ಶ್ರವಣವನ್ನು ಕೇಳಲು ಉತ್ಸುಕರಾಗಿದ್ದ ಸಂತೋಷಚಿತ್ತರಾಗಿದ್ದ ಪಾಂಡವರನ್ನು ಸಂತೈಸುತ್ತಾ ಧರ್ಮಜನಿಗೆ ಹೇಳಿದರು :

"ಭರತಕುಲಾವತಂಸ! ಬ್ರಾಹ್ಮಣರಿಂದ ಅನುಮೋದಿತವಾದ ಕೆಲವು ಪುಣ್ಯಾಶ್ರಮಗಳನ್ನೂ, ಪುಣ್ಯತೀರ್ಥಗಳನ್ನೂ ಮತ್ತು ಪುಣ್ಯಪರ್ವತಗಳನ್ನೂ ವಿವರಿಸಿ ಹೇಳುತ್ತೇನೆ. ಧರ್ಮಜ! ನಾನು ಹೇಳಲಿರುವ ಈ ಪ್ರವಚನವನ್ನು ಏಕಾಗ್ರಚಿತ್ತನಾಗಿ ನಿನ್ನ ಅನುಜರೊಡನೆಯೂ, ಪತ್ನಿಯಾದ ದ್ರೌಪದಿಯೊಡನೆಯೂ ಕೂಡಿದವನಾಗಿ ಶ್ರವಣಮಾಡು. ಈ ಪುಣ್ಯಾಶ್ರಮಗಳ ಶ್ರವಣಮಾತ್ರದಿಂದಲೇ ಈ ದುಃಖದಿಂದ ಪಾರಾಗುವೆ. ಆ ಕ್ಷೇತ್ರಗಳಿಗೆ ಪ್ರಯಾಣ ಮಾಡುವುದರಿಂದ ಮಹಾಪುಣ್ಯವು ಲಭ್ಯವಾಗುವುದು. ಅವುಗಳ ಇತಿಹಾಸವನ್ನು ಶ್ರವಣಮಾಡುವುದರಿಂದ ಪ್ರಾಪ್ತವಾಗುವ ಪುಣ್ಯಕ್ಕಿಂತಲೂ ನೂರುಪಟ್ಟು ಹೆಚ್ಚಿನ ಪುಣ್ಯವು ಆ ದಿವ್ಯಾಶ್ರಮಗಳ ದರ್ಶನದಿಂದ ಲಭ್ಯವಾಗುತ್ತದೆ.

ಯುಧಿಷ್ಠಿರ! ಮೊಟ್ಟಮೊದಲು ನಿನಗೆ ರಾಜರ್ಷಿಗಳಿಂದ ಸಂಸೇವ್ಯಮಾನವಾದ ರಮ್ಯವಾದ ಪೂರ್ವದಿಕ್ಕಿನ ಆಶ್ರಮಗಳ ವಿಷಯವಾಗಿ ನನಗೆ ನೆನಪಿರುವಷ್ಟು ವಿವರಿಸಿ ಹೇಳುತ್ತೇನೆ. ಪೂರ್ವದಿಕ್ಕಿನಲ್ಲಿ ಸುಪ್ರಸಿದ್ಧವಾದ ನೈಮಿಷಾರಣ್ಯವಿದೆ. ಅದು ದೇವರ್ಷಿಗಳಿಂದ ಸೇವಿತವಾಗಿರುವುದು. ಅಲ್ಲಿ ಅನೇಕದೇವತೆಗಳ ಸಾನ್ನಿಧ್ಯವಿರುವ ನಾನಾತೀರ್ಥಗಳಿವೆ. ಅಲ್ಲಿಯೇ ದೇವರ್ಷಿಗಳಿಂದ ಸೇವಿತವಾದ ಪುಣ್ಯಪ್ರದವಾದ ಗೋಮತೀನದಿಯಿರುವುದು. ಅಲ್ಲಿ ದೇವತೆಗಳು ಯಜ್ಞಮಾಡಿದ ಅನೇಕಯಾಗಭೂಮಿಗಳಿವೆ. ಸಾಕ್ಷಾತ್ ಸೂರ್ಯನೇ ಸ್ಥಾಪಿಸಿರುವ ಶಾಮಿತ್ರಗೃಹ (ಯಜ್ಞಪಾತ್ರ)ವಿದೆ. ನೈಮಿಷಾರಣ್ಯದ ಮತ್ತೊಂದು ಭಾಗದಲ್ಲಿ ರಾಜರ್ಷಿಸತ್ಕೃತವಾದ ಗಯ ಎಂಬ ಹೆಸರಿನ ಶ್ರೇಷ್ಠವಾದ ಪರ್ವತವಿದೆ. ಆ ಗಯಪರ್ವತದ ಮೇಲೆ ದೇವರ್ಷಿಗಳಿಂದ ಸಂಸೇವ್ಯಮಾನವಾದ ಶುಭಪ್ರದವಾದ ಬ್ರಹ್ಮಸರೋವರವಿದೆ. ನಮ್ಮ ಹಿಂದಿನವರು ಬಹುಪುತ್ರರನ್ನು ಪಡೆಯಬೇಕೆಂದು ಆಶಿಸುತ್ತಿದ್ದುದು ಇದಕ್ಕಾಗಿಯೇ.

**ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋऽಪಿ ಗಯಾಂ ವ್ರಜೇತ್ ।**
**ಯಜೇತ ವಾಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ।**
**ಉತ್ತಾರಯತಿ ಸಂತತ್ಯಾ ದಶಪೂರ್ವಾನ್ದಶಾವರಾನ್ ॥೧೦॥**

ತಮ್ಮ ಅನೇಕಪುತ್ರರಲ್ಲಿ ಒಬ್ಬನಾದರೂ ಗಯೆಯಲ್ಲಿ ಪಿಂಡಪ್ರದಾನ ಮಾಡಿಯಾನು ; ಒಬ್ಬನಾದರೂ ಅಶ್ವಮೇಧಯಾಗವನ್ನು ಮಾಡಿಯಾನು ; ಒಬ್ಬನಾದರೂ ನೀಲವೃಷಭವನ್ನು ದೇವಪ್ರೀತ್ಯರ್ಥವಾಗಿ ಉತ್ಸರ್ಜನ ಮಾಡಿಯಾನು–ಎಂಬುದೇ ಪೂರ್ವಿಕರ ಆಶಯವಾಗಿದ್ದಿತು. ಏಕೆಂದರೆ : ಯಾವುದೊಂದನ್ನು ಮಾಡಿದರೂ ಕರ್ತೃವಿನ ಹಿಂದಿನ ಮತ್ತು ಮುಂದಿನ ಹತ್ತು ತಲೆಮಾರಿನವರೂ ಪಾವನರಾಗುತ್ತಾರೆ. (ನೀಲವೃಷಭಕ್ಕೆ ಮೈಯೆಲ್ಲವೂ ಕೆಂಚಾಗಿದ್ದು, ಬಾಲದ ತುದಿ, ಗೊರಸುಗಳು ಮತ್ತು ಕೊಂಬುಗಳು ಬೆಳ್ಳಗಿರುತ್ತವೆ.)

ಧರ್ಮಜ! ಆ ಗಯಪರ್ವತದಲ್ಲಿ ಒಂದು ಮಹಾನದಿಯಿರುವುದು. ಅಲ್ಲಿಯೇ ಗಯಶಿರವೆಂಬ ಕ್ಷೇತ್ರವೂ ಇದೆ. ಗಯಶಿರದಲ್ಲಿ ಬ್ರಾಹ್ಮಣರಿಂದ ಶ್ಲಾಘಿತವಾದ ಅಕ್ಷಯವಟವಿರುವುದು.

**ಯತ್ರ ದತ್ತಂ ಪಿತೃಭ್ಯೋಽನ್ನಮಕ್ಷಯ್ಯಂ ಭವತಿ ಪ್ರಭೋ ॥೧೨॥**

ಆ ಅಕ್ಷಯವಟಚ್ಛಾಯೆಯಲ್ಲಿ ಪಿತೃಗಳಿಗೆ ಪಿಂಡಪ್ರದಾನಮಾಡಿದರೆ ಅದು ಅಕ್ಷಯವಾಗುವುದು.

ಅಲ್ಲಿ ಹರಿಯುವ ಮಹಾನದಿಗೆ ಫಲ್ಗು ಎಂದು ಹೆಸರು. ಅದರ ತೀರ್ಥವು ಪರಮಪವಿತ್ರವಾದುದು. ಅದೇ ಸ್ಥಳದಲ್ಲಿ ಕೌಶಿಕೀ ಎಂಬ ಮತ್ತೊಂದು ನದಿಯೂ ಪ್ರವಹಿಸುವುದು. ಕೌಶಿಕೀನದಿಯ ತೀರಪ್ರದೇಶವು ಫಲಭರಿತವಾದ ವೃಕ್ಷಗಳಿಂದಲೂ, ಪುಷ್ಪಭರಿತವಾದ ಲತೆಗಳಿಂದಲೂ ಕೂಡಿ ಶೋಭಾಯಮಾನವಾಗಿರುವುದು. ಪರಮಪವಿತ್ರವಾದ ಕೌಶಿಕೀನದಿಯ ಆ ತೀರದಲ್ಲಿಯೇ ತಪೋಧನನಾದ ವಿಶ್ವಾಮಿತ್ರನು ಬಹಳ ಕಾಲದವರೆಗೆ ಘೋರವಾದ ತಪಸ್ಸನ್ನು ಮಾಡಿ ಬ್ರಹ್ಮರ್ಷಿಯಾದನು. ಅದೇ ದಿಕ್ಕಿನಲ್ಲಿಯೇ ಪುಣ್ಯತಮವಾದ ಗಂಗಾನದಿಯೂ ಪ್ರವಹಿಸುತ್ತದೆ. ಗಂಗಾನದಿಯ ಆ ತೀರ ದಲ್ಲಿ ಭಗೀರಥರಾಜನು ಬಹುದಕ್ಷಿಣಾಕವಾದ ಅನೇಕಾನೇಕ ಯಾಗಗಳನ್ನು ಮಾಡಿದ್ದನು.

ಅಲ್ಲಿಂದ ಮುಂದೆ ಪಾಂಚಾಲದೇಶವಿರುವುದು. ಅಲ್ಲಿ ಉತ್ಪಲಾವನ ವೆಂಬ ಸುಪ್ರಸಿದ್ಧವಾದ ಪುಣ್ಯತಮವಾದ ವನವಿರುವುದು. ಆ ಉತ್ಪಲಾವನ ದಲ್ಲಿಯೇ ಹಿಂದೆ ವಿಶ್ವಾಮಿತ್ರನು ತನ್ನ ಮಗನಿಂದೊಡಗೂಡಿ ಯಾಗಮಾಡಿ ದ್ದನು. ಆ ಉತ್ಪಲಾವನದಲ್ಲಿಯೇ ಜಮದಗ್ನಿಯ ಮಗನಾದ ಪರಶುರಾಮನು ವಿಶ್ವಾಮಿತ್ರನ ಪ್ರಭಾವವನ್ನು ಕಂಡು ಅವನನ್ನು ಬಹುವಾಗಿ ಸ್ತೋತ್ರ ಮಾಡಿದನು. (ಮಹರ್ಷಿಗಳು ತಪಸ್ಸುಮಾಡಿದೆಡೆಯಲ್ಲಿ ಮತ್ತು ಯಾಗ ಮಾಡಿದೆಡೆಯಲ್ಲಿ ಅವರ ಪ್ರಭಾವವು ಅನೇಕವರ್ಷಗಳ ಪರ್ಯಂತವಾಗಿ ಹಾಗೆಯೇ ಇರುವುದು. ಜಮದಗ್ನಿಯ ಮಗನಾದ ಪರಶುರಾಮನೂ ಒಮ್ಮೆ ಆ ಉತ್ಪಲವನಕ್ಕೆ ಯಾತ್ರೆಹೋದ ಕಾಲದಲ್ಲಿ ವಿಶ್ವಾಮಿತ್ರನ ಅಮಾನುಷ ಶಕ್ತಿಯನ್ನು ಮನಗಂಡು ವಿಶ್ವಾಮಿತ್ರನನ್ನು ಸ್ತೋತ್ರಮಾಡಿದನು.)

ಕಾನ್ಯಕುಬ್ಜವೆಂಬ ಪುಣ್ಯಕ್ಷೇತ್ರದಲ್ಲಿ ವಿಶ್ವಾಮಿತ್ರನು ಇಂದ್ರನೊಡನೆ ಸೋಮರಸವನ್ನು ಪಾನಮಾಡಿದನು. ನಾನು ಹಿಂದೆ ಹೇಳಿದಂತೆ ಆ ಪವಿತ್ರ ಸ್ಥಳದಲ್ಲಿಯೇ ವಿಶ್ವಾಮಿತ್ರನು ಕ್ಷತ್ರಿಯತ್ವವನ್ನು ತ್ಯಜಿಸಿ ಬ್ರಾಹ್ಮಣನಾದೆನೆಂದು ಉದ್ಘೋಷಿಸಿದನು.

ಅಲ್ಲಿಂದ ಮುಂದೆ ಅನತಿದೂರದಲ್ಲಿಯೇ ಗಂಗಾ-ಯಮುನಾಸಂಗಮ ಸ್ಥಾನವಿರುವುದು. ಅದು ತ್ರಿಲೋಕಪ್ರಸಿದ್ಧವಾದ, ಪರಮಪುಣ್ಯಪ್ರದವಾದ, ಪಾಪಹರವಾದ ಪುಣ್ಯಕ್ಷೇತ್ರ. ಆ ಪವಿತ್ರಸ್ಥಳದಲ್ಲಿಯೇ ಹಿಂದೆ ಭೂತಾತ್ಮನಾದ ಬ್ರಹ್ಮನು ಯಾಗಮಾಡಿದನು. ಆದುದರಿಂದಲೇ ಆ ಪುಣ್ಯಕ್ಷೇತ್ರವು ಪ್ರಯಾಗ ವೆಂದೇ ಪ್ರಸಿದ್ಧವಾಯಿತು.

ಆ ದಿಕ್ಕಿನಲ್ಲಿಯ ಮುಂದಕ್ಕೆ ಅಗಸ್ತ್ಯಮಹರ್ಷಿಗಳ ದಿವ್ಯಾಶ್ರಮವಿರು ವುದು. ಅನೇಕತಪಸ್ವಿಗಳಿಂದ ಪರಿಶೋಭಿತವಾದ ಅಗಸ್ತ್ಯಾಶ್ರಮವಿರುವ ಆ ಅರಣ್ಯಕ್ಕೆ ತಾಪಸಾರಣ್ಯವೆಂದೇ ಹೆಸರು. ಆ ಅರಣ್ಯದ ಒಂದು ಭಾಗದಲ್ಲಿ ಕಾಲಂಜರವೆಂಬ ಬೆಟ್ಟವಿದೆ. ಆ ಬೆಟ್ಟದ ಮೇಲೆ ಪರಮಪವಿತ್ರವಾದ ಹಿರಣ್ಯಬಿಂದುವೆಂಬ ಸರೋವರವಿದೆ. ಅದಕ್ಕೆ ಸ್ವಲ್ಪ ದೂರದಲ್ಲಿರುವ ಅಗಸ್ತ್ಯಪರ್ವತವು ರಮ್ಯವೂ, ಪರ್ವತಗಳಲ್ಲಿಯೇ ಶ್ರೇಷ್ಠವೂ, ಮಂಗಳ ದಾಯಕವೂ ಆಗಿರುವುದು.

ಯುಧಿಷ್ಠಿರ! ಆ ಭಾಗದಲ್ಲಿಯೇ ಭಾರ್ಗವರಾಮನಿಗೆ ಆಶ್ರಯಸ್ಥಾನ ವಾದ ಮಹೇಂದ್ರಪರ್ವತವಿದೆ. ಆ ಮಹೇಂದ್ರಪರ್ವತದಲ್ಲಿ ಹಿಂದೆ ಚತು ರ್ಮುಖಬ್ರಹ್ಮನು ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿರುವನು. ಮಹೇಂದ್ರಪರ್ವತದ ಸಮೀಪದಲ್ಲಿಯೇ ಭಾಗೀರಥೀನದಿಯು ಒಂದು ಸರೋವರದಲ್ಲಿ ಪ್ರವಹಿಸುತ್ತದೆ. (ಆ ಸರೋವರಕ್ಕೆ ಮಣಿಕರ್ಣಿಕಾಸರೋವರ ವೆಂದು ಹೆಸರು.) ಅಲ್ಲಿಂದ ಮುಂದೆ ಭಾಗೀರಥಿಯು ಬ್ರಹ್ಮಶಾಲಾ ಎಂಬ ಹೆಸರಿನಿಂದ ಪ್ರವಹಿಸುತ್ತಾಳೆ. ಆ ನದಿಯ ಉಭಯಪಾರ್ಶ್ವಗಳೂ ಪೂತಾತ್ಮ ರಾದ ಜನರಿಂದ ವ್ಯಾಪ್ತವಾಗಿವೆ. ಆ ನದಿಯ ದರ್ಶನವೇ ಮಹಾಪುಣ್ಯಪ್ರದ ವಾದುದು, ಪವಿತ್ರವಾದುದು ಮತ್ತು ಮಂಗಳದಾಯಕವಾದುದು–ಎಂದು ಮಹಾತ್ಮರಿಂದ ಪ್ರಖ್ಯಾತವಾಗಿರುವುದು. ಅಲ್ಲಿಯೇ ಪುಣ್ಯತಮವಾದ, ಲೋಕಪ್ರಸಿದ್ಧವಾದ, ಪವಿತ್ರವಾದ, ಮಂಗಳಕರವಾದ ಮತಂಗಮಹರ್ಷಿಗಳ ಕೇದಾರಾಶ್ರಮವಿರುವುದು. ಆ ಆಶ್ರಮದ ಸಮೀಪದಲ್ಲಿ ಕಂದ-ಮೂಲ-ಫಲಗಳಿಂದ ಕೂಡಿರುವ ರಮ್ಯವಾದ ಕುಂಡೋದವೆಂಬ ಪರ್ವತವಿರುವುದು. ಆ ಪರ್ವತದಲ್ಲಿಯೇ ಹಿಂದೆ ನಿಷಧಾಧಿಪತಿಯಾದ ನಳಮಹಾರಾಜನು ಹಸಿವು-ಬಾಯಾರಿಕೆಗಳನ್ನು ಪರಿಹಾರಮಾಡಿಕೊಂಡು ಸ್ವಲ್ಪಕಾಲ ಸುಖವಾಗಿ

ವಿಶ್ರಮಿಸಿದ್ದನು. ಅಲ್ಲಿಯೇ ಮಹರ್ಷಿಸಂಸೇವ್ಯಮಾನವಾದ, ಬಹುಸುಂದರವಾದ ದೇವವನವೆಂಬ ಪುಣ್ಯಕ್ಷೇತ್ರವೂ ಇರುವುದು. ಬಾಹುದಾ ಮತ್ತು ನಂದಾ ಎಂಬ ಎರಡು ನದಿಗಳು ಆ ಪರ್ವತದ ಶಿಖರದಲ್ಲಿ ಹುಟ್ಟಿ ಪ್ರವಹಿಸುವುವು.

ಮಹಾರಾಜ! ನಾನೀಗ ಪೂರ್ವದಿಕ್ಕಿನಲ್ಲಿರುವ ಪುಣ್ಯಕ್ಷೇತ್ರಗಳನ್ನೂ, ಪುಣ್ಯನದಿಗಳನ್ನೂ, ಪುಣ್ಯತೀರ್ಥಗಳನ್ನೂ ವಿವರಿಸಿ ಹೇಳಿದೆನು. ಇನ್ನು ಮುಂದೆ ಉಳಿದ ಮೂರು ದಿಕ್ಕುಗಳಲ್ಲಿರುವ ಪುಣ್ಯತೀರ್ಥಗಳು ಪುಣ್ಯನದಿಗಳು ಪರ್ವತಗಳು ಮತ್ತು ಪುಣ್ಯಕ್ಷೇತ್ರಗಳನ್ನು ವರ್ಣಿಸುವೆನು. ತದೇಕಚಿತ್ತನಾಗಿ ಕೇಳು."

೮೭ನೆಯ ಅಧ್ಯಾಯವು ಮುಗಿಯಿತು.

೮೮ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಧೌಮ್ಯರಿಂದ ದಕ್ಷಿಣದಿಕ್ಕಿನ ತೀರ್ಥಕ್ಷೇತ್ರಗಳ ವರ್ಣನೆ

ಧೌಮ್ಯರು ಪ್ರವಚನವನ್ನು ಮುಂದುವರಿಸುತ್ತಾ ಧರ್ಮಜನಿಗೆ ಹೇಳುತ್ತಾರೆ :

"ಭರತಕುಲಾವತಂಸನೇ! ನಾನು ನಿನಗೆ ಇನ್ನು ಮುಂದೆ ದಕ್ಷಿಣದಿಕ್ಕಿನಲ್ಲಿರುವ ಪುಣ್ಯತೀರ್ಥಗಳ ವಿಷಯವನ್ನು ನನಗೆ ತಿಳಿದಿರುವಷ್ಟು ಮಟ್ಟಿಗೆ ವಿಸ್ತಾರವಾಗಿ ತಿಳಿಸುವೆನು. ದಕ್ಷಿಣದಿಕ್ಕಿನಲ್ಲಿ ಪುಣ್ಯತಮವಾದ, ಮಂಗಳಕರವಾದ, ಅನೇಕಪುಣ್ಯಾಶ್ರಮಗಳಿಂದ ವ್ಯಾಪ್ತವಾದ, ತಪಸ್ವಿಗಳಿಂದ ಸಂಸೇವ್ಯಮಾನವಾದ ಗೋದಾವರೀನದಿಯಿರುವುದು. ಆ ನದಿಯು ಬಹುವಿಸ್ತಾರವಾಗಿಯೂ ಬಹುಜಲವುಳ್ಳದ್ದಾಗಿಯೂ ಇರುವುದು. ದಕ್ಷಿಣದಿಕ್ಕಿನಲ್ಲಿಯೇ ವೇಣಾ ಮತ್ತು ಭೀಮರಥೀನದಿಗಳೂ ಇರುವುವು. ಆ ನದಿಗಳ ತೀರಪ್ರದೇಶಗಳು ನಾನಾವಿಧವಾದ ಮೃಗ-ಪಕ್ಷಿಗಳಿಂದ ನಿಬಿಡವಾಗಿ ತಪಸ್ವಿಗಳ ಆಶ್ರಮಗಳಿಂದ ಪರಿಶೋಭಿಸುತ್ತಿರುವುವು. ಆ ದಿಕ್ಕಿನಲ್ಲಿಯೇ ರಾಜರ್ಷಿಯಾದ ನೃಗನ ಸರಿತ್ತೆಂದು ಪ್ರಸಿದ್ಧವಾಗಿರುವ, ಬಹುರಮ್ಯವಾಗಿರುವ, ಬಹುಜಲದಿಂದ ಕೂಡಿರುವ, ಬ್ರಾಹ್ಮಣರಿಂದ ಸಂಸೇವ್ಯಮಾನವಾಗಿರುವ

ಪಯೋಷ್ಣೀ ಎಂಬ ನದಿಯೂ ಇರುವುದು. ಮಹಾಯೋಗಿಯಾದ, ಯಶೋವಂತನಾದ ಮಾರ್ಕಂಡೇಯನು–ಆ ನದಿಯ ತೀರದಲ್ಲಿರುವ ಪುಣ್ಯ ಕ್ಷೇತ್ರದಲ್ಲಿ ರಾಜರ್ಷಿಯಾದ ನೃಗನ ವಂಶೀಯರ ಚರಿತ್ರೆಯನ್ನು ಯಜ್ಞದ ಯಾಜಮಾನ್ಯವನ್ನು ವಹಿಸಿದ್ದ ನೃಗಚಕ್ರವರ್ತಿಗೆ ಹೇಳಿದನೆಂದು ನಾವು ಕೇಳಿದ್ದೇವೆ. ನೃಗಚಕ್ರವರ್ತಿಯು ಪಯೋಷ್ಣಿಯ ತೀರದಲ್ಲಿರುವ ವಾರಾಹ ತೀರ್ಥಕ್ಷೇತ್ರದಲ್ಲಿ ಯಾಗಮಾಡುತ್ತಿದ್ದನು. ಅವನು ಅನವರತವಾಗಿ ಯಾಗ ಮಾಡಿದ ಪರಿಣಾಮವಾಗಿ ಇಂದ್ರನು ಸೋಮರಸವನ್ನು ಅತಿಯಾಗಿ ಕುಡಿದು ಮತ್ತನಾದನು. ಬ್ರಾಹ್ಮಣರು ಯಥೇಚ್ಛವಾಗಿ ದಕ್ಷಿಣೆಯನ್ನು ಪಡೆದು ಹರ್ಷಭರಿತರಾದರು.

**ಉದ್ಧೃತಂ ಭೂತಲಸ್ಥಂ ವಾ ವಾಯುನಾ ಸಮುದೀರಿತಮ್ ।**
**ಪಯೋಷ್ಣ್ಯಾ ಹರತೇ ತೋಯಂ ಪಾಪಮಾಮರಣಾನ್ತಿಕಮ್ ॥೭॥**

ಪಯೋಷ್ಣೀನದಿಯಿಂದ ಬೊಗಸೆಗಳಲ್ಲಿ ಅಥವಾ ಸ್ಥಾಲಿಗಳಲ್ಲಿ ಆಹೃತ ವಾದ ತೀರ್ಥವಾದರೂ ಸರಿಯೇ ; ಪಯೋಷ್ಣೀನದಿಯ ಮೇಲೆ ಬೀಸಿದ ಗಾಳಿಯಿಂದ ಆಹೃತವಾದ ತೀರ್ಥಬಿಂದುವಾದರೂ ಸರಿಯೇ–ಸ್ಪರ್ಶಮಾತ್ರ ದಿಂದಲೇ ಮರಣಾಂತವಾಗಿ ಮನುಷ್ಯನು ಮಾಡಿದ ಪಾಪಗಳೆಲ್ಲವೂ ಪರಿಹಾರವಾಗುತ್ತವೆ. ಸ್ವರ್ಗಕ್ಕಿಂತಲೂ ಉನ್ನತವಾಗಿರುವ, ಪರಿಶುದ್ಧವಾಗಿ ರುವ, ಸಾಕ್ಷಾದೀಶ್ವರನಿಂದಲೇ ಪ್ರತಿಷ್ಠಿತವಾದ ಪರಮೇಶ್ವರನ ವಿಷಾಣವನ್ನು (ವಾದ್ಯವಿಶೇಷವನ್ನು ) ಆ ಪುಣ್ಯಕ್ಷೇತ್ರದಲ್ಲಿ ಸಂದರ್ಶಿಸುವ ಮಾನವನು ಪುಣ್ಯತಮವಾದ ಶಿವಲೋಕವನ್ನು ಪಡೆಯುತ್ತಾನೆ.

**ಏಕತಃ ಸರಿತಃ ಸರ್ವಾ ಗಙ್ಗಾದ್ಯಾಃ ಸಲಿಲೋಚ್ಚಯಾಃ ।**
**ಪಯೋಷ್ಣೀ ಚೈಕತಃ ಪುಣ್ಯಾ ತೀರ್ಥೇಭ್ಯೋ ಹಿ ಮತಾ ಮಮ ॥**

ಯುಧಿಷ್ಠಿರ! ಪಯೋಷ್ಣೀನದಿಯು ಪುಣ್ಯತಮವಾದುದು. ಒಂದು ತಕ್ಕಡಿಯಲ್ಲಿ ಗಂಗಾನದಿಯೇ ಮೊದಲಾದ ಸಕಲನದೀ-ನದತೀರ್ಥಗಳ ಮಹತ್ತ್ವವನ್ನೂ, ಮತ್ತೊಂದು ತಕ್ಕಡಿಯಲ್ಲಿ ಪಯೋಷ್ಣೀನದಿಯ ಮಹತ್ತ್ವ ವನ್ನೂ, ಇಟ್ಟು ತೂಗಿದರೆ ಪಯೋಷ್ಣೀನದಿಯ ಮಹತ್ತ್ವವೇ ಹೆಚ್ಚೆಂಬ ಸಂಗತಿಯನ್ನು ತಕ್ಕಡಿಯು ತೋರಿಸುವುದೆಂದು ನನ್ನ ಅಭಿಪ್ರಾಯವಾಗಿದೆ.

ಆ ವಿಭಾಗದಲ್ಲಿಯೇ ವರುಣಸ್ರೋತಸವೆಂಬ ಗಿರಿಯಲ್ಲಿ ಪುಣ್ಯಪ್ರದವಾದ, ಕಂದ-ಮೂಲ-ಫಲಗಳಿಂದ ಕೂಡಿರುವ, ಮಂಗಳಕರವಾದ, ಅನೇಕ ಯಜ್ಞಯೂಪಗಳಿಂದ ಶೋಭಾಯಮಾನವಾಗಿರುವ ಮಾಠರನ ವನವಿರುವುದು. ಪ್ರವೇಣೀನದಿಯ ಉತ್ತರದಿಕ್ಕಿನಲ್ಲಿ ಮಹರ್ಷಿಗಳಾದ ಕಣ್ವರ ಆಶ್ರಮವನ್ನೇ ಅನುಸರಿಸಿ ಅನೇಕಾನೇಕ ಆಶ್ರಮಗಳಿವೆಯೆಂದು ಕೇಳಿದ್ದೇನೆ. ಶೂರ್ಪಾರಕ ಕ್ಷೇತ್ರದಲ್ಲಿರುವ ಮಹಾತ್ಮನಾದ ಜಮದಗ್ನಿಯ ಯಜ್ಞವೇದಿಕೆಯ ಸಮೀಪದಲ್ಲಿ ರಮ್ಯವಾಗಿರುವ ಪಾಷಾಣತೀರ್ಥವೂ, ಪುನಶ್ಚಂದ್ರಾ ಎಂಬ ತೀರ್ಥವೂ ಇರುವುವು. ಅವುಗಳ ಸಮೀಪದಲ್ಲಿಯೇ ಅನೇಕಮಹರ್ಷಿಗಳ ಆಶ್ರಮಗಳಿಂದ ಕೂಡಿರುವ ಅಶೋಕತೀರ್ಥವಿದೆ. ಪಾಂಡ್ಯದೇಶದಲ್ಲಿ ಅಗಸ್ತ್ಯತೀರ್ಥವೂ ಮತ್ತು ಪುಣ್ಯತಮವಾದ ವಾರುಣತೀರ್ಥವೂ ಇರುವುವು.

ಯುಧಿಷ್ಠಿರ! ಪಾಂಡ್ಯದೇಶದಲ್ಲಿ ಕುಮಾರೀತೀರ್ಥವಿದೆ. ನಾನೀಗ ತಾಮ್ರಪರ್ಣೀನದಿಯ ಐತಿಹ್ಯವನ್ನು ಹೇಳುವೆನು, ಕೇಳು. ಆ ನದಿಯ ತೀರದಲ್ಲಿ ಮಹತ್ವಾಪೇಕ್ಷಿಗಳಾದ ದೇವತೆಗಳಿಂದ ಅನೇಕವರ್ಷಗಳ ಪರ್ಯಂತವಾಗಿ ತಪಸ್ಸು ಆಚರಿಸಲ್ಪಟ್ಟಿತು. ಆ ಕ್ಷೇತ್ರದಲ್ಲಿಯೇ ತ್ರಿಲೋಕಪ್ರಸಿದ್ಧವಾದ, ಶೀತಲವಾದ ನೀರಿನಿಂದ ಕೂಡಿರುವ, ಜಲಸಮೃದ್ಧವಾಗಿರುವ, ಪುಣ್ಯಪ್ರದವಾದ, ಮಂಗಳಪ್ರದವಾದ, ಶುಭಾವಹವಾದ ಗೋಕರ್ಣತೀರ್ಥವಿರುವುದು. ಪರಿಶುದ್ಧಾತ್ಮರಲ್ಲದವರಿಗೆ ಆ ಪುಣ್ಯತೀರ್ಥದ ದರ್ಶನವೂ ಲಭ್ಯವಾಗು ವುದಿಲ್ಲ. ಗೋಕರ್ಣತೀರ್ಥದ ಸಮೀಪದಲ್ಲಿಯೇ ಫಲಭರಿತವಾದ ನಾನಾ ವಿಧವಾದ ವೃಕ್ಷಗಳಿಂದಲೂ, ಹಚ್ಚನೆಯ ಹುಲ್ಲಿನಿಂದಲೂ, ಕಂದ-ಮೂಲ-ಫಲಗಳಿಂದಲೂ ನಿಬಿಡವಾದ ಪುಣ್ಯಪ್ರದವಾದ ಆಶ್ರಮವನ್ನೊಳಗೊಂಡ ಸುಪ್ರಸಿದ್ಧವಾದ ದೇವಗಿರಿಯಿರುವುದು. ಅಗಸ್ತ್ಯಮಹರ್ಷಿಗಳ ಶಿಷ್ಯರು ಆ ಆಶ್ರಮದಲ್ಲಿರುವರು. ದೇವಗಿರಿಯ ಸಮೀಪದಲ್ಲಿಯೇ ನಾನಾವಿಧವಾದ ಮಣಿಗಳಿಂದಲೂ, ರತ್ನಗಳಿಂದಲೂ ಕೂಡಿರುವ ಮಂಗಳದಾಯಕವಾದ ವೈಡೂರ್ಯಪರ್ವತವಿರುವುದು. ಆ ಪರ್ವತದ ತಪ್ಪಲಿನಲ್ಲಿ ಫಲ-ಪುಷ್ಪ ಭರಿತವಾದ ನಾನಾವೃಕ್ಷಗಳಿಂದಲೂ, ಲತೆಗಳಿಂದಲೂ, ಸರೋವರಗಳಿಂದಲೂ ಕೂಡಿರುವ ಮಹರ್ಷಿಗಳಾದ ಅಗಸ್ತ್ಯರ ದಿವ್ಯಾಶ್ರಮವಿರುವುದು.

ಧರ್ಮಜ! ನಾನು ಇದುವರೆಗೆ ಪಾಂಡ್ಯದೇಶದಲ್ಲಿರುವ ದಿವ್ಯಾಶ್ರಮ

ಗಳನ್ನೂ ಪುಣ್ಯತೀರ್ಥಗಳನ್ನೂ ವಿವರಿಸಿ ಹೇಳಿದೆನಲ್ಲವೇ? ಇನ್ನು ಮುಂದೆ ಸೌರಾಷ್ಟ್ರದೇಶದಲ್ಲಿರುವ ಪುಣ್ಯಕ್ಷೇತ್ರಗಳನ್ನೂ, ಪುಣ್ಯಾಶ್ರಮಗಳನ್ನೂ, ಪುಣ್ಯ ನದಿಗಳನ್ನೂ, ಪುಣ್ಯಸರಸ್ಸುಗಳನ್ನೂ ವಿವರಿಸಿ ಹೇಳುವೆನು. ಏಕಾಗ್ರಚಿತ್ತನಾಗಿ ಕೇಳು. ಸೌರಾಷ್ಟ್ರದೇಶದ ಸಮುದ್ರತೀರದಲ್ಲಿ ದೇವತೆಗಳಿಂದಲೂ ಸಂಸೇವ್ಯ ಮಾನವಾದ ಚಮಸೋದ್ಭವ ಮತ್ತು ಪ್ರಭಾಸಗಳೆಂಬ ಪುಣ್ಯತೀರ್ಥಗಳಿವೆ ಯೆಂದು ಅನೇಕಬಾರಿ ತೀರ್ಥಯಾತ್ರೆಗಳನ್ನು ಮಾಡಿರುವ ಬ್ರಾಹ್ಮಣರು ಹೇಳುತ್ತಾರೆ. ಅಲ್ಲಿಯೇ ಅನೇಕಮಹರ್ಷಿಗಳಿಂದ ಸಂಸೇವ್ಯಮಾನವಾದ ಶುಭಾವಹವಾದ ಪಿಂಡಾರಕತೀರ್ಥವೂ ಇರುವುದು. ಆ ಪ್ರದೇಶದಲ್ಲಿಯೇ ಸುಪ್ರಸಿದ್ಧವಾದ, ಸಿದ್ಧಿದಾಯಕವಾದ ಉಜ್ಜಯಂತವೆಂಬ ಪರ್ವತವಿರು ವುದು. ಆ ಪರ್ವತಶಿಖರದ ವಿಷಯವಾಗಿ ದೇವರ್ಷಿಗಳಾದ ನಾರದರು ಗಾಯನಮಾಡಿರುವ ಪುರಾಣಶ್ಲೋಕವಿದೆ. ಅದನ್ನೇ ಹೇಳುವೆನು ; ಕೇಳು.

**ಪುಣ್ಯೇ ಗಿರೌ ಸುರಾಷ್ಟ್ರೇಷು ಮೃಗಪಕ್ಷಿನಿಷೇವಿತೇ ।**
**ಉಜ್ಜಯನ್ತೇ ಸ್ಮ ತಪ್ತಾಙ್ಗೋ ನಾಕಪೃಷ್ಠೇ ಮಹೀಯತೇ ॥೨೩॥**

'ಸೌರಾಷ್ಟ್ರಪ್ರದೇಶದಲ್ಲಿರುವ ಮೃಗ-ಪಕ್ಷಿನಿಷೇವಿತವಾದ ಪುಣ್ಯಪ್ರದ ವಾದ ಉಜ್ಜಯಂತಪರ್ವತದಲ್ಲಿ ತಪಸ್ಸನ್ನು ಮಾಡುವವನು ಸ್ವರ್ಗಲೋಕ ದಲ್ಲಿ ಮಾನ್ಯತೆಯನ್ನು ಪಡೆಯುತ್ತಾನೆ.'

ಸೌರಾಷ್ಟ್ರದೇಶದಲ್ಲಿಯೇ ಸುಪ್ರಸಿದ್ಧವಾದ ದ್ವಾರವತಿಯಿರುವುದು. ಆ ಪುಣ್ಯನಗರಿಯಲ್ಲಿಯೇ ನಿಮ್ಮ ಪ್ರಿಯಬಂಧುವಾದ ಮಧುಸೂದನನು ವಾಸ ವಾಗಿರುವನು. ಮಧುಸೂದನನು ಯಾರೆಂಬುದನ್ನು ನಿನಗೆ ಹೇಳಬೇಕಾಗಿಲ್ಲ.

**ಸಾಕ್ಷಾದ್ದೇವಃ ಪುರಾಣೋಽಸೌ ಸ ಹಿ ಧರ್ಮಃ ಸನಾತನಃ ।**
**ಯೇ ಚ ವೇದವಿದೋ ವಿಪ್ರಾ ಯೇ ಚಾಧ್ಯಾತ್ಮವಿದೋ ಜನಾಃ ।**
**ತೇ ವದನ್ತಿ ಮಹಾತ್ಮಾನಂ ಕೃಷ್ಣಂ ಧರ್ಮಂ ಸನಾತನಮ್ ॥೨೪॥**

ಧರ್ಮಜ! ಸಾಕ್ಷಾತ್ ಪರಮಪುರುಷನೇ ಶ್ರೀಕೃಷ್ಣನಾಗಿ ಅವತರಿ ಸಿರುವನು. ಆದ್ಯಂತರಹಿತನಾದ ಪುರಾಣಪುರುಷನವನು. ಅವನಿಗೆ ಹುಟ್ಟು-ಸಾವುಗಳಿಲ್ಲ. ಅವನು ಧರ್ಮಸ್ವರೂಪನು. ಸನಾತನನು. ವೇದ-ವೇದಾಂಗ ಪಾರಂಗತರಾದ ಮತ್ತು ಆತ್ಮಜ್ಞಾನವನ್ನು ಪಡೆದಿರುವ ವಿಪ್ರರು ಮಹಾತ್ಮನಾದ,

ಧರ್ಮಸ್ವರೂಪಿಯಾದ ಸನಾತನನಾದ ಶ್ರೀಕೃಷ್ಣನ ವಿಷಯವಾಗಿ ಹೀಗೆ ಪ್ರವಚನಮಾಡಿದ್ದಾರೆ :

**ಪವಿತ್ರಾಣಾಂ ಹಿ ಗೋವಿನ್ದಃ ಪವಿತ್ರಂ ಪರಮುಚ್ಯತೇ ।**
**ಪುಣ್ಯಾನಾಮಪಿ ಪುಣ್ಯೋಽಸೌ ಮಙ್ಗಲಾನಾಂ ಚ ಮಙ್ಗಲಮ್ ।**
**ತ್ರೈಲೋಕ್ಯೇ ಪುಣ್ಡರೀಕಾಕ್ಷೋ ದೇವದೇವಃ ಸನಾತನಃ ॥೨೬॥**

**ಅವ್ಯಯಾತ್ಮಾ ವ್ಯಯಾತ್ಮಾ ಚ ಕ್ಷೇತ್ರಜ್ಞಃ ಪರಮೇಶ್ವರಃ ।**
**ಆಸ್ತೇ ಹರಿರಚಿನ್ತ್ಯಾತ್ಮಾ ತತ್ರೈವ ಮಧುಸೂದನಃ ॥೨೭॥**

ಗೋವಿಂದನು ಪವಿತ್ರವಾದ ವಸ್ತುಗಳಲ್ಲಿ ಪರಮಪವಿತ್ರನಾದವನು. ಪುಣ್ಯವಸ್ತುಗಳಲ್ಲಿ ಪುಣ್ಯನು. ಮಂಗಳವಸ್ತುಗಳಲ್ಲಿ ಮಂಗಳದಾಯಕನಾದವನು. (ಯಾವುದೊಂದು ವಸ್ತುವಿಗೆ ಪವಿತ್ರತೆಯುಂಟಾಗಬೇಕಾದರೂ, ಯಾವುದೊಂದು ವಸ್ತುವು ಮಂಗಳದಾಯಕವಾಗಬೇಕಾದರೂ–ಆ ವಸ್ತು ವಿಗೆ ಗೋವಿಂದನ ಅನುಗ್ರಹವಿರಬೇಕು. ಗೋವಿಂದನ ಸಾನ್ನಿಧ್ಯದಿಂದ ಅಥವಾ ಅನುಗ್ರಹದಿಂದ ವಸ್ತುಗಳೂ, ತೀರ್ಥಗಳೂ, ಋಷಿಗಳೂ, ನದೀ- ನದಗಳೂ ಪಾವನವಾಗಿ ಇತರರನ್ನು ಪಾವನಗೊಳಿಸಲೂ ಸಮರ್ಥವಾಗುವುವು.) ಮೂರು ಲೋಕಗಳಲ್ಲಿ ಪುಂಡರೀಕಾಕ್ಷನಾದ ದೇವದೇವನಾದ ಶ್ರೀಕೃಷ್ಣನೊಬ್ಬನೇ ಆದಿಪುರುಷನಾದ ಸನಾತನನು. ಅವ್ಯಯಾತ್ಮನೂ (ಅಕ್ಷರರೂಪಿಯೂ) ವ್ಯಯಾತ್ಮನೂ (ಕ್ಷರರೂಪಿಯೂ) ಅವನೇ ಆಗಿರುವನು. ಕ್ಷೇತ್ರಜ್ಞನಾದ ಜೀವಾತ್ಮನೂ, ಪರಮೇಶ್ವರನಾದ ಪರಮಾತ್ಮನೂ ಅವನೇ ಆಗಿರುವನು. ಮಧುಹಂತಕನಾದ, ಅಚಿಂತ್ಯನಾದ, ಅಪ್ರಮೇಯನಾದ, ಶ್ರೀಕೃಷ್ಣನ ರೂಪದಿಂದ ಶ್ರೀಹರಿಯು ದ್ವಾರವತಿಯಲ್ಲಿ ವಾಸಮಾಡುತ್ತಿರುವನು.

೮೮ನೆಯ ಅಧ್ಯಾಯವು ಮುಗಿಯಿತು.

೮೯ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಧೌಮ್ಯರಿಂದ ಪಶ್ಚಿಮದಿಕ್ಕಿನ ತೀರ್ಥಕ್ಷೇತ್ರಗಳ ವರ್ಣನೆ

ಯುಧಿಷ್ಠಿರ! ಇನ್ನು ಮುಂದೆ ನಿನಗೆ ಪಶ್ಚಿಮದಿಕ್ಕಿನಲ್ಲಿ ಪವಿತ್ರವಾಗಿಯೂ, ಪುಣ್ಯಪ್ರದವಾಗಿಯೂ ಇರುವ ಆನರ್ತ (ಅವಂತಿ) ದೇಶದಲ್ಲಿರುವ ಕ್ಷೇತ್ರಗಳನ್ನು ಹೇಳುತ್ತೇನೆ. ಆ ದೇಶದಲ್ಲಿ ಪಶ್ಚಿಮವಾಹಿನಿಯಾದ ನರ್ಮದಾನದಿಯು ಪ್ರವಹಿಸುತ್ತಿದೆ. ಆ ನದಿಯ ಎರಡು ಪಾರ್ಶ್ವಗಳಲ್ಲಿಯೂ ಪ್ರಿಯಂಗು ಮತ್ತು ಮಾವಿನ ಮರಗಳು ನಿಬಿಡವಾಗಿ ಬೆಳೆದಿವೆ. (ಪ್ರಿಯಂಗುವೆಂದರೆ ಹೆಂಗಸರ ಸ್ಪರ್ಶದಿಂದ ಅರಳುವ ಹೂಗಳುಳ್ಳ ಪ್ರೇಂಖಣಗಿಡ.) ಅದರ ಎರಡು ಪಾರ್ಶ್ವಗಳಲ್ಲಿಯೂ ಬೆತ್ತದ ಬಳ್ಳಿಗಳು ದಟ್ಟವಾಗಿ ಬೆಳೆದಿವೆ. ಮೂರು ಲೋಕಗಳಲ್ಲಿಯೂ ಇರುವ ಸಕಲತೀರ್ಥಾಧಿದೇವತೆಗಳೂ, ಪುಣ್ಯಕ್ಷೇತ್ರಾಧಿದೇವತೆಗಳೂ, ಸಕಲನದೀ-ನದ-ಸರೋವರಾಧಿದೇವತೆಗಳೂ, ಪರ್ವತ-ಗಿರಿ-ದುರ್ಗಾಧಿದೇವತೆಗಳೂ, ಬ್ರಹ್ಮಪ್ರಮುಖರಾದ ದೇವ-ದಾನವ-ಗಂಧರ್ವರೂ, ಸಿದ್ಧ-ಚಾರಣ-ಮಹರ್ಷಿಗಳೂ ಪಶ್ಚಿಮವಾಹಿನಿಯಾದ ನರ್ಮದಾನದಿಯ ಶುಭಜಲದಲ್ಲಿ ಸ್ನಾನಮಾಡಲು ಬರುತ್ತಿರುತ್ತಾರೆ. ನರ್ಮದಾನದಿಯ ಆ ತೀರದಲ್ಲಿಯೇ ವಿಶ್ರವಸಮುನಿಯ ಪುಣ್ಯತಮವಾದ ಆಶ್ರಮವಿದ್ದಿತೆಂದು ನಾವು ಕೇಳಿದ್ದೇವೆ. ಆ ಪುಣ್ಯಾಶ್ರಮದಲ್ಲಿಯೇ ನರವಾಹನನಾದ, ಧನಾಧಿಪತಿಯಾದ ಕುಬೇರನು ಹುಟ್ಟಿದನು. ಅದರ ಸಮೀಪದಲ್ಲಿಯೇ ಪುಣ್ಯತಮವಾದ, ಶ್ರೇಷ್ಠವಾದ ವೈಡೂರ್ಯ ಪರ್ವತವಿರುವುದು. ಆ ಪರ್ವತವು ಸದಾ ಹಸಿರೆಲೆಗಳಿಂದಲೂ ಫಲ-ಪುಷ್ಪಗಳಿಂದಲೂ ಕೂಡಿರುವ ಮರಗಳಿಂದ ಶೋಭಾಯಮಾನವಾಗಿರುವುದು. ವೈಡೂರ್ಯಪರ್ವತದ ಶಿಖರದಲ್ಲಿ ಪರಮಪವಿತ್ರವಾದ, ಅರಳಿದ ಕಮಲಪುಷ್ಪಗಳಿಂದ ಕೂಡಿರುವ, ದೇವತೆಗಳಿಂದಲೂ, ಗಂಧರ್ವರಿಂದಲೂ ಸಂಸೇವ್ಯಮಾನವಾದ ಸರೋವರವಿರುವುದು. ಸ್ವರ್ಗಲೋಕಸದೃಶವಾಗಿರುವ, ದೇವರ್ಷಿಗಳಿಂದ ಸಂಸೇವ್ಯಮಾನವಾಗಿರುವ ಆ ಪರ್ವತದಲ್ಲಿ ಅತ್ಯಾಶ್ಚರ್ಯಕರವಾದ ಅನೇಕ ದೃಶ್ಯಗಳನ್ನು ಕಾಣಬಹುದಾಗಿದೆ. ಧರ್ಮಜ! ಆ ಪರ್ವತದಲ್ಲಿಯೇ ವಿಶ್ವಾಮಿತ್ರನ ತಪಃಪ್ರಭಾವದಿಂದ ಹುಟ್ಟಿದ ಪ್ರಸಿದ್ಧ

ವಾದ ವಿಶ್ವಾಮಿತ್ರನದಿಯು ಅನೇಕಾನೇಕ ಪುಣ್ಯತೀರ್ಥಗಳಿಂದ ಕೂಡಿರುವುದು. ನಹುಷಪುತ್ರನಾದ ಯಯಾತಿಯು ಆ ವಿಶ್ವಾಮಿತ್ರಾನದಿಯ ದಂಡೆಯ ಮೇಲಿದ್ದ ಧರ್ಮಾತ್ಮರಾದ ಅಷ್ಟಕಾದಿಗಳ ಮಧ್ಯದಲ್ಲಿ ಸ್ವರ್ಗದಿಂದ ಕೆಳಗೆ ಬಿದ್ದು, ಅನಂತರದಲ್ಲಿ ಸತ್ಪುರುಷರ, ಧರ್ಮಾತ್ಮರ ಪ್ರಭಾವದಿಂದಾಗಿ ಧರ್ಮಾತ್ಮರಿಗೆ ಪ್ರಾಪ್ತವಾಗುವ ಪುಣ್ಯಲೋಕವನ್ನು ಪುನಃ ಪಡೆದನು. ಯುಧಿಷ್ಠಿರ! ಆ ಸ್ಥಳದಲ್ಲಿಯೇ ಪುಣ್ಯಹ್ರದವೂ, ಮೈನಾಕವೆಂಬ ಪರ್ವತವೂ ಇರುವುವು. ಆ ಅವಂತಿದೇಶದಲ್ಲಿಯೇ ಕಂದ-ಮೂಲ-ಫಲಗಳಿಂದ ಕೂಡಿರುವ ಅಸಿತವೆಂಬ ಪರ್ವತವೂ ಇದೆ. ಪರಮಪವಿತ್ರವಾದ ಕಕ್ಷಸೇನನ ಪುಣ್ಯಾಶ್ರಮವೂ ಅಲ್ಲಿಯೇ ಇರುವುದು. ಮೂರು ಲೋಕಗಳಲ್ಲಿಯೂ ಖ್ಯಾತಿಹೊಂದಿರುವ ಮಹರ್ಷಿಗಳಾದ ಚ್ಯವನರ ಪುಣ್ಯಾಶ್ರಮವಿರುವುದೂ ಅಲ್ಲಿಯೇ. ಆ ದಿವ್ಯಾಶ್ರಮದಲ್ಲಿ ಈಗಲೂ ವ್ರತನಿಷ್ಠರಾದ ಮಾನವರು ಹೆಚ್ಚು ಶ್ರಮವಿಲ್ಲದೆಯೇ ತಪಸ್ಸಿನ ಸಿದ್ಧಿಯನ್ನು ಪಡೆಯುವರು.

ಯುಧಿಷ್ಠಿರ! ಪಶ್ಚಿಮದಿಕ್ಕಿನಲ್ಲಿ ಮೃಗ-ಪಕ್ಷಿನಿಷೇವಿತವಾದ, ಭಾವಿತಾತ್ಮರಾದ ಋಷಿಗಳಿಗೆ ನಿವಾಸಸ್ಥಾನವಾದ ಜಂಬೂಮಾರ್ಗವೆಂಬ ಪುಣ್ಯಾಶ್ರಮವಿರುವುದು. ಆ ಪುಣ್ಯಾಶ್ರಮದ ಸಮೀಪದಲ್ಲಿ ತಪಸ್ವಿಗಳಿಂದ ನಿಬಿಡವಾದ ಕೇತುಮಾಲಾ, ಮೇಧ್ಯ ಮತ್ತು ಗಂಗಾದ್ವಾರಗಳೆಂಬ ಪುಣ್ಯಕ್ಷೇತ್ರಗಳಿರುವುವು. ಅವುಗಳಿಗೆ ಅನತಿದೂರದಲ್ಲಿರುವ ಸೈಂಧವಾರಣ್ಯವು ಸುಪ್ರಸಿದ್ಧವಾಗಿದ್ದು ಅನೇಕಪಕ್ಷಿಗಳಿಗೂ, ಮೃಗಗಳಿಗೂ ಆಶ್ರಯಭೂತ ವಾಗಿದೆ. ಸೈಂಧವಾರಣ್ಯದ ಸಮೀಪದಲ್ಲಿ ಚತುರ್ಮುಖಬ್ರಹ್ಮನ ಸರೋವರ ವಾದ ಪುಷ್ಕರವೆಂಬ ಪುಣ್ಯತೀರ್ಥವಿದೆ. ವೈಖಾನಸರಿಗೂ, ಸಿದ್ಧರಿಗೂ ಮತ್ತು ಋಷಿಗಳಿಗೂ ಪ್ರಿಯವಾದ ಆಶ್ರಮವೂ ಅಲ್ಲಿಯೇ ಇದೆ. ಆ ಪುಷ್ಕರತೀರ್ಥಕ್ಕೆ ಯಾತ್ರೆಹೋಗುವವರ ಉದ್ಧಾರಾರ್ಥವಾಗಿ ಚತುರ್ಮುಖನು ಪುಷ್ಕರತೀರ್ಥ ಯಾತ್ರೆಯ ಫಲವನ್ನು ಹೀಗೆ ಹೇಳಿದ್ದಾನೆ. ಅವನು ಹೇಳಿದ ಫಲಶ್ರುತಿಯನ್ನೇ ನಾನು ನಿನಗೂ ಹೇಳುವೆನು ; ಕೇಳು.

**ಮನಸಾಪ್ಯಭಿಕಾಮಸ್ಯ ಪುಷ್ಕರಾಣಿ ಮನಸ್ವಿನಮ್ ।**
**ವಿಪ್ರಣಶ್ಯನ್ತಿ ಪಾಪಾನಿ ನಾಕಪೃಷ್ಠೇ ಚ ಮೋದತೇ ॥೧೮॥**

"ಪುಷ್ಕರತೀರ್ಥಯಾತ್ರೆಯನ್ನು ಮಾಡುವೆನೆಂಬುದಾಗಿ ಸಂಕಲ್ಪ ಮಾಡಿದ ಮಾತ್ರದಿಂದಲೇ ಪರಿಶುದ್ಧಾತ್ಮನಾದ ಮಾನವನ ಸಕಲಪಾಪಗಳೂ ವಿನಾಶಹೊಂದುವುವಲ್ಲದೇ–ಅವನು ಸ್ವರ್ಗಲೋಕದಲ್ಲಿಯೂ ಸಂತುಷ್ಟ ನಾಗಿರುತ್ತಾನೆ."

೮೯ನೆಯ ಅಧ್ಯಾಯವು ಮುಗಿಯಿತು.

೯೦ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಧೌಮ್ಯರಿಂದ ಉತ್ತರದಿಕ್ಕಿನ ತೀರ್ಥಗಳ ವರ್ಣನೆ

ಪುರುಷವ್ಯಾಘ್ರನೇ! ಯುಧಿಷ್ಠಿರ! ನಾನು ನಿನಗೆ ಪಶ್ಚಿಮದಿಕ್ಕಿನಲ್ಲಿರುವ ಪುಣ್ಯಕ್ಷೇತ್ರಗಳ, ನದೀ-ನದ-ಸರೋವರಗಳ, ಪುಣ್ಯಾಶ್ರಮಗಳ ಮತ್ತು ಪರ್ವತಗಳ ವಿವರಣೆಯನ್ನು ವಿವರಿಸಿ ಹೇಳಿದೆನು. ಇನ್ನು ಮುಂದೆ ಉತ್ತರದಿಕ್ಕಿನಲ್ಲಿರುವ ಪುಣ್ಯಕ್ಷೇತ್ರಗಳನ್ನು ತಿಳಿಸುವೆನು. ಏಕಾಗ್ರಚಿತ್ತನಾಗಿ ಕೇಳು. ಆ ಪುಣ್ಯಕ್ಷೇತ್ರಗಳ ಕಥಾಶ್ರವಣವು ಮನುಷ್ಯನಲ್ಲಿ ವಿಶೇಷವಾದ ಧಾರ್ಮಿಕಶ್ರದ್ಧೆಯನ್ನುಂಟುಮಾಡುತ್ತದೆ. ಉತ್ತರದಿಕ್ಕಿನಲ್ಲಿ ಮಹಾಪುಣ್ಯವತಿಯಾದ ಅನೇಕಾನೇಕ ಪುಣ್ಯತೀರ್ಥಕ್ಷೇತ್ರಗಳನ್ನೊಳಗೊಂಡಿರುವ ಸರಸ್ವತಿಯು ಪ್ರವಹಿಸುತ್ತಾಳೆ. ಆ ನದಿಯ ದಂಡೆಯಲ್ಲಿ, ಸೋಪಾನವಿದ್ದು ನದಿಯಲ್ಲಿ ಇಳಿಯುವುದಕ್ಕೂ ನದಿಯಿಂದ ಮೇಲಕ್ಕೆ ಬರುವುದಕ್ಕೂ ಅತಿಸುಲಭವಾಗಿದೆ. ಆ ದಿಕ್ಕಿನಲ್ಲಿಯೇ ಸಮುದ್ರಗಾಮಿನಿಯಾದ, ಮಹಾವೇಗವುಳ್ಳ ಯಮುನಾನದಿಯೂ ಪ್ರವಹಿಸುವುದು. ಯಮುನಾನದಿಯ ತೀರದಲ್ಲಿ ಅತ್ಯಂತಶುಭಾವಹವಾದ ಪ್ಲಕ್ಷಾವತರಣವೆಂಬ ತೀರ್ಥವಿದೆ. ಪುಣ್ಯತಮವಾದ ಆ ತೀರ್ಥದ ಸಮೀಪದಲ್ಲಿಯೇ ಬ್ರಾಹ್ಮಣರು ಸಾರಸ್ವತವೆಂಬ ಯಾಗಮಾಡಿ ಅವಭೃಥಸ್ನಾನಮಾಡುತ್ತಾರೆ. ಆ ತೀರ್ಥಕ್ಕೆ ಅನತಿದೂರದಲ್ಲಿ ಸುಪ್ರಸಿದ್ಧವಾದ, ದಿವ್ಯವಾದ, ಶುಭಾವಹವಾದ ಅಗ್ನಿಶಿರವೆಂಬ ತೀರ್ಥವಿರುವುದು. ಆ ಅಗ್ನಿಶಿರತೀರ್ಥದ ಸಮೀಪದಲ್ಲಿ ಸೃಂಜಯಪುತ್ರನಾದ ಸಹದೇವನು ಶಮ್ಯಾದಂಡವನ್ನೆಸೆದು ದಂಡಪತನಪ್ರದೇಶ ಪರ್ಯಂತವಾಗಿ ಯಜ್ಞವೇದಿಕೆಯನ್ನು ನಿರ್ಮಿಸಿ ಯಾಗವನ್ನು ಮಾಡಿದನು. ಸಹದೇವನು ಮಾಡಿದ ಅದ್ಭುತಯಾಗದ ಪ್ರಶಂಸೆಯನ್ನು ಇಂದ್ರನೇ

ಮಾಡಿದ್ದಾನೆ. ಶ್ಲೋಕರೂಪವಾದ ಇಂದ್ರನ ಆ ಪ್ರಶಂಸಾವಚನವನ್ನು ಬ್ರಾಹ್ಮಣರು ಇಂದೂ ಹೇಳುತ್ತಾರೆ.

**ಅಗ್ನಯಃ ಸಹದೇವೇನ ಸೇವಿತಾ ಯಮುನಾಮನು ।**
**ತೇ ತಸ್ಯ ಕುರುಶಾರ್ದೂಲ ಸಹಸ್ರಶತದಕ್ಷಿಣಾಃ ॥೭॥**

"ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯಗಳೆಂಬ ಅಗ್ನಿತ್ರಯಗಳೂ–ಯಮುನಾನದಿಯ ತೀರದಲ್ಲಿ ಸೃಂಜಯನ ಮಗನಾದ ಸಹದೇವನಿಂದ ಲಕ್ಷ-ಲಕ್ಷ ದಕ್ಷಿಣೆಯುಳ್ಳ ಯಾಗದ ಮೂಲಕವಾಗಿ ಸೇವಿಸಲ್ಪಟ್ಟುವು." ಈ ಮಾತು ಇಂದೂ ಜನಜನಿತವಾಗಿದೆ.

ಯುಧಿಷ್ಠಿರ! ಯಮುನಾನದಿಯ ಆ ತೀರದಲ್ಲಿಯೇ ಭರತಚಕ್ರವರ್ತಿಯು ಮೂವತ್ತೈದು ಅಶ್ವಮೇಧಯಾಗಗಳನ್ನು ಮಾಡಿ ಬ್ರಾಹ್ಮಣರ ಸಕಲೇಷ್ಟಾರ್ಥಗಳನ್ನೂ ಪೂರ್ಣಗೊಳಿಸಿ ಪ್ರಸಿದ್ಧನಾದನು. ಶರಭಂಗ ಮಹರ್ಷಿಯ ಪುಣ್ಯಾಶ್ರಮವೂ ಅಲ್ಲಿಯೇ ಇರುವುದು. ಆ ಆಶ್ರಮ ಪ್ರದೇಶದಲ್ಲಿ ಸತ್ಪುರುಷರಿಂದ ಸರ್ವದಾ ಪೂಜಿಸಲ್ಪಡುವ ಸರಸ್ವತೀನದಿಯು ಪ್ರವಹಿಸುವುದು. ಆ ನದಿಯ ತೀರದಲ್ಲಿಯೇ ಹಿಂದೆ ವಾಲಖಿಲ್ಯರು ಅನೇಕ ಯಾಗಗಳನ್ನು ಮಾಡಿದರೆಂದೂ ನಾವು ಕೇಳಿದ್ದೇವೆ. ಸರಸ್ವತೀನದಿಗೆ ಅನತಿದೂರದಲ್ಲಿ ಅತ್ಯಂತಶುಭಾವಹವಾದ, ಮಹಾಪುಣ್ಯಪ್ರದವಾದ ದೃಷದ್ವತೀನದಿಯೂ ಪ್ರವಹಿಸುವುದು.

ಆ ಪ್ರದೇಶದಲ್ಲಿಯೇ ನ್ಯಗ್ರೋಧ, ಪುಣ್ಯ, ಪಾಂಚಾಲ್ಯ, ದಾಲ್ಭ್ಯ-ಘೋಷ ಮತ್ತು ದಾಲ್ಭ್ಯಗಳೆಂಬ ಐದು ಆಶ್ರಮಗಳೂ ಇವೆ. ಮಹಾತ್ಮನಾದ ಅನಂತಯಶಸ್ಕನಾದ, ಮಹಾತೇಜಸ್ವಿಯಾದ, ಜಿತೇಂದ್ರಿಯನಾದ ಸುವ್ರತನೆಂಬ ಮಹರ್ಷಿಯ ಆಶ್ರಮವೂ ಅಲ್ಲಿಯೇ ಇರುವುದು. ವಿಖ್ಯಾತರಾದ, ಸಾಕಾರ-ನಿರಾಕಾರರಾದ, ಕೃಷ್ಣವರ್ಣರಾದ, ವರ್ಣರಹಿತರಾದ (ಸತ್ವಾದಿ ಗುಣರಹಿತರಾದ) ವೇದ-ವೇದಾಂಗಪಾರಂಗತರಾದ ನರ-ನಾರಾಯಣರೆಂಬ ಇಬ್ಬರು ಮಹರ್ಷಿಗಳು ಆ ಪ್ರದೇಶದಲ್ಲಿಯೇ ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿದರು. ಆ ಪ್ರದೇಶದಲ್ಲಿಯೇ ವಿಶಾಖಯೂಪವೆಂಬ ಪುಣ್ಯಕ್ಷೇತ್ರವಿರುವುದು. ಆ ಪುಣ್ಯಕ್ಷೇತ್ರಕ್ಕೆ ಹಿಂದೆ ದೇವತೆಗಳು ಇಂದ್ರಾವರುಣರ

ಸಮೇತರಾಗಿ ಹೋಗಿ ತಪಸ್ಸನ್ನು ಮಾಡಿದರು. ಆದುದರಿಂದಲೇ ಆ ಕ್ಷೇತ್ರವು ಇಂದಿಗೂ ಮಹಾಪವಿತ್ರಕ್ಷೇತ್ರವೆಂದು ಪ್ರಸಿದ್ಧವಾಗಿದೆ. ವಿಶಾಖಯೂಪದ ಸಮೀಪದಲ್ಲಿರುವ ಪಲಾಶಕಕ್ಷೇತ್ರಗಳಲ್ಲಿ ಮಹಾಮಹಿಮನಾದ ಜಮದಗ್ನಿಮಹರ್ಷಿಯು ಅನೇಕ ಯಜ್ಞಗಳನ್ನು ಮಾಡಿದನು. ಆ ಸಮಯದಲ್ಲಿ ಅನೇಕ ನದೀ-ನದ-ಸರೋವರಗಳು ತಮ್ಮ ಪವಿತ್ರೋದಕಗಳೊಡನೆ ಮೂರ್ತಿಮತ್ತಾಗಿ ಬಂದು ಆ ಜಮದಗ್ನಿಮಹರ್ಷಿಯನ್ನು ಸೇವಿಸಿದುವು. ಸ್ವಯಂ ವಿಶ್ವಾವಸುವು ಆ ಮಹರ್ಷಿಯ ದೀಕ್ಷಾನುಷ್ಠಾನವನ್ನು ಕಂಡು ಜಮದಗ್ನಿಯನ್ನು ಈ ಶ್ಲೋಕದಿಂದ ಶ್ಲಾಘನೆಮಾಡಿರುವನು.

**ಯಜಮಾನಸ್ಯ ವೈ ದೇವಾಞ್ಜಮದಗ್ನೇರ್ಮಹಾತ್ಮನಃ ।**
**ಆಗಮ್ಯ ಸರಿತೋ ವಿಪ್ರಾನ್ಮಧುನಾ ಸಮತರ್ಪಯನ್ ॥೧೯॥**

'ದೇವತೆಗಳನ್ನು ತೃಪ್ತಿಪಡಿಸಲು ಯಾಗಮಾಡುತ್ತಿದ್ದ ಜಮದಗ್ನಿ ಮಹರ್ಷಿಯ ಯಜ್ಞಕ್ಕೆ ನದಿಗಳೇ ಮೂರ್ತಿಮತ್ತಾಗಿ ಬಂದು ಬ್ರಾಹ್ಮಣರನ್ನು ಮಧುಪರ್ಕಾದಿಗಳಿಂದ ಸಂತೃಪ್ತಿಪಡಿಸಿದುವು.'

ಯುಧಿಷ್ಠಿರ! ಗಂಧರ್ವ-ಯಕ್ಷ-ರಾಕ್ಷಸರಿಂದಲೂ, ಅಪ್ಸರೆಯ ರಿಂದಲೂ ಸಂಸೇವ್ಯಮಾನವಾದ–ಕಿರಾತರಿಗೂ ಕಿನ್ನರರಿಗೂ ನಿವಾಸಸ್ಥಾನ ವಾದ–ಪರ್ವತಶಿಖರಗಳಲ್ಲಿಯೇ ಶ್ರೇಷ್ಠವಾದ ಕೈಲಾಸಶಿಖರವನ್ನೂ ಭೇದಿಸಿ ಕೊಂಡು ಎಲ್ಲಿ ಗಂಗೆಯು ಹೊರಬರುತ್ತದೆಯೋ–ಆ ಪವಿತ್ರಪ್ರದೇಶಕ್ಕೆ ಗಂಗಾದ್ವಾರವೆಂದು ಹೆಸರು.

ಬ್ರಹ್ಮರ್ಷಿಸೇವಿತವಾದ ಆ ಗಂಗಾದ್ವಾರವನ್ನೂ ಮತ್ತು ಅದರ ಸಮೀಪ ದಲ್ಲಿರುವ ಸ್ಥಳವನ್ನೂ ಪವಿತ್ರಕ್ಷೇತ್ರಗಳೆಂದು ಋಷಿ-ಮಹರ್ಷಿಗಳು ಸಾರಿ ದ್ದಾರೆ. ಈ ಪ್ರದೇಶದಲ್ಲಿಯೇ ಇರುವ ಪುಣ್ಯತಮವಾದ ಕನಖಲ ಕ್ಷೇತ್ರದ ಯಾತ್ರೆಯನ್ನು ಹಿಂದೆ ಸನತ್ಕುಮಾರನು ಮಾಡಿದ್ದನು. ಪುರೂರವನೆಂಬ ಪ್ರಸಿದ್ಧನಾದ ರಾಜನು ಇಲ್ಲಿರುವ ಪುರು ಎಂಬ ಪರ್ವತದ ಯಾತ್ರೆ ಮಾಡಿ ದ್ದನು. ಆ ಪರ್ವತದ ಸಮೀಪದಲ್ಲಿ ಮಹರ್ಷಿಗಣಸೇವಿತವಾದ ಭೃಗುತುಂಗ ವೆಂಬ ಮಹಾಪರ್ವತವಿರುವುದು. ಆ ಪರ್ವತದ ತಪ್ಪಲಿನಲ್ಲಿ ಸುಪ್ರಸಿದ್ಧನಾದ ಭೃಗುಋಷಿಯು ಅನೇಕವರ್ಷಗಳ ಕಾಲ ತಪಸ್ಸನ್ನು ಮಾಡಿ ಸಿದ್ಧಿಯನ್ನು

ಪಡೆದನು. ಆ ಭೃಗುತುಂಗಮಹಾಗಿರಿಯ ಸಮೀಪದಲ್ಲಿಯೇ ಪರಮ ಪವಿತ್ರವಾದ, ಅತ್ಯಂತವಿಶಾಲವಾದ, ತ್ರಿಲೋಕಪ್ರಸಿದ್ಧವಾದ ಬದರೀಕ್ಷೇತ್ರ ವಿರುವುದು.

**ಯಃ ಸ ಭೂತಂ ಭವಿಷ್ಯಚ್ಚ ಭವಚ್ಚ ಭರತರ್ಷಭ ।**
**ನಾರಾಯಣಃ ಪ್ರಭುರ್ವಿಷ್ಣುಃ ಶಾಶ್ವತಃ ಪುರುಷೋತ್ತಮಃ ॥೨೪॥**

**ತಸ್ಯಾತಿಯಶಸಃ ಪುಣ್ಯಾಂ ವಿಶಾಲಾಂ ಬದರೀಮನು ।**
**ಆಶ್ರಮಃ ಖ್ಯಾಯತೇ ಪುಣ್ಯಸ್ತ್ರಿಷು ಲೋಕೇಷು ವಿಶ್ರುತಃ ॥೨೫॥**

ಭೂತ-ಭವಿಷ್ಯದ್ವರ್ತಮಾನಗಳೆಂಬ ತ್ರಿಕಾಲಗಳೂ ಯಾವನೇ ಆಗಿರು ವನೋ ಅಥವಾ ಆ ತ್ರಿಕಾಲಗಳೂ ಯಾವನ ಅಧೀನದಲ್ಲಿರುವುವೋ– ಯಾವನು ಶಾಶ್ವತನೂ, ಪ್ರಭುವೂ, ವಿಷ್ಣುವೂ, ಸರ್ವೋತ್ತಮನೂ ಆಗಿರುವನೋ–ಅಂತಹ ಶ್ರೀಮನ್ನಾರಾಯಣನ ತ್ರಿಲೋಕಪ್ರಸಿದ್ಧವಾದ, ಪುಣ್ಯಪ್ರದವಾದ ಆಶ್ರಮವು ವಿಶಾಲವಾದ ಬದರಿಕಾಶ್ರಮದ ಸಮೀಪದಲ್ಲಿ ಕಂಗೊಳಿಸುತ್ತಿದೆ.

**ಉಷ್ಣತೋಯವಹಾ ಗಙ್ಗಾ ಶೀತತೋಯವಹಾ ಪುರಾ ।**
**ಸುವರ್ಣಸಿಕತಾ ರಾಜನ್ವಿಶಾಲಾಂ ಬದರೀಮನು ॥೨೬॥**

ಆ ಪುಣ್ಯಕ್ಷೇತ್ರದಲ್ಲಿ ಅನಾದಿಕಾಲದಿಂದಲೂ ಗಂಗೆಯು ಕೆಲವು ಕಡೆ ಉಷ್ಣೋದಕದಿಂದಲೂ ಕೆಲವು ಕಡೆ ಶೀತೋದಕದಿಂದಲೂ ಕೂಡಿ ಪ್ರವಹಿಸುತ್ತದೆ. ವಿಶಾಲವಾದ ಬದರೀಕ್ಷೇತ್ರದ ಸಮೀಪದಲ್ಲಿ ಪ್ರವಹಿಸುವ ಗಂಗಾನದಿಯ ಮರಳು ಸ್ವರ್ಣಮಯವಾಗಿರುವುದು.

ಮಹಾಭಾಗರಾದ, ಮಹಾತೇಜಸ್ವಿಗಳಾದ ಋಷಿ-ಮಹರ್ಷಿಗಳೂ ಮತ್ತು ದೇವತೆಗಳೂ ಅನುದಿನವೂ ಆ ಪವಿತ್ರಕ್ಷೇತ್ರಕ್ಕೆ ಬಂದು ಶ್ರೀಮನ್ನಾರಾಯಣನನ್ನು ಆರಾಧಿಸುತ್ತಾರೆ. ಸಕಲಪುಣ್ಯಕ್ಷೇತ್ರಗಳಿಂದಲೂ, ನದೀ-ನದ-ಸರೋವರಗಳಿಂದಲೂ ಕೂಡಿರುವ ಈ ಜಗತ್ತೇ ಸೂಕ್ಷ್ಮರೂಪ ದಲ್ಲಿ ದೇವದೇವನಾದ, ಸನಾತನನಾದ, ಪರಮಾತ್ಮನಾದ ಶ್ರೀಮನ್ನಾ ರಾಯಣನ ದಿವ್ಯ ಸಾನ್ನಿಧ್ಯವಿರುವ ಆ ಬದರೀಕ್ಷೇತ್ರದಲ್ಲಿರುವುದು.

**ತತ್ಪುಣ್ಯಂ ಪರಮಂ ಬ್ರಹ್ಮ ತತ್ತೀರ್ಥಂ ತತ್ತಪೋವನಮ್ ।**
**ತತ್ಪರಂ ಪರಮಂ ದೇವಂ ಭೂತಾನಾಂ ಪರಮೇಶ್ವರಮ್ ॥೨೯॥**

**ಶಾಶ್ವತಂ ಪರಮಂ ಚೈವ ಧಾತಾರಂ ಪರಮಂ ಪದಮ್ ।**
**ಯಂ ವಿದಿತ್ವಾ ನ ಶೋಚನ್ತಿ ವಿದ್ವಾಂಸಃ ಶಾಸ್ತ್ರದೃಷ್ಟಯಃ ॥೩೦॥**

ಪುಣ್ಯತಮನಾದ, ಪರಬ್ರಹ್ಮಸ್ವರೂಪನಾದ, ತೀರ್ಥಸ್ವರೂಪನಾದ, ತಪೋವನರೂಪನಾದ, ಪರಾತ್ಪರನಾದ, ಸಕಲಪ್ರಾಣಿಗಳಿಗೂ ಈಶ್ವರನಾದ, ಶಾಶ್ವತನಾದ, ಬ್ರಹ್ಮರೂಪನಾದ, ಪರಮಪದರೂಪನಾದ ಶ್ರೀಮನ್ನಾರಾಯಣನನ್ನು ವಿದ್ವಾಂಸರಾದ ಯಾರು ತಿಳಿಯುವರೋ ಅವರಿಗೆ ಶೋಕವೆಂಬುದೇ ಇರುವುದಿಲ್ಲ.

ಆದಿದೇವನಾದ, ಪರಮಯೋಗಿಯಾದ, ಮಧುಸೂದನನ ಸಾನ್ನಿಧ್ಯವಿರುವ ಆ ಬದರಿಕಾಶ್ರಮದಲ್ಲಿ ದೇವರ್ಷಿಗಳೂ, ಸಿದ್ಧರೂ, ಸಕಲ ತಪೋಧನರೂ ಸರ್ವದಾ ಉಪಸ್ಥಿತರಾಗಿರುತ್ತಾರೆ.

ಯುಧಿಷ್ಠಿರ! ಆ ಬದರೀಕ್ಷೇತ್ರವು ಪ್ರಪಂಚದಲ್ಲಿರುವ ಎಲ್ಲ ಪುಣ್ಯಕ್ಷೇತ್ರಗಳಿಗಿಂತಲೂ ಶ್ರೇಷ್ಠವಾದುದೆಂಬುದರಲ್ಲಿ ನೀನು ಸ್ವಲ್ಪವಾದರೂ ಸಂಶಯಪಡುವ ಕಾರಣವಿಲ್ಲ. ಈಗ ನಾನು ಹೇಳಿದ ಸ್ಥಳಗಳೆಲ್ಲವೂ ಈ ಪೃಥ್ವಿಯಲ್ಲಿ ಪುಣ್ಯತೀರ್ಥಗಳೂ ಪುಣ್ಯಕ್ಷೇತ್ರಗಳೂ ಆಗಿವೆ. ಆ ಎಲ್ಲ ಪುಣ್ಯತೀರ್ಥಗಳೂ ಮತ್ತು ಪುಣ್ಯಕ್ಷೇತ್ರಗಳೂ ಅಷ್ಟವಸುಗಳಿಂದಲೂ, ಸಿದ್ಧರಿಂದಲೂ, ಆದಿತ್ಯರಿಂದಲೂ, ಮರುತ್ತುಗಳಿಂದಲೂ, ಅಶ್ವಿನೀದೇವತೆಗಳಿಂದಲೂ, ಋಷಿ-ಮಹರ್ಷಿಗಳಿಂದಲೂ ಸಂದರ್ಶಿಸಲ್ಪಡುತ್ತಿವೆ. ನೀನೂ ನಿನ್ನೊಡನೆ ಇರುವ ಬ್ರಾಹ್ಮಣರಿಂದಲೂ ತಪಸ್ವಿಗಳಿಂದಲೂ ಮತ್ತು ನಿನ್ನ ಅನುಜರಿಂದಲೂ ಕೂಡಿದವನಾಗಿ ಆ ಎಲ್ಲ ಪುಣ್ಯಕ್ಷೇತ್ರಗಳನ್ನೂ, ಪುಣ್ಯತೀರ್ಥಗಳನ್ನೂ ಸಂದರ್ಶಿಸಿದ್ದೇ ಆದರೆ ನಿನ್ನ ಮನಸ್ಸಿನ ಆತಂಕವು ದೂರವಾಗುತ್ತದೆ."

೯೦ನೆಯ ಅಧ್ಯಾಯವು ಮುಗಿಯಿತು.

೯೧ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಲೋಮಶರ ಆಗಮನ : ಅರ್ಜುನನು ಪಾಶುಪತವೇ ಮೊದಲಾದ ಅಸ್ತ್ರಗಳನ್ನು ಪಡೆದುದನ್ನೂ ಇಂದ್ರನ ಸಂದೇಶವನ್ನೂ ಪಾಂಡವರಿಗೆ ತಿಳಿಸಿದುದು

ವೈಶಂಪಾಯನರು ಮಹಾಭಾರತಪ್ರವಚನವನ್ನು ಮುಂದುವರಿಸುತ್ತಾ ಹೇಳುತ್ತಾರೆ :



"ಜನಮೇಜಯ! ನಾನು ಮೇಲೆ ಹೇಳಿದ ರೀತಿಯಲ್ಲಿ ಪುರೋಹಿತರಾದ ಧೌಮ್ಯರು ಧರ್ಮರಾಜನನ್ನು ಕುರಿತು ಪೃಥ್ವಿಯಲ್ಲಿರುವ ತೀರ್ಥಗಳ

ಮತ್ತು ಪುಣ್ಯಕ್ಷೇತ್ರಗಳ ಪ್ರವಚನಮಾಡುತ್ತಿರಲಾಗಿ ಮಹಾತೇಜಸ್ವಿಗಳಾದ ಲೋಮಶಮಹರ್ಷಿಗಳು ಧರ್ಮರಾಜನ ಸಮೀಪಕ್ಕೆ ಆಗಮಿಸಿದರು. ಆಗಮಿಸಿದ ಮಹರ್ಷಿಗಳನ್ನು ವಿಧ್ಯುಕ್ತವಾಗಿ ಉಪಚರಿಸಿದನಂತರ ಅವರನ್ನು ಪೀಠದಲ್ಲಿ ಕುಳ್ಳಿರಿಸಿ ಧರ್ಮಜನೂ ಆತನ ಅನುಜರೂ ಮತ್ತು ಬ್ರಾಹ್ಮಣರೂ–ಸ್ವರ್ಗದಲ್ಲಿ ದೇವತೆಗಳು ಇಂದ್ರನನ್ನು ಸುತ್ತುವರಿದು ಕುಳಿತುಕೊಳ್ಳುವಂತೆ–ಲೋಮಶರನ್ನು ಸುತ್ತುವರಿದು ಕುಳಿತುಕೊಂಡರು.

ಲೋಮಶಮಹರ್ಷಿಗಳನ್ನು ಸ್ವಾಗತಿಸಿ ಗೌರವಿಸಿದನಂತರ ಧರ್ಮ ರಾಜನು ಬದ್ಧಾಂಜಲಿಯಾಗಿ ಮಹರ್ಷಿಗಳಾದ ಲೋಮಶರ ಆಗಮನದ ಕಾರಣವನ್ನೂ ಮತ್ತು ಅವರ ದೇಶಸಂಚಾರದ ಪ್ರಯೋಜನವನ್ನೂ ವಿನಯಾನ್ವಿತನಾಗಿ ಕೇಳಿದನು. ವಿನೀತನಾದ ಪಾಂಡುಪುತ್ರನಿಂದ ಪ್ರಶ್ನಿಸಲ್ಪಟ್ಟ ಲೋಮಶರು ಪಾಂಡವಾಗ್ರಜನ ನಯ-ವಿನಯಾದಿಗುಣಗಳನ್ನು ಕಂಡು ಸುಪ್ರೀತರಾಗಿ ಸುಮಧುರವಾದ ಈ ಮಾತುಗಳನ್ನಾಡಿದರು :

“ಕುಂತೀಪುತ್ರನೇ! ನಾನು ಸ್ವೇಚ್ಛೆಯಿಂದ ತ್ರಿಭುವನಗಳನ್ನೂ ಸಂಚಾರಮಾಡುತ್ತಿರುವಾಗ ಒಮ್ಮೆ ಸ್ವರ್ಗಾಧಿಪತಿಯಾದ ಇಂದ್ರನ ಅರಮನೆಗೂ ಹೋಗಿ ಅವನನ್ನು ಸಂದರ್ಶಿಸಿದೆನು. ಆದರೆ ಅಂದು ಇಂದ್ರನ ಸಿಂಹಾಸನದಲ್ಲಿ ಇಂದ್ರನೊಬ್ಬನೇ ಕುಳಿತಿರಲಿಲ್ಲ. ಅವನೊಡನೆ ಸವ್ಯಸಾಚಿ ಯಾದ, ವೀರನಾದ, ನಿನ್ನ ತಮ್ಮನಾದ ಅರ್ಜುನನೂ ಕುಳಿತಿರುವುದನ್ನು ಕಂಡೆನು. ಮನುಜಾಧಿಪನೇ! ಆ ದೃಶ್ಯವು ಕೌತುಕವನ್ನುಂಟುಮಾಡಿತು. ಅರ್ಜುನನು ಇಂದ್ರನ ಅರ್ಧಾಸನದಲ್ಲಿ ಕುಳಿತಿರುವುದನ್ನು ಕಂಡು ನಾನು ಆಶ್ಚರ್ಯಭರಿತನಾದೆನು.

ಅಚ್ಚರಿಯನ್ನು ಸೂಚಿಸುತ್ತಿದ್ದ ನನ್ನ ಮುಖವನ್ನು ನೋಡಿ ದೇವೇಶನು ನನ್ನನ್ನು ಕುರಿತು–‘ನೀವು ಕೂಡಲೇ ಪಾಂಡವರ ಬಳಿಗೆ ಹೋಗಬೇಕು’ ಎಂದು ಹೇಳಿದನು. ಇಂದ್ರನ ಆಶಯದಂತೆ ಮತ್ತು ಮಹಾತ್ಮನಾದ ಅರ್ಜು ನನ ಪ್ರಾರ್ಥನೆಯಂತೆ ನಾನು ಸಾವಕಾಶಮಾಡದೇ ಸ್ವರ್ಗಲೋಕದಿಂದ ಹೊರಟು ನಿನ್ನನ್ನೂ ಮತ್ತು ನಿನ್ನ ಅನುಜರನ್ನೂ ನೋಡುವ ಸಲುವಾಗಿ ಶೀಘ್ರವಾಗಿ ಇಲ್ಲಿಗೆ ಬಂದಿರುವೆನು. ಧರ್ಮಜ! ನಾನೀಗ ನಿನಗೆ ಅತ್ಯಂತ

ಪ್ರಿಯಕರವಾದ ವಾರ್ತೆಯನ್ನು ಹೇಳಲಿರುವೆನು. ನಾನು ಹೇಳಲಿರುವ ಈ ಸುವಾರ್ತೆಯನ್ನು ನಿನ್ನ ಅನುಜರೊಡನೆಯೂ, ದ್ರೌಪದಿಯೊಡನೆಯೂ, ನಿನ್ನನ್ನನುಸರಿಸಿ ಬಂದಿರುವ ಬ್ರಾಹ್ಮಣರೊಡನೆಯೂ ಕೂಡಿಕೊಂಡು ಏಕಾಗ್ರ ಚಿತ್ತದಿಂದ ಕೇಳುವವನಾಗು.

ಧರ್ಮಜ! ನೀನು ಯಾವ ಮಹಾಸ್ತ್ರದ ಸಂಗ್ರಹಕ್ಕಾಗಿ ಪಾರ್ಥನನ್ನು ಕಳುಹಿಸಿಕೊಟ್ಟೆಯೋ–ಆ ಮಹಾಸ್ತ್ರವನ್ನು ಪಾರ್ಥನು ರುದ್ರನಿಂದ ಪಡೆದಿರುವನು. ಭಯಂಕರವಾದ ಆ ಮಹಾಸ್ತ್ರಕ್ಕೆ ಬ್ರಹ್ಮಶಿರವೆಂದು ಹೆಸರು. ಆ ಮಹಾಸ್ತ್ರವು ಸಮುದ್ರಮಂಥನದ ಕಾಲದಲ್ಲಿ ಅಮೃತವು ಪ್ರಾದುರ್ಭೂತರಿವಾದ ನಂತರ ಹುಟ್ಟಿತು. ಅದನ್ನು ಆಗ ರುದ್ರನು ಪಡೆದನು. ಅದೇ ಮಹಾಸ್ತ್ರ ವನ್ನಿಂದು ಅರ್ಜುನನು ಘೋರವಾದ ತಪಸ್ಸನ್ನುಮಾಡಿ ಮಂತ್ರ-ಸಂಹಾರ-ಪ್ರಾಯಶ್ಚಿತ್ತ-ಮಂಗಳಪೂರ್ವಕವಾಗಿ ಪಡೆದಿರುತ್ತಾನೆ.

(**ಸಮಂತ್ರಂ**–ಪ್ರಯೋಗಮಾಡುವಾಗ ಪುನಶ್ಚರಣೆಮಾಡಬೇಕಾದ ಮಂತ್ರಗಳೊಡನೆ ಪ್ರಯೋಗಿಸುವುದು. **ಸಸಂಹಾರಂ**–ಕೆಲವು ಮಹಾಸ್ತ್ರ ಗಳನ್ನು ಪ್ರಯೋಗಿಸಿದನಂತರ ಪುನಃ ಪಡೆಯುವ ಪ್ರಕ್ರಿಯೆಯೂ ಇರುವುದು. ಮಹಾಸ್ತ್ರಗಳು ಪ್ರಯುಕ್ತವಾದನಂತರ ಸಾಧಾರಣ ಬಾಣಗಳಂತೆ ವಿನಾಶ ಹೊಂದುವುದಿಲ್ಲ. ಪ್ರಯೋಗಿಸಿದನಂತರ ಎದುರಾಳಿಯನ್ನು ಧ್ವಂಸಮಾಡಿ ಪುನಃ ಪ್ರಯೋಗಿಸಿದವನ ಬತ್ತಳಿಕೆಯನ್ನೇ ಸೇರುತ್ತವೆ. ಇಂತಹ ಒಂದು ಪ್ರಕ್ರಿಯೆಗೆ ಸಂಹಾರಪ್ರಕ್ರಿಯೆಯೆಂದು ಹೆಸರು. **ಸಪ್ರಾಯಶ್ಚಿತ್ತಂ** – ಇಂತಹ ಮಹಾಸ್ತ್ರಗಳನ್ನು ಪ್ರಯೋಗಿಸಿದರೆ ಎದುರಾಳಿಯು ಮಾತ್ರವಲ್ಲದೇ ನಿರ್ದೋಷಿಗಳಾದ ಅನೇಕಾನೇಕ ಪ್ರಾಣಿಗಳ ಧ್ವಂಸವೂ ಆಗುತ್ತದೆ. ಅದರ ಶಕ್ತಿಯೇ ಅಂತಹುದು. ದೋಷರಹಿತವಾದ ಪ್ರಾಣಿಗಳ ವಧನಿಮಿತ್ತವಾದ ದೋಷಕ್ಕೆ ಪ್ರಾಯಶ್ಚಿತ್ತವೂ ಮಹಾಸ್ತ್ರಗಳ ಉಪದೇಶಕಾಲದಲ್ಲಿ ಹೇಳಲ್ಪಡುತ್ತದೆ. **ಸಮಙ್ಗಲಂ**–ದೋಷರಹಿತವಾದ ಪ್ರಾಣಿಗಳು ಧ್ವಂಸವಾದರೂ ಅವುಗಳಿಗೆ ಯುದ್ಧದಿಂದ ಮರಣಹೊಂದುವುದರಿಂದ ಪುಣ್ಯಲೋಕವು ಆ ಮಹಾಸ್ತ್ರದ ಸಂಬಂಧದಿಂದ ಪ್ರಾಪ್ತವಾಗುತ್ತದೆ ಮತ್ತು ಶತ್ರುಸಂಹಾರವಾದ ಮೇಲೆ ಮಂಗಲವುಂಟಾಗಬೇಕು. ಅಥವಾ ಶಾಂತಿಯು ನೆಲೆಸಬೇಕೆಂಬ ಪ್ರಕ್ರಿಯೆಯೂ ಆ ಮಹಾಸ್ತ್ರದ ಮೂಲಮಂತ್ರದಲ್ಲಿಯೇ ಸೇರಿಕೊಂಡಿರುತ್ತದೆ.)

ಅರ್ಜುನನು ರುದ್ರದೇವನಿಂದ ಬ್ರಹ್ಮಶಿರವೆಂಬ (ಪಾಶುಪತ) ಮಹಾಸ್ತ್ರವನ್ನು ಪಡೆದುದಲ್ಲದೇ ಇಂದ್ರನಿಂದ ವಜ್ರಾಯುಧವನ್ನೂ, ಯಮನಿಂದ ದಂಡಾಯುಧವನ್ನೂ, ವರುಣನಿಂದ ಪಾಶವನ್ನೂ, ಕುಬೇರನಿಂದ ಶಕ್ತ್ಯಾಯುಧವನ್ನೂ ಪಡೆದಿರುವನು. ಇಂದ್ರಲೋಕದಲ್ಲಿ ಅರ್ಜುನನು ಸಂಗೀತವನ್ನೂ, ವಾದ್ಯವಾದನವನ್ನೂ ಮತ್ತು ನಾಟ್ಯಶಾಸ್ತ್ರವನ್ನೂ ಕಲಿತು ಆಯಾಯಾ ಶಾಸ್ತ್ರಗಳಲ್ಲಿ ಸಂಪೂರ್ಣಪಾಂಡಿತ್ಯವನ್ನು ಪಡೆದಿರುತ್ತಾನೆ. ಸುಸ್ವರವಾದ ಸಾಮವೇದವನ್ನು ವಿಶ್ವಾವಸುವಿನ ಮಗನಿಂದಲೇ ಅಧ್ಯಯನ ಮಾಡಿರುತ್ತಾನೆ. ನಾನು ಹೇಳಿದ ರೀತಿಯಲ್ಲಿ ಸಕಲಮಹಾಸ್ತ್ರಗಳನ್ನೂ ಮತ್ತು ನೃತ್ಯ-ಗಾಯನ-ವಾದ್ಯವಿದ್ಯೆಗಳನ್ನೂ ಅರ್ಜುನನು ಸಾಂಗೋಪಾಂಗವಾಗಿ ಪಡೆದು ಸ್ವರ್ಗಲೋಕದಲ್ಲಿ ಸುಖದಿಂದ ಕಾಲಕಳೆಯುತ್ತಿದ್ದಾನೆ. ಇಂದ್ರನು ನನ್ನೊಡನೆ ಹೇಳಿರುವ ವಾರ್ತೆಯನ್ನು ಈಗ ನಾನು ನಿನಗೆ ಯಥಾವತ್ತಾಗಿಯೇ ಹೇಳುವೆನು ; ಕೇಳು, ಧರ್ಮಜ!

ಇಂದ್ರನು ನನ್ನೊಡನೆ ಹೀಗೆ ಹೇಳಿರುವನು :

"ಲೋಮಶರೇ! ನೀವು ನಿಮ್ಮ ಲೋಕಪರ್ಯಟನಕಾಲದಲ್ಲಿ ಮನುಷ್ಯಲೋಕಕ್ಕೂ ಖಂಡಿತವಾಗಿ ಹೋಗಲಿರುವಿರಿ. ನೀವು ಮನುಷ್ಯಲೋಕಕ್ಕೆ ಹೋದಾಗ ಯುಧಿಷ್ಠಿರನನ್ನು ಸಂದರ್ಶಿಸಿ, ನಾನು ಹೇಳಲಿರುವ ಈ ಮಾತುಗಳನ್ನು ಅವನೊಡನೆ ಹೇಳಿರಿ.

"ಧರ್ಮಜ! ನಿನ್ನ ಅನುಜನಾದ ಅರ್ಜುನನು ಅನೇಕಾನೇಕ ಮಹಾಸ್ತ್ರಗಳನ್ನು ಪಡೆದು, ದೇವತೆಗಳಿಂದಲೂ ಸಾಧಿಸಲಸಾಧ್ಯವಾದ ದೇವಕಾರ್ಯವನ್ನು ನಿರ್ವಹಿಸಿ ನಿನ್ನ ಬಳಿಗೆ ಅತಿಶೀಘ್ರದಲ್ಲಿಯೇ ಬರುವವನಿದ್ದಾನೆ. ನೀನು ನಿನ್ನ ತಮ್ಮನು ಬರುವವರೆಗೂ ಉಳಿದ ತಮ್ಮಂದಿರೊಡನೆ ತಪಶ್ಚರ್ಯೆಯನ್ನು ಮಾಡುತ್ತಾ ಕಾಲವನ್ನು ಕಳೆಯುತ್ತಿರು.

**ತಪಸೋ ಹಿ ಪರಂ ನಾಸ್ತಿ ತಪಸಾ ವಿನ್ದತೇ ಮಹತ್ ॥೧೯॥**

ತಪಸ್ಸಿಗಿಂತಲೂ ಶ್ರೇಷ್ಠವಾದುದು ಮತ್ತೊಂದಿಲ್ಲ. ತಪಸ್ಸಿನಿಂದ ಮಹಾಫಲವು ಲಭ್ಯವಾಗುತ್ತದೆ.

ಧರ್ಮಜ! ನಿನ್ನ ಮನಸ್ಸಿನಲ್ಲಿರುವ ಮತ್ತೊಂದು ಆತಂಕವನ್ನೂ

ಪರಿಹರಿಸಲಿಚ್ಛಿಸುತ್ತೇನೆ. ಕರ್ಣನ ವಿಷಯವಾಗಿ ನಿನ್ನ ಮನಸ್ಸಿನಲ್ಲಿ ಮಹತ್ತರ ವಾದ ಆತಂಕವುಂಟಾಗಿರುವುದು. ಕರ್ಣನಾರೆಂಬುದನ್ನು ನಾನು ತಿಳಿದಿದ್ದೇನೆ. ಅವನ ಗುಣಗಳನ್ನೂ, ಪರಾಕ್ರಮವನ್ನೂ ನಾನು ಬಲ್ಲೆನು. ಕರ್ಣನು ಸತ್ಯಸಂಧ, ಉತ್ಸಾಹಶಾಲಿ, ಮಹಾವೀರ್ಯವುಳ್ಳವನು. ಮಹಾಪರಾಕ್ರಮಿಯು. ಯುದ್ಧದಲ್ಲಿ ಅಪ್ರತಿಮವಾಗಿ ಹೋರಾಡುವವನು. ಯುದ್ಧವಿಶಾರದನು. ಪರಮಶ್ಲಾಘ್ಯವಾದ ಧನುಸ್ಸನ್ನು ಹೊಂದಿರುವವನು. ಅವನಲ್ಲಿಯೂ ಅನೇಕಮಹಾಸ್ತ್ರಗಳಿವೆ. ಮೇಲಾಗಿ ಅವನು ಅತಿಸುಂದರನೂ ಆಗಿರುವನು. ಸೂತಪುತ್ರನಾದ ಕರ್ಣನು ಪರಾಕ್ರಮದಲ್ಲಿ ಮಹೇಶ್ವರನ ಮಗನಾದ ಕಾರ್ತಿಕೇಯನಿಗೆ ಸಮಾನನೆಂಬುದನ್ನೂ ನಾನು ತಿಳಿದಿರುವೆನು. ಅದೇ ರೀತಿಯಲ್ಲಿ ಸ್ಕಂದ (ಷಣ್ಮುಖ)ನನ್ನೂ ಮೀರಿಸಿರುವ ಅರ್ಜುನನ ವೀರ್ಯಾತಿ ಶಯವನ್ನೂ ತಿಳಿದವನಾಗಿದ್ದೇನೆ. ಯುದ್ಧರಂಗಕ್ಕಿಳಿದರೆ ಕರ್ಣನು ಪರಾಕ್ರಮ ದಲ್ಲಿ ಪಾರ್ಥನ ಹದಿನಾರನೆಯ ಒಂದು ಪಾಲಿಗೂ ಸಮನಾಗುತ್ತಾನೆಂದು ಭಾವಿಸಬೇಡ. ಧರ್ಮಜ! ಅರ್ಜುನನದು ಅಂತಹ ಅದ್ಭುತಪರಾಕ್ರಮ. ಆದರೂ ನನ್ನ ಈ ಮಾತಿನಿಂದಲೇ ನಿನ್ನ ಹೃದಯಲ್ಲಿರುವ ಕರ್ಣನ ಸಂಬಂಧ ವಾದ ಭಯವು ದೂರವಾಗಲಾರದು. ಅರ್ಜುನನು ಸ್ವರ್ಗಲೋಕದಿಂದ ಮನುಷ್ಯಲೋಕಕ್ಕೆ ಪ್ರಯಾಣಮಾಡಿದನಂತರ ನಿನ್ನ ಭಯವನ್ನು ಸಂಪೂರ್ಣವಾಗಿ ದೂರಮಾಡುವ ಕಾರ್ಯವನ್ನು ನಾನೇ ಮಾಡುವೆನು. ಈ ಸಮಯದಲ್ಲಿ ನಿನ್ನ ಕರ್ತವ್ಯವೇನೆಂದರೆ : ನೀನು ನಿನ್ನೊಡನಿರುವ ಬ್ರಾಹ್ಮಣ ರಿಂದೊಡಗೂಡಿ ತೀರ್ಥಯಾತ್ರೆಯನ್ನು ಮಾಡುವವನಾಗು. ತೀರ್ಥಯಾತ್ರೆ ಗಳ ವಿಷಯದಲ್ಲಿ ಲೋಮಶಮಹರ್ಷಿಗಳು ನಿನಗೆ ಯಥೋಚಿತವಾದ ಸಲಹೆಗಳನ್ನು ನೀಡುವರು. ಅವರು ನಿನಗೆ ತಪಸ್ಸಿನ ವಿಷಯವಾಗಿಯೂ, ತಪಃಫಲದ ವಿಷಯವಾಗಿಯೂ ಪ್ರವಚನವನ್ನು ನೀಡುವರು. ಅವರು ಹೇಳುವುದನ್ನು ನೀನು ಶ್ರದ್ಧೆಯಿಂದ ಕೇಳಿ ಅವರು ಹೇಳುವಂತೆ ಮಾಡು."

ಧರ್ಮಜ! ಇಂದ್ರನು ನಿನಗೆ ಹೇಳಿಕಳುಹಿಸಿರುವ ವಾರ್ತೆಯನ್ನು ಯಥಾವತ್ತಾಗಿ ತಿಳಿಸಿರುವೆನು. ಇನ್ನು ಮುಂದೆ ಅರ್ಜುನನು ನಿನಗೆ ಹೇಳಿರುವ ವಾರ್ತೆಯನ್ನೂ ಯಥಾವತ್ತಾಗಿ ಹೇಳುವೆನು."

ಳಿನೆಯ ಅಧ್ಯಾಯವು ಮುಗಿಯಿತು.

೯೨ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಲೋಮಶರಿಂದ ಇಂದ್ರಾರ್ಜುನರ ಸಂದೇಶವನ್ನು ಕೇಳಿ ಪ್ರಸನ್ನನಾದ ಧರ್ಮಜನು ತೀರ್ಥಯಾತ್ರೆಗೆ ಹೊರಡಲು ನಿಶ್ಚಯಿಸಿ ಹೆಚ್ಚಿನ ಪರಿವಾರವನ್ನು ಹಿಂದಕ್ಕೆ ಕಳುಹಿಸಿದುದು

ಲೋಮಶರು ಮುಂದುವರಿದು ಹೇಳುತ್ತಾರೆ :

"ಯುಧಿಷ್ಠಿರ! ಅರ್ಜುನನು ನನ್ನೊಡನೆ ಹೇಳಿರುವ ಮಾತುಗಳನ್ನು ಹೇಳುವೆನು ಕೇಳು :

"ಮಹರ್ಷಿಗಳೇ! ನನ್ನ ಅಣ್ಣನಾದ ಯುಧಿಷ್ಠಿರನನ್ನು ನಮ್ಮ ಮುಂದಿನ ಶ್ರೇಯಸ್ಸಿಗೆ ಕಾರಣಭೂತವಾದ ಧರ್ಮಮಾರ್ಗದಲ್ಲಿ ನಿಯೋಜಿಸಿರಿ. ತಪೋಧನರಾದ ನೀವು ಶ್ರೇಷ್ಠವಾದ ಧರ್ಮಮಾರ್ಗಗಳೆಲ್ಲವನ್ನೂ ತಿಳಿದಿರುವಿರಿ. ಶ್ರೀಮಂತರಾದ ರಾಜರ ಶ್ರೇಯಸ್ಸಾಧನವಾದ ಧರ್ಮವೇನೆಂಬುದನ್ನೂ ನೀವು ತಿಳಿದಿರುವಿರಿ. (ರಾಜಧರ್ಮವನ್ನೂ ತಿಳಿದಿರುವಿರಿ.) ಆದುದರಿಂದ ನೀವೀಗಲೇ ಪಾಂಡವರನ್ನು ತೀರ್ಥಕ್ಷೇತ್ರಗಳ ಯಾತ್ರೆಮಾಡಿಸುವುದರ ಮೂಲಕ ಪಾವನರನ್ನಾಗಿ ಮಾಡಿರಿ. ಯಾವ ರೀತಿಯಲ್ಲಿ, ಯಾವ ಕ್ರಮದಲ್ಲಿ ನನ್ನ ಸಹೋದರರು ತೀರ್ಥಯಾತ್ರೆಗಳನ್ನು ಮಾಡಿ ದಾನಾದಿಗಳನ್ನು ಕೊಡಬೇಕಾಗಿದೆಯೋ–ಆ ಕ್ರಮಗಳನ್ನು ಅವರಿಗೆ ತಿಳಿಸಿ ಅವರನ್ನು ಕರೆದೊಯ್ದು ಅದೇ ಕ್ರಮದಿಂದ ತೀರ್ಥಯಾತ್ರೆಯನ್ನು ಮಾಡಿಸಿ ಯಥೇಚ್ಛವಾಗಿ ಗೋದಾನಾದಿಗಳನ್ನು ಕೊಡಿಸಿರಿ. ಈ ಕಾರ್ಯವನ್ನು ನೀವು ಪೂರ್ಣಮನಸ್ಸಿನಿಂದ ಮಾಡಬೇಕಾಗಿದೆ"–ಹೀಗೆ ಅರ್ಜುನನು ನನ್ನನ್ನು ಪ್ರಾರ್ಥಿಸಿದನು.

ಅರ್ಜುನನು ಮುಂದುವರಿದು ಪುನಃ ನನ್ನೊಡನೆ ಹೀಗೆಂದನು :

"ನಿಮ್ಮಿಂದ ರಕ್ಷಿತನಾದ ಧರ್ಮಜನು ಸಕಲತೀರ್ಥಗಳ ಯಾತ್ರೆಯನ್ನೂ ಮಾಡಲಿ. ದುರ್ಗಗಳಲ್ಲಿಯೂ, ವನ-ಪರ್ವತಗಳಲ್ಲಿಯೂ, ಹಳ್ಳ-ಕೊಳ್ಳಗಳಲ್ಲಿಯೂ ಅವನಿಗೆ ಮಾರ್ಗವನ್ನು ತೋರಿ ನೀವು ಅವನನ್ನು ರಕ್ಷಿಸಬೇಕಾಗಿದೆ. ತೀರ್ಥಗಳ ಸಮೀಪದಲ್ಲಿ ಅನೇಕರಾಕ್ಷಸರಿರುವರೆಂದೂ ಕೇಳಿದ್ದೇನೆ. ಅವರಿಂದಲೂ ನೀವು ನನ್ನ ಸಹೋದರರನ್ನು ರಕ್ಷಿಸಬೇಕಾಗಿದೆ.

**ದಧೀಚ ಇವ ದೇವೇನ್ದ್ರಂ ಯಥಾ ಚಾಪ್ಯಙ್ಗಿರಾ ರವಿಮ್ ।**
**ತಥಾ ರಕ್ಷಸ್ವ ಕೌನ್ತೇಯಾನ್ರಾಕ್ಷಸೇಭ್ಯೋ ದ್ವಿಜೋತ್ತಮ ॥೬॥**

ಇಂದ್ರನನ್ನು ಹೇಗೆ ದಧೀಚಮಹರ್ಷಿಯು ಸಂರಕ್ಷಿಸಿದನೋ-ಸೂರ್ಯನನ್ನು ಹೇಗೆ ಅಂಗಿರಸಮಹರ್ಷಿಯು ಸಂರಕ್ಷಿಸಿದನೋ-ಅದೇ ರೀತಿಯಲ್ಲಿ ನೀವು ನನ್ನ ಸಹೋದರರನ್ನು ರಾಕ್ಷಸರ ಬಾಧೆಯಿಂದ ರಕ್ಷಿಸಿರಿ. ಬ್ರಾಹ್ಮಣೋತ್ತಮರೇ! ತೀರ್ಥಕ್ಷೇತ್ರಗಳಿಗೆ ಪ್ರಯಾಣಮಾಡುವ ಮಾರ್ಗದಲ್ಲಿ ಪರ್ವತೋಪಮರಾದ ಅನೇಕರಾಕ್ಷಸರಿದ್ದಾರೆ. ಮಹಾತಪಸ್ವಿಗಳಾದ ನೀವು ಪಾಂಡವರ ರಕ್ಷಕರಾದಲ್ಲಿ-ರಾಕ್ಷಸರು ಅವರ ಹತ್ತಿರವೂ ಸುಳಿಯಲಾರರು"-ಹೀಗೆಂದೂ ಅರ್ಜುನನು ಹೇಳಿದನು.

ಧರ್ಮಜ! ಇಂದ್ರನ ಮಾತಿಗನುಸಾರವಾಗಿಯೂ-ಅರ್ಜುನನು ಮಾಡಿದ ಪ್ರಾರ್ಥನೆಗನುಸಾರವಾಗಿಯೂ ನಾನು ನಿನ್ನ ರಕ್ಷಕನಾಗಿ ನಿನ್ನೊಡನೆ ತೀರ್ಥಯಾತ್ರೆಯನ್ನು ಮಾಡುವೆನು. ಈ ಮೊದಲೇ ನಾನು ಎರಡು ಬಾರಿ ತೀರ್ಥಯಾತ್ರೆಯನ್ನು ಮಾಡಿರುತ್ತೇನೆ. ನಿನ್ನೊಡನೆ ನಾನು ಮೂರನೆಯ ಬಾರಿಗೆ ತೀರ್ಥಯಾತ್ರೆಯನ್ನು ಮಾಡುತ್ತೇನೆ. ಯುಧಿಷ್ಠಿರ! ಸಕಲಭಯಗಳ ನಿವಾರಕವಾದ ಮಹಾಪುಣ್ಯಪ್ರದವಾದ ತೀರ್ಥಯಾತ್ರೆಯು ಹಿಂದೆ ಪುಣ್ಯವಂತರಾದ, ರಾಜರ್ಷಿಗಳಾದ ಮನ್ವಾದಿಗಳಿಂದಲೂ ಮಾಡಲ್ಪಟ್ಟಿದೆ.

**ನಾನೃಜುರ್ನಾಕೃತಾತ್ಮಾ ಚ ನಾವಿದ್ಯೋ ನ ಚ ಪಾಪಕೃತ್ ।**
**ಸ್ನಾತಿ ತೀರ್ಥೇಷು ಕೌರವ್ಯ ನ ಚ ವಕ್ರಮತಿರ್ನರಃ ॥೧೧॥**

ಕುಟಿಲಬುದ್ಧಿಯುಳ್ಳವರು, ಜಿತೇಂದ್ರಿಯರಲ್ಲದವರು, ಅವಿದ್ಯಾವಂತರು, ಪಾಪಕರ್ಮಿಗಳು, ದುರ್ಬುದ್ಧಿಯುಳ್ಳವರು-ಪುಣ್ಯತೀರ್ಥಗಳಲ್ಲಿ ಸ್ನಾನಮಾಡಲಾರರು.

**ತ್ವಂ ತು ಧರ್ಮಮತಿರ್ನಿತ್ಯಂ ಧರ್ಮಜ್ಞಃ ಸತ್ಯಸಂಗರಃ ।**
**ವಿಮುಕ್ತಃ ಸರ್ವಸಙ್ಗೇಭ್ಯೋ ಭೂಯ ಏವ ಭವಿಷ್ಯಸಿ ॥೧೨॥**

ನೀನಾದರೋ ಧರ್ಮಬುದ್ಧಿಯುಳ್ಳವನಾಗಿರುವೆ. ಧರ್ಮವನ್ನು ತಿಳಿದವನಾಗಿರುವೆ. ಸತ್ಯಸಂಕಲ್ಪನಾಗಿರುವೆ. ನೀನು ಸಕಲವಾದ ತೊಂದರೆ

ಗಳಿಂದಲೂ ವಿಮುಕ್ತನಾಗಿ ಪುನಃ ನಿನ್ನ ರಾಜ್ಯ-ಕೋಶಾದಿಗಳನ್ನು ಪಡೆದು ಚಕ್ರವರ್ತಿಯಾಗುವೆ.*

ಧರ್ಮಜ! ನೀನು ಭಗೀರಥ, ಗಯ, ಯಯಾತಿ ಮೊದಲಾದ ರಾಜರ್ಷಿಗಳಿಗೆ ಅನುರೂಪನಾಗುವೆ."

ಲೋಮಶರ ಮಾತುಗಳನ್ನು ಕೇಳಿ ಯುಧಿಷ್ಠಿರನು ಆನಂದಭರಿತನಾಗಿ ಹೇಳಿದನು : "ಬ್ರಾಹ್ಮಣೋತ್ತಮರೇ! ನಿಮ್ಮ ಸವಿಮಾತುಗಳನ್ನು ಕೇಳಿ ಆನಂದಸಾಗರದಲ್ಲಿ ಮುಳುಗಿಹೋಗಿರುವ ನನಗೆ ಏನೆಂದು ಉತ್ತರಿಸಬೇಕೆಂಬುದೇ ತಿಳಿಯದಾಗಿದೆ. ನನ್ನಂತಹ ಅದೃಷ್ಟಶಾಲಿಗಳು ಬೇರಾರಾದರೂ ಇರುವರೇ? ಲೋಮಶರೇ! ಸ್ವರ್ಗಾಧಿಪತಿಯಾದ ಇಂದ್ರನೇ ನನ್ನನ್ನು ನೆನೆದನೆಂದರೆ ನನ್ನ ಅದೃಷ್ಟವು ಇನ್ನೆಷ್ಟಿರಬಹುದು? ನಿಶ್ಚಯವಾಗಿಯೂ ನಾನು ಹೆಚ್ಚು ಅದೃಷ್ಟಶಾಲಿಯೇ ಸರಿ. ಮಹಾತಪಸ್ವಿಗಳಾದ ನಿಮ್ಮ ಸಾಹಚರ್ಯವು ನನಗೆ ತೀರ್ಥಯಾತ್ರೆಯ ಕಾಲದಲ್ಲಿ ಸಿಕ್ಕಿರುವುದಂತೂ ಮಹಾಪುಣ್ಯವೇ ಸರಿ. ನನಗಿಂತಲೂ ಹೆಚ್ಚಿನ ಅದೃಷ್ಟವುಳ್ಳವನು ಈ ಪೃಥ್ವಿಯಲ್ಲಿಯೇ ಮತ್ತೊಬ್ಬನಿರಲಾರನು. ಮಹಾಪರಾಕ್ರಮಿಯಾದ ಅರ್ಜುನನು ನನ್ನ ಸಹೋದರ. ಮಹರ್ಷಿಗಳೇ! ನಿಶ್ಚಯವಾಗಿಯೂ ಈ ಪೃಥ್ವಿಯಲ್ಲಿ ನನಗಿಂತಲೂ ಅಧಿಕವಾದ ಅದೃಷ್ಟವುಳ್ಳವರು ಮತ್ತೊಬ್ಬರಿಲ್ಲ.

ತೀರ್ಥಗಳ ಯಾತ್ರೆಯ ವಿಷಯವಾಗಿ ಹೇಳುವುದಾದರೆ ಮಹರ್ಷಿಗಳಾದ ನಾರದರ ಮತ್ತು ಧೌಮ್ಯರ ಪ್ರವಚನಗಳಿಂದಲೇ ನಾನು ತೀರ್ಥಗಳ ಯಾತ್ರೆಯನ್ನು ಮಾಡಬೇಕೆಂಬ ನಿಶ್ಚಯಬುದ್ಧಿಯುಳ್ಳವನಾಗಿದ್ದೆನು. ಆದುದರಿಂದ, ಲೋಮಶರೇ! ತಾವು ಹೇಳಿದ ಮುಹೂರ್ತದಲ್ಲಿ ನಾನು ತೀರ್ಥಯಾತ್ರೆಗೆ ಹೊರಡಲು ಸಿದ್ಧನಿದ್ದೇನೆ. ಇದೇ ನನ್ನ ನಿಶ್ಚಯವಾಗಿದೆ."

ತೀರ್ಥಯಾತ್ರೆಗೆ ಹೊರಡಲು ನಿಶ್ಚಯಮಾಡಿದ ಧರ್ಮರಾಜನನ್ನು ಕುರಿತು ಲೋಮಶರು ಹೇಳಿದರು :

"ಧರ್ಮಜ! ನೀನು ತೀರ್ಥಯಾತ್ರೆಗೆ ಮಿತಪರಿವಾರದೊಡನೆ ಹೊರಡು

---

* ಈ ಶ್ಲೋಕದಲ್ಲಿರುವ ಸತ್ಯಸಂಗರಃ ಎಂಬುದಕ್ಕೆ ಸತ್ಯಯಜ್ಞ ಎಂದು ಅರ್ಥ ಮಾಡಲಾಗಿದೆ. ಯದ್ಯಪಿ ಸಂಗರಶಬ್ದಕ್ಕೆ ಸಂಗ್ರಾಮವೆಂಬ ಅರ್ಥವಿದ್ದರೂ "ಯಾನ್ಯೇವ ಸಂಗ್ರಾಮನಾಮಾನಿ ತಾನಿ ಯಜ್ಞನಾಮಾನಿ" ಎಂಬ ಯಾಸ್ಕರ ಉಕ್ತಿ

ವವನಾಗು. ಮಿತಪರಿವಾರದೊಡನೆ ಹೊರಟರೆ ನಿನ್ನ ಪ್ರಯಾಣವೂ ಸುಗಮ ವಾಗುತ್ತದೆ."

ಲೋಮಶರ ಮಾತನ್ನು ಕೇಳಿ ಧರ್ಮಜನು ತನ್ನನ್ನು ಸುತ್ತುವರಿದು ಕುಳಿತಿದ್ದ ಬ್ರಾಹ್ಮಣರನ್ನೂ, ಯೋಗಿಗಳನ್ನೂ, ಭಿಕ್ಷುಗಳನ್ನೂ ಉದ್ದೇಶಿಸಿ ಹೇಳಿದನು :

"ಇಲ್ಲಿ ಉಪಸ್ಥಿತರಾಗಿರುವವರಲ್ಲಿ ಯಾರಿಗೆ ಹಸಿವು-ಬಾಯಾರಿಕೆಗಳ ಆಯಾಸವನ್ನೂ, ಮಾರ್ಗಾಯಾಸವನ್ನೂ ಮತ್ತು ಚಳಿಯನ್ನೂ ಸಹಿಸುವ ಶಕ್ತಿಯಿಲ್ಲವೋ-ಅವರೆಲ್ಲರೂ ನನ್ನೊಡನೆ ಪ್ರಯಾಣ ಹೊರಡದಿರಲಿ. ಮೃಷ್ಟಾನ್ನವನ್ನಪೇಕ್ಷಿಸುವ, ಪಕ್ವವಾದ ಲೇಹ್ಯ-ಚೋಷ್ಯ-ಪಾನೀಯಗಳನ್ನಪೇಕ್ಷಿಸುವ ಮತ್ತು ಮಾಂಸಾಹಾರಿಗಳಾದ ಬ್ರಾಹ್ಮಣರೂ ನನ್ನೊಡನೆ ಪ್ರಯಾಣ ಮಾಡದಿರಲಿ. ಕೇವಲ ಅಡಿಗೆಯವರ ಅವಲಂಬನೆಯಿಂದಲೇ ಜೀವಿಸುವವರೂ (ಸ್ವಯಂಪಾಕಮಾಡಿಕೊಳ್ಳಲು ಅಸಮರ್ಥರಾದವರೂ) ನನ್ನೊಡನೆ ಬಾರದಿರಲಿ. ರಾಜಭಕ್ತಿಯಿಂದ ಕೂಡಿದವರಾಗಿ ಯಾವ ನಾಗರಿಕರು ನನ್ನನ್ನೇ ಅನುಸರಿಸಿ ಬಂದಿರುವರೋ ಮತ್ತು ಯಾರನ್ನು ನಾನು ಇದುವರೆಗೂ ಭತ್ಯಗಳನ್ನು ಕೊಟ್ಟು ಕಾಪಾಡಿರುವೆನೋ ಅವರೆಲ್ಲರೂ ಇಂದೇ ಹಸ್ತಿನಾಪುರಕ್ಕೆ ಹಿಂದಿರುಗಲಿ. ಧೃತರಾಷ್ಟ್ರನು ಅವರೆಲ್ಲರನ್ನೂ ರಕ್ಷಿಸುತ್ತಾನೆ. ಅವರಿಗೆ ಕೊಡಬೇಕಾದ ಭತ್ಯಗಳನ್ನೂ ಕೊಡುತ್ತಾನೆ. ಒಂದು ವೇಳೆ ಧೃತರಾಷ್ಟ್ರನೇನಾದರೂ ಅವರಿಗೆ ಯಥೋಚಿತವಾದ ಭತ್ಯಕೊಡದಿದ್ದರೆ, ಸರ್ವದಾ ನಮ್ಮ ಹಿತಚಿಂತಕನಾದ ಪಾಂಚಾಲರಾಜನಾದರೂ ಅವರಿಗೆ ಯಥೋಚಿತ ವಾದ ಭತ್ಯವನ್ನು ನೀಡುತ್ತಾನೆ. ಅವರು ಪಾಂಚಾಲದೇಶಕ್ಕಾದರೂ ಪ್ರಯಾಣಮಾಡಲಿ."

ಯುಧಿಷ್ಠಿರನು ಹೀಗೆ ಹೇಳಿದನಂತರ ಅನೇಕನಾಗರಿಕರೂ, ಅನೇಕ ಬ್ರಾಹ್ಮಣರೂ ಮತ್ತು ಯತಿಗಳೂ ಯುಧಿಷ್ಠಿರನನ್ನಗಲಿ ಹೋಗಲಾರದೆ ಬಹಳ ದುಃಖಪಡುತ್ತಾ ಹಸ್ತಿನಾಪುರಕ್ಕೆ ಪ್ರಯಾಣಮಾಡಿದರು.

ಯುಧಿಷ್ಠಿರನ ಮೇಲಿನ ಪ್ರೇಮದಿಂದಾಗಿ ಅವನೊಡನೆ ಹೋಗಿದ್ದು

---

ಯಂತೆ ಸತ್ಯಸಂಗರಃ ಎಂಬುದಕ್ಕೆ ಸತ್ಯಯಜ್ಞಃ –ಸತ್ಯವೇ ದೀಕ್ಷೆಯಾಗಿ ಉಳ್ಳವನು ಎಂದು ಅರ್ಥವಾಗುತ್ತದೆ.

ಯುಧಿಷ್ಠಿರನ ಮಾತಿನಂತೆ ಹಸ್ತಿನೆಗೆ ಹಿಂದಿರುಗಿದ ಅವರೆಲ್ಲರನ್ನೂ ಧೃತರಾಷ್ಟ್ರನು ಮರ್ಯಾದೆಯಿಂದ ಬರಮಾಡಿಕೊಂಡು ಅವರೆಲ್ಲರಿಗೂ ಯಥೋಚಿತವಾದ ಸಂಭಾವನೆಯನ್ನು ಕೊಟ್ಟು ಗೌರವಿಸಿದನು.

ಅವರೆಲ್ಲರೂ ಹೊರಟುಹೋದನಂತರ ಯುಧಿಷ್ಠಿರನೊಡನೆ ಕೆಲವು ಬ್ರಾಹ್ಮಣರು ಮಾತ್ರವೇ ಉಳಿದರು. ಧರ್ಮಜನು ಮಿತವಾದ ಪರಿವಾರ ದಿಂದ ಕೂಡಿದವನಾಗಿ ಲೋಮಶರೊಡನೆ ಮೂರು ರಾತ್ರಿಗಳನ್ನು ಕಾಮ್ಯಕ ವನದಲ್ಲಿ ಸಂತೋಷದಿಂದ ಕಳೆದನು."

೯೨ನೆಯ ಅಧ್ಯಾಯವು ಮುಗಿಯಿತು.

೯೩ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ತೀರ್ಥಯಾತ್ರೆಗಾಗಿ ಧರ್ಮಜನು ಋಷಿ-ಮಹರ್ಷಿಗಳ ಆಶೀರ್ವಾದಗಳನ್ನು ಪಡೆದುದು

ಯುಧಿಷ್ಠಿರನೊಡನೆ ಇದ್ದ ಬ್ರಾಹ್ಮಣರು ಯುಧಿಷ್ಠಿರನು ತೀರ್ಥಯಾತ್ರೆಗೆ ಸಿದ್ಧನಾದುದನ್ನು ಕಂಡು ಅವನನ್ನು ಸಮೀಪಿಸಿ ಹೇಳಿದರು :

"ಮಹಾರಾಜ! ನೀನೀಗ ನಿನ್ನ ಅನುಜರೊಡನೆಯೂ, ಮಹಾತ್ಮರಾದ ಲೋಮಶರೊಡನೆಯೂ ಕೂಡಿದವನಾಗಿ ಪರಮಪವಿತ್ರವಾದ ತೀರ್ಥಗಳ ಯಾತ್ರೆಯನ್ನು ಮಾಡಲಿರುವೆ. ನಮ್ಮನ್ನೂ ನಿನ್ನೊಡನೆ ಕರೆದೊಯ್ಯುವುದು ಯುಕ್ತವಾಗಿದೆ. ಯುಧಿಷ್ಠಿರ! ನಿನ್ನೊಡನೆ ಈಗ ನಾವು ಆ ಪುಣ್ಯಕ್ಷೇತ್ರಗಳ ದರ್ಶನ ಮಾಡದಿದ್ದರೆ ಇನ್ನೆಂದೂ ನಾವು ತೀರ್ಥಯಾತ್ರೆ ಮಾಡುವ ಸಾಧ್ಯತೆಯೇ ಇಲ್ಲ. ಆ ತೀರ್ಥಗಳೆಲ್ಲವೂ ದುರ್ಗಮಗಳಾಗಿರುವುವು. ನರಮಾಂಸಭಕ್ಷಕರಿಂದ (ಹುಲಿ-ಸಿಂಹ ಮುಂತಾದ ದುಷ್ಟಪ್ರಾಣಿಗಳಿಂದ) ಆವೃತವಾಗಿರುವುವು. ಗುಂಪುಕಟ್ಟಿಕೊಂಡು ಆ ತೀರ್ಥಗಳನ್ನು ಸಂದರ್ಶಿಸಲು ಸಾಧ್ಯವೇ ಹೊರತು ಒಬ್ಬರೇ ಆ ತೀರ್ಥಗಳ ಯಾತ್ರೆಯನ್ನು ಮಾಡಲು ಸಾಧ್ಯವೇ ಇಲ್ಲ. ನಿನ್ನ ತಮ್ಮಂದಿರಾದರೋ ಶೂರರಾಗಿಯೂ, ಯಾವಾ ಗಲೂ ಶ್ರೇಷ್ಠವಾದ ಧನುಸ್ಸುಗಳನ್ನು ಧರಿಸಿದವರಾಗಿಯೂ ಇರುವರು. ಶೂರರಾದ ನಿಮ್ಮಿಂದ ರಕ್ಷಿಸಲ್ಪಟ್ಟವರಾಗಿ ನಾವೂ ಆ ತೀರ್ಥಗಳ ಯಾತ್ರೆ ಯನ್ನು ಮಾಡುವ ಆಶಯದಿಂದಿರುತ್ತೇವೆ. ನಿನ್ನ ಆಶ್ರಯವನ್ನು ಪಡೆದು

ನಾವು ಆ ತೀರ್ಥಕ್ಷೇತ್ರಗಳಿಗೆ ಹೋಗಿ ಐಹಿಕಾಮುಷ್ಮಿಕ್ರಫಲಗಳನ್ನು ಪಡೆಯಲು ಅನುಮತಿಯನ್ನು ನೀಡುವವನಾಗು. ನಿನ್ನ ಪರಾಕ್ರಮದಿಂದ ರಕ್ಷಿತರಾದ ನಾವು ತೀರ್ಥಕ್ಷೇತ್ರಗಳ ಸಂದರ್ಶನದಿಂದ ಪಾಪಗಳನ್ನು ನಿವಾರಣೆಮಾಡಿಕೊಳ್ಳಲು ಮತ್ತು ಆ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಪೂತಾತ್ಮರಾಗಲು ಅವಕಾಶವನ್ನು ಕಲ್ಪಿಸಿಕೊಡು. ಆ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಕಾರ್ತವೀರ್ಯ, ಅಷ್ಟಕ, ರಾಜರ್ಷಿಯಾದ ಲೋಮಪಾದ, ಭರತಚಕ್ರವರ್ತಿ–ಇವರುಗಳಿಗೆ ಮಾತ್ರವೇ ಲಭಿಸಿರುವ ಉತ್ತಮೋತ್ತಮವಾದ, ಪುಣ್ಯತಮವಾದ, ಸಾಮಾನ್ಯರಿಗೆ ದುರ್ಲಭವಾದ ಲೋಕಗಳು ನಿನಗೂ ಲಭ್ಯವಾಗುವುವು. ಮಹಾರಾಜ! ನಾವು ನಿನ್ನೊಡನೆ ಬಂದು ಪ್ರಭಾಸತೀರ್ಥವೇ ಮೊದಲಾದ ತೀರ್ಥಗಳನ್ನೂ, ಮಹೇಂದ್ರವೇ ಮೊದಲಾದ ಪರ್ವತಗಳನ್ನೂ, ಗಂಗಾ-ಯಮುನಾ ಇವೇ ಮೊದಲಾದ ಪುಣ್ಯನದಿಗಳನ್ನೂ, ದೊಡ್ಡದಾದ ಮತ್ತು ಸುಪ್ರಸಿದ್ಧವಾದ ಪ್ಲಕ್ಷಾದಿ ಪುಣ್ಯವೃಕ್ಷಗಳನ್ನೂ ಸಂದರ್ಶನಮಾಡಬೇಕೆಂದಿರುವೆವು. ನಿನಗೇನಾದರೂ ಬ್ರಾಹ್ಮಣರ ವಿಷಯದಲ್ಲಿ ಗೌರವಭಾವನೆಯಿರುವುದಾದರೆ, ಪ್ರೀತಿಯಿರುವು ದಾದರೆ–ನಮ್ಮ ಕೋರಿಕೆಯಂತೆ ನಮ್ಮನ್ನೂ ನಿನ್ನೊಡನೆ ಕರೆದುಕೊಂಡು ಹೋಗು. ನಮಗೆ ತೀರ್ಥಯಾತ್ರೆಮಾಡಿಸುವುದರಿಂದಲೂ ನಿನಗೆ ಅಪಾರ ವಾದ ಪುಣ್ಯವು ಲಭ್ಯವಾಗುತ್ತದೆ. ಪುಣ್ಯತೀರ್ಥಗಳು ಯಾವಾಗಲೂ ತಪಸ್ಸಿಗೆ ವಿಘ್ನವನ್ನುಂಟುಮಾಡುವ ರಾಕ್ಷಸರಿಂದ ಆಕ್ರಮಿಸಲ್ಪಟ್ಟಿರುತ್ತವೆ. ಅವರಿಂದ ನಮ್ಮನ್ನು ರಕ್ಷಿಸುವುದು ನಿನ್ನ ಕರ್ತವ್ಯವಾಗಿರುತ್ತದೆ. ಲೋಮಶರಿಂದ ರಕ್ಷಿತ ನಾದ ನೀನು ನಮ್ಮನ್ನು ಕರೆದುಕೊಂಡು ಧೌಮ್ಯ-ನಾರದರು ಹೇಳಿದ ಮತ್ತು ಮಹಾತಪಸ್ವಿಗಳಾದ ಲೋಮಶರು ಮುಂದೆ ಹೇಳಲಿರುವ ತೀರ್ಥಗಳ ಯಾತ್ರೆಯನ್ನು ಅನುಕ್ರಮವಾಗಿ ಮಾಡುವವನಾಗು. ಇದರಿಂದ ನಿನ್ನ ಸಕಲಪಾಪಗಳೂ ಪರಿಹಾರವಾಗುತ್ತವೆ.”

ಹೀಗೆ ಬ್ರಾಹ್ಮಣರಿಂದ ಪ್ರಾರ್ಥಿತನಾದ, ಪುರುಷಪುಂಗವರಾದ ಭೀಮಾದಿಗಳಿಂದ ಪರಿವೃತನಾದ ಯುಧಿಷ್ಠಿರನು ಆನಂದಬಾಷ್ಪಗಳನ್ನು ಸುರಿಸುತ್ತಾ ಬ್ರಾಹ್ಮಣರೊಡನೆ ಹೇಳಿದನು :

"ವಿಪ್ರೋತ್ತಮರೇ! ನೀವು ಹೇಳಿದಂತೆಯೇ ಆಗಲಿ. ನಿಮ್ಮನ್ನೂ ತೀರ್ಥಯಾತ್ರೆಗೆ ನನ್ನೊಡನೆ ಕರೆದುಕೊಂಡು ಹೋಗುತ್ತೇನೆ."

ಒಂದೆರಡು ದಿನಗಳು ಕಳೆದನಂತರ ಶುಭದಿನದಲ್ಲಿ ಜಿತೇಂದ್ರಿಯನಾದ ಯುಧಿಷ್ಠಿರನು ಮಹರ್ಷಿಗಳಾದ ಲೋಮಶರ ಮತ್ತು ಪುರೋಹಿತರಾದ ಧೌಮ್ಯರ ಅನುಜ್ಞೆಯನ್ನು ಪಡೆದು ತನ್ನ ತಮ್ಮಂದಿರೊಡನೆಯೂ ಮತ್ತು ದ್ರೌಪದಿಯೊಡನೆಯೂ ಸಮಾಲೋಚಿಸಿ ತೀರ್ಥಯಾತ್ರೆಗೆ ಹೊರಡಲು ನಿಶ್ಚಯಿಸಿದನು. ಅದೇ ಸಮಯಕ್ಕೆ ಸರಿಯಾಗಿ ಮಹಾಭಾಗರಾದ ವ್ಯಾಸರೂ ಮತ್ತು ಮಹಾತ್ಮರಾದ ಪರ್ವತ-ನಾರದರೂ ಧರ್ಮರಾಜನನ್ನು ನೋಡುವ ಸಲುವಾಗಿ ಕಾಮ್ಯಕವನಕ್ಕೆ ಆಗಮಿಸಿದರು. ಅವರು ಬರುತ್ತಿರುವುದನ್ನು ಕಂಡೊಡನೆಯೇ ಯುಧಿಷ್ಠಿರನು ಮುಂದೆ ಹೋಗಿ ಅವರನ್ನು ಆದರದಿಂದ ಸ್ವಾಗತಿಸಿ, ಆಶ್ರಮಕ್ಕೆ ಕರೆದೊಯ್ದು ಕುಳ್ಳಿರಿಸಿ ಅರ್ಘ್ಯ-ಪಾದ್ಯಾದಿಗಳಿಂದ ಮೂವರು ತಪಸ್ವಿಗಳನ್ನೂ ಯಥಾವಿಧಿಯಾಗಿ ಸತ್ಕರಿಸಿದನು.

ಯುಧಿಷ್ಠಿರನಿಂದ ಆದರಪೂರ್ವಕವಾಗಿ ಸತ್ಕೃತರಾದ ಮಹಾತ್ಮರಾದ ವ್ಯಾಸ-ಪರ್ವತ-ನಾರದರು ಯುಧಿಷ್ಠಿರನಿಗೆ ಹೇಳಿದರು :

"ಯುಧಿಷ್ಠಿರ! ನೀನೂ, ಭೀಮ-ನಕುಲ-ಸಹದೇವರೂ ಮತ್ತು ದ್ರೌಪದಿಯೂ ನಮ್ಮ ಈ ಹಿತವಚನಗಳನ್ನು ಆಲಿಸಿರಿ. ನೀವು ತೀರ್ಥಯಾತ್ರೆಗೆ ಹೊರಡುವ ಮೊದಲು ಮನಸ್ಸಿನ ಕಲ್ಮಷವನ್ನು ತೊಳೆಯಿರಿ. ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳನ್ನು ದೂರ ಮಾಡಿರಿ. ಶುದ್ಧಾಂತಃಕರಣರಾಗಿ ತೀರ್ಥಯಾತ್ರೆಯನ್ನು ಮಾಡಿರಿ.

**ಶರೀರನಿಯಮಂ ಪ್ರಾಹುರ್ಬ್ರಾಹ್ಮಣಾ ಮಾನುಷಂ ವ್ರತಮ್ ।**
**ಮನೋವಿಶುದ್ಧಾಂ ಬುದ್ಧಿಂ ಚ ದೈವಮಾಹುರ್ವ್ರತಂ ದ್ವಿಜಾಃ ॥**

ಆಹಾರನಿಯಮ, ಉಪವಾಸ–ಇವೇ ಮುಂತಾದ ಶರೀರಕ್ಕೆ ಸಂಬಂಧಿಸಿದ ವ್ರತಗಳನ್ನು ಮಾನುಷವ್ರತವೆಂದೂ–ಅಂತಃಕರಣಶುದ್ಧಿ ಮತ್ತು ಅದರ ಮೂಲಕವಾದ ಬುದ್ಧಿಶುದ್ಧಿಯನ್ನು ದೈವವ್ರತವೆಂದೂ ಸರ್ವಜ್ಞರಾದ ಬ್ರಾಹ್ಮಣರು ಹೇಳುತ್ತಾರೆ.

**ಮನೋ ಹ್ಯದುಷ್ಟಂ ಶೌಚಾಯ ಪರ್ಯಾಪ್ತಂ ವೈ ನರಾಧಿಪ ।**
**ಮೈತ್ರೀಂ ಬುದ್ಧಿಂ ಸಮಾಸ್ಥಾಯ ಶುದ್ಧಾಸ್ತೀರ್ಥಾನಿ ದ್ರಕ್ಷ್ಯಥ ॥**



ಯಾವನ ಮನಸ್ಸು ಪರಿಶುದ್ಧವಾಗಿರುವುದೋ, ಕಾಮ-ಕ್ರೋಧಾದಿಗಳಿಂದ ವಿಮುಕ್ತವಾಗಿರುವುದೋ, ನಿಷ್ಕಲ್ಮಷವಾಗಿರುವುದೋ–ಅವನನ್ನು ಪವಿತ್ರಾತ್ಮನೆಂದು ಹೇಳುತ್ತಾರೆ. ಈ ರೀತಿಯಲ್ಲಿ ನೀವು ಪರಿಶುದ್ಧರಾಗಿ ಪ್ರೇಮಮಯರಾಗಿ ತೀರ್ಥಗಳನ್ನು ಸಂದರ್ಶಿಸಿರಿ.

**ತೇ ಯೂಯಂ ಮಾನಸೈಃ ಶುದ್ಧಾ ಶರೀರನಿಯಮವ್ರತೈಃ ।**
**ದೈವಂ ವ್ರತಂ ಸಮಾಸ್ಥಾಯ ಯಥೋಕ್ತಂ ಫಲಮಾಪ್ಸ್ಯಥ ॥೨೩॥**

ಆಹಾರನಿಯಮ ಮತ್ತು ಉಪವಾಸಾದಿಗಳ ಮೂಲಕ ಮಾನುಷವ್ರತವನ್ನು ಆಚರಿಸಿ ದೇಹವನ್ನು ಶುದ್ಧಿಗೊಳಿಸಿ, ಮನಃಕಲ್ಮಷವನ್ನು ದೂರಮಾಡಿ ಶುದ್ಧಾಂತಃಕರಣರಾಗಿ ದೈವವ್ರತವನ್ನು ಅನುಷ್ಠಾನಮಾಡಿ ಆತ್ಮವನ್ನು ಶುದ್ಧಿಗೊಳಿಸಿ ನೀವು ತೀರ್ಥಗಳನ್ನು ಯಾತ್ರೆಮಾಡಿ ಯಥೋಕ್ತವಾದ ಫಲವನ್ನು ಪಡೆಯಿರಿ."

ಮಹರ್ಷಿಗಳ ಹಿತೋಪದೇಶವನ್ನು ಕೇಳಿ ಸಂತುಷ್ಟರಾದ ಪಾಂಡವರು **'ತಥಾಸ್ತು'** 'ಹಾಗೆಯೇ ಆಗಲಿ' ಎಂದು ವಿನಮ್ರರಾಗಿ ಹೇಳಿದರು. ಅನಂತರದಲ್ಲಿ ವ್ಯಾಸ-ನಾರದ-ಪರ್ವತರೂ, ಧೌಮ್ಯ-ಲೋಮಶರೂ ಪಾಂಡವರಿಗೆ ಸುಖಪ್ರವಾಸವನ್ನು ಕೋರಿ ಸ್ವಸ್ತಿವಾಚನಮಾಡಿದರು. ಪಾಂಡವರು–ದೇವರ್ಷಿಗಳಾದ ಪರ್ವತ-ನಾರದ-ಲೋಮಶ-ವ್ಯಾಸರಿಗೂ, ಬ್ರಾಹ್ಮಣರಿಗೂ, ಅಭಿವಾದನಪೂರ್ವಕವಾಗಿ ನಮಸ್ಕಾರಮಾಡಿ ಆಶೀರ್ವಾದಗಳನ್ನು ಪಡೆದು, ಚೀರ-ಕೃಷ್ಣಾಜಿನಧಾರಿಗಳಾಗಿ, ಅಭೇದ್ಯವಾದ ಕವಚಗಳನ್ನು ಧರಿಸಿ, ಕತ್ತಿಗಳನ್ನು ಸೊಂಟಕ್ಕೆ ಬಿಗಿದು, ಜಟಾಧಾರಿಗಳಾಗಿ, ಧೌಮ್ಯ-ಲೋಮಶರೊಡನೆಯೂ, ಬ್ರಾಹ್ಮಣರೊಡನೆಯೂ ಕೂಡಿದವರಾಗಿ ಮಾರ್ಗಶಿರಮಾಸವು ಅಥವಾ ಮಾರ್ಗಶಿರಮಾಸದ ಹುಣ್ಣಿಮೆಯು ಕಳೆದು ಪುಷ್ಯನಕ್ಷತ್ರಯುಕ್ತವಾದ ದಿನ (ಸಾಮಾನ್ಯವಾಗಿ ತದಿಗೆಯ ದಿವಸ) ಅದೇ ಪುಷ್ಯನಕ್ಷತ್ರದಲ್ಲಿಯೇ ತೀರ್ಥಯಾತ್ರೆಗೆ ಹೊರಟರು.

ಜನಮೇಜಯ! ಪರಾಕ್ರಮಿಗಳಾದ ಪಾಂಡವರು ಧನುರ್ಬಾಣಗಳನ್ನೂ, ಬತ್ತಳಿಕೆಗಳನ್ನೂ, ಭಲ್ಲೆಗಳನ್ನೂ ಮತ್ತು ಇತರ ಆಯುಧಗಳನ್ನೂ ತೆಗೆದುಕೊಂಡು ಇಂದ್ರಸೇನನೇ ಮೊದಲಾದ ಭೃತ್ಯರನ್ನೂ, ಅನೇಕ ಅಡಿಗೆಯವರನ್ನೂ ಪರಿಚಾರಕರನ್ನೂ ಕರೆದುಕೊಂಡು ಹದಿನೈದು ರಥಗಳಲ್ಲಿ ಪೂರ್ವಾಭಿಮುಖವಾಗಿ ಪ್ರಯಾಣಮಾಡಿದರು."

೯೩ನೆಯ ಅಧ್ಯಾಯವು ಮುಗಿಯಿತು.

೯೪ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

# ಲೋಮಶರು ಧರ್ಮಜನಿಗೆ ಅಧರ್ಮದಿಂದಾಗುವ ಹಾನಿಯನ್ನು ವಿವರಿಸಿ ಹೇಳಿದುದು : ತೀರ್ಥಯಾತ್ರೆಯಿಂದ ಪಡೆಯಬಹುದಾದ ಪುಣ್ಯಗಳ ಕಥನ

ವೈಶಂಪಾಯನರು ಪ್ರವಚನವನ್ನು ಮುಂದುವರಿಸುತ್ತಾ ಹೇಳುತ್ತಾರೆ :

"ಜನಮೇಜಯ! ಯುಧಿಷ್ಠಿರನು ದೇವರ್ಷಿಗಳಾದ ಲೋಮಶರನ್ನು ಕುರಿತು ಹೇಳಿದನು :

"ದೇವರ್ಷಿಸತ್ತಮರೇ! ನಿರ್ಗುಣನೆಂದಾಗಲೀ, ಸದ್ಗುಣರಹಿತನೆಂದಾಗಲೀ ನನ್ನನ್ನು ನಾನು ಭಾವಿಸಿಕೊಂಡಿರುವುದಿಲ್ಲ. ಆದರೂ ನಾನು ಅಪಾರವಾದ ದುಃಖಕ್ಕೀಡಾಗಿದ್ದೇನೆ. ಗುಣವಂತನಾಗಿದ್ದೂ ನನ್ನಂತೆ ಕಷ್ಟಕ್ಕೀಡಾದ ರಾಜರು ಹಿಂದೆ ಯಾರೂ ಇರಲಿಲ್ಲವೆಂದು ಭಾವಿಸುತ್ತೇನೆ. ಮತ್ತೊಂದು ವೈಪರೀತ್ಯವನ್ನೂ ನಾನು ಕಾಣುತ್ತಿದ್ದೇನೆ.

**ಪರಾಂಶ್ಚ ನಿರ್ಗುಣಾನ್ಮನ್ಯೇ ನ ಚ ಧರ್ಮಗತಾನಪಿ ।**
**ತೇ ಚ ಲೋಮಶ ಲೋಕೇಽಸ್ಮಿನ್ನೃಧ್ಯನ್ತೇ ಕೇನ ಹೇತುನಾ ॥೨॥**

ಮಹರ್ಷಿಗಳೇ! ನನ್ನ ಶತ್ರುಗಳಲ್ಲಿ ಸದ್ಗುಣಲೇಶವೂ ಇಲ್ಲ. ಅವರು ಧರ್ಮಹೀನರಾಗಿದ್ದಾರೆ. ಹೀಗಿದ್ದರೂ ಅವರು ಪ್ರಪಂಚದಲ್ಲಿ ಉಚ್ಛ್ರಾಯ ಸ್ಥಿತಿಗೆ ಬರುತ್ತಲಿದ್ದಾರೆ. ದಿನ-ದಿನಕ್ಕೂ ವೃದ್ಧಿಹೊಂದುತ್ತಿದ್ದಾರೆ. ಇದಕ್ಕೆ ಕಾರಣವಾದರೂ ಏನಿರಬಹುದು? ಲೋಮಶರೇ!"

"ಕುಂತೀಪುತ್ರನೇ! ಯುಧಿಷ್ಠಿರ! ಅಧರ್ಮಕಾರ್ಯಗಳಲ್ಲಿಯೇ ಅಭಿರುಚಿಯುಳ್ಳ ನಿನ್ನ ಶತ್ರುಗಳು ಅಧರ್ಮಕಾರ್ಯಗಳನ್ನು ಮಾಡುತ್ತಿದ್ದರೂ ಅಭಿವೃದ್ಧಿಹೊಂದುತ್ತಿದ್ದಾರೆಂದು ನೀನು ಯಾವಾಗಲೂ ದುಃಖಿಸುವ ಕಾರಣವಿಲ್ಲ.

**ವರ್ಧತ್ಯಧರ್ಮೇಣ ನರಸ್ತತೋ ಭದ್ರಾಣಿ ಪಶ್ಯತಿ ।**
**ತತಃ ಸಪತ್ನಾಞ್ಜಯತಿ ಸಮೂಲಸ್ತು ವಿನಶ್ಯತಿ ॥೪॥**

ಅಧರ್ಮಕಾರ್ಯಗಳನ್ನು ಮಾಡುವುದರಿಂದ ಮಾನವನು ಪ್ರಾರಂಭದಲ್ಲಿ ಅಭಿವೃದ್ಧಿಯನ್ನೂ ಹೊಂದುತ್ತಾನೆ. ಬಳಿಕ ಶ್ರೇಯಸ್ಸನ್ನೂ ಕಾಣುತ್ತಾನೆ.

ಅನಂತರ ತನ್ನ ಶತ್ರುಗಳನ್ನೂ ಜಯಿಸುತ್ತಾನೆ. ಆದರೆ ಕಟ್ಟಕಡೆಗೆ ಸರ್ವನಾಶವನ್ನೇ ಹೊಂದುತ್ತಾನೆ. (ಅಧರ್ಮದಿಂದ ಪ್ರಾಪ್ತವಾಗುವ ಅಭ್ಯುದಯವು ಶಾಶ್ವತವಾಗಿ ಉಳಿಯುವುದಿಲ್ಲ.)

ಯುಧಿಷ್ಠಿರ! ಅಧರ್ಮಾಚರಣೆಯಿಂದ ಅಭಿವೃದ್ಧಿಹೊಂದಿ ಉಚ್ಛ್ರಾಯಸ್ಥಿತಿಯನ್ನು ಪಡೆದ ಅನೇಕದೈತ್ಯ-ದಾನವರನ್ನು ನಾನು ನೋಡಿದ್ದೇನೆ. ಕಟ್ಟಕಡೆಗೆ ಅವರು ಸಂಪೂರ್ಣವಾಗಿ ನಿರ್ಮೂಲರಾದುದನ್ನೂ ಕಂಡಿದ್ದೇನೆ. ಇದಕ್ಕೆ ನಿದರ್ಶನವನ್ನು ಹಿಂದೆ ದೇವಯುಗದಲ್ಲಿ ನಾನು ಪ್ರತ್ಯಕ್ಷವಾಗಿಯೇ ನೋಡಿದ್ದೇನೆ.

ದೇವಯುಗದಲ್ಲಿ ದೇವತೆಗಳು ಧರ್ಮನಿಷ್ಠರಾಗಿರುತ್ತಿದ್ದರು. ದೈತ್ಯರು ಅಧರ್ಮಮಾರ್ಗದಲ್ಲಿ ನಡೆಯುತ್ತಿದ್ದರು. ದೇವತೆಗಳು ಪುಣ್ಯತೀರ್ಥಗಳ ಯಾತ್ರೆಮಾಡುತ್ತಿದ್ದರು. ದೈತ್ಯರು ತೀರ್ಥಯಾತ್ರೆಯನ್ನು ಮಾಡುತ್ತಿರಲಿಲ್ಲ. ಅಧರ್ಮಮಾರ್ಗದಿಂದ ಅಭಿವೃದ್ಧಿಹೊಂದಿದ ಅವರನ್ನು ದರ್ಪವು ಆವರಿಸಿದ್ದಿತು.

**ದರ್ಪಾನ್ಮಾನಃ ಸಮಭವನ್ಮಾನಾತ್ಕ್ರೋಧೋ ವ್ಯಜಾಯತ ।**
**ಕ್ರೋಧಾದಹ್ರೀಸ್ತತೋಽಲಜ್ಜಾ ವೃತ್ತಂ ತೇಷಾಂ ತತೋಽನಶತ್ ॥**

ದರ್ಪದಿಂದ ದುರಭಿಮಾನವೂ ದುರಭಿಮಾನದಿಂದ ಕ್ರೋಧವೂ ಸ್ವಾಭಾವಿಕವಾಗಿಯೇ ಉಂಟಾಯಿತು. ಅವರಾರಿಗೂ ಸೌಶೀಲ್ಯಾದಿ ಗುಣಗಳಿರಲಿಲ್ಲ. ಕ್ರೋಧದಿಂದ ನಾಚಿಕೆಯು ಹೊರಟುಹೋಯಿತು. ಅವರು ಚಾರಿತ್ರಹೀನರಾಗಿದ್ದರು. ಕೆಟ್ಟಕೆಲಸಗಳನ್ನು ಮಾಡುವುದರಲ್ಲಿ ಅವರಿಗೆ ಲಜ್ಜೆಯೆಂಬುದೇ ಇರಲಿಲ್ಲ.

**ತಾನಲಜ್ಜಾನ್ಗತಹ್ರೀಕಾನ್ಹೀನವೃತ್ತಾನ್ವೃಥಾವ್ರತಾನ್ ।**
**ಕ್ಷಮಾ ಲಕ್ಷ್ಮೀಃ ಸ್ವಧರ್ಮಶ್ಚ ನ ಚಿರಾತ್ಪ್ರಜಹುಸ್ತತಃ ॥೯॥**

**ಲಕ್ಷ್ಮೀಸ್ತು ದೇವಾನಗಮದಲಕ್ಷ್ಮೀರಸುರಾನ್ನೃಪ ।**
**ತಾನಲಕ್ಷ್ಮೀ ಸಮಾವಿಷ್ಟಾನ್ದರ್ಪೋಪಹತಚೇತಸಃ ॥೧೦॥**

**ದೈತೇಯಾನ್ದಾನವಾಂಶ್ಚೈವ ಕಲಿರಪ್ಯಾವಿಶತ್ತತಃ ।**
**ತಾನಲಕ್ಷ್ಮೀಸಮಾವಿಷ್ಟಾನ್ದಾನವಾನ್ಕಲಿನಾ ಹತಾನ್ ॥೧೧॥**

**ದರ್ಪಾಭಿಭೂತಾನ್ಕೌನ್ತೇಯ ಕ್ರಿಯಾಹೀನಾನಚೇತಸಃ ।**
**ಮಾನಾಭಿಭೂತಾನಚಿರಾದ್ವಿನಾಶಃ ಸಮಪದ್ಯತ ।**
**ನಿರ್ಯಶಸ್ಕಾಸ್ತಥಾ ದೈತ್ಯಾಃ ಕೃತ್ಸ್ನಶೋ ವಿಲಯಂ ಗತಾಃ ॥೧೨॥**

ಈ ರೀತಿಯಲ್ಲಿ ನಾಚಿಕೆಗೆಟ್ಟು ದುಷ್ಕಾರ್ಯಪ್ರವರ್ತನೆಯುಳ್ಳ, ಹೀನ ಗುಣವುಳ್ಳ, ಅಧರ್ಮಿಗಳಾದ, ವ್ರತಾನುಷ್ಠಾನರಹಿತರಾದ ದೈತ್ಯರನ್ನು ಕ್ಷಮೆ-ಸ್ವಧರ್ಮಗಳು ಬಿಟ್ಟು ದೂರ ಹೊರಟುಹೋದುವು. ಲಕ್ಷ್ಮಿಯು ದೇವತೆಗಳಲ್ಲಿ ಆಶ್ರಯವನ್ನು ಪಡೆದಳು. ಅಲಕ್ಷ್ಮಿಯು ದೈತ್ಯರಲ್ಲಿ ಸೇರಿಕೊಂಡಳು. ಅದೃಷ್ಟಹೀನರಾದ, ಮದಾಂಧರಾದ ಮತ್ತು ಅವಿವೇಕಿಗಳಾದ ಅವರನ್ನು ಕಲಿಯೂ ಆವರಿಸಿತು. ಅಲಕ್ಷ್ಮಿಯಿಂದ ಕೂಡಿ ಕಲಿಪುರುಷನಿಂದಲೂ ಆವೃತ ರಾದ, ದರ್ಪಾಭಿಭೂತರಾದ, ಕರ್ತವ್ಯಹೀನರಾದ, ಮತಿಗೆಟ್ಟ, ದುರಭಿಮಾನಿಗಳಾದ ಆ ದೈತ್ಯ-ದಾನವರ ವಿನಾಶವು ಬಹಳ ಬೇಗ ಉಂಟಾಯಿತು. ದುರ್ಮಾರ್ಗಿಗಳಾಗಿ ಅಪಯಶಸ್ಸನ್ನು ಪಡೆದಿದ್ದ ದೈತ್ಯರು ಸಂಪೂರ್ಣವಾಗಿ ವಿನಾಶವನ್ನು ಹೊಂದಿದರು.

**ದೇವಾಸ್ತು ಸಾಗರಾಂಶ್ಚೈವ ಸರಿತಶ್ಚ ಸರಾಂಸಿ ಚ ।**
**ಅಭ್ಯಗಚ್ಛನ್ಧರ್ಮಶೀಲಾಃ ಪುಣ್ಯಾನ್ಯಾಯತನಾನಿ ಚ ॥೧೩॥**

ದೇವತೆಗಳಾದರೋ ತಮ್ಮ ಧರ್ಮನಿಷ್ಠೆಯಿಂದಲೂ, ಪುಣ್ಯತಮ ಗಳಾದ ಸಾಗರ-ನದೀ-ಸರೋವರ ಮತ್ತು ಪುಣ್ಯಕ್ಷೇತ್ರಗಳ ಯಾತ್ರೆ ಯಿಂದಲೂ ಪಾಪಗಳನ್ನು ಪರಿಹಾರಮಾಡಿಕೊಂಡರು. ಇಷ್ಟುಮಾತ್ರ ವಲ್ಲದೇ–ತಪಸ್ಸಿನಿಂದಲೂ, ಯಜ್ಞ-ಯಾಗಾದಿಗಳಿಂದಲೂ ಅವರು ದಿನ-ದಿನಕ್ಕೂ ಅಭಿವೃದ್ಧಿಯನ್ನು ಹೊಂದಿದರು. ಅನೇಕಾನೇಕ ಯಜ್ಞಗಳನ್ನು ಮಾಡಿದುದರಿಂದಲೂ, ಅನೇಕಪುಣ್ಯಕಾರ್ಯಗಳನ್ನು ಮಾಡಿದುದರಿಂದಲೂ, ಪಾಪಕ್ರಿಯೆಗಳನ್ನು ಪರಿತ್ಯಜಿಸಿದ್ದುದರಿಂದಲೂ, ತೀರ್ಥಯಾತ್ರೆಗಳನ್ನು ಮಾಡಿದುದರಿಂದಲೂ ದೇವತೆಗಳು ಅಮಿತವಾದ ಶ್ರೇಯಸ್ಸನ್ನೇ ಪಡೆದರು.

ಯುಧಿಷ್ಠಿರ! ನೀನು ಇದನ್ನೇ ನಿದರ್ಶನವನ್ನಾಗಿಟ್ಟುಕೊಂಡು ಈಗ ನಿನಗೆ ಪ್ರಾಪ್ತವಾಗಿರುವ ಕಷ್ಟಕ್ಕಾಗಿ ದುಃಖಿಸದೇ ನಿನ್ನ ಅನುಜರಿಂದೊಡಗೂಡಿ ತೀರ್ಥಗಳ ಯಾತ್ರೆಯನ್ನು ಮಾಡುವವನಾಗು. ಅನಂತರದಲ್ಲಿ ಖಂಡಿತ

ವಾಗಿಯೂ ನಿನಗೆ ಶ್ರೇಯಸ್ಸುಂಟಾಗುತ್ತದೆ. ಶ್ರೇಯಃಸಾಧನೆಗೆ ಪ್ರಾಚೀನರು ಹೇಳಿರುವ ಮಾರ್ಗವೂ ಇದೇ ಆಗಿದೆ.

ಯಾವ ರೀತಿಯಲ್ಲಿ ನೃಗ, ಔಶೀನರ (ಶಿಬಿ), ಭಗೀರಥ, ವಸುಮನಸ, ಗಯ, ಪೂರು, ಪುರೂರವಸ–ಇವರುಗಳು ತಪಶ್ಚರಣೆಮಾಡುತ್ತಲೂ, ತೀರ್ಥಗಳ ಯಾತ್ರೆಯನ್ನು ಮಾಡುತ್ತಲೂ, ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡುತ್ತಲೂ, ಮಹಾತ್ಮರಾದ ಮಹರ್ಷಿಗಳನ್ನು ಸಂದರ್ಶಿಸುತ್ತಲೂ ಯಶಸ್ಸು, ಪುಣ್ಯ ಮತ್ತು ಐಶ್ವರ್ಯಗಳನ್ನು ಪಡೆದರೋ–ಅದೇ ರೀತಿಯಲ್ಲಿ ನೀನೂ ಪುಣ್ಯತೀರ್ಥಗಳ ಯಾತ್ರೆಮಾಡಿ, ಮಹಾತ್ಮರನ್ನೂ ಸಂದರ್ಶಿಸಿ ವಿಪುಲವಾದ ಸಂಪತ್ತನ್ನೂ–ಶ್ರೇಯಸ್ಸನ್ನೂ ಪಡೆಯುವವನಾಗು. ಯಾವ ರೀತಿಯಲ್ಲಿ ಪುತ್ರ-ಬಂಧುಗಳಿಂದ ಸಮೇತನಾದ ಇಕ್ಷ್ವಾಕುಮಹಾರಾಜನು ತನ್ನ ಧರ್ಮನಿಷ್ಠೆಯಿಂದ ಶ್ರೇಯಸ್ಸನ್ನು ಪಡೆದನೋ–ಮುಚುಕುಂದ, ಮಾಂಧಾತಾ ಮತ್ತು ಮರುತ್ತ ಇವರೆಲ್ಲರೂ ಯಾವ ರೀತಿಯಲ್ಲಿ ಶ್ರೇಯಸ್ಸನ್ನು ಪಡೆದರೋ–ದೇವತೆಗಳೂ ಮತ್ತು ದೇವರ್ಷಿಗಳೂ ಹೇಗೆ ತಮ್ಮ ತಪಸ್ಸಿನಿಂದ ಸಿದ್ಧಿಯನ್ನೂ ಪಡೆದರೋ–ಅದೇ ರೀತಿಯಲ್ಲಿ ನೀನೂ ಸಹ ನಿನ್ನ ಧರ್ಮನಿಷ್ಠೆಯಿಂದಾಗಿ, ಪುಣ್ಯತೀರ್ಥಗಳ ದರ್ಶನದಿಂದಾಗಿ ಕೀರ್ತಿಯನ್ನೂ ಪುಣ್ಯವನ್ನೂ ಪಡೆಯುವೆ. ಧೃತರಾಷ್ಟ್ರನ ಮಕ್ಕಳಾದರೋ ಅಧರ್ಮ ಯುಕ್ತರಾಗಿ ಮೋಹಪರವಶರಾಗಿ ಅತ್ಯಲ್ಪಕಾಲದಲ್ಲಿಯೇ ದೈತ್ಯರಂತೆ ವಿನಾಶ ಹೊಂದುತ್ತಾರೆ. ಇದರಲ್ಲಾವ ಸಂಶಯವೂ ಇಲ್ಲ ; ಯುಧಿಷ್ಠಿರ!"

೯೪ನೆಯ ಅಧ್ಯಾಯವು ಮುಗಿಯಿತು.

೯೫ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಪಾಂಡವರು ಲೋಮಶರೊಡನೆ ನೈಮಿಷಾರಣ್ಯಕ್ಕೆ ಪ್ರಯಾಣ ಮಾಡಿದುದು : ಗಯರಾಜನ ಯಜ್ಞದ ಮಹಿಮಾವರ್ಣನೆ

"ಜನಮೇಜಯ! ಪಾಂಡುವಿನ ವೀರಪುತ್ರರಾದ ಯುಧಿಷ್ಠಿರಾದಿಗಳು ತಮ್ಮ ಅನುಯಾಯಿಗಳೊಡನೆ ತೀರ್ಥಯಾತ್ರೆಗೆ ಹೊರಟು ಅಲ್ಲಲ್ಲಿ ತಂಗುತ್ತಾ ನೈಮಿಷಾರಣ್ಯಕ್ಕೆ ಆಗಮಿಸಿದರು. ನೈಮಿಷಾರಣ್ಯದಲ್ಲಿದ್ದ

ಗೋಮತೀನದಿಯ ತೀರಕ್ಕೆ ಆಗಮಿಸಿ ಆ ಪುಣ್ಯನದಿಯಲ್ಲಿ ಮಿಂದು ಅನೇಕಾನೇಕ ಗೋವುಗಳನ್ನೂ ಐಶ್ವರ್ಯವನ್ನೂ ದಾನಮಾಡಿದರು. ದೇವ-ಪಿತೃಗಳಿಗೆ ತರ್ಪಣಮಾಡಿದರು. ತಮ್ಮೊಡನೆ ಆಗಮಿಸಿದ್ದ ಮತ್ತು ಗೋಮತೀತೀರದಲ್ಲಿ ವಾಸವಾಗಿದ್ದ ಬ್ರಾಹ್ಮಣರನ್ನೂ ಯಥೋಚಿತವಾಗಿ ಸತ್ಕರಿಸಿದರು. ಅನಂತರದಲ್ಲಿ ಕನ್ಯಾತೀರ್ಥ, ಅಶ್ವತೀರ್ಥ, ಗೋತೀರ್ಥ, ಕಾಲಕೋಟಿತೀರ್ಥಗಳಲ್ಲಿ ಅನುಕ್ರಮವಾಗಿ ಸ್ನಾನಮಾಡಿ, ವೃಷಪ್ರಸ್ಥಗಿರಿಯಲ್ಲಿ ಕೆಲವು ದಿನಗಳು ತಂಗಿದ್ದು, ಬಳಿಕ ಪಾಂಡವರು ಬಾಹುದಾನದಿಯ ತೀರಕ್ಕೆ ಪ್ರಯಾಣ ಮಾಡಿದರು. ಆ ಪುಣ್ಯನದಿಯಲ್ಲಿ ಸ್ನಾನಮಾಡಿ ಅನಂತರದಲ್ಲಿ ದೇವತೆಗಳ ಯಜ್ಞಭೂಮಿಯೆಂದು ಪ್ರಸಿದ್ಧವಾದ ಪುಣ್ಯಕ್ಷೇತ್ರವಾದ ಪ್ರಯಾಗಕ್ಷೇತ್ರಕ್ಕೆ ಪ್ರಯಾಣಮಾಡಿದರು. ಆ ಪುಣ್ಯಕ್ಷೇತ್ರದಲ್ಲಿ ಗಂಗಾ-ಯಮುನಾನದಿಗಳ ಸಂಗಮಸ್ಥಾನದಲ್ಲಿ ಅನುದಿನವೂ ಸ್ನಾನಮಾಡುತ್ತಾ ಪಾಂಡವರು ಕೆಲವು ದಿನಗಳವರೆಗೆ ಆ ಕ್ಷೇತ್ರದಲ್ಲಿಯೇ ತಪಶ್ಚರಣೆಯಲ್ಲಿ ನಿರತರಾಗಿದ್ದರು. ಸತ್ಯಪ್ರತಿಜ್ಞರಾದ, ಮಹಾತ್ಮರಾದ ಪಾಂಡವರು ಗಂಗಾ-ಯಮುನಾಸಂಗಮಸ್ಥಾನದಲ್ಲಿ ಅನುದಿನವೂ ಸ್ನಾನಮಾಡುತ್ತಾ ಪೂತಾತ್ಮರಾಗಿ ಬ್ರಾಹ್ಮಣರಿಗೆ ಯಥೇಚ್ಛವಾದ ಐಶ್ವರ್ಯವನ್ನು ದಾನಮಾಡುತ್ತಿದ್ದರು. ಪ್ರಯಾಗಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ಮುಂದೆ ಪಾಂಡವರು ಅನೇಕ ತಪಸ್ವಿಗಳಿಂದ ಸಂಸೇವ್ಯಮಾನವಾಗಿದ್ದ ಚತುರ್ಮುಖಬ್ರಹ್ಮನ ವೇದೀಕ್ಷೇತ್ರವನ್ನು ಬ್ರಾಹ್ಮಣರೊಡನೆ ತಲುಪಿದರು. ಆ ಪುಣ್ಯತಮವಾದ ಪ್ರಜಾಪತಿವೇದೀಕ್ಷೇತ್ರದಲ್ಲಿ ಸ್ವಲ್ಪಕಾಲ ತಂಗಿದ್ದು ಅಲ್ಲಿ ಪಾಂಡವರು ತಪಶ್ಚರಣೆಮಾಡಿದರು. ಅಲ್ಲಿ ಕಂದ-ಮೂಲ-ಫಲಗಳೇ ಮೊದಲಾದ ವನ್ಯಪದಾರ್ಥಗಳಿಂದ ಅಲ್ಲಿದ್ದ ಬ್ರಾಹ್ಮಣರನ್ನು ತೃಪ್ತಿಪಡಿಸುತ್ತಿದ್ದರು. ಮುಂದೆ ಧರ್ಮಜ್ಞನಾದ, ರಾಜರ್ಷಿಯಾದ, ಪುಣ್ಯಾತ್ಮನಾದ ಗಯನಿಂದ ಸಂಸ್ಕೃತವಾದ (ಪವಿತ್ರವಾಗಿ ಮಾಡಲ್ಪಟ್ಟ) ಪರ್ವತಪ್ರಾಂತಕ್ಕೆ ಪ್ರಯಾಣಮಾಡಿದರು.

ಅದಕ್ಕೆ ಸೇರಿದಂತೆಯೇ ಗಯಶಿರವೆಂಬ ಪರ್ವತವೂ, ಮಹಾನದೀ ಎಂಬ ಪುಣ್ಯನದಿಯೂ ಇರುವುವು. ಆಹ್ಲಾದಕರವಾದ ಆ ಪುಣ್ಯನದಿಯ ಎರಡು ದಂಡೆಗಳೂ ಬೆತ್ತದ ಹುಲ್ಲಿನ ಪೊದೆಗಳಿಂದ ಸಮಲಂಕೃತವಾಗಿರುವುವು. ಅಲ್ಲಿ ಮಹರ್ಷಿಗಳಿಂದ ಸೇವಿತವಾದ, ಪವಿತ್ರವಾದ ಶಿಖರವುಳ್ಳ, ಪುಣ್ಯತೀರ್ಥಗಳಿಂದ ಕೂಡಿರುವ ಮತ್ತೊಂದು ಪರ್ವತವೂ ಇದೆ. ಆ ಪರ್ವತ

ದಲ್ಲಿರುವ ಬ್ರಹ್ಮಸರವೆಂಬ ಪುಣ್ಯತೀರ್ಥವು ಪುಣ್ಯಪ್ರದವಾದುದು ಮತ್ತು ಋಷಿ-ಮಹರ್ಷಿಗಳಿಂದ ಸಂಸೇವ್ಯಮಾನವಾದುದು. ಹಿಂದೊಂದು ಕಾಲದಲ್ಲಿ ಆ ಪುಣ್ಯತೀರ್ಥದ ಸಮೀಪದಲ್ಲಿಯೇ ಸನಾತನನಾದ ಯಮಧರ್ಮನು ವಾಸವಾಗಿದ್ದನು. ಮಹಾನುಭಾವನಾದ ಯಮಧರ್ಮರಾಜನನ್ನು ಸಂದರ್ಶಿಸುವ ಸಲುವಾಗಿ ಭಗವಾನ್ ಅಗಸ್ತ್ಯರೂ ಆ ಪುಣ್ಯತೀರ್ಥಕ್ಕೆ ಆಗಮಿಸಿದ್ದರು. ಜನಮೇಜಯ! ಪುಣ್ಯತಮವಾದ ಆ ಬ್ರಹ್ಮಸರವೇ ಎಲ್ಲ ಪುಣ್ಯನದಿಗಳಿಗೂ ಮೂಲಸ್ಥಾನವಾಗಿರುವುದು. ಪಿನಾಕಪಾಣಿಯಾದ ಮಹಾದೇವನ ಸನ್ನಿಧಾನವು ಆ ತೀರ್ಥದಲ್ಲಿ ಅನವರತವಾಗಿರುವುದು. ಪುಣ್ಯತಮವಾದ ಆ ತೀರ್ಥಕ್ಷೇತ್ರಕ್ಕೆ ಪಾಂಡವರು ಆಗಮಿಸಿ ಅಲ್ಲಿಯೇ ಚಾತುರ್ಮಾಸ್ಯಯಾಗ ದೀಕ್ಷೆಯನ್ನು ಕೈಗೊಂಡು ಋಷಿಯಜ್ಞವಿಧಾನದಿಂದ ಕರ್ಮಾನುಷ್ಠಾನವನ್ನು ಮಾಡಿದರು. ಆ ಪುಣ್ಯಕ್ಷೇತ್ರದಲ್ಲಿಯೇ ಸನಾತನವಾದ ಅಕ್ಷಯವಟವೃಕ್ಷವೂ ಇರುವುದು. ಆ ಅಕ್ಷಯವಟವೃಕ್ಷದ ನೆಳಲಿನಲ್ಲಿ ಮಾಡಿದ ಕರ್ಮಗಳೆಲ್ಲವೂ ಅಕ್ಷಯವಾದ ಫಲವನ್ನೇ ನೀಡುವುವು. ದೇವತೆಗಳ ಯಾಗಭೂಮಿಯಾದ, ಅಕ್ಷಯವಾದ ಫಲನೀಡುವ ಆ ಪುಣ್ಯಕ್ಷೇತ್ರದಲ್ಲಿ ಪಾಂಡವರು ಉಪವಾಸ ದಿಂದಿದ್ದು ಜಿತೇಂದ್ರಿಯರಾಗಿ ತಪಶ್ಚರಣೆಮಾಡುತ್ತಿದ್ದರು. ಆ ಕ್ಷೇತ್ರಕ್ಕೆ ತಪಸ್ವಿ ಗಳಾದ ನೂರಾರು ಬ್ರಾಹ್ಮಣರು ಆಗಮಿಸುತ್ತಿದ್ದರು. ಅವರ ಸಹಾಯದಿಂದ ಪಾಂಡವರು ಋಷಿಪ್ರೋಕ್ತವಾದ ಪ್ರಯೋಗವಿಧಾನದಿಂದ ಚಾತುರ್ಮಾಸ್ಯ ವೆಂಬ ಯಾಗವನ್ನು ಮಾಡಿದರು. ಧರ್ಮಜನ ಸದಸ್ಸಿನಲ್ಲಿ ಕುಳಿತಿದ್ದ ವಿದ್ಯಾ-ತಪೋವೃದ್ಧರಾದ ವೇದ-ವೇದಾಂಗಪಾರಂಗತರಾದ ಬ್ರಾಹ್ಮಣರು ಯಜ್ಞಕಾಲ ದಲ್ಲಿ ಪುಣ್ಯಪ್ರದವಾದ ಪ್ರವಚನಗಳನ್ನು ಮಾಡುತ್ತಿದ್ದರು.

ವಿದ್ಯಾಭ್ಯಾಸವನ್ನು ಪೂರೈಸಿ, ವ್ರತಚತುಷ್ಟಯವನ್ನು ಮುಗಿಸಿ ಕೌಮಾರ ವ್ರತಾನುಷ್ಠಾನವನ್ನು ಕೈಗೊಂಡಿದ್ದ ಶಮಠನು ಅಮೂರ್ತರಯಸನ ಮಗನಾದ ಗಯನ ವಿಷಯವಾಗಿ ಯುಧಿಷ್ಠಿರನ ಸಭೆಯಲ್ಲಿ ಈ ಮಾತುಗಳನ್ನು ಹೇಳಿದನು : "ಧರ್ಮಜ! ಅಮೂರ್ತರಯಸನ ಮಗನಾದ ಗಯನು ಶ್ರೇಷ್ಠ ರಾದ ರಾಜರ್ಷಿಗಳಲ್ಲೊಬ್ಬನಾಗಿದ್ದನು. ಅವನು ಮಾಡಿದ ಪುಣ್ಯಕರ್ಮಗಳನ್ನು ಹೇಳುವೆನು ಕೇಳು. ಈ ಪುಣ್ಯಕ್ಷೇತ್ರದಲ್ಲಿಯೇ ಗಯಚಕ್ರವರ್ತಿಯು ಬಹುಭೋಜ್ಯವಸ್ತುಗಳುಳ್ಳ ಮತ್ತು ಬಹುದಕ್ಷಿಣಾಯುಕ್ತವಾದ ಅನೇಕಾನೇಕ

ಯಾಗಗಳನ್ನು ಮಾಡಿದನು. ಭೋಜನಾರ್ಥವಾಗಿ ಪರ್ವತೋಪಮವಾದ ನೂರಾರು ಅನ್ನರಾಶಿಗಳು ಸಿದ್ಧವಾಗಿರುತ್ತಿದ್ದುವು. ತುಪ್ಪದ ಕಾಲುವೆಗಳಿದ್ದುವು. ಮೊಸರಿನ ನದಿಗಳು ನೂರಾರು ಸಂಖ್ಯೆಯಲ್ಲಿ ಪ್ರವಹಿಸುತ್ತಿದ್ದುವು. ಸುಪಕ್ವವಾದ ವ್ಯಂಜನಾದಿಗಳ (ಪಲ್ಯ ಮೊದಲಾದುವುಗಳ) ಪ್ರವಾಹವೂ ಅಧಿಕಸಂಖ್ಯೆಯಲ್ಲಿದ್ದಿತು. ಅಷ್ಟೊಂದು ಅಪಾರವಾದ ಭೋಜನಪರಿಕರಗಳು ಅನುದಿನವೂ ಸಿದ್ಧವಾಗುತ್ತಿದ್ದು ಲಕ್ಷ-ಲಕ್ಷ ಆಗಂತುಕರಿಗೆ ಯಥೇಚ್ಛವಾಗಿ ಹಂಚಲ್ಪಡುತ್ತಿದ್ದುವು. ಅದಷ್ಟೇ ಅಲ್ಲದೇ ಯಜ್ಞದ ಸಾವಿರಾರು ಸದಸ್ಯರಿಗೆ ಪ್ರತ್ಯೇಕವಾಗಿ ಸುಪಕ್ವವಾದ ಸುಸಂಸ್ಕೃತವಾದ ಭೋಜನವು ಸಿದ್ಧವಾಗುತ್ತಿದ್ದಿತು. ದಕ್ಷಿಣೆಯನ್ನು ಕೊಡುವಾಗಲೂ ಬ್ರಾಹ್ಮಣರು ಮಾಡುತ್ತಿದ್ದ ವೇದಘೋಷವು ಗಗನವನ್ನು ಮುಟ್ಟುತ್ತಿದ್ದಿತು. ವೇದಘೋಷದ ಹೊರತಾಗಿ ಮತ್ತಾವ ಧ್ವನಿಯೂ ಆ ದಿವ್ಯಕ್ಷೇತ್ರದಲ್ಲಿ ಕೇಳಿಬರುತ್ತಿರಲಿಲ್ಲ. ಪವಿತ್ರವಾದ ಆ ವೇದಘೋಷವು ಗಗನವನ್ನೂ, ಭೂವಲಯವನ್ನೂ, ನಾಲ್ಕು ದಿಕ್ಕುಗಳನ್ನೂ, ಸ್ವರ್ಗವನ್ನೂ ವ್ಯಾಪಿಸಿದ್ದಿತು. ಆ ಸಂದರ್ಭದಲ್ಲಿ ಮತ್ತೊಂದು ವಿಚಿತ್ರವೂ ನಡೆಯಿತು. ಗಯನು ಭೋಜನಾರ್ಥವಾಗಿ ಸಿದ್ಧಪಡಿಸಿದ್ದ ಭಕ್ಷ್ಯ-ಭೋಜ್ಯ-ಲೇಹ್ಯ-ಚೋಷ್ಯ-ಪಾನೀಯಗಳಿಂದ ಸುಸಂತುಷ್ಟರಾದ ಜನರು ಆ ಅದ್ಭುತವಾದ ಭೋಜನವನ್ನು ಕುರಿತು ದೇಶ-ವಿದೇಶಗಳಲ್ಲಿಯೂ ಗಾಯನಮಾಡುತ್ತಿದ್ದರು.

**ಗಯಸ್ಯ ಯಜ್ಞೇ ಕೇ ತ್ವದ್ಯ ಪ್ರಾಣಿನೋ ಭೋಕ್ತುಮೀಪ್ಸವಃ ।**
**ತತ್ರ ಭೋಜನಶಿಷ್ಟಸ್ಯ ಪರ್ವತಾಃ ಪಞ್ಚವಿಂಶತಿಃ ॥೨೫॥**

**ನ ತತ್ಪೂರ್ವೇ ಜನಾಶ್ಚಕ್ರುರ್ನ ಕರಿಷ್ಯನ್ತಿ ಚಾಪರೇ ।**
**ಗಯೋ ಯದಕರೋದ್ಯಜ್ಞೇ ರಾಜರ್ಷಿರಮಿತದ್ಯುತಿಃ ॥೨೬॥**

**ಕಥಂ ತು ದೇವಾ ಹವಿಷಾ ಗಯೇನ ಪರಿತರ್ಪಿತಾಃ ।**
**ಪುನಃ ಶಕ್ಷ್ಯನ್ತ್ಯುಪಾದಾತುಮನ್ಯೈರ್ದತ್ತಾನಿ ಕಾನಿಚಿತ್ ॥೨೭॥**

**ಸಿಕತಾ ವಾ ಯಥಾ ಲೋಕೇ ಯಥಾ ವಾ ದಿವಿ ತಾರಕಾಃ ।**
**ಯಥಾ ವಾ ವರ್ಷತೋ ಧಾರಾ ಅಸಂಖ್ಯೇಯಾಃ ಸ್ಮ ಕೇನಚಿತ್ ।**
**ತಥಾ ಗಣಯಿತುಂ ಶಕ್ಯಾ ಗಯಯಜ್ಞೇ ನ ದಕ್ಷಿಣಾಃ ॥೨೮॥**

ಗಯನು ಮಾಡಿದ ಯಜ್ಞಸಮಾರಂಭದಲ್ಲಿ ಭೋಜನಮಾಡಿದನಂತರ ಪುನಃ ಭೋಜನಮಾಡಬೇಕೆನ್ನುವ ಪ್ರಾಣಿಯು ಈ ಪ್ರಪಂಚದಲ್ಲಿ ಯಾವನಿದ್ದಾನೆ? (ಯಾರಿಗೂ ಪುನಃ ಭೋಜನಮಾಡುವ ಇಚ್ಛೆಯೇ ಉಂಟಾಗುತ್ತಿರಲಿಲ್ಲ.) (ಲಕ್ಷ-ಲಕ್ಷ ಜನರು) ಊಟಮಾಡಿದನಂತರವೂ ಇಪ್ಪತ್ತೈದು ಅನ್ನಪರ್ವತಗಳು ಹಾಗೆಯೇ ಉಳಿದಿರುತ್ತಿದ್ದುವು. ರಾಜರ್ಷಿಯಾದ ಅಮಿತದ್ಯುತಿಯಾದ ಗಯನು ಆ ಯಜ್ಞದ ಸಮಾರಂಭಕಾಲದಲ್ಲಿ ಸಿದ್ಧಪಡಿಸಿದ್ದ ಭೋಜನಸಾಮಗ್ರಿಗಳನ್ನು ಹಿಂದೆ ಯಾರೂ ಸಿದ್ಧಪಡಿಸಿರಲಿಲ್ಲ. ಮುಂದೆಯೂ ಯಾರಿಂದಲೂ ಸಿದ್ಧಪಡಿಸುವ ಸಾಧ್ಯತೆಯೂ ಇಲ್ಲ. ಗಯನು ಅಸಂಖ್ಯಾತವಾದ ಆಜ್ಯಾಹುತಿಗಳಿಂದ ದೇವತೆಗಳನ್ನು ಎಷ್ಟರಮಟ್ಟಿಗೆ ತೃಪ್ತಿಪಡಿಸಿದನೆಂದರೆ : ಮುಂದೆ  ಬೇರೊಬ್ಬರು ಮಾಡುವ ಆಜ್ಯಾಹುತಿಯು ಆ ದೇವತೆಗಳಿಗೆ ಬೇಡವಾಯಿತು. ಅವರಿಗೆ ಆಜ್ಯಾಹುತಿಯನ್ನು ಸ್ವೀಕರಿಸಲು ಸಾಧ್ಯವೇ ಆಗುತ್ತಿರಲಿಲ್ಲ. ಇನ್ನು ದಕ್ಷಿಣೆಯ ವಿಷಯವಾಗಿ ಹೇಳುವುದಾದರೆ ಗಯನಿತ್ತ ದಕ್ಷಿಣೆಯು 'ಅಪಾರ' 'ಅಸಂಖ್ಯ' ಎಂದು ಮಾತ್ರ ಹೇಳಬಹುದಾಗಿದ್ದಿತು. ಭೂಮಿಯಲ್ಲಿರುವ ಮರಳಿನ ಕಣಗಳು ಹೇಗೆ ಅಸಂಖ್ಯಾತಗಳೋ, ಆಕಾಶದಲ್ಲಿರುವ ತಾರೆಗಳು ಹೇಗೆ ಅಸಂಖ್ಯಾತಗಳೋ, ಅಂತರಿಕ್ಷದಿಂದ ಬೀಳುವ ಮಳೆಯ ಹನಿಗಳು ಹೇಗೆ ಅಸಂಖ್ಯಾತಗಳೋ–ಅದೇ ರೀತಿಯಲ್ಲಿ ಗಯನು ಆ ಮಹಾಯಜ್ಞದ ಸಮಾರಂಭದಲ್ಲಿ ಕೊಟ್ಟ ದಕ್ಷಿಣೆಯೂ ಅಸಂಖ್ಯಾತವಾಗಿತ್ತು. (ಇಷ್ಟೆಂದು ಲೆಕ್ಕಮಾಡಲು ಯಾರಿಂದಲೂ ಸಾಧ್ಯವಿರಲಿಲ್ಲ.)"

ಹೀಗೆ ಹೇಳಿಕೊಂಡು ಜನರು ದೇಶ-ವಿದೇಶಗಳಲ್ಲಿಯೂ  ಗಯಚಕ್ರವರ್ತಿಯ ಗುಣಗಳನ್ನು ಗಾಯನಮಾಡುತ್ತಿದ್ದರು.

ಧರ್ಮಜ! ಅಂತಹ ಮಹಾಯಾಗಗಳನ್ನು ಗಯನು ಆ ಬ್ರಹ್ಮಸರದ ಬಳಿಯಲ್ಲಿ ಅನೇಕ ಸಲ ಮಾಡಿದನು."

೯೫ನೆಯ ಅಧ್ಯಾಯವು ಮುಗಿಯಿತು.

೯೬ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಅಗಸ್ತ್ಯರ ಚರಿತ್ರೆ : ಇಲ್ವಲ-ವಾತಾಪಿಗಳ ವೃತ್ತಾಂತ : ಪಿತೃದೇವತೆಗಳನ್ನು ಉದ್ಧರಿಸಲು ಗೃಹಸ್ಥಾಶ್ರಮವನ್ನು ಸ್ವೀಕರಿಸಲು ಅಗಸ್ತ್ಯರ ನಿರ್ಧಾರ : ವಿದರ್ಭದೇಶದಲ್ಲಿ ಲೋಪಾಮುದ್ರೆಯ ಜನನ

ಜನಮೇಜಯ! ಕುಂತೀಪುತ್ರನಾದ, ಭೂರಿದಕ್ಷಿಣೆಗಳನ್ನು ಕೊಡುವವನೆಂದು ಪ್ರಸಿದ್ಧನಾದ ಧರ್ಮಜನು ಅನಂತರದಲ್ಲಿ ಅನುಜರೊಡನೆಯೂ ಬ್ರಾಹ್ಮಣರೊಡನೆಯೂ ಅಗಸ್ತ್ಯರ ಆಶ್ರಮಕ್ಕೆ ಪ್ರಯಾಣಮಾಡಿ 'ದುರ್ಜಯಾ' ಎಂಬ ಸ್ಥಳದಲ್ಲಿ ಉಳಿದುಕೊಂಡನು. ಅದೇ ಸ್ಥಳದಲ್ಲಿ ವಾಗ್ಮಿಯಾದ ಯುಧಿಷ್ಠಿರನು ಮಾನವಾಂತಕನಾದ ವಾತಾಪಿಯನ್ನು ಅಗಸ್ತ್ಯರು ಕೊಂದ ಕಾರಣವನ್ನೂ, ಆ ದೈತೇಯನಿಗಿದ್ದ ಪ್ರಭಾವದ ಪರಮಾವಧಿ ಎಷ್ಟೆಂಬುದನ್ನೂ, ಆ ದೈತ್ಯನ ವಿಷಯವಾಗಿ ಅಗಸ್ತ್ಯರು ಕೋಪಗೊಂಡ ಕಾರಣವನ್ನೂ ವಿವರಿಸಿ ಹೇಳಬೇಕೆಂದು ಮಹರ್ಷಿಗಳಾದ ಲೋಮಶರನ್ನು ಕೇಳಿಕೊಂಡನು.

ಧರ್ಮರಾಜನಿಂದ ಪ್ರಶ್ನಿಸಲ್ಪಟ್ಟ ಲೋಮಶಮಹರ್ಷಿಗಳು ಇಲ್ವಲ-ವಾತಾಪಿಗಳ ಇತಿಹಾಸವನ್ನು ಹೇಳಲು ಉಪಕ್ರಮಿಸಿದರು :

"ಕುರುಕುಲಾವತಂಸನೇ! ಹಿಂದೆ ಮಣಿಮತೀ ಎಂಬ ಪಟ್ಟಣದಲ್ಲಿ ಇಲ್ವಲನೆಂಬ ದೈತ್ಯನೊಬ್ಬನಿದ್ದನು. ಇವನಿಗೆ ವಾತಾಪಿಯೆಂಬ ಹೆಸರಿನ ತಮ್ಮನೂ ಇದ್ದನು. ಒಂದಾನೊಂದು ದಿನ ದೈತ್ಯವಂಶಜನಾದ ಇಲ್ವಲನು–ತಪೋಧನನಾದ ಬ್ರಾಹ್ಮಣನೊಬ್ಬನನ್ನು ಸತ್ಕರಿಸಿ ತನಗೆ ಇಂದ್ರನಿಗೆ ಸಮಾನನಾದ ಮಗನು ಹುಟ್ಟುವಂತೆ ಅನುಗ್ರಹಿಸಬೇಕೆಂದು ಕೇಳಿಕೊಂಡನು. ಆದರೆ ಆ ಬ್ರಾಹ್ಮಣನು ಇಲ್ವಲನಿಗೆ ಇಂದ್ರಸಮಾನನಾದ ಮಗನನ್ನು ಪಡೆಯುವ ವರವನ್ನು ದಯಪಾಲಿಸಲಿಲ್ಲ. ಆ ಕಾರಣದಿಂದಾಗಿ ಅಸುರನು ಬ್ರಾಹ್ಮಣನ ವಿಷಯದಲ್ಲಿ ಕುಪಿತನಾದನು. ಆ ಬ್ರಾಹ್ಮಣನ ಮೇಲೆ ಕೋಪಗೊಂಡುದು ಮಾತ್ರವಲ್ಲ ; ಅಂದಿನಿಂದ ಇಲ್ವಲನು ಬ್ರಾಹ್ಮಣವಿನಾಶಕನೂ ಆದನು. ಮಾಯಾವಿದ್ಯೆಯಲ್ಲಿ ನಿಷ್ಣಾತನಾಗಿದ್ದ, ಕೋಪಿಷ್ಠನಾದ ಇಲ್ವಲನು ತನ್ನ ತಮ್ಮನಾದ ವಾತಾಪಿಯನ್ನು ಮಾಯೆಯಿಂದ ಆಡನ್ನಾಗಿ ಮಾಡುತ್ತಿದ್ದನು. ಮಾಯಾವಿದ್ಯೆಯಲ್ಲಿ ನಿಷ್ಣಾತನಾಗಿದ್ದ ವಾತಾಪಿಯೂ ಕ್ಷಣಮಾತ್ರದಲ್ಲಿ ಅಣ್ಣನ

ಮಾಯಾಮಂತ್ರದ ಪ್ರಭಾವದಿಂದಲೂ, ಸ್ವಶಕ್ತಿಯಿಂದಲೂ ಆಡಾಗಿ ಪರಿವರ್ತಿತನಾಗುತ್ತಿದ್ದನು. ಇಲ್ವಲನು ಅಜರೂಪನಾದ ವಾತಾಪಿಯನ್ನು ಕತ್ತರಿಸಿ ಅದರ ಮಾಂಸವನ್ನು ಪಕ್ವಮಾಡಿ ಅತಿಥಿಗಳಾಗಿ ಬರುವ ಬ್ರಾಹ್ಮಣ ರಿಗೆ ವಿನಮ್ರನಾಗಿ ಅರ್ಪಿಸುತ್ತಿದ್ದನು. ಬ್ರಾಹ್ಮಣರು ಆ ಮಾಂಸವನ್ನು ಭಕ್ಷಣ ಮಾಡಿದೊಡನೆಯೇ ಸತ್ತುಹೋಗುತ್ತಿದ್ದರು. ಬ್ರಾಹ್ಮಣರು ಏಕೆ ಸಾಯು ತ್ತಿದ್ದರೆಂಬುದಕ್ಕೆ ಕಾರಣವನ್ನು ಹೇಳುವೆನು ಕೇಳು, ಧರ್ಮಜ!

ಇಲ್ವಲನಿಗೆ ಒಂದು ಅಗಾಧವಾದ ಶಕ್ತಿಯಿದ್ದಿತು. ಅವನು ಉಚ್ಚಧ್ವನಿ ಯಿಂದ ಯಾರನ್ನಾದರೂ ಆಹ್ವಾನಿಸಿದರೆ ಆಹೂತನಾದವನು ಯಮಾಲಯಕ್ಕೆ ಹೋಗಿದ್ದರೂ (ಪ್ರೇತಾವಸ್ಥೆಯಲ್ಲಿದ್ದರೂ) ತನ್ನ ಹಿಂದಿನ ರೂಪವನ್ನೇ ಪಡೆದು ಇಲ್ವಲನ ಮುಂದೆ ಬಂದು ನಿಲ್ಲುತ್ತಿದ್ದನು. ಅವನು ಆಹ್ವಾನಿಸುವ ಆ ಧ್ವನಿಯು ಅಷ್ಟೊಂದು ಪ್ರಭಾವಪೂರ್ಣವಾಗಿದ್ದಿತು.

(ಯಜ್ಞದ ಸಮಯದಲ್ಲಿ ಮಂತ್ರೋಚ್ಚಾರಣೆಮಾಡಿ ದೇವತೆಗಳನ್ನು ಆಹ್ವಾನಿಸಿದಾಗ ಮಂತ್ರದಿಂದ ಸೆಳೆಯಲ್ಪಟ್ಟ ದೇವತೆಗಳು ಆಹುತಿಗಳನ್ನು ಸ್ವೀಕರಿಸಲು ಬರುವರೆಂಬುದನ್ನು ನಾವು ಕೇಳಿದ್ದೇವೆ. ಆಭಿಚಾರಿಕಕ್ರಿಯೆ ಗಳಲ್ಲಿಯೂ ಭೂತ-ಪ್ರೇತಗಳನ್ನು ಆಕರ್ಷಿಸುವ ಮಂತ್ರಗಳಿವೆ. ಅದೇ ಕ್ರಮ ದಲ್ಲಿಯೇ ದೈತ್ಯನಾದ ಇಲ್ವಲನೂ ಯಾರನ್ನಾದರೂ ಉಚ್ಚಸ್ವರದಲ್ಲಿ ಆಹ್ವಾನಿಸಿದೊಡನೆಯೇ ಅವರೆಲ್ಲೇ ಇದ್ದರೂ ತಮ್ಮ ಪೂರ್ವಶರೀರವನ್ನು ಧರಿಸಿ ಅವನ ಮುಂದೆ ಬಂದು ನಿಲ್ಲುತ್ತಿದ್ದರು.)

ಅಂತಹ ಪರಮಾದ್ಭುತವಾದ ಶಕ್ತಿಯನ್ನು ಪಡೆದಿದ್ದ ಇಲ್ವಲನು ನಾನು ಹಿಂದೆ ಹೇಳಿದಂತೆ ವಾತಾಪಿಯನ್ನು ಆಡನ್ನಾಗಿ ಪರಿವರ್ತಿಸಿ ಅದನ್ನು ಕತ್ತರಿಸಿ ಅದರ ಮಾಂಸವನ್ನು ಪಕ್ವಮಾಡಿ ಅತಿಥಿಗಳಾದ ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತಿದ್ದನು. ಬ್ರಾಹ್ಮಣರೂ ಸಂತೃಪ್ತರಾಗಿ ತಮ್ಮ ಹಾದಿಯನ್ನು ಹಿಡಿದು ಹೊರಡುವಷ್ಟರಲ್ಲಿ ಇಲ್ವಲನು ವಾತಾಪಿಯನ್ನು ಉದ್ದೇಶಿಸಿ ಉಚ್ಚಸ್ವರದಿಂದ **"ವಾತಾಪೇ! ಅತ್ರಾಗಚ್ಛ"** ಎಂದು ಆಹ್ವಾನಿಸುತ್ತಿದ್ದನು. ಅವನ ಆಹ್ವಾನದಿಂದ ಚೋದಿತನಾದ, ಮಹಾಬಲಶಾಲಿಯಾದ, ಬ್ರಹ್ಮದ್ವೇಷಿಯಾದ, ಮಾಯಾವಿಯಾದ ವಾತಾಪಿಯು ಬ್ರಾಹ್ಮಣನ ಹೊಟ್ಟೆಯ ಪಾರ್ಶ್ವ

ವನ್ನು ಸೀಳಿಕೊಂಡು ಪಕ-ಪಕನೆ ನಗುತ್ತಾ ಹೊರಬರುತ್ತಿದ್ದನು. ಈ ರೀತಿಯಲ್ಲಿ ಇಲ್ವಲನು ಪ್ರತಿಯೊಂದು ಸಲವೂ ಬ್ರಾಹ್ಮಣರಿಗೆ ಅಜಸ್ವರೂಪನಾದ ವಾತಾಪಿಯ ಮಾಂಸವನ್ನು ಬಡಿಸಿ ಅವರೆಲ್ಲರ ಪ್ರಾಣಾಪಹಾರ ಮಾಡುತ್ತಿದ್ದನು.



ಅದೇ ಕಾಲದಲ್ಲಿ ಮಹರ್ಷಿಗಳಾದ ಅಗಸ್ತ್ಯರು ಒಮ್ಮೆ ಅಗಾಧವಾದ ಹಳ್ಳವೊಂದರಲ್ಲಿ ತಮ್ಮ ಪಿತೃಗಳು ತಲೆಕೆಳಗಾಗಿ ಜೋಲಾಡುತ್ತಿರುವುದನ್ನು ಕಂಡರು. ಹಾಗೆ ತಲೆಕೆಳಗಾಗಿ ಜೋತುಬಿದ್ದಿದ್ದ ತಮ್ಮ ಪಿತೃಗಳನ್ನು ಅಗಸ್ತ್ಯರು "ಮಹಾನುಭಾವರೇ! ನೀವೇಕೆ ಈ ಸ್ಥಿತಿಯಲ್ಲಿರುತ್ತೀರಿ?"–ಎಂದು ಪ್ರಶ್ನಿಸಿದರು :

ಹೀಗೆ ಅಗಸ್ತ್ಯರಿಂದ ಪ್ರಶ್ನಿಸಲ್ಪಟ್ಟ, ಬ್ರಹ್ಮವಾದಿಗಳಾದ ಆ ಮಹರ್ಷಿಗಳು ಅಗಸ್ತ್ಯರನ್ನು ಕುರಿತು ಹೇಳಿದರು :

"ಸಂತಾನಚ್ಛೇದವಾದ ಕಾರಣದಿಂದಾಗಿ ನಾವೀ ಸ್ಥಿತಿಯಲ್ಲಿದ್ದೇವೆ." ಹೀಗೆಂದು ಉತ್ತರಿಸಿ ಮುಂದುವರಿದು ಹೇಳಿದರು :

"ವತ್ಸ! ನಾವು ನಿನ್ನ ವಂಶದ ಪೂರ್ವಜರು. ನಿನ್ನ ಪಿತಾಮಹ-ಪ್ರಪಿತಾಮಹರಾಗಿದ್ದೇವೆ. ವಂಶಪ್ರದೀಪನಿಲ್ಲದ ಕಾರಣದಿಂದಾಗಿ ನಾವೀ ದುಃಸ್ಥಿತಿಯಲ್ಲಿದ್ದೇವೆ. ನೀನೇನಾದರೂ ಒಬ್ಬ ಯೋಗ್ಯನಾದ ಪುತ್ರನನ್ನು ಪಡೆದೆಯಾದರೆ ನಾವು ಈ ನರಕದಿಂದ ಪಾರಾಗುತ್ತೇವೆ. ಸಂತಾನವನ್ನು ಪಡೆಯುವುದರಿಂದ ನಿನಗೂ ಸದ್ಗತಿಯುಂಟಾಗುತ್ತದೆ."

ತೇಜಸ್ವಿಗಳಾದ ಸತ್ಯಧರ್ಮಪರಾಯಣರಾದ ಅಗಸ್ತ್ಯರು ತಮ್ಮ ಪಿತೃಗಳು ಹೇಳಿದ ಆ ಮಾತುಗಳನ್ನು ಕೇಳಿ ಅವರೊಡನೆ ಹೇಳಿದರು :

"ಪಿತೃವರೇಣ್ಯರೇ! ನಾನು ತಮ್ಮ ಮನದ ಅಭಿಲಾಷೆಯನ್ನು ಪೂರ್ಣಗೊಳಿಸುತ್ತೇನೆ. ನಿಮ್ಮ ಮನಸ್ಸಿನಲ್ಲಿರುವ ಆತಂಕವನ್ನು ದೂರಮಾಡಿರಿ."

ಹೀಗೆ ಅಗಸ್ತ್ಯರು ತಮ್ಮ ಪಿತೃಗಳಿಗೆ ಆಶ್ವಾಸನೆಯನ್ನಿತ್ತು ಅನಂತರ ತಮ್ಮ ವಂಶಾಭಿವೃದ್ಧಿಯ (ಮಗನನ್ನು ಪಡೆಯುವ) ವಿಷಯವಾಗಿ ಯೋಚಿಸ ತೊಡಗಿದರು.

**ಆತ್ಮನಃ ಪ್ರಸವಸ್ಯಾರ್ಥೇ ನಾಪಶ್ಯತ್ಸದೃಶೀಂ ಸ್ತ್ರಿಯಮ್ ॥೧೯॥**

ಅಗಸ್ತ್ಯರು ಎಷ್ಟೇ ಯೋಚಿಸಿದರೂ ತಮ್ಮನ್ನು ಪುತ್ರರೂಪದಲ್ಲಿ ಪಡೆಯಲು ಸಾಮರ್ಥ್ಯವಿರುವ ಅಥವಾ ಪುತ್ರಪ್ರಾಪ್ತಿಗಾಗಿ ತಮಗೆ ಅನುರೂಪಳೆನಿಸಿದ ಸಾಧ್ವೀಮಣಿಯನ್ನು ಈ ಪ್ರಪಂಚದಲ್ಲಿಯೇ ಅವರು ಕಾಣಲಿಲ್ಲ.

ಅಘಟಿತಘಟನಾಸಾಮರ್ಥ್ಯವುಳ್ಳ ಅಗಸ್ತ್ಯರು ತಮ್ಮನ್ನು ಮಗನ ಸ್ವರೂಪದಲ್ಲಿ ಧರಿಸಲು ಸಮರ್ಥಳಾದ ಸಾಧ್ವಿಯನ್ನು ಪ್ರಪಂಚದಲ್ಲಿ ಕಾಣದೇ ಪ್ರಪಂಚದಲ್ಲಿರುವ ಪ್ರಾಣಿಗಳಿಂದ ಅವುಗಳಿಗಿರುವ ವಿಶೇಷವಾದ ಗುಣ ಗಳನ್ನೇ ಸಂಕಲನಮಾಡಿ (ಸಿಂಹದಿಂದ ಕಟಿ, ಜಿಂಕೆಯಿಂದ ಕಣ್ಣು–ಇತ್ಯಾದಿ) ಅನುಪಮಸೌಂದರ್ಯದಿಂದ ಕೂಡಿದ ಸ್ತ್ರೀಯೊಬ್ಬಳನ್ನು ಬೀಜರೂಪವಾಗಿ ಸೃಷ್ಟಿಸಿದರು. ಮಹಾತಪಸ್ವಿಗಳಾದ ಅಗಸ್ತ್ಯರು ಆ ರೀತಿಯಲ್ಲಿ ಸೃಷ್ಟಿಸಿದ ಕನ್ಯಾ

ರೂಪವಾದ ಫಲವನ್ನು–ಅದೇ ಸಮಯದಲ್ಲಿ ಸಂತಾನಕ್ಕಾಗಿ ತಪಶ್ಚರಣೆ ಮಾಡುತ್ತಿದ್ದ–ವಿದರ್ಭರಾಜನಿಗೆ ಕೊಟ್ಟರು.

ಅಗಸ್ತ್ಯರು ಅನುಗ್ರಹಿಸಿದ ಸ್ತ್ರೀಬೀಜರೂಪವಾದ ಫಲವನ್ನು ವಿದರ್ಭ ರಾಜನು ಸಂತೋಷದಿಂದ ಸ್ವೀಕರಿಸಿದನು. ಭಕ್ತಿ-ಗೌರವಯುಕ್ತಳಾಗಿ ಆ ಫಲ ವನ್ನು ಉಪಭುಂಜಿಸಿದ ವಿದರ್ಭರಾಜನ ಪತ್ನಿಯು ಕೆಲವು ದಿನಗಳಲ್ಲಿಯೇ ಗರ್ಭವನ್ನು ಧರಿಸಿ ನವಮಾಸಗಳು ತುಂಬಿದನಂತರ ನಯನಾನಂದಕರ ವಾಗಿದ್ದ ಹೆಣ್ಣುಮಗುವಿಗೆ ಜನ್ಮವನ್ನಿತ್ತಳು. ಮಿಂಚಿನಂತೆ ಬೆಳಗುತ್ತಿದ್ದ ಆ ಹೆಣ್ಣುಮಗುವು ಶುಕ್ಲಪಕ್ಷದ ಚಂದ್ರನಂತೆ ದಿನ-ದಿನಕ್ಕೂ ವೃದ್ಧಿಹೊಂದುತ್ತಾ ಸೊಬಗಿನಿಂದ ಬೆಳೆಯತೊಡಗಿತು.

ಹೆಣ್ಣುಮಗುವು ಜನಿಸಿದೊಡನೆಯೇ ವಿದರ್ಭರಾಜನು ಶಿಶುವಿಗೆ ಜಾತಕರ್ಮ-ನಾಮಕರಣಾದಿಗಳನ್ನು ಮಾಡುವ ಸಲುವಾಗಿ ಬ್ರಾಹ್ಮಣರಿಗೆ ಹೇಳಿಕಳುಹಿಸಿದನು. ಬ್ರಾಹ್ಮಣರು ಅರಮನೆಗೆ ಆಗಮಿಸಿ ಆ ಹೆಣ್ಣುಮಗುವಿನ ಸೌಂದರ್ಯವನ್ನು ನೋಡಿ ಆಶ್ಚರ್ಯಭರಿತರಾಗಿ ಶಿಶುವಿಗೆ 'ಲೋಪಾ ಮುದ್ರಾ' ಎಂದು ನಾಮಕರಣಮಾಡಿದರು.

**(ಮುದ್ರಾಣಾಂ ತತ್ತನ್ಮೃಗಾದಿಜಾತಿಗತಾನಾಂ ಅಸಾಧಾರಣಾನಾಂ ಚಿಹ್ನಾನಾಂ ಲೋಪ ಇವ ಲೋಪಃ ತಿರಸ್ಕಾರೋ ಯಯಾ ಸಾ = ಲೋಪಾಮುದ್ರಾ**–ಒಂದೊಂದು ಜಾತಿಯ ಮೃಗಗಳಲ್ಲಿಯೂ ವಿಶೇಷವಾಗಿ ರುವ ಅಸಾಧಾರಣಚಿಹ್ನೆಗಳನ್ನು (ಹಿಂದೆ ಹೇಳಿದಂತೆ ಜಿಂಕೆಯ ಅಸಾಧಾರಣ ಚಿಹ್ನೆ ಕಣ್ಣು, ಸಿಂಹದ ಅಸಾಧಾರಣಚಿಹ್ನೆ ತೆಳುವಾದ ಕಟಿಪ್ರದೇಶ, ಕೋಗಿಲೆಯ ಅಸಾಧಾರಣಚಿಹ್ನೆ ಮಧುರಗಾನ–ಇತ್ಯಾದಿ) ತನ್ನ ರೂಪಾ ತಿಶಯದಿಂದ ಯಾವಳು ತಿರಸ್ಕರಿಸುತ್ತಾಳೆಯೋ ಅವಳು ಲೋಪಾಮುದ್ರೆ.)

ಅನುಪಮಸೌಂದರ್ಯವತಿಯಾದ ಲೋಪಾಮುದ್ರೆಯು ಸರೋವರ ದಲ್ಲಿರುವ ನೈದಿಲೆಯ ಬಳ್ಳಿಯಂತೆಯೂ ಯಜ್ಞೇಶ್ವರನ ಜ್ವಾಲೆಯಂತೆಯೂ ದಿನ-ದಿನಕ್ಕೂ ಪ್ರವರ್ಧಮಾನಳಾಗುತ್ತಾ ಪ್ರೌಢೆಯಾದಳು. ಲೋಪಾ ಮುದ್ರೆಯು ಪ್ರೌಢೆಯಾಗಲಾಗಿ ರಾಜಕುಮಾರಿಯಾದ ಆಕೆಯನ್ನು ಸರ್ವಾ ಲಂಕಾರಯುಕ್ತರಾದ ನೂರಾರು ಮಂದಿ ಕನ್ಯೆಯರೂ ನೂರಾರು ಮಂದಿ

ದಾಸಿಯರೂ ಅನವರತವಾಗಿ ಉಪಚರಿಸುತ್ತಿದ್ದರು. ಆ ಎಲ್ಲ ಸುಂದರ ಯುವತಿಯರ ಮಧ್ಯದಲ್ಲಿ ಲೋಪಾಮುದ್ರೆಯು–ಅಸಂಖ್ಯಾತ ತಾರೆಗಳಿಂದ ಸುತ್ತುವರಿಯಲ್ಪಟ್ಟ ಪ್ರಕಾಶಮಾನವಾದ ರೋಹಿಣೀನಕ್ಷತ್ರದಂತೆ–ಪ್ರಕಾಶಿಸು ತ್ತಿದ್ದಳು. ಲೋಪಾಮುದ್ರೆಯು ಅನುಪಮಸೌಂದರ್ಯವತಿಯಾಗಿದ್ದು ದಲ್ಲದೇ–ಸೌಶೀಲ್ಯ-ಸೌಜನ್ಯ-ಸದಾಚಾರಾದಿ ಸದ್ಗುಣಯುಕ್ತಳಾಗಿಯೂ ಇದ್ದಳು. ಆದರೆ ಪ್ರೌಢೆಯಾಗಿದ್ದರೂ ಯಾವ ರಾಜಕುಮಾರನೂ ಅವಳನ್ನು ಮದುವೆಯಾಗಲು ಮುಂದೆ ಬರಲಿಲ್ಲ. ಅಂತಹ ಅನುಪಮಸೌಂದರ್ಯ ವತಿಯಾದ, ಸದಾಚಾರಸಂಪನ್ನೆಯಾದ ರಾಜಕುಮಾರಿಯನ್ನು ತಾವು ಮದುವೆಯಾಗಲು ಅನರ್ಹರೆಂದೂ–ತಾವೇನಾದರೂ ಅವಳನ್ನು ವಿವಾಹ ವಾಗಲು ಇಚ್ಛಿಸಿ ರಾಜನನ್ನು ಕೇಳಲು ಹೋದರೆ ರಾಜನು ತಮ್ಮ ಮೇಲೆ ಕೋಪಿಸಿಕೊಳ್ಳಬಹುದೆಂಬುದೂ ಅವರೆಲ್ಲರ ಭಾವನೆಯಾಗಿದ್ದಿತು. ಆ ಭಾವನೆಯಿಂದಾಗಿ ಯಾವ ರಾಜಕುಮಾರನೂ ಅವಳ ಕೈಹಿಡಿಯಲು ಮುಂದೆ ಬರಲಿಲ್ಲ. ಸತ್ಯವ್ರತಳಾದ, ಅಪ್ಸರೆಯರ ಸೌಂದರ್ಯವನ್ನೂ ತಿರಸ್ಕರಿಸುವ ಸೌಂದರ್ಯಾತಿಶಯದಿಂದ ಕೂಡಿದ್ದ ರಾಜಕುಮಾರಿಯು ಸೌಜನ್ಯದಿಂದ ಕೂಡಿದ ತನ್ನ ನಡತೆಯಿಂದ ತನ್ನ ಬಂಧುಗಳನ್ನೂ ಮತ್ತು ತಂದೆ-ತಾಯಿಗಳನ್ನೂ ಸಂತೋಷಗೊಳಿಸುತ್ತಿದ್ದಳು. ರಾಜಕುಮಾರರು ಅವಳ ಪಾಣಿಗ್ರಹಣಮಾಡಿಕೊಳ್ಳಲು ಮುಂದೆ ಬಾರದಿದ್ದಾಗ ರಾಜನು ಅವಳ ವಿವಾಹದ ವಿಷಯವಾಗಿ ಆಲೋಚಿಸತೊಡಗಿದನು. 'ಈ ನನ್ನ ಮಗಳನ್ನು ಯಾರಿಗೆ ಕೊಟ್ಟು ಮದುವೆಮಾಡಲಿ?'–ಎಂಬುದೇ ಅವನ ಅನವರತವಾದ ಚಿಂತೆಯಾಗಿದ್ದಿತು.

೯೬ನೆಯ ಅಧ್ಯಾಯವು ಮುಗಿಯಿತು.

೯೭ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಲೋಪಾಮುದ್ರೆಯೊಡನೆ ಅಗಸ್ತ್ಯರ ವಿವಾಹ: ಪತ್ನಿಯ ಅಪೇಕ್ಷೆಯಂತೆ ಧನಸಂಗ್ರಹಕ್ಕೆ ಅಗಸ್ತ್ಯರ ಪ್ರಸ್ಥಾನ

ಧರ್ಮಜ! ಅಗಸ್ತ್ಯರು ತಮ್ಮ ಅಂತರ್ದೃಷ್ಟಿಯಿಂದ ಲೋಪಾ ಮುದ್ರೆಯು ಪ್ರೌಢೆಯಾಗಿರುವಳೆಂಬುದನ್ನೂ–ಗೃಹಸ್ಥಾಶ್ರಮೋಚಿತವಾದ ಕಾರ್ಯಗಳನ್ನು ನಿರ್ವಹಿಸಲು ಸಮರ್ಥಳಾಗಿರುವಳೆಂಬುದನ್ನೂ ತಿಳಿದು

ಒಡನೆಯೇ ವಿದರ್ಭರಾಜನ ಅರಮನೆಗೆ ಬಂದು ಅವನಿಂದ ಸತ್ಕಾರಪಡೆದು ಆಸನದಲ್ಲಿ ಉಪವಿಷ್ಟರಾಗಿ ರಾಜನನ್ನು ಕುರಿತು ಹೇಳಿದರು : "ಮಹಾರಾಜ! ವಂಶಪ್ರದೀಪನಾದ ಪುತ್ರನನ್ನು ಪಡೆಯುವ ಅಭಿಲಾಷೆಯಿಂದಾಗಿ ನಾನು ವಿವಾಹವಾಗಲು ನಿಶ್ಚಯಿಸಿರುತ್ತೇನೆ. ನಿನ್ನ ಮಗಳಾದ ಲೋಪಾಮುದ್ರೆಯನ್ನು ವರಿಸುವ ಸಲುವಾಗಿ ಬಂದಿರುತ್ತೇನೆ. ನೀನವಳನ್ನು ನನಗೆ ಕೊಟ್ಟು ವಿವಾಹಮಾಡು."

ಮಹರ್ಷಿಯ ಮಾತುಗಳನ್ನು ಕೇಳಿದೊಡನೆಯೇ ರಾಜನು ಬುದ್ಧಿಗೆಟ್ಟವನಾದನು. ಏನು ಮಾಡಬೇಕೆಂಬುದೇ ತಿಳಿಯಲಿಲ್ಲ. ರಾಜನು ವನವಾಸಿಯೊಬ್ಬನ ಅನುಗ್ರಹಪಡೆದು ಅಂತಹ ಅನುಪಮಸುಂದರಿಯನ್ನು ಮಗಳನ್ನಾಗಿ ಪಡೆದನಾದರೂ–ವನವಾಸಿಗೇ ತನ್ನ ಮಗಳನ್ನು ಕೊಟ್ಟು ಮದುವೆಮಾಡುವ ಇಚ್ಛೆಯುಳ್ಳವನಾಗಿರಲಿಲ್ಲ. ತನ್ನ ಮಗಳು ತಪಸ್ವಿನಿಯಾಗಿ ಕಾಡಿನಲ್ಲಿ ಸಿಕ್ಕುವ ಗೆಡ್ಡೆ-ಗೆಣಸುಗಳನ್ನು ತಿಂದು ಜೀವಿಸುವುದು ರಾಜನಿಗೆ ಸಹ್ಯವಾಗಲಿಲ್ಲ. ಯದ್ಯಪಿ ತನ್ನ ಮಗಳನ್ನು ಚೀರವಸ್ತ್ರ-ಜಟಾಧಾರಿಗಳಾದ ಅಗಸ್ತ್ಯರಿಗೆ ಕೊಡಲು ಇಚ್ಛೆಯಿಲ್ಲದಿದ್ದರೂ–ಅಘಟಿತಘಟನಾಸಾಮರ್ಥ್ಯವುಳ್ಳ ಅವರ ಪ್ರಾರ್ಥನೆಯನ್ನು ನಿರಾಕರಿಸುವ ಧೈರ್ಯವೂ ರಾಜನಿಗಿರಲಿಲ್ಲ. ಮಹರ್ಷಿಗಳಿಗೆ ಒಡನೆಯೇ ಯಾವುದೊಂದು ಉತ್ತರವನ್ನೂ ಕೊಡದೇ ಅಂತಃಪುರಕ್ಕೆ ಹೋಗಿ ತನ್ನ ಪತ್ನಿಯೊಡನೆ ಹೇಳಿದನು :

"ಪ್ರಿಯಳೇ! ಮಹಾತ್ಮರಾದ ಅಗಸ್ತ್ಯರು ನಮ್ಮ ಪ್ರಿಯಸುತೆಯಾದ ಲೋಪಾಮುದ್ರೆಯನ್ನು ಪಾಣಿಗ್ರಹಣಮಾಡಿಕೊಳ್ಳಲು ಅಪೇಕ್ಷಿಸಿ ಬಂದಿರುವರು. ಅವರು ಮಹಾತೇಜಸ್ವಿಗಳು ಮತ್ತು ಅತಿಶಯವಾದ ತಪಃಪ್ರಭಾವವುಳ್ಳವರು. ನಾವೇನಾದರೂ ಅವರಿಗೆ ನಮ್ಮ ಮಗಳನ್ನು ಮದುವೆಮಾಡಿ ಕೊಡಲು ನಿರಾಕರಿಸಿದರೆ–ಕುಪಿತರಾದ ಅವರು ಶಾಪವನ್ನಿತ್ತು ನಮ್ಮನ್ನೇ ಧ್ವಂಸಮಾಡಿಬಿಡಬಹುದು. ಮಹಾರಾಣಿ! ಈ ಸಂದರ್ಭದಲ್ಲಿ ನಿನ್ನ ಅಭಿಪ್ರಾಯವೇನೆಂಬುದನ್ನು ಹೇಳು."

ರಾಜನ ಚಿಂತಾಜನಕವಾದ ಮಾತುಗಳನ್ನು ಕೇಳಿ ಮಹಾರಾಣಿಗೂ ಏನೊಂದು ಉತ್ತರಕೊಡಲೂ ಸಾಧ್ಯವಾಗಲಿಲ್ಲ. ಮೌನವಾಗಿದ್ದುಬಿಟ್ಟಳು.

ತಂದೆ-ತಾಯಿಗಳಿಬ್ಬರೂ ದುಃಖಿತರಾಗಿರುವುದನ್ನು ಕಂಡು ಅವರ ದುಃಖದ ಕಾರಣವನ್ನೂ ತಿಳಿದವಳಾಗಿ ಲೋಪಾಮುದ್ರೆಯು ಅವರೊಡನೆ ಸಮಯೋಚಿತವಾದ ಈ ಮಾತುಗಳನ್ನಾಡಿದಳು :

**ನ ಮತ್ಕೃತೇ ಮಹೀಪಾಲ ಪೀಡಾಮಭ್ಯೇತುಮರ್ಹಸಿ ।**
**ಪ್ರಯಚ್ಛ ಮಾಮಗಸ್ತ್ಯಾಯ ತ್ರಾಹ್ಯಾತ್ಮಾನಂ ಮಯಾ ಪಿತಃ ॥೯॥**

"ಮಹಾರಾಜ! ನೀವು ನನಗಾಗಿ ತೊಂದರೆಗೆ ಒಳಗಾಗಬೇಕಾಗಿಲ್ಲ. ನನ್ನನ್ನೀಗಲೇ ಮಹರ್ಷಿಗಳಾದ ಅಗಸ್ತ್ಯರಿಗೆ ಮದುವೆಮಾಡಿಕೊಟ್ಟು ಆತ್ಮರಕ್ಷಣೆಯನ್ನು ಮಾಡಿಕೊಳ್ಳುವುದೇ ನಿಮಗೆ ಉಚಿತವಾಗಿದೆ."

ಮಗಳ ಮಾತುಗಳನ್ನು ಕೇಳಿ ರಾಜನು ಅನ್ಯಮಾರ್ಗವಿಲ್ಲದೇ ಮಗಳಾದ ಲೋಪಾಮುದ್ರೆಯನ್ನು ಮಹರ್ಷಿಗಳಾದ ಅಗಸ್ತ್ಯರಿಗೆ ಕೊಟ್ಟು ವಿಧ್ಯುಕ್ತವಾಗಿ ವಿವಾಹಮಾಡಿಕೊಟ್ಟನು.

ಲೋಪಾಮುದ್ರೆಯನ್ನು ಮದುವೆಯಾದೊಡನೆಯೇ ಅಗಸ್ತ್ಯರು ತಮ್ಮ ಪತ್ನಿಯನ್ನು ಕುರಿತು ಹೀಗೆ ಆಜ್ಞಾಪಿಸಿದರು :

"ಲೋಪಾಮುದ್ರೇ! ಅರಣ್ಯವಾಸಿಗಳಾದ ನಮಗೆ ಬಹುಮೌಲ್ಯ ಗಳಾದ ಈ ದಿವ್ಯಾಂಬರಗಳಿಂದಾಗಲೀ, ದಿವ್ಯಾಭರಣಗಳಿಂದಾಗಲೀ ಪ್ರಯೋಜನವಿಲ್ಲ. ಆದುದರಿಂದ ನೀನೀಗಲೇ ಈ ಆಭರಣಗಳನ್ನೂ ದಿವ್ಯಾಂಬರಗಳನ್ನೂ ಇಲ್ಲಿಯೇ ಪರಿತ್ಯಜಿಸಿ ಅರಣ್ಯವಾಸಕ್ಕೆ ಉಚಿತವಾದ ನಾರುಮಡಿಯನ್ನು ಧರಿಸುವವಳಾಗು."

ಪತಿಯ ಮಾತನ್ನು ಕೇಳಿದೊಡನೆಯೇ ಸಾಧ್ವಿಯಾದ, ವಿಶಾಲಾಕ್ಷಿಯಾದ ಲೋಪಾಮುದ್ರೆಯು ಕ್ಷಣಮಾತ್ರದಲ್ಲಿ ಅಮೂಲ್ಯವಾದ ವಸ್ತ್ರಾಭರಣಗಳೆಲ್ಲವನ್ನೂ ಪರಿತ್ಯಜಿಸಿ, ಚೀರ-ವಲ್ಕಲಗಳನ್ನು ಧರಿಸಿ ಪತಿಯ ವ್ರತಾನುಷ್ಠಾನಗಳಲ್ಲಿ, ತಪಶ್ಚರ್ಯೆಯಲ್ಲಿ ಮತ್ತು ಉಪವಾಸಾದಿಗಳಲ್ಲಿ ತಾನೂ ಸಹಭಾಗಿಯಾಗತೊಡಗಿದಳು.

ಅಗಸ್ತ್ಯಮಹರ್ಷಿಗಳು ವಿದರ್ಭರಾಜ್ಯದಿಂದ ಲೋಪಾಮುದ್ರೆಯೊಡನೆ ಹೊರಟು ಗಂಗಾದ್ವಾರವನ್ನು ಸೇರಿದರು. ಅನುಕೂಲಳಾಗಿದ್ದ ತಮ್ಮ ಪತ್ನಿಯ ಸಹಕಾರದಿಂದ ಅಗಸ್ತ್ಯರು ಗಂಗಾದ್ವಾರದಲ್ಲಿ ಉಗ್ರವಾದ ತಪಸ್ಸನ್ನು

ಮಾಡಿದರು. ಲೋಪಾಮುದ್ರೆಯು ಅಗಸ್ತ್ಯರ ವಿಷಯದಲ್ಲಿ ಪರಮಪ್ರೀತಳಾಗಿ ಮತ್ತು ತನ್ನ ಪತಿಯು ಮಾಡುತ್ತಿರುವ ಉಗ್ರತಪಸ್ಸಿನಿಂದ ಪತಿಯ ವಿಷಯದಲ್ಲಿ ವಿಶೇಷವಾದ ಬಹುಮಾನವನ್ನೂ ಹೊಂದಿದವಳಾಗಿ ಅವರನ್ನು ಎಡೆಬಿಡದೇ ಉಪಚರಿಸುತ್ತಿದ್ದಳು. ಭಗವಾನ್ ಅಗಸ್ತ್ಯರೂ ತಮ್ಮ ಪತ್ನಿಯ ವಿಷಯದಲ್ಲಿ ಹೆಚ್ಚಿನ ಅನುರಾಗವನ್ನು ಹೊಂದಿದರು.



ಅಗಸ್ತ್ಯ-ಲೋಪಾಮುದ್ರೆಯರ ಆ ಪ್ರೇಮಮಯವಾದ ತಪೋಜೀವನವು ಬಹಳ ದಿನಗಳವರೆಗೆ ಹೀಗೆಯೇ ಕಳೆಯಿತು. ರಾಜಕುಮಾರಿಯಾದ ಲೋಪಾಮುದ್ರೆಯೂ ತಪಸ್ವಿನಿಯೇ ಆಗಿಬಿಟ್ಟಳು. ಹೀಗಿರಲೊಂದು ದಿನ ತಪಸ್ಸಿನ ಕಾಂತಿಯಿಂದ ಕೂಡಿದ್ದ , ಋತುಸ್ನಾತೆಯಾದ ಲೋಪಾಮುದ್ರೆಯನ್ನು

ಮಹರ್ಷಿಗಳಾದ ಅಗಸ್ತ್ಯರು ಸಾಭಿಪ್ರಾಯವಾಗಿ ನೋಡಿದರು. ಲೋಪಾಮುದ್ರೆಯು ತನಗಾಗಿ ಹಗಲಿರುಳೂ ಮಾಡುತ್ತಿರುವ ಸೇವೆ, ಅಂತರಂಗದಲ್ಲಿಯೂ–ಬಹಿರಂಗದಲ್ಲಿಯೂ ಅವಳು ಪರಿಶುದ್ಧಳಾಗಿರುವುದು, ಅವಳ ಜಿತೇಂದ್ರಿಯತೆ ಮತ್ತು ಅವಳ ಸೌಂದರ್ಯ–ಇವುಗಳಿಂದ ಪರಮಪ್ರೀತರಾದ ಮಹರ್ಷಿಗಳು ಲೋಪಾಮುದ್ರೆಯನ್ನು ಸುರತಕ್ರಿಯೆಗೆ ಕರೆದರು. ಲಜ್ಜಾನ್ವಿತೆಯಾದ ಲೋಪಾಮುದ್ರೆಯು ಪತಿಯ ಮುಂದೆ ಕೈಜೋಡಿಸಿ ತಲೆ ತಗ್ಗಿಸಿ ನಿಂತು ಪತಿಯನ್ನು ಕುರಿತು ಪ್ರಣಯದಿಂದ ಕೂಡಿದ ಈ ಮಾತುಗಳನ್ನು ಹೇಳಿದಳು :

"ಪತಿದೇವನೇ! ಮಕ್ಕಳನ್ನು ಪಡೆಯುವ ಸಲುವಾಗಿ ಪುರುಷರು ವಿವಾಹವಾಗುತ್ತಾರೆಂಬುದರಲ್ಲಿ ಸಂಶಯವಿಲ್ಲ. ಆದರೆ ಕೇವಲ ಸಂತಾನಾರ್ಥವಾದ ಸಮಾಗಮಕ್ಕಿಂತಲೂ ಪ್ರೇಮಪೂರ್ವಕವಾದ ಸಮಾಗಮದಿಂದ ನಾನು ಸಂತಾನವನ್ನು ಅಭಿಲಾಷಿಸುತ್ತೇನೆ. ನಾನು ನಿಮ್ಮಲ್ಲಿ ವ್ಯಾಮೋಹಿತಳಾಗಿರುವಂತೆ ನೀವೂ ನನ್ನಲ್ಲಿ ವ್ಯಾಮೋಹಿತರಾಗಲು ಪ್ರಾರ್ಥಿಸುತ್ತೇನೆ. ನಮ್ಮ ತಂದೆಯ ಅರಮನೆಯಲ್ಲಿರುವ ಹಂಸತೂಲಿಕಾತಲ್ಪದಂತಹ ಮಂಚದ ಮೇಲೆ ನಿಮ್ಮೊಡನೆ ರಮಿಸಲು ಇಚ್ಛಿಸುತ್ತೇನೆ. ಅದೂ ಅಲ್ಲದೇ ನೀವು ನಿಮ್ಮ ಶರೀರವನ್ನು ದಿವ್ಯಾಂಬರಗಳಿಂದಲೂ, ದಿವ್ಯಮಾಲೆಗಳಿಂದಲೂ, ದಿವ್ಯಾಭರಣಗಳಿಂದಲೂ ಅಲಂಕರಿಸಿಕೊಳ್ಳಬೇಕು. ದಿವ್ಯಗಂಧಾದಿಗಳಿಂದ ನಿಮ್ಮ ಶರೀರವನ್ನು ಲೇಪನಮಾಡಿಕೊಳ್ಳಬೇಕು. ನಾನೂ ನನ್ನ ಮನೋಭಿಲಷಿತಗಳಾದ ದಿವ್ಯಾಭರಣಗಳಿಂದಲೂ, ದಿವ್ಯಾಂಬರಗಳಿಂದಲೂ ನನ್ನ ಶರೀರ ವನ್ನು ಸಿಂಗರಿಸಿಕೊಳ್ಳುತ್ತೇನೆ. ಚೀರ-ಕಾಷಾಯವಸ್ತ್ರಗಳನ್ನು ಧರಿಸಿದವಳಾಗಿ ನಾನು ನಿಮ್ಮೊಡನೆ ರಮಿಸಲು ಅಪೇಕ್ಷಿಸುವುದಿಲ್ಲ.

**ನೈವಾಪವಿತ್ರೋ ವಿಪ್ರರ್ಷೇ ಭೂಷಣೋऽಯಂ ಕಥಂಚನ ॥೧೯॥**

ಮಹರ್ಷೇ! ರತಿಕಾಲದಲ್ಲಿ ದಿವ್ಯಾಂಬರಗಳನ್ನೂ, ದಿವ್ಯಾಭರಣಗಳನ್ನೂ ಧರಿಸುವುದು ಯಾವ ರೀತಿಯಲ್ಲಿಯೂ ಅಪವಿತ್ರವೆನಿಸುವುದಿಲ್ಲ. ಆ ಸಮಯದಲ್ಲಿ ಅಲಂಕಾರವು ಒಂದು ಮುಖ್ಯವಾದ ಅಂಗವೆನಿಸುವುದು." (ತಪಶ್ಚರಣೆಗೇ ಉಚಿತವಾಗಿರುವ ಈ ಚೀರಾದಿ ಭೂಷಣಗಳು ಅಪವಿತ್ರವಾಗಬಾರದು–ಹೀಗೂ ಒಬ್ಬರು ಅರ್ಥಮಾಡಿದ್ದಾರೆ.)

ಪ್ರಿಯತಮೆಯಾದ ಲೋಪಾಮುದ್ರೆಯ ಮಾತುಗಳನ್ನು ಕೇಳಿ ಅಗಸ್ತ್ಯರು ನಸುನಗುತ್ತಾ ಹೇಳಿದರು : "ಕಲ್ಯಾಣಿ! ಸುಮಧ್ಯಮೇ! ಲೋಪಾಮುದ್ರೇ! ನೀನು ಹೇಳಿದಂತೆ ನನ್ನೀ ಶರೀರವನ್ನು ದಿವ್ಯಾಂಬರಗಳಿಂದಲೂ, ದಿವ್ಯಾಭರಣಗಳಿಂದಲೂ ಅಲಂಕರಿಸಿಕೊಳ್ಳಲು ನನ್ನಲ್ಲಿ ಅಥವಾ ನಿನ್ನಲ್ಲಿ ನಿನ್ನ ತಂದೆಯಲ್ಲಿರುವಂತೆ ಐಶ್ವರ್ಯವಿರುವುದೇ? ನೀನು ಹೇಳಿದುದೆಲ್ಲವೂ ದ್ರವ್ಯದಿಂದಲೇ ಲಭ್ಯವಾಗುವ ವಸ್ತುಗಳಾಗಿವೆ. ಅಂತಹವುಗಳನ್ನು ಕೇವಲ ತಪೋಧನನಾದ ನಾನು ಪಡೆಯಲು ಹೇಗೆತಾನೇ ಸಾಧ್ಯವಾದೀತು?"

**ಈಶೋಽಸಿ ತಪಸಾ ಸರ್ವಂ ಸಮಾಹರ್ತುಂ ತಪೋಧನ ।**
**ಕ್ಷಣೇನ ಜೀವಲೋಕೇ ಯದ್ವಸು ಕಿಂಚನ ವಿದ್ಯತೇ ॥೨೧॥**

"ಮಹಾನುಭಾವರೇ! ನೀವು ತಪೋಧನರು. ತಪಃಪ್ರಭಾವದಿಂದ ಪ್ರಪಂಚದ ಈಶತ್ವವನ್ನು ಪಡೆದಿರುವಿರಿ. ನೀವು ಮನಸ್ಸುಮಾಡಿದರೆ ನಿಮಿಷಾರ್ಧದಲ್ಲಿ ಈ ಪ್ರಪಂಚದಲ್ಲಿರುವ ಸಕಲವಸ್ತುಗಳನ್ನೂ ನಿಮ್ಮ ತಪೋಬಲದಿಂದಲೇ ಸಿದ್ಧಪಡಿಸಲು ಸಮರ್ಥರಾಗಿರುವಿರಿ. ಈ ವಿಷಯ ವನ್ನು ನಾನು ತಿಳಿಯದವಳಲ್ಲ, ಪತಿದೇವ!"

"ಪ್ರಿಯೇ! ನೀನು ಹೇಳುವುದೂ ನಿಜ. ನನಗಿಚ್ಛೆಯಾದ ವಸ್ತುಗಳನ್ನು ತಪೋಬಲದಿಂದಲೇ ನಾನು ನಿಮಿಷಾರ್ಧದಲ್ಲಿ ಸೃಷ್ಟಿಸಬಲ್ಲೆನು. ಆದರೆ ನಾನು ಬಹುಕಷ್ಟದಿಂದ ಆರ್ಜಿಸಿರುವ ತಪಃಫಲವು ಇದರಿಂದ ವ್ಯಯವಾಗಿ ಹೋಗುವುದಲ್ಲವೇ?

**ಯಥಾ ತು ಮೇ ನ ನಶ್ಯೇತ ತಪಸ್ತನ್ಮಾಂ ಪ್ರಚೋದಯ ॥೨೨॥**

ಯಾವ ಕಾರ್ಯಮಾಡುವುದರಿಂದ ನನ್ನ ತಪಃಫಲವು ನಾಶವಾಗುವು ದಿಲ್ಲವೋ–ಅಂತಹ ಕಾರ್ಯವನ್ನು ನೀನು ಹೇಳಿದೆಯಾದರೆ ನಾನು ಖಂಡಿತವಾಗಿಯೂ ಮಾಡುವೆನು."

**ಅಲ್ಪಾವಶಿಷ್ಟಃ ಕಾಲೋಽಯಮೃತೋರ್ಮಮ ತಪೋಧನ ।**
**ನ ಚಾನ್ಯಥಾಹಮಿಚ್ಛಾಮಿ ತ್ವಾಮುಪೈತುಂ ಕಥಂಚನ ॥೨೩॥**
**ನ ಚಾಪಿ ಧರ್ಮಮಿಚ್ಛಾಮಿ ವಿಲೋಪ್ತುಂ ತೇ ಕಥಂಚನ ।**
**ಏವಂ ತು ಮೇ ಯಥಾಕಾಮಂ ಸಮ್ಪಾದಯಿತುಮರ್ಹಸಿ ॥೨೪॥**

"ಪತಿದೇವ! ನನ್ನ ಋತುಕಾಲದ ಸ್ವಲ್ಪದಿನಗಳು ಮಾತ್ರವೇ ಉಳಿದಿರುವುವು. ನಾನು ಹಿಂದೆಯೇ ತಿಳಿಸಿದಂತೆ ವೈಭವೋಪೇತವಾದ ಸನ್ನಿವೇಶದಲ್ಲಿ ಮಾತ್ರವೇ ತಮ್ಮೊಡನೆ ಸಮಾಗಮವನ್ನು ಇಚ್ಛಿಸುತ್ತೇನೆ. ವೈಭವೋಪೇತವಾದ ಸನ್ನಿವೇಶದ ಸಿದ್ಧತೆಯು ತಮ್ಮ ತಪಃಫಲದ ವ್ಯಯದಿಂದಲೇ ಆಗಬೇಕೆಂದೂ ನಾನು ಹೇಳಲಾರೆನು. ಯಾವ ರೀತಿಯಲ್ಲಿ ತಮ್ಮ ತಪಸ್ಸೂ



ಮತ್ತು ಧರ್ಮವೂ ಲೋಪವಾಗುವುದಿಲ್ಲವೋ–ಆ ರೀತಿಯಲ್ಲಿ ನನ್ನ ಕಾಮನೆಗಳನ್ನು ಪೂರೈಸಿಕೊಡುವ ಕೃಪೆಮಾಡಿರಿ."

"ಕಲ್ಯಾಣಿ! ಈ ನಿನ್ನ ಅಭಿಲಾಷೆಯು ನಿನ್ನ ದೃಢನಿಶ್ಚಯವೇ ಆಗಿರುವುದಾದರೆ ನಾನು ಕಾಮೋಪಭೋಗಗಳ ಪ್ರಾಪ್ತಿಗಾಗಿ ಐಶ್ವರ್ಯವನ್ನು

ಸಂಪಾದಿಸಿ ತರಲು ಈಗಲೇ ಹೊರಡುವೆನು. ನಾನು ಬರುವವರೆಗೂ ನೀನಿಲ್ಲಿಯೇ ವ್ರತಾನುಷ್ಠಾನಗಳಿಂದ ಕಾಲಯಾಪನೆ ಮಾಡುತ್ತಿರು."

೯೭ನೆಯ ಅಧ್ಯಾಯವು ಮುಗಿಯಿತು.

೯೮ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಧನಪ್ರಾಪ್ತಿಗಾಗಿ ಅಗಸ್ತ್ಯರು ಶ್ರುತರ್ವಾಣ, ಬ್ರಧ್ನಶ್ವ ಮತ್ತು ತ್ರಸದಸ್ಯುಗಳ ಬಳಿಗೆ ತೆರಳಿದುದು

ಲೋಮಶರು ಅಗಸ್ತ್ಯಮುನಿಗಳ ಕಥೆಯನ್ನು ಮುಂದುವರಿಸುತ್ತಾ ಧರ್ಮರಾಜನಿಗೆ ಹೇಳತೊಡಗಿದರು :

"ಧರ್ಮಜ! ಐಶ್ವರ್ಯದ ಸಂಪಾದನೆಯ ಇಚ್ಛೆಯಿಂದ ಆಶ್ರಮವನ್ನು ಬಿಟ್ಟು ಹೊರಟ ಅಗಸ್ತ್ಯರು, ಮಹಾಧನಿಕನಾದ ರಾಜನೆಂದು ಸುಪ್ರಸಿದ್ಧನಾಗಿದ್ದ ಶ್ರುತರ್ವಾಣರಾಜನ ರಾಜ್ಯಕ್ಕೆ ತೆರಳಿದರು. ಕುಂಭಸಂಭವರಾದ ಅಗಸ್ತ್ಯರು ತನ್ನ ಪಟ್ಟಣಕ್ಕೆ ಬರುತ್ತಿರುವರೆಂದು ಚಾರರ ಮುಖೇನ ತಿಳಿದ ಶ್ರುತರ್ವಾಣರಾಜನು ಅಮಾತ್ಯರಿಂದೊಡಗೂಡಿ ತನ್ನ ರಾಜಧಾನಿಯ ಗಡಿಯ ಬಳಿಗೆ ಹೋಗಿ, ಅಲ್ಲಿಗೆ ಆಗಮಿಸಿದ ಮಹರ್ಷಿಗಳಾದ ಅಗಸ್ತ್ಯರನ್ನು–ಬ್ರಹ್ಮರ್ಷಿಗಳಿಗೆ ಸಲ್ಲಬೇಕಾದ ಸಕಲಮರ್ಯಾದೆಗಳೊಡನೆ ಸ್ವಾಗತಿಸಿ ತನ್ನ ರಾಜಧಾನಿಗೆ ಕರೆತಂದನು. ಮಹರ್ಷಿಗಳನ್ನು ಅರಮನೆಗೆ ಗೌರವದಿಂದಲೂ ಮತ್ತು ಆದರದಿಂದಲೂ ಕರೆತಂದು ಅರ್ಘ್ಯ-ಪಾದ್ಯಾದಿಗಳಿಂದ ಸತ್ಕರಿಸಿ ಸುಖಾಸನದಲ್ಲಿ ಕುಳ್ಳಿರಿಸಿ, ಬದ್ಧಾಂಜಲಿಯಾಗಿ ನಿಂತು ರಾಜನು ಮಹರ್ಷಿಗಳ ಆಗಮನದ ಕಾರಣವನ್ನು ವಿನೀತನಾಗಿ ಕೇಳಿದನು. ಅದಕ್ಕುತ್ತರವಾಗಿ ಅಗಸ್ತ್ಯರು ಹೇಳಿದರು : "ಮಹಾರಾಜ! ನಾನು ಧನಾಕಾಂಕ್ಷಿಯಾಗಿ ನಿನ್ನಲ್ಲಿಗೆ ಬಂದಿರುತ್ತೇನೆ. ನಿನಗೆ ಕೊಡಲು ಸಾಧ್ಯವಿರುವಷ್ಟು ಐಶ್ವರ್ಯವನ್ನು ನನಗೆ ಕೊಡುವವನಾಗು.

**ಯಥಾಶಕ್ತ್ಯವಿಹಿಂಸ್ಯಾನ್ಯಾನ್ಸಂವಿಭಾಗಂ ಪ್ರಯಚ್ಛ ಮೇ ॥೪॥**

ಆದರೆ ನನಗೆ ಐಶ್ವರ್ಯವನ್ನು ಕೊಡುವುದರಿಂದ ನೀನು ಹೆಚ್ಚಾಗಿ ತೆರಿಗೆಗಳಿಂದಾಗಲೀ, ರಾಜ್ಯಾಭಿವೃದ್ಧಿಯ ಯೋಜನೆಗಳನ್ನು ತಡೆಹಿಡಿಯು

ವುದರಿಂದಾಗಲೀ–ಪ್ರಜೆಗಳನ್ನು ಹಿಂಸೆಮಾಡಬಾರದು. (ಅರ್ಥಾತ್ ನಿನ್ನ ವರಮಾನದಲ್ಲಿ ವೆಚ್ಚಕ್ಕಿಂತಲೂ ಹೆಚ್ಚಾಗಿ ಆದಾಯವು ಉಳಿದಿರುವುದಾದರೆ ಮಾತ್ರ ಆ ಉಳಿದಿರುವ ಹಣವನ್ನು ನನಗೆ ಕೊಡುವವನಾಗು.)"

ಅಗಸ್ತ್ಯರ ಮಾತನ್ನು ಕೇಳಿ ರಾಜನು ಒಡನೆಯೇ ಅಗಸ್ತ್ಯರಿಗೆ ತನ್ನ ದೇಶದ ಆಯ-ವ್ಯಯಗಳ ಲೆಕ್ಕವನ್ನು ಒದಗಿಸಿಕೊಟ್ಟು ವಿನೀತನಾಗಿ ನಿಂತು ಹೇಳಿದನು–"ಮಹರ್ಷಿಗಳೇ! ಇದು ನನ್ನ ದೇಶದ ಆಯ-ವ್ಯಯಗಳ ಲೆಕ್ಕ ವಾಗಿದೆ. ಇದನ್ನು ತಾವು ಪರಿಶೀಲಿಸಿ ಎಷ್ಟು ಧನವನ್ನು ಬೇಕಾದರೂ ತೆಗೆದು ಕೊಳ್ಳಬಹುದು."

ಅಗಸ್ತ್ಯರು ರಾಜನ ಆದಾಯ ಮತ್ತು ವೆಚ್ಚಗಳನ್ನು ಕೂಲಂಕಷವಾಗಿ ಪರಿಶೀಲಿಸಿ ರಾಜನ ಆಯ-ವ್ಯಯಗಳು ಸರಿಸಮವಾಗಿದ್ದುದನ್ನು ಕಂಡು ಹೀಗೆಂದು ಯೋಚಿಸಿದರು :

'ಈ ರಾಜನ ಆಯ-ವ್ಯಯಗಳು ಸರಿಸಮವಾಗಿವೆ. ಹೀಗಿರುವಾಗ ನಾನೇನಾದರೂ ಇವನ ಆದಾಯದಲ್ಲಿ ಒಂದಂಶವನ್ನು ಪಡೆದೆನಾದರೆ–ಆ ಅಂಶವನ್ನು ಸರಿದೂಗಿಸಲು ರಾಜನು ಪ್ರಜೆಗಳನ್ನು (ಹೆಚ್ಚು ತೆರಿಗೆಯನ್ನು ಹೇರುವುದರ ಮೂಲಕ) ಪೀಡಿಸಲೇಬೇಕಾಗುವುದು. ಆದುದರಿಂದ ಇವನ ಬೊಕ್ಕಸದ ಹಣವನ್ನು ತೆಗೆದುಕೊಳ್ಳುವುದು ಸಾಧುವಲ್ಲ.'

ಅಗಸ್ತ್ಯರು ಹೀಗೆ ಯೋಚಿಸಿ ಶ್ರುತರ್ವಾಣನಿಗೆ ಆ ವಿಷಯವನ್ನು ಶ್ರುತಪಡಿಸಿ ರಾಜನನ್ನೂ ಕರೆದುಕೊಂಡು ಧನಿಕನೆಂದು ಪ್ರಸಿದ್ಧನಾಗಿದ್ದ ಬ್ರಧ್ನಶ್ವನೆಂಬ ರಾಜನ ಬಳಿಗೆ ತೆರಳಿದರು. ಅಗಸ್ತ್ಯರು ಶ್ರುತರ್ವಾಣ ರಾಜ ನೊಡನೆ ತನ್ನ ರಾಜಧಾನಿಗೆ ಬರುತ್ತಿರುವರೆಂಬ ವಾರ್ತೆಯನ್ನು ಬ್ರಧ್ನಶ್ವನು ಚಾರರಿಂದ ತಿಳಿದವನಾಗಿ ಅಮಾತ್ಯ-ಪುರೋಹಿತರೊಡನೆ ಅವರನ್ನು ರಾಜಧಾನಿಯ ಮಹಾದ್ವಾರದಲ್ಲಿ ಎದುರ್ಗೊಂಡು ಸಕಲಮರ್ಯಾದೆಗಳೊ ಡನೆ ಅರಮನೆಗೆ ಕರೆತಂದು ಅರ್ಘ್ಯ-ಪಾದ್ಯಾದಿಗಳಿಂದ ಯಥಾವಿಧಿಯಾಗಿ ಸತ್ಕರಿಸಿದನು.

ಆಗಮಿಸಿದ ಅತಿಥಿಗಳು ಸುಖಾಸೀನರಾದನಂತರ ಬ್ರಧ್ನಶ್ವನು ಅವರ ಅಪ್ಪಣೆಯನ್ನು ಪಡೆದು ಬಂದ ಕಾರಣವನ್ನು ಕೇಳಿದನು.

ಬ್ರಧ್ನಶ್ವನ ಪ್ರಶ್ನೆಗೆ ಉತ್ತರವಾಗಿ ಅಗಸ್ತ್ಯರು ಹಿಂದೆ ಶ್ರುತರ್ವಾಣನಿಗೆ ಹೇಳಿದ್ದಂತೆಯೇ ಹೇಳಿದರು.

"ಮಹಾರಾಜ! ನಾವು ನಿನ್ನ ಬಳಿಗೆ ಐಶ್ವರ್ಯವನ್ನು ಬೇಡಲು ಬಂದಿರುವೆವು. ಯಾವ ಪ್ರಾಣಿಗೂ ತೊಂದರೆಯಾಗದ ರೀತಿಯಲ್ಲಿ ಎಷ್ಟು ಧನವನ್ನು ನೀನು ನನಗೆ ಕೊಡಲು ಸಾಧ್ಯವೋ ಅಷ್ಟು ಧನವನ್ನು ಕೊಡುವವನಾಗು."

ಒಡನೆಯೇ ಬ್ರಧ್ನಶ್ವನು ತನ್ನ ದೇಶದ ಆಯ-ವ್ಯಯಗಳ ಪಟ್ಟಿಯನ್ನು ತರಿಸಿ ಅಗಸ್ತ್ಯರ ಕೈಯಲ್ಲಿಟ್ಟು ಹೇಳಿದನು : "ಮಹರ್ಷಿಗಳೇ! ಇದು ನನ್ನ ದೇಶದ ಆಯ-ವ್ಯಯಗಳ ಪಟ್ಟಿಯಾಗಿರುತ್ತದೆ. ಇದನ್ನು ತಾವು ಪರಿಶೀಲಿಸಿ ನನ್ನ ಬೊಕ್ಕಸದಿಂದ ಎಷ್ಟು ಧನವನ್ನಾದರೂ ಪಡೆಯಬಹುದು."

ಅಗಸ್ತ್ಯರು ಬ್ರಧ್ನಶ್ವನ ದೇಶದ ಆಯ-ವ್ಯಯಗಳನ್ನೂ ಕೂಲಂಕಷವಾಗಿ ಪರಿಶೀಲಿಸಿದರು. ಆ ದೇಶದ ಆಯ-ವ್ಯಯಗಳೂ ಸರಿಸಮವಾಗಿದ್ದುವು. ಖರ್ಚಿಗಿಂತಲೂ ಹೆಚ್ಚಿನ ಆದಾಯವಿರಲಿಲ್ಲ. ಆ ರಾಜನ ಬೊಕ್ಕಸದಿಂದಲೂ ಹಣವನ್ನು ತೆಗೆದುಕೊಳ್ಳುವುದು ನ್ಯಾಯಸಮ್ಮತವಾಗದೆಂದು ಅಗಸ್ತ್ಯರು ನಿರ್ಧರಿಸಿದರು.

ತಮ್ಮ ಅಭಿಪ್ರಾಯವನ್ನು ಬ್ರಧ್ನಶ್ವನಿಗೂ ಹೇಳಿ ಶ್ರುತರ್ವಾಣ-ಬ್ರಧ್ನಶ್ವ ರೊಡನೆ ಪುರುಕುತ್ಸನ ಮಗನಾದ ತ್ರಸದಸ್ಯುವಿನ ರಾಜ್ಯಕ್ಕೆ ಅಗಸ್ತ್ಯರು ಹೊರಟರು.

ಇಕ್ಷ್ವಾಕುವಂಶದ ರಾಜನಾದ ತ್ರಸದಸ್ಯುರಾಜನು ಅಗಸ್ತ್ಯರು ಇನ್ನಿಬ್ಬರು ರಾಜರೊಡನೆ ತನ್ನ ರಾಜಧಾನಿಯ ಕಡೆಗೆ ಬರುತ್ತಿರುವರೆಂದು ತಿಳಿದು, ಮಂತ್ರಿ-ಪುರೋಹಿತಪುರಸ್ಸರನಾಗಿ ಮಹರ್ಷಿಗಳನ್ನೂ ಮತ್ತು ರಾಜರನ್ನೂ ರಾಜಧಾನಿಯ ಗಡಿಯಲ್ಲಿಯೇ ಆದರಪೂರ್ವಕವಾಗಿ ಸ್ವಾಗತಿಸಿ, ಅರಮನೆಗೆ ಕರೆದೊಯ್ದು ಮೂವರನ್ನೂ ಯಥೋಚಿತವಾಗಿ ಅರ್ಘ್ಯ- ಪಾದ್ಯಾದಿಗಳಿಂದ ಸತ್ಕರಿಸಿ ಬದ್ಧಾಂಜಲಿಯಾಗಿ ನಿಂತು ಮಹರ್ಷಿಗಳ ಆಗಮನಕ್ಕೆ ಕಾರಣವನ್ನು ಕೇಳಿದನು.

ಅದಕ್ಕುತ್ತರವಾಗಿ ಅಗಸ್ತ್ಯರು ರಾಜನನ್ನು ಕುರಿತು ಹೇಳಿದರು :

"ಮಹಾರಾಜ! ನಾವು ಮೂವರೂ ಧನಾರ್ಥಿಗಳಾಗಿ ನಿನ್ನ ಬಳಿಗೆ ಬಂದಿರು ವೆವು. ಯಾವ ಪ್ರಾಣಿಗೂ ತೊಂದರೆಯಾಗದ ರೀತಿಯಲ್ಲಿ ವ್ಯಯಕ್ಕಿಂತಲೂ ಹೆಚ್ಚಿನ ಆದಾಯದ ಭಾಗವನ್ನು ನಮಗೆ ಕೊಡುವವನಾಗು."

ಮಹರ್ಷಿಗಳ ಮಾತನ್ನು ಕೇಳಿ ತ್ರಸದಸ್ಯುವೂ ತನ್ನ ದೇಶದ ಆಯ-ವ್ಯಯಗಳ ಲೆಕ್ಕವನ್ನು ಮಹರ್ಷಿಗಳಿಗೊಪ್ಪಿಸಿ ಹೇಳಿದನು : "ಮಹರ್ಷಿಗಳೇ! ಈ ಲೆಕ್ಕವನ್ನು ಪರಿಶೀಲಿಸಿ ತಾವು ಎಷ್ಟು ಧನವು ಬೇಕೆಂದು ಹೇಳುವಿರೋ ಅಷ್ಟು ಧನವನ್ನು ಕೊಡಲು ಸಿದ್ಧನಾಗಿರುವೆನು."

ಅಗಸ್ತ್ಯರು ತ್ರಸದಸ್ಯುವಿನ ರಾಷ್ಟ್ರದ ಆಯ-ವ್ಯಯಗಳನ್ನೂ ಕೂಲಂಕಷ ವಾಗಿ ಪರಿಶೀಲಿಸಿದರು. ಆದರೆ ಅವನ ಆಯ-ವ್ಯಯಗಳೂ ಸರಿಸಮವಾಗಿ ದ್ದುವು. ಹೆಚ್ಚುವರಿಯಾದ ಹಣವೇ ಇಲ್ಲದಿದ್ದ ಕಾರಣ ಅವನಿಂದಲೂ ಧನ ವನ್ನು ಅಪೇಕ್ಷಿಸುವುದು ಸರಿಯಲ್ಲವೆಂದು ಮಹರ್ಷಿಗಳು ನಿಶ್ಚಯಿಸಿದರು.

ಪ್ರತಿಯೊಬ್ಬ ರಾಜನ ಆಯ-ವ್ಯಯಗಳೂ ಹೀಗಿರುವಾಗ ತಾವು ಐಶ್ವರ್ಯವನ್ನು ಪಡೆಯುವುದೆಂತು? ಮಹರ್ಷಿಗಳಿಗೆ ಜಿಜ್ಞಾಸೆಯುಂಟಾ ಯಿತು. ಮೂವರು ರಾಜರೂ ಮಹರ್ಷಿಗಳ ಇಂಗಿತವನ್ನರಿತು ಒಬ್ಬರ ಮುಖವನ್ನು ಮತ್ತೊಬ್ಬರು ನೋಡುತ್ತಾ ಅಗಸ್ತ್ಯರಿಗೆ ಹೇಳಿದರು :

"ಬ್ರಾಹ್ಮಣೋತ್ತಮರೇ! ಇಲ್ಲಿಗೆ ಸ್ವಲ್ಪದೂರದಲ್ಲಿ ಇಲ್ವಲನೆಂಬ ದಾನವನೊಬ್ಬನಿದ್ದಾನೆ. ಪ್ರಪಂಚದ ಸಕಲ ರಾಜರಲ್ಲಿರುವುದಕ್ಕಿಂತಲೂ ಅಧಿಕವಾದ ಐಶ್ವರ್ಯವು ಅವನಲ್ಲಿರುವುದೆಂದು ನಾವು ಕೇಳಿದ್ದೇವೆ. ನಾವೆಲ್ಲರೂ ಸೇರಿ ಅವನಲ್ಲಿಗೆ ಹೋಗೋಣ."

ರಾಜರ ಮಾತಿಗೆ ಅಗಸ್ತ್ಯರೂ ಒಪ್ಪಿದರು. ಮಹಾಧನಿಕನಾದ ಇಲ್ವಲ ನನ್ನೇ ಹಣ ಕೇಳುವುದು ಯುಕ್ತವೆಂದು ಅವರೂ ಭಾವಿಸಿದರು. ಅನಂತರ ಮೂವರು ರಾಜರೊಡನೆ ಅಗಸ್ತ್ಯರು ಇಲ್ವಲನ ರಾಜಧಾನಿಗೆ ಹೊರಟರು.

೯೮ನೆಯ ಅಧ್ಯಾಯವು ಮುಗಿಯಿತು.

೯೯ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಇಲ್ವಲನ ಬಳಿಗೆ ಅಗಸ್ತ್ಯರ ಆಗಮನ : ವಾತಾಪಿಯ ವಧೆ : ಲೋಪಾಮುದ್ರೆಗೆ ಪುತ್ರಪ್ರಾಪ್ತಿ : ಪರಶುರಾಮನು ದಾಶರಥಿಯಿಂದ ಹರಣವಾಗಿದ್ದ ತೇಜಸ್ಸನ್ನು ತೀರ್ಥಸ್ನಾನದ ಮೂಲಕ ಪುನಃ ಪಡೆದುದು

ಯುಧಿಷ್ಠಿರ! ಮಹರ್ಷಿಗಳಾದ ಅಗಸ್ತ್ಯರು ಮೂವರು ರಾಜರೊಡನೆ ತನ್ನ ರಾಜಧಾನಿಯ ಕಡೆಗೇ ಬರುತ್ತಿರುವರೆಂಬ ವಾರ್ತೆಯನ್ನು ಕೇಳಿ ದಾನವ ನಾದ ಇಲ್ವಲನು ಅಮಾತ್ಯರಿಂದ ಕೂಡಿದವನಾಗಿ ತನ್ನ ರಾಜಧಾನಿಯ ಎಲ್ಲೆಯ ಬಳಿಗೆ ಹೋಗಿ, ಮಹರ್ಷಿಗಳಿಗೂ–ರಾಜರಿಗೂ ಆದರದ ಸ್ವಾಗತ ವನ್ನಿತ್ತು ರಥದಲ್ಲಿ ಕುಳ್ಳಿರಿಸಿ ತನ್ನ ಅರಮನೆಗೆ ಕರೆದುಕೊಂಡು ಬಂದು, ಅತಿಥಿಗಳನ್ನು ಅರ್ಘ್ಯ-ಪಾದ್ಯಾದಿಗಳಿಂದ ಸತ್ಕರಿಸಿ, ಸುಖಾಸನದಲ್ಲಿ ಕುಳ್ಳಿರಿಸಿದನು.

ಯಥಾಪೂರ್ವವಾಗಿ ವಾತಾಪಿಯು ಆಡಾಗಿ ಪರಿವರ್ತಿತನಾದನು. ಆಡಾಗಿದ್ದ ವಾತಾಪಿಯನ್ನು ಕತ್ತರಿಸಿ ಇಲ್ವಲನು ಅದರ ಮಾಂಸವನ್ನು ರಾಜರ ಮತ್ತು ಅಗಸ್ತ್ಯರ ಭೋಜನಕ್ಕೆ ಸಿದ್ಧಪಡಿಸಿದನು. ಆ ಭೋಜನದ ರಹಸ್ಯವನ್ನು ಮೊದಲೇ ತಿಳಿದಿದ್ದರೂ–ಅಗಸ್ತ್ಯರನ್ನೂ ತಮ್ಮನ್ನೂ ಇಲ್ವಲನು ಬೇರೆ ಯವರಂತೆಯೇ ಕೊಲ್ಲಲು ಯತ್ನಿಸುವನೆಂದು ರಾಜರು ಭಾವಿಸಿರಲಿಲ್ಲ. ಆದುದರಿಂದ ಇಲ್ವಲನ ಪ್ರಯತ್ನವನ್ನು ಗಮನಿಸಿದ ಆ ರಾಜರು ಕಾಂತಿಹೀನ ರಾದರು. ತಮ್ಮ ಅವಸಾನವು ಸನ್ನಿಹಿತವಾಯಿತೆಂದೇ ಭಾವಿಸಿದರು. ಅವರ ಮುಖಭಾವಗಳಿಂದಲೇ ಅವರ ಹೃದಯಗಳಲ್ಲಿದ್ದ ಸಂಕಟವನ್ನು ತಿಳಿದು, ಅಗಸ್ತ್ಯರು ಹೇಳಿದರು :

“ರಾಜರೇ! ನೀವು ದುಃಖಪಡುವ ಕಾರಣವಿಲ್ಲ. ಅಜರೂಪಧರನಾದ ವಾತಾಪಿಯ ಮಾಂಸವೆಲ್ಲವನ್ನೂ ನಾನೊಬ್ಬನೇ ತಿನ್ನುತ್ತೇನೆ. ಆದುದರಿಂದ ನೀವು ಈ ವಿಷಯದಲ್ಲಿ ಸ್ವಲ್ಪವಾದರೂ ಭೀತರಾಗಬೇಡಿರಿ.”

ಅನಂತರದಲ್ಲಿ ಸುಖಾಸನಾರೂಢರಾಗಿದ್ದ ಅಗಸ್ತ್ಯರಿಗೆ ಇಲ್ವಲನು ನಗು-ನಗುತ್ತಾ ಪಕ್ವಮಾಡಿದ ಮಾಂಸವನ್ನು ಆದರಪೂರ್ವಕವಾಗಿ ಬಡಿಸಿದನು.

ಬಡಿಸಿದ ಮಾಂಸವೆಲ್ಲವನ್ನೂ ಅಗಸ್ತ್ಯರೊಬ್ಬರೇ ತಿಂದುಬಿಟ್ಟರು. ಅಗಸ್ತ್ಯರ ಭೋಜನವು ಮುಗಿದನಂತರ ಇಲ್ವಲನು ಯಥಾಪೂರ್ವವಾಗಿ–'**ವಾತಾಪೇ! ಅತ್ರಾಗಚ್ಛ!**'–ಎಂದು ಗಟ್ಟಿಯಾಗಿ ಕೂಗಿದನು. ಇಲ್ವಲನು ಹೀಗೆ ಹೇಳಿದೊಡನೆಯೇ ಅಗಸ್ತ್ಯರು–'**ವಾತಾಪೇ! ಜೀರ್ಣೋಭವ**'–ಎಂದು ಹೇಳುತ್ತಾ ಹೊರಗೆ ಬಿಟ್ಟ ಅಪಾನವಾಯುವಿನ ಶಬ್ದವು ಗುಡುಗಿನ ಶಬ್ದವನ್ನೂ ಮೀರಿಸುವುದಾಗಿದ್ದಿತು.

ತನ್ನ ತಮ್ಮನು ಎಷ್ಟು ಹೊತ್ತಾದರೂ ಅಗಸ್ತ್ಯರ ಹೊಟ್ಟೆಯನ್ನು ಸೀಳಿ ಹೊರಗೆ ಬಾರದಿರಲಾಗಿ ಇಲ್ವಲನು ಪುನಃ-ಪುನಃ–'**ವಾತಾಪೇ! ಅತ್ರಾಗಚ್ಛ!**'–ಎಂದು ಕೂಗಿಕೊಂಡನು. ಅವನ ಕೂಗನ್ನು ಕೇಳಿ ಅಗಸ್ತ್ಯರು ಒಮ್ಮೆ ಗಟ್ಟಿಯಾಗಿ ನಕ್ಕು ಹೇಳಿದರು :

"ಇಲ್ವಲ! ವಾತಾಪಿಯು ಹೇಗೆ ಹೊರಗೆ ಬಂದಾನು? ನಾನಾಗಲೇ ಅವನನ್ನು ಜೀರ್ಣಿಸಿಕೊಂಡುಬಿಟ್ಟಿರುವೆನಲ್ಲಾ!"

"ಅಯ್ಯೋ! ನನ್ನ ತಮ್ಮನು ಜೀರ್ಣವಾಗಿ ಹೋದನೇ?"–ಎಂದು ಹೇಳುತ್ತಾ ಇಲ್ವಲನು ಭ್ರಾಂತಿಹೊಂದಿದನು. ಮುಂದೇನು ಮಾಡಬೇಕೆಂಬುದೇ ಅವನಿಗೆ ತಿಳಿಯಲಿಲ್ಲ. ಮುಖವು ಕಳೆಗುಂದಿತು. ಅಮಾತ್ಯರೊಡನೆ ಕೈಜೋಡಿಸಿ ಮಹರ್ಷಿಯ ಮುಂದೆ ನಿಂತು ಇಲ್ವಲನು ಕೇಳಿದನು:

"ಮಹರ್ಷಿಗಳೇ! ತಾವೆಲ್ಲರೂ ಯಾವ ಕಾರಣದಿಂದ ಇಲ್ಲಿಗೆ ಆಗಮಿಸಿರುವಿರಿ?"

ಅದಕ್ಕುತ್ತರವಾಗಿ ಅಗಸ್ತ್ಯರು ನಸುನಗುತ್ತಾ ಹೇಳಿದರು :

"ಇಲ್ವಲ! ನಾವು ನಿನ್ನಲ್ಲಿರುವ ಮಾಯಾವಿದ್ಯೆಯನ್ನೂ ತಿಳಿದವರಾಗಿದ್ದೇವೆ ಮತ್ತು ನಿನ್ನಲ್ಲಿ ಅಪಾರವಾದ ಐಶ್ವರ್ಯವಿದೆಯೆಂದೂ ಕೇಳಿದ್ದೇವೆ. ಈ ರಾಜರ ಬಳಿಗೆ ನಾನು ಐಶ್ವರ್ಯಪ್ರಾಪ್ತಿಗಾಗಿ ಹೋಗಿದ್ದೆನು. ಆದರೆ ಈ ರಾಜರು ಅಷ್ಟು ಐಶ್ವರ್ಯವಂತರಲ್ಲ. ನೀನಾದರೂ ನಿನ್ನಲ್ಲಿರುವ ಹೆಚ್ಚುವರಿ ಐಶ್ವರ್ಯವನ್ನು ಯಾವ ಪ್ರಾಣಿಗೂ ತೊಂದರೆಯಾಗದ ರೀತಿಯಲ್ಲಿ ನನಗೆ ಕೊಡುವವನಾಗು."

ಧರ್ಮಜ! ಮಹರ್ಷಿಗಳ ಆ ಮಾತಿಗೆ ಉತ್ತರವಾಗಿ ಇಲ್ವಲನು ಹೇಳಿದನು :

"ಮಹರ್ಷಿಗಳೇ! ನಾನು ಮನಸ್ಸಿನಲ್ಲಿ ನಿಮಗೆ ಕೊಡಬೇಕೆಂದು ನಿಶ್ಚಯಿಸಿರುವುದನ್ನು ನೀವು ಹೇಳುವಿರಾದರೆ ಅವೆಲ್ಲವನ್ನೂ ಈಗಲೇ ತಮಗೊಪ್ಪಿಸಿಬಿಡುವೆನು."

ಅಗಸ್ತ್ಯರು ತಮ್ಮ ಯೋಗಬಲದಿಂದ ಅಸುರನ ಮನಸ್ಸಿನಲ್ಲಿರುವುದನ್ನು ಕ್ಷಣಕಾಲ ಚಿಂತಿಸಿ ತಿಳಿದು ಹೇಳಿದರು :

"ದಾನವ! ಈ ಮೂವರು ರಾಜರಿಗೂ ಹತ್ತು-ಹತ್ತು ಸಾವಿರ ಗೋವುಗಳನ್ನೂ ಮತ್ತು ಹತ್ತು-ಹತ್ತು ಸಾವಿರ ಚಿನ್ನದ ನಾಣ್ಯಗಳನ್ನೂ ಕೊಡಲು ನೀನು ಇಚ್ಛಿಸಿರುವೆ. ಅಲ್ಲವೇ? ಈ ರಾಜರಿಗೆ ಕೊಡುವುದಕ್ಕಿಂತಲೂ ದ್ವಿಗುಣಿತವಾದ ಹಸುಗಳನ್ನೂ ಮತ್ತು ಚಿನ್ನದ ನಾಣ್ಯಗಳನ್ನೂ ನನಗೆ ಕೊಡಲು ಇಚ್ಛಿಸಿರುವೆ. ಇದರ ಜೊತೆಗೆ ಒಂದು ಚಿನ್ನದ ರಥವನ್ನೂ–ಮನೋವೇಗಯುಕ್ತವಾದ ಎರಡು ಕುದುರೆಗಳೊಂದಿಗೆ ಕೊಡಲಿಚ್ಛಿಸಿರುವೆ. (ಆದರೆ ನೀನು ನನಗೆ ಕೊಡಬೇಕೆಂದು ಇಚ್ಛಿಸಿರುವ ಆ ರಥವು ಸುವರ್ಣ ಮಯವಾಗಿರುವುದೆಂಬ ಪರಿಜ್ಞಾನವು ನಿನಗಿರುವುದಿಲ್ಲ.) ಆದುದರಿಂದ ನೀನೀಗಲೇ ನಿನ್ನ ಸೇವಕರ ಮೂಲಕ ನೀನು ನನಗೆ ಕೊಡಬೇಕೆಂದು ಇಚ್ಛಿಸಿರುವ ಆ ರಥವು ಸ್ವರ್ಣಮಯವಾದುದೇ ಅಥವಾ ಅಲ್ಲವೇ–ಎಂಬು ದನ್ನೂ ಖಚಿತಮಾಡಿಕೊಂಡನಂತರ ನಾನು ನಿನ್ನ ಮನಸ್ಸಿನಲ್ಲಿರುವುದೆಲ್ಲವನ್ನೂ ಹೇಳಿರುವೆನೇ? ಇಲ್ಲವೇ?–ಎಂಬುದನ್ನು ನಿರ್ಧರಿಸುವವನಾಗು."

ಅಗಸ್ತ್ಯರ ಮಾತುಗಳನ್ನು ಕೇಳಿ ಇಲ್ವಲನು ಒಡನೆಯೇ ತಾನು ಅಗಸ್ತ್ಯರಿಗೆ ಕೊಡಲಿಚ್ಛಿಸಿದ್ದ ರಥದ ಬಳಿಗೆ ಸೇವಕರನ್ನು ಕಳುಹಿಸಿ ರಥವು ಸ್ವರ್ಣದಿಂದಲೇ ಮಾಡಲ್ಪಟ್ಟಿದೆಯೆಂಬ ನಿಜಾಂಶವನ್ನು ತಿಳಿದನು. ರಥವು ಸ್ವರ್ಣಮಯವಾದುದೆಂದು ತಿಳಿದು ಇಲ್ವಲನ ಮನಸ್ಸಿಗೆ ಬಹಳ ಖೇದ ವಾಯಿತು. ಆದರೂ ಕೊಡಲು ನಿಶ್ಚಯಿಸಿದುದನ್ನು ಕೊಡಲೇಬೇಕಾಗಿದ್ದಿತು. ಅನ್ಯಥಾ ಮಾಡುವ ಸಾಧ್ಯತೆಯಿರಲಿಲ್ಲ. ಹಾಗೆ ಮಾಡಿದಲ್ಲಿ ಮಹರ್ಷಿಗಳ ಕೋಪಕ್ಕೆ ಪಾತ್ರನಾಗಬೇಕಾಗಿದ್ದಿತು. ಇಲ್ವಲನು ಸ್ವರ್ಣಮಯವಾದ

ರಥವನ್ನು ಕೊಡಲು ಮನಸ್ಸಿಲ್ಲದಿದ್ದರೂ ಆ ರಥಕ್ಕೆ ಮನೋವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ವಿರಾವ-ಸುರಾವಗಳೆಂಬ ಎರಡು ಕುದುರೆಗಳನ್ನು ಕಟ್ಟಿ, ತಾನು ಮೊದಲೇ ನಿಶ್ಚಯಮಾಡಿದ್ದಂತೆ ರಾಜರಿಗೆ ಕೊಟ್ಟುದಕ್ಕಿಂತಲೂ ದ್ವಿಗುಣಿತವಾದ ಸುವರ್ಣನಾಣ್ಯಗಳನ್ನು ರಥದಲ್ಲಿ ತುಂಬಿ, ರೆಪ್ಪೆಗಳನ್ನು ಮಿಟುಕಿಸುವುದರೊಳಗಾಗಿ ಅಗಸ್ತ್ಯರ ಆಶ್ರಮಕ್ಕೆ ಕಳುಹಿಸಿಕೊಟ್ಟನು. ಶ್ರುತರ್ವಾಣ, ಬ್ರಧ್ನಶ್ವ ಮತ್ತು ತ್ರಸದಸ್ಯುಗಳೂ ಅಗಸ್ತ್ಯರ ಅನುಮತಿಯನ್ನು ಪಡೆದು ತಮ್ಮ-ತಮ್ಮ ರಾಜಧಾನಿಗಳಿಗೆ ಹಿಂದಿರುಗಿದರು. ಈ ರೀತಿಯಲ್ಲಿ ಅಗಸ್ತ್ಯರು ತಮ್ಮ ಪತ್ನಿಯಾದ ಲೋಪಾಮುದ್ರೆಯು ಆಶಿಸಿದ್ದ ಸುಖೋಪಭೋಗಸಾಧನವಾದ ಸಕಲೈಶ್ವರ್ಯಗಳನ್ನು ಪಡೆದರು.

ಯುಧಿಷ್ಠಿರ! ಆ ಅತುಲೈಶ್ವರ್ಯವನ್ನು ಕಂಡು ಲೋಪಾಮುದ್ರೆಯು ಪತಿಯೊಡನೆ ಹೇಳಿದಳು : "ಭಗವನ್! ನೀವು ನನ್ನ ಇಚ್ಛೆಯನ್ನು ಪೂರ್ಣವಾಗಿ ನೆರವೇರಿಸಿರುವಿರಿ. ನನ್ನಲ್ಲಿ ನೀವಿನ್ನು ನಿಮಗೆ ಅನುರೂಪನಾದ, ವೀರ್ಯವಂತನಾದ ಪುತ್ರನನ್ನು ಪಡೆಯಬಹುದಾಗಿದೆ."

"ಕಲ್ಯಾಣಿ! ನಿನ್ನ ಸದ್ವೃತ್ತಿಯಿಂದಾಗಿ ನಾನು ಸಂತುಷ್ಟನಾಗಿದ್ದೇನೆ. ಮಕ್ಕಳನ್ನು ಪಡೆಯುವ ವಿಷಯದಲ್ಲಿ ನನ್ನ ಮನಸ್ಸಿನಲ್ಲಿರುವ ವಿಚಾರವನ್ನು ನಿನ್ನೊಡನೆ ಹೇಳುವೆನು. ಕೇಳುವವಳಾಗು. ನೀನು ಒಂದು ಸಾವಿರ ಮಕ್ಕಳನ್ನಾಶಿಸುವೆಯಾ? ಅಥವಾ ಒಂದು ಸಾವಿರ ಮಕ್ಕಳ ಬಲದಿಂದ ಕೂಡಿರುವ ನೂರು ಮಕ್ಕಳನ್ನಾಶಿಸುವೆಯಾ? ನೂರು ಮಕ್ಕಳೂ ಬೇಡವಾದರೆ ನೂರು ಮಕ್ಕಳ ಬಲದಿಂದ ಕೂಡಿರುವ ಹತ್ತು ಮಕ್ಕಳನ್ನು ಪಡೆಯಲಿಚ್ಛಿಸುವೆಯಾ? ಅಥವಾ ಹತ್ತು ಮಕ್ಕಳನ್ನು ಹೆಚ್ಚೆಂದು ನೀನು ಭಾವಿಸುವೆಯಾದರೆ-ಬಲದಲ್ಲಿ ಸಾವಿರ ಮಕ್ಕಳನ್ನೂ ಮೀರಿಸುವ ಒಬ್ಬನೇ ಪುತ್ರನನ್ನು ಪಡೆಯುವೆಯಾ? ಪ್ರಿಯೇ! ಈ ವಿಷಯದಲ್ಲಿ ನಿನ್ನ ಆಶಯವನ್ನು ವ್ಯಕ್ತಪಡಿಸು."

"ಪ್ರಿಯನೇ! ನನಗೆ ಸಹಸ್ರಪುತ್ರರಿಗೆ ಬದಲಾಗಿ ಸಾವಿರ ಮಕ್ಕಳ ಬಲದಿಂದ ಕೂಡಿರುವ ತಪೋಧನನಾದ ಒಬ್ಬನೇ ಮಗನು ಸಾಕು.

ಏಕೋ ಹಿ ಬಹುಭಿಃ ಶ್ರೇಯಾನ್ವಿದ್ವಾನ್ಸಾಧುರಸಾಧುಭಿಃ ॥೨೨॥

ಅವಿದ್ಯಾವಂತರಾದ, ಅಸಾಧುಗಳಾದ ಬಹುಮಂದಿ ಪುತ್ರರನ್ನು ಪಡೆ

ಯುವುದಕ್ಕಿಂತಲೂ ಸಾಧುವಾದ ಮತ್ತು ಯೋಗ್ಯನಾದ ಒಬ್ಬನೇ ಮಗನನ್ನು ಪಡೆಯುವುದೇ ಶ್ರೇಯಸ್ಕರವು."

ಧರ್ಮಜ! ಲೋಪಾಮುದ್ರೆಯು ಹೇಳಿದ ಮಾತಿಗೆ ಅಗಸ್ತ್ಯರು 'ತಥಾಸ್ತು' ಎಂದು ಸಮ್ಮತಿಸಿ ಸಮಾನಶೀಲಳಾದ, ಶ್ರದ್ಧಾಳುವಾದ ಲೋಪಾ ಮುದ್ರೆಯೊಡನೆ ಯಥಾಸಮಯದಲ್ಲಿ ಸಮಾಗಮಮಾಡಿದರು.

ಗರ್ಭಾಧಾನಮಾಡಿದ ಬಳಿಕ ಅಗಸ್ತ್ಯರು ತಪಶ್ಚರಣೆಮಾಡಲು ಅರಣ್ಯಕ್ಕೆ ತೆರಳಿದರು. ಅಗಸ್ತ್ಯರು ಅರಣ್ಯಕ್ಕೆ ತೆರಳಿದನಂತರ ಲೋಪಾಮುದ್ರೆಯ ಗರ್ಭವು (ಗರ್ಭದಲ್ಲಿದ್ದ ಭ್ರೂಣವು) ಏಳು ವರ್ಷಗಳ ಪರ್ಯಂತವಾಗಿ ಬೆಳೆಯಿತು. ಏಳು ವರ್ಷಗಳು ಕಳೆದನಂತರ ಸ್ವಯಂಪ್ರಭೆಯಿಂದಲೇ ಪ್ರಕಾಶಿಸುತ್ತಾ ತೇಜಃಪುಂಜಪೂರ್ಣವಾದ ದೃಢಸ್ಯು ಎಂಬ ಹೆಸರಿನ ಮಗುವು ಹುಟ್ಟಿತು. ಹುಟ್ಟುತ್ತಿರುವಾಗಲೇ ಸಾಂಗೋಪಾಂಗವಾದ ವೇದಾಧ್ಯಯನದಲ್ಲಿ ನಿರತವಾಗಿರುವಂತೆ ಆ ಶಿಶುವು ಪ್ರಕಾಶಿಸಿತು. ಮಹಾಬಲಶಾಲಿಯಾಗಿದ್ದ ಆ ಶಿಶುವು ಬಾಲ್ಯದಲ್ಲಿಯೇ ಭಾರವಾದ ಸಮಿತ್ತಿನ ಹೊರೆಯನ್ನು ಆಶ್ರಮಕ್ಕೆ ತರುತ್ತಿದ್ದಿತು. ಆದುದರಿಂದ ಆ ಋಷಿಪುತ್ರನು 'ಇಧ್ಮವಾಹ' ಎಂಬ ಅನ್ವರ್ಥನಾಮದಿಂದಲೂ ಕರೆಯಲ್ಪಟ್ಟನು.

**ಇಧ್ಮಾನಾಂ ಭಾರಮಾಜಹ್ರೇ ಇಧ್ಮವಾಹಸ್ತತೋಽಭವತ್ ॥೨೭॥**

ತೇಜಃಪುಂಜಪೂರ್ಣನಾದ ಮಹಾಬಲಶಾಲಿಯಾದ ಪುತ್ರನನ್ನು ಕಂಡು ಮಹರ್ಷಿಗಳಾದ ಅಗಸ್ತ್ಯರಿಗೆ ಅಮಿತಾನಂದವಾಯಿತು.

ಯುಧಿಷ್ಠಿರ! ಮಹರ್ಷಿಗಳಾದ ಅಗಸ್ತ್ಯರು ನಾನು ಹೇಳಿದ ರೀತಿಯಲ್ಲಿ ವಂಶಪ್ರದೀಪನಾದ ಮಗನನ್ನು ಪಡೆದು ತನ್ನ ಪೂರ್ವಜರಿಗೆ ಸದ್ಗತಿಯು ಸಿಕ್ಕುವಂತೆ ಮಾಡಿದರು. ಅಗಸ್ತ್ಯರು ವಾಸವಾಗಿದ್ದ ಈ ಪುಣ್ಯಕ್ಷೇತ್ರಕ್ಕೆ ಅಂದಿನಿಂದಲೂ ಅಗಸ್ತ್ಯಾಶ್ರಮವೆಂದೇ ಹೆಸರಾಗಿದೆ. ಪ್ರಹ್ಲಾದನ ವಂಶೀಯ ನಾದ ವಾತಾಪಿಯನ್ನು ಕೊಂದ ಅಗಸ್ತ್ಯರ ಈ ಆಶ್ರಮವು ಅನೇಕಾನೇಕ ರಮಣೀಯವಾದ ದೃಶ್ಯಗಳಿಂದ ಕೂಡಿರುವುದು. ದೇವ-ಗಂಧರ್ವ ಸೇವಿತವಾದ ಈ ಭಾಗೀರಥೀನದಿಯು ಗಾಳಿಯಿಂದ ಹಾರಾಡುತ್ತಿರುವ

ಧ್ವಜಪತಾಕೆಯೋಪಾದಿಯಲ್ಲಿ ಆಕಾಶದಲ್ಲಿ (ಬೆಟ್ಟಗಳ ಮೇಲ್ಭಾಗದಲ್ಲಿ) ಚಲಿಸುತ್ತಿರುವ ಬಿಳುಪಾದ ತನ್ನ ಪ್ರವಾಹದಿಂದ ಪ್ರಕಾಶಿಸುತ್ತಿದೆ. ಬೆಟ್ಟದ ಕೆಳಭಾಗದ ಬಂಡೆಗಳ ಮಧ್ಯದಲ್ಲಿ ಪ್ರವಹಿಸುವಾಗ ಮರ್ತ್ಯಲೋಕ-ಪಾತಾಳ ಲೋಕಗಳಲ್ಲಿಯೂ ಪ್ರವಹಿಸುವ ಈ ಗಂಗಾನದಿಯು ನಾಗಕನ್ಯೆಯಂತೆ ಪ್ರಕಾಶಿಸುತ್ತಿದೆ.

ಮೊದಲು ಮಹಾದೇವನ ಜಟೆಯಿಂದ ಹೊರಬಂದಿರುವ ಸಮುದ್ರ ಪತ್ನಿಯಾದ ಈ ಗಂಗಾನದಿಯು ಹಿಮವತ್ಪರ್ವತಕ್ಕೆ ದಕ್ಷಿಣಭಾಗದಲ್ಲಿರುವ ದೇಶಗಳೆಲ್ಲವನ್ನೂ–ತಾಯಿಯು ಮಕ್ಕಳನ್ನು ಕಾಪಾಡುವಂತೆ ಕಾಪಾಡುತ್ತಾ ಕಟ್ಟಕಡೆಗೆ ಕನ್ಯೆಯು ಪತಿಯನ್ನು ಸೇರುವಂತೆ–ಸರಿತ್ಪತಿಯಾದ ಸಮುದ್ರವನ್ನು ಸೇರುತ್ತದೆ. ಪಾಂಡುಪುತ್ರರೇ! ನೀವೆಲ್ಲರೂ ಈ ಪುಣ್ಯನದಿಯಲ್ಲಿ ಸ್ನಾನಮಾಡಿರಿ."

ಲೋಮಶರು ಹೇಳಿದಂತೆ ಎಲ್ಲರೂ ಆ ತೀರ್ಥದಲ್ಲಿ ಸ್ನಾನಮಾಡಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಹೊರಟರು. ಪುನಃ ಲೋಮಶರು ಮುಂದಿನ ಆಶ್ರಮದ ವಿಷಯವನ್ನು ಹೇಳಲು ಉಪಕ್ರಮಿಸಿದರು : "ಅಲ್ಲಿ ನೋಡು, ಯುಧಿಷ್ಠಿರ! ಅಲ್ಲಿ ಕಾಣುತ್ತಿರುವುದೇ ಭೃಗುತೀರ್ಥ. ಆ ತೀರ್ಥವು ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಹೊಂದಿರುವುದು. ಆ ಭೃಗುತೀರ್ಥದಲ್ಲಿ ಪರಶುರಾಮನು ಸ್ನಾನಮಾಡಿ, ತಾನು ದಶರಥರಾಮನೊಡನೆ ಯುದ್ಧಮಾಡಿದಾಗ ಕಳೆದುಕೊಂಡಿದ್ದ ತೇಜಸ್ಸೆಲ್ಲವನ್ನೂ ಪುನಃ ಪಡೆದನು. ನೀನೂ ನಿನ್ನ ಅನುಜರೊಡನೆಯೂ, ದ್ರೌಪದಿಯೊಡನೆಯೂ ಕೂಡಿದವನಾಗಿ ಆ ಭೃಗುತೀರ್ಥದಲ್ಲಿ ಸ್ನಾನಮಾಡುವುದರಿಂದ ದುರ್ಯೋಧನನಿಂದ ಅಪಹೃತವಾಗಿರುವ ನಿನ್ನ ತೇಜಸ್ಸನ್ನು ಪುನಃ ಪಡೆಯುವೆ. ದಶರಥರಾಮ ನೊಡನೆ ಯುದ್ಧಮಾಡಿದಾಗ ಪರಶುರಾಮನು ಕಳೆದುಕೊಂಡಿದ್ದ ಶಕ್ತಿಯನ್ನು ಆ ತೀರ್ಥದಲ್ಲಿ ಸ್ನಾನಮಾಡಿ ಪುನಃ ಅವನು ಪಡೆದುದೇ ಇದಕ್ಕೆ ಸಾಕ್ಷಿಯಾಗಿದೆ." ಲೋಮಶರ ಮಾತಿನಂತೆ ಕೃಷ್ಣೆಯೊಡನೆಯೂ, ಅನುಜರೊಡನೆಯೂ ಯುಧಿಷ್ಠಿರನು ಆ ಭೃಗುತೀರ್ಥವನ್ನು ಸೇರಿ, ಅದರಲ್ಲಿ ಸ್ನಾನಮಾಡಿ ದೇವತೆ ಗಳನ್ನೂ, ಪಿತೃಗಳನ್ನೂ ಅರ್ಚನ-ತರ್ಪಣಾದಿಗಳಿಂದ ಪೂಜಿಸಿದನು. ಲೋಮಶರು ಹೇಳಿದಂತೆ ಯುಧಿಷ್ಠಿರನು ಆ ತೀರ್ಥದಲ್ಲಿ ಸ್ನಾನಮಾಡಿ

ದೊಡನೆಯೇ ಅಮಿತವಾದ ತೇಜಸ್ಸಿನಿಂದ ಪ್ರಕಾಶಿಸಿದನು. ಯಾವ ಶತ್ರುವೇ ಬಂದರೂ ತನ್ನನ್ನು ಜಯಿಸಲಾರನೆಂಬ ಭಾವನೆಯು ಯುಧಿಷ್ಠಿರನ ಮನಸ್ಸಿನಲ್ಲಿ ಮೂಡಿತು. ಭೃಗುತೀರ್ಥದಲ್ಲಿ ಸ್ನಾನ-ಸಂಧ್ಯಾವಂದನೆ, ದೇವ-ಪಿತೃಗಳ ಪೂಜೆಗಳನ್ನು ಮುಗಿಸಿ ಯುಧಿಷ್ಠಿರನು ಲೋಮಶರನ್ನು ಪ್ರಶ್ನಿಸಿದನು :

"ಮಹಾನುಭಾವರೇ! ಯಾವ ಕಾರಣದಿಂದಾಗಿ ಪರಶುರಾಮನ ಪರಾಕ್ರಮವು ದಶರಥರಾಮನಿಂದ ಅಪಹರಿಸಲ್ಪಟ್ಟಿತು? ಮತ್ತು ಅದನ್ನು ಪರಶುರಾಮನು ಪುನಃ ಪಡೆದುದು ಹೇಗೆ?–ಈ ವಿಷಯವನ್ನು ವಿವರವಾಗಿ ತಿಳಿಸಿರಿ."

"ಯುಧಿಷ್ಠಿರ! ದಶರಥರಾಮನ ಚರಿತ್ರೆಯನ್ನೂ ಮತ್ತು ಭೃಗುವಂಶೀಯನಾದ, ಮಹಾಬುದ್ಧಿಶಾಲಿಯಾದ ಭಾರ್ಗವರಾಮನ ಸುಚರಿತೆಯನ್ನೂ ಕೇಳುವವನಾಗು. ರಾವಣನ ಸಂಹಾರಕ್ಕಾಗಿ ಮಹಾವಿಷ್ಣುವು ದಶರಥನ ಮಗನಾಗಿ ಪೃಥ್ವಿಯಲ್ಲಿ ಅವತರಿಸಿದನು. ರಾಮನು ಹುಟ್ಟಿದ ನಂತರ ನಾವೂ ಅಯೋಧ್ಯೆಗೆ ಹೋಗಿ ಮಹಾನುಭಾವನಾದ ಶ್ರೀರಾಮನನ್ನೊಮ್ಮೆ ಸಂದರ್ಶಿಸಿದ್ದೆವು. ದಶರಥರಾಮನು ಮಹಾಪರಾಕ್ರಮಿಯೆಂದೂ, ಗುಣವಂತನೆಂದೂ ಲೋಕಪ್ರಸಿದ್ಧನಾದನು. ಋಚೀಕವಂಶಜನಾದ, ರೇಣುಕೆಯಲ್ಲಿ ಜನ್ಮತಾಳಿದ ಪರಶುರಾಮನು ಶ್ರೀರಾಮನ ಪ್ರಶಂಸೆಯನ್ನು ಎಲ್ಲೆಡೆಗಳ ಲ್ಲಿಯೂ ಕೇಳಿ ಅವನ ಪರಾಕ್ರಮವೆಷ್ಟಿದೆಯೆಂಬುದನ್ನು ಪರೀಕ್ಷಿಸುವ ಉತ್ಸುಕತೆಯಿಂದ ಕ್ಷತ್ರಿಯವಂಶಭಂಜಕವಾದ ಧನುಸ್ಸನ್ನು ಕೈಯಲ್ಲಿ ಹಿಡಿದು ಅಯೋಧ್ಯಾಭಿಮುಖವಾಗಿ ಹೊರಟನು. ಭಾರ್ಗವರಾಮನು ತನ್ನ ರಾಜ್ಯದ ಎಲ್ಲೆಯನ್ನು ದಾಟಿ ಒಳಗೆ ಬಂದನೆಂಬ ವಾರ್ತೆಯು ತಿಳಿದೊಡನೆಯೇ ದಶರಥನು ಶ್ರೀರಾಮನನ್ನು ಕರೆದು ಮಹಾದ್ವಾರದ ಬಳಿಗೆ ಹೋಗಿ ಭಾರ್ಗವರಾಮನನ್ನು ಅರಮನೆಗೆ ಕರೆದುಕೊಂಡು ಬರುವಂತೆ ಹೇಳಿಕಳುಹಿಸಿದನು. ತಂದೆಯ ಮಾತಿನಂತೆ ಧನುಷ್ಪಾಣಿಯಾದ ಶ್ರೀರಾಮನು ಅಯೋಧ್ಯೆಯ ಮಹಾದ್ವಾರಕ್ಕೆ ಹೋಗಿ ಪರಶುರಾಮನ ಆಗಮನವನ್ನು ಪ್ರತೀಕ್ಷಿಸುತ್ತಿದ್ದನು. ಸ್ವಲ್ಪಹೊತ್ತಿನಲ್ಲಿಯೇ ಆಗಮಿಸಿದ ಪರಶುರಾಮನು ಧನುಷ್ಪಾಣಿಯಾದ ಶ್ರೀರಾಮನನ್ನು ಕಂಡು ನಸುನಗುತ್ತಾ ಹೇಳಿದನು :

"ದಶರಥಪುತ್ರನೇ! ನನ್ನ ಕೈಯಲ್ಲಿರುವ ಕ್ಷತ್ರಿಯವಿನಾಶಕವಾದ ಈ ಧನುಸ್ಸಿಗೆ ನಿನ್ನ ಬಲವೆಲ್ಲವನ್ನೂ ಪ್ರಯೋಗಿಸಿ ಹೆದೆಯನ್ನೇರಿಸು."

ರಾಮನು ಅದಕ್ಕುತ್ತರವಾಗಿ ವಿನೀತನಾಗಿಯೇ ಹೇಳಿದನು :

"ದ್ವಿಜಶ್ರೇಷ್ಠನೇ! ನನ್ನನ್ನು ಈ ವಿಧವಾಗಿ ನಿಂದನೆಮಾಡುವುದು ನಿನಗೆ ಉಚಿತವೆನಿಸುವುದಿಲ್ಲ. ಕ್ಷತ್ರಿಯನಾಗಿ ಹುಟ್ಟಿರುವ ನಾನು ಸ್ವಧರ್ಮವನ್ನು ಬಿಟ್ಟು ಕ್ಷತ್ರಿಯಾಧಮನಾಗಿರುವುದಿಲ್ಲ. ಆದರೆ ಮಹಾನುಭಾವನಾದ ಇಕ್ಷ್ವಾಕುವಿನ ವಂಶದಲ್ಲಿ ಹುಟ್ಟಿದ ಯಾವ ಕ್ಷತ್ರಿಯನೂ ಬ್ರಾಹ್ಮಣರ ವಿಷಯದಲ್ಲಿ ತನ್ನ ಭುಜಬಲ-ಪರಾಕ್ರಮಗಳ ವಿಷಯವಾಗಿ ಜಂಬಕೊಚ್ಚಿ ಕೊಳ್ಳುವ ಸ್ವಭಾವದವನಾಗಿರುವುದಿಲ್ಲ. ಆದುದರಿಂದ ತಂದೆಯ ಮಾತಿನಂತೆ ನಿನ್ನನ್ನು ಗೌರವಿಸಿ ಸ್ವಾಗತಿಸಲು ಬಂದಿರುವ ನನ್ನನ್ನು ಕುತ್ಸಿತವಾದ ಮಾತು ಗಳಿಂದ ನಿಂದಿಸಬೇಡ."

ರಾಮನ ಆ ಮಾತಿಗೆ ಉತ್ತರವಾಗಿ ಭಾರ್ಗವರಾಮನು ಹೇಳಿದನು : "ಈ ನಿನ್ನ ಮಾತುಗಳನ್ನು ಸಾಕುಮಾಡು. ರಾಮ! ನಿನಗೆ ಅತುಲವಾದ ಪರಾಕ್ರಮವೇ ಇರುವುದಾದರೆ ಈ ನನ್ನ ಧನುಸ್ಸನ್ನು ತೆಗೆದುಕೊಂಡು ಹೆದೆಯೇರಿಸು. ವ್ಯರ್ಥವಾದ ಮಾತಿನಿಂದೇನು ಪ್ರಯೋಜನ?"

ಪರಶುರಾಮನ ಆ ಮಾತಿನಿಂದಾಗಿ ಶ್ರೀರಾಮನಿಗೆ ಕೋಪವೇ ಬಂದಿತು. ಒಡನೆಯೇ ತನ್ನ ಕೈಗಳನ್ನು ಮುಂದಕ್ಕೆ ಚಾಚಿ ಭಾರ್ಗವರಾಮನ ಕೈಯಲ್ಲಿದ್ದ ಕ್ಷತ್ರಿಯವಂಶವಿಧ್ವಂಸಕವಾದ ಘೋರಧನುಸ್ಸನ್ನು ಸೆಳೆದು ಕೊಂಡನು. ಸ್ವಲ್ಪವಾದರೂ ಶ್ರಮವಿಲ್ಲದೇ ನಿಮಿಷಮಾತ್ರದಲ್ಲಿ ಆ ಮಹಾ ಧನುಸ್ಸಿಗೆ ಹೆದೆಯನ್ನೇರಿಸಿ (ಶಿಂಜಿನಿಯನ್ನು ಬಿಗಿದು) ಭಾರ್ಗವರಾಮನ ಸಮ್ಮುಖದಲ್ಲಿ ನಿಂತು ನಸುನಗುತ್ತಾ ಟೇಂಕಾರಮಾಡಿದನು. ಆ ಟೇಂಕಾರವು ಗುಡುಗಿನ ಧ್ವನಿಯನ್ನು ಅನುಕರಿಸಿತ್ತು. ಸಕಲಪ್ರಾಣಿಗಳೂ ಆ ಘೋರಶಬ್ದ ದಿಂದ ಭಯಗೊಂಡುವು. ಧನುಷ್ಟೇಂಕಾರಮಾಡುತ್ತಾ ಶ್ರೀರಾಮನು– "ಭಾರ್ಗವರಾಮ! ನಿನ್ನ ಆಶಯದಂತೆ ಈ ಮಹಾಧನುಸ್ಸನ್ನು ಬಗ್ಗಿಸಿ ಹೆದೆಯನ್ನೇರಿಸಿದ್ದಾಯಿತು. ಮುಂದೇನು ಮಾಡಲಿ! ನಿನ್ನ ಆಶಯವೇನಿರು ವುದು? ಬೇಗ ಹೇಳು."

ರಾಮನ ಮಾತನ್ನು ಕೇಳಿ ಜಾಮದಗ್ನಿಯು ತನ್ನ ಬತ್ತಳಿಕೆಯಿಂದ ಒಂದು ದಿವ್ಯವಾದ ಅಸ್ತ್ರವನ್ನು ತೆಗೆದು ರಾಮನಿಗೆ ಕೊಡುತ್ತಾ ಹೇಳಿದನು :

"ಈ ದಿವ್ಯಾಸ್ತ್ರವನ್ನು ಧನುಸ್ಸಿನಲ್ಲಿ ಯೋಜಿಸಿ ಶಿಂಜಿನಿಯನ್ನು ದೀರ್ಘವಾಗಿ ಸೆಳೆಯುವವನಾಗು."

ಭಾರ್ಗವರಾಮನ ಆ ಮಾತುಗಳನ್ನು ಕೇಳಿ ದಶರಥರಾಮನು ಅತ್ಯಂತ ಕೋಪಾವಿಷ್ಟನಾಗಿ ಹೇಳಿದನು : "ನೀನು ಹೇಳಿದುದನ್ನು ನಾನು ಕೇಳಿದೆನು, ಭಾರ್ಗವ! ನಿನ್ನೀ ಅಪಹಾಸ್ಯದ ಮಾತನ್ನೂ ನಾನು ಕ್ಷಮಿಸಿಬಿಟ್ಟಿದ್ದೇನೆ. ನೀನು ಬಹಳ ದುರಹಂಕಾರದಿಂದ ಮೆರೆಯುತ್ತಿರುವೆ. ನಿನ್ನ ಪಿತಾಮಹನಾದ ಋಚೀಕನ ಅನುಗ್ರಹದಿಂದಾಗಿ ನೀನು ಕ್ಷತ್ರಿಯರಿಗಿಂತಲೂ ಅಧಿಕವಾದ ತೇಜಸ್ಸನ್ನು ಪಡೆದಿರುವೆ ಮತ್ತು ಇದೇ ಕಾರಣದಿಂದ ನನ್ನನ್ನೂ ಅಪಹಾಸ್ಯ ಮಾಡುತ್ತಿರುವೆ. ಆದರೆ ನಾನಾರೆಂಬುದು ನಿನಗೆ ತಿಳಿಯದಾಗಿದೆ. 'ನಾನಾರು? ನನ್ನ ನಿಜಸ್ವರೂಪವೇನು?'–ಎಂಬುದನ್ನು ನಿನಗೆ ತೋರಿಸುವೆನು. ನಿನ್ನೀ ಚರ್ಮಚಕ್ಷುಸ್ಸಿನಿಂದ ನೀನು ನನ್ನ ರೂಪವನ್ನು ನೋಡಲಾರೆ. ಆದುದರಿಂದ ನಿನಗೆ ದಿವ್ಯದೃಷ್ಟಿಯನ್ನು ಅನುಗ್ರಹಿಸುವೆನು"–ಹೀಗೆಂದು ಹೇಳಿ ದಶರಥರಾಮನು ಭಾರ್ಗವರಾಮನಿಗೆ ದಿವ್ಯದೃಷ್ಟಿಯನ್ನಿತ್ತು ತನ್ನ ನಿಜರೂಪವಾದ ವಿಶ್ವರೂಪವನ್ನು ತೋರಿಸಿದನು.

**ತತೋ ರಾಮಶರೀರೇ ವೈ ರಾಮಃ ಪಶ್ಯತಿ ಭಾರ್ಗವಃ ।**
**ಆದಿತ್ಯಾನ್ಸವಸೂನ್ರುದ್ರಾನ್ಸಾಧ್ಯಾಂಶ್ಚ ಸಮರುದ್ಗಣಾನ್ ॥೫೬॥**

**ಪಿತರೋ ಹುತಾಶನಶ್ಚೈವ ನಕ್ಷತ್ರಾಣಿ ಗ್ರಹಾಸ್ತಥಾ ।**
**ಗನ್ಧರ್ವಾ ರಾಕ್ಷಸಾ ಯಕ್ಷಾ ನದ್ಯಸ್ತೀರ್ಥಾನಿ ಯಾನಿ ಚ ॥೫೭॥**

**ಋಷಯೋ ವಾಲಖಿಲ್ಯಾಶ್ಚ ಬ್ರಹ್ಮಭೂತಾಃ ಸನಾತನಾಃ ।**
**ದೇವರ್ಷಯಶ್ಚ ಕಾರ್ತ್ಸ್ನ್ಯೇನ ಸಮುದ್ರಾಃ ಪರ್ವತಾಸ್ತಥಾ ॥೫೮॥**

**ವೇದಾಶ್ಚ ಸೋಪನಿಷದೋ ವಷಟ್ಕಾರೈಃ ಸಹಾಧ್ವರೈಃ ।**
**ಚೇತೋವನ್ತಿ ಚ ಸಾಮಾನಿ ಧನುರ್ವೇದಶ್ಚ ಭಾರತ ॥೫೯॥**

**ಮೇಘವೃನ್ದಾನಿ ವರ್ಷಾಣಿ ವಿದ್ಯುತಶ್ಚ ಯುಧಿಷ್ಠಿರ ।**
**ತತಃ ಸ ಭಗವಾನ್ವಿಷ್ಣುಸ್ತಂ ವೈ ಬಾಣಂ ಮುಮೋಚ ಹ ॥೬೦॥**

ಭಾರ್ಗವರಾಮನು ದಾಶರಥಿಯ ಶರೀರದಲ್ಲಿ ದ್ವಾದಶಾದಿತ್ಯರನ್ನೂ, ಅಷ್ಟವಸುಗಳನ್ನೂ, ಏಕಾದಶರುದ್ರರನ್ನೂ, ಸಾಧ್ಯರನ್ನೂ, ಸಪ್ತಮರುತ್ತು

ಗಳನ್ನೂ, ಪಿತೃದೇವತೆಗಳನ್ನೂ, ಹುತಾಶನನನ್ನೂ, ನಕ್ಷತ್ರಗಳನ್ನೂ, ಗ್ರಹ ಗಳನ್ನೂ, ಯಕ್ಷ-ಗಂಧರ್ವ-ರಾಕ್ಷಸರನ್ನೂ, ನದೀ-ನದ-ಸರೋವರಗಳನ್ನೂ, ಬ್ರಹ್ಮರ್ಷಿಗಳನ್ನೂ, ಸನಾತನರಾದ–ಬ್ರಹ್ಮಭೂತರಾದ ವಾಲಖಿಲ್ಯರನ್ನೂ, ದೇವರ್ಷಿಗಳನ್ನೂ, ಸಮುದ್ರಗಳನ್ನೂ, ಗಿರಿ-ದುರ್ಗ-ಪರ್ವತಗಳನ್ನೂ, ಉಪನಿಷತ್ತುಗಳಿಂದ ಕೂಡಿರುವ ವೇದಗಳನ್ನೂ, ಯಜ್ಞಗಳಿಂದ ಕೂಡಿರುವ ವಷಟ್ಕಾರಗಳನ್ನೂ, ಚೇತನಾಯುಕ್ತವಾದ ಸಾಮಗಳನ್ನೂ, ಧನುರ್ವೇದ ವನ್ನೂ, ಮೋಡಗಳ ಸಮೂಹವನ್ನೂ, ಮಳೆಯನ್ನೂ, ಮಿಂಚುಗಳನ್ನೂ ನೋಡಿದನು. ಹೆಚ್ಚೇನು ಹೇಳಲಿ? ಯುಧಿಷ್ಠಿರ! ಪ್ರಪಂಚದ ಸಕಲವಸ್ತು ಗಳನ್ನೂ ಭಾರ್ಗವರಾಮನು ದಶರಥರಾಮನ ಶರೀರದಲ್ಲಿ ಕಂಡನು. ಆ ಸಮಯದಲ್ಲಿ ಶ್ರೀರಾಮನು ಭಾರ್ಗವರಾಮನು ಕೊಟ್ಟ ಬಾಣವನ್ನು ಹೆದೆ ಯನ್ನೇರಿಸಿದ ಧನುಸ್ಸಿಗೆ ಯೋಜಿಸಿ ಪ್ರಯೋಗಿಸಿದನು. ರಾಮನ ಆ ಬಾಣ ಪ್ರಯೋಗದಿಂದಾಗಿ ಪ್ರಪಂಚವೆಲ್ಲಾ ಸಿಡಿಲಿನ ಶಬ್ದದಿಂದ ತುಂಬಿಹೋಯಿತು. ಎಲ್ಲೆಡೆಗಳಲ್ಲಿಯೂ ಉಲ್ಕಾಪಾತಗಳಾದುವು. ಧೂಳಿನ ಮಳೆಗರೆಯಿತು. ಕೆಲವೆಡೆಗಳಲ್ಲಿ ಧಾರಾಕಾರವಾದ ವೃಷ್ಟಿಯಾಯಿತು. ಬಿರುಗಾಳಿಯು ಪ್ರಾರಂಭವಾಯಿತು. ಎಲ್ಲೆಲ್ಲಿಯೂ ಭೂಕಂಪಗಳಾಗತೊಡಗಿದುವು.

**ಸ ರಾಮಂ ವಿಹ್ವಲಂ ಕೃತ್ವಾ ತೇಜಶ್ಚಾಕ್ಷಿಪ್ಯ ಕೇವಲಮ್ ।**
**ಅಗಚ್ಛಜ್ಜ್ವಲಿತೋ ಬಾಣೋ ರಾಮಬಾಹುಪ್ರಚೋದಿತಃ ॥೬೩॥**

ರಾಮನ ತೋಳಿನಿಂದ ಪ್ರಯುಕ್ತವಾದ ರಾಮಬಾಣವು ರಾಮನೆದುರಿ ನಲ್ಲಿ ನಿಂತಿದ್ದ ಭಾರ್ಗವರಾಮನನ್ನು ಮೂರ್ಛೆಗೊಳಿಸಿ ಅವನ ತೇಜಸ್ಸನ್ನು ಮಾತ್ರ ಆಕರ್ಷಿಸಿ ಪುನಃ ರಾಮನನ್ನೇ ಬಂದು ಸೇರಿತು. ಮೂರ್ಛೆಯು ತಿಳಿದ ನಂತರ ಭಾರ್ಗವರಾಮನೆದ್ದು ಎದುರಿನಲ್ಲಿ ನಿಂತಿದ್ದ, ಸಾಕ್ಷಾತ್ ಮಹಾವಿಷ್ಣು ವಿನ ಪರಾಕ್ರಮದಿಂದ ಕೂಡಿದ್ದ ಶ್ರೀರಾಮನಿಗೆ ದೀರ್ಘದಂಡನಮಸ್ಕಾರ ಮಾಡಿದನು. ಭಾರ್ಗವರಾಮನು ಶ್ರೀರಾಮನಿಂದಲೇ ಆಜ್ಞಪ್ತನಾಗಿ ಮಹೇಂದ್ರಪರ್ವತವನ್ನು ಸೇರಿ ಅಲ್ಲಿಯೇ ವಾಸವಾಗಿದ್ದನು. ಭೀತಿ ಯಿಂದಲೂ, ನಾಚಿಕೆಯಿಂದಲೂ ಭಾರ್ಗವರಾಮನು ಆ ಪರ್ವತದಲ್ಲಿಯೇ ಒಂದು ವರ್ಷಕಾಲ ವಾಸವಾಗಿದ್ದನು. ಒಂದು ವರ್ಷವು ಕಳೆದನಂತರದಲ್ಲಿ

ಪಿತೃದೇವತೆಗಳು ಭಾರ್ಗವರಾಮನ ಸಮೀಪಕ್ಕೆ ಬಂದು–ತಮ್ಮ ಮಗನು ಶಕ್ತಿಹೀನನಾಗಿ, ತೇಜೋಹೀನನಾಗಿ, ವಿಷಣ್ಣನಾಗಿ, ದರ್ಪದಿಂದ ವಿಮುಕ್ತನಾಗಿ, ದುಃಖಿತನಾಗಿರುವುದನ್ನು ಕಂಡು ಹೇಳಿದರು :

**ನ ವೈ ಸಮ್ಯಗಿದಂ ಪುತ್ರ ವಿಷ್ಣುಮಾಸಾದ್ಯ ವೈ ಕೃತಮ್ ।**
**ಸ ಹಿ ಪೂಜ್ಯಶ್ಚ ಮಾನ್ಯಶ್ಚ ತ್ರಿಷು ಲೋಕೇಷು ಸರ್ವದಾ ॥೬೭॥**

**ಗಚ್ಛ ಪುತ್ರ ನದೀಂ ಪುಣ್ಯಾಂ ವಧೂಸರಕೃತಾಹ್ವಯಾಮ್ ।**
**ತತ್ರೋಪಸ್ಪೃಶ್ಯ ತೀರ್ಥೇಷು ಪುನರ್ವಪುರವಾಪ್ಸ್ಯಸಿ ॥೬೮॥**

"ಮಗು! ಮಹಾವಿಷ್ಣುವಿನ ಬಳಿಗೆ ಹೋಗಿದ್ದ ನೀನು ಅವನ ವಿಷಯದಲ್ಲಿ ಸರಿಯಾಗಿ ನಡೆದುಕೊಳ್ಳಲಿಲ್ಲ. ಮಹಾವಿಷ್ಣುವು ತ್ರೈಲೋಕ್ಯಪೂಜ್ಯನಾಗಿರುತ್ತಾನೆ. ಆದುದರಿಂದ ನಿನಗೂ ಅವನು ಮಾನ್ಯನಾಗಿದ್ದಾನೆ. ನೀನೀಗಲೇ ವಧೂಸರವೆಂಬ ಪುಣ್ಯನದಿಯ ತೀರಕ್ಕೆ ಹೋಗಿ ಆ ನದಿಯಲ್ಲಿರುವ ತೀರ್ಥಗಳಲ್ಲಿ ಸ್ನಾನಮಾಡು. ಹೀಗೆ ಮಾಡುವುದರಿಂದ ನೀನು ಕಳೆದುಕೊಂಡಿರುವ ತೇಜೋಮಯವಾದ ಶರೀರವನ್ನು ಪುನಃ ಪಡೆಯುವೆ. ದೀಪ್ತೋದವೆಂಬ ಹೆಸರಿನ ಪುಣ್ಯತೀರ್ಥವೂ ಅದೇ ಆಗಿರುವುದು. ಆ ತೀರ್ಥದ ಸಮೀಪದಲ್ಲಿ ನಿನ್ನ ಪಿತಾಮಹನಾದ ಭೃಗುಮಹರ್ಷಿಯು ದೇವಯುಗದಲ್ಲಿ ಉತ್ತಮೋತ್ತಮವಾದ ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆದನು."

ಹೀಗೆ ಹೇಳಿದ ಪಿತೃದೇವತೆಗಳ ಮಾತಿನಂತೆ ಭಾರ್ಗವರಾಮನು ಒಡನೆಯೇ ದೀಪ್ತೋದವೆಂಬ ಆ ಭೃಗುತೀರ್ಥದ ಬಳಿಗೆ ಹೋಗಿ, ವಿಧಿಪೂರ್ವಕವಾಗಿ ಆ ತೀರ್ಥದಲ್ಲಿ ಸ್ನಾನಮಾಡಿ ತಾನು ಕಳೆದುಕೊಂಡಿದ್ದ ತೇಜಸ್ಸನ್ನು ಪುನಃ ಪಡೆದನು.

ಯುಧಿಷ್ಠಿರ! ಭಾರ್ಗವರಾಮನು ಮಹಾವಿಷ್ಣುಸ್ವರೂಪನಾದ ದಾಶರಥಿರಾಮನನ್ನು ಸಂಧಿಸಿದಾಗ ಅವನೊಡನೆ ಸೆಣೆಸಲು ಹೋದಾಗ ಅವನಿಗೆ ಈ ವಿಧವಾದ ದುಃಸ್ಥಿತಿಯುಂಟಾಗಿತ್ತು."

ರ್೯೯ನೆಯ ಅಧ್ಯಾಯವು ಮುಗಿಯಿತು.

೧೦೦ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

# ವೃತ್ರಾಸುರನ ಸಂಹಾರಕ್ಕಾಗಿ ದೇವತೆಗಳು ದಧೀಚನನ್ನು ಪ್ರಾರ್ಥಿಸಿದುದು : ದಧೀಚನಿಂದ ಅಸ್ಥಿದಾನ : ಆ ಅಸ್ಥಿಯಿಂದ ವಜ್ರಾಯುಧದ ನಿರ್ಮಾಣ

ಯುಧಿಷ್ಠಿರನು ಲೋಮಶರನ್ನು ಕೇಳಿದನು : "ದ್ವಿಜೋತ್ತಮರೇ! ಧೀಮಂತರಾದ ಅಗಸ್ತ್ಯಮಹರ್ಷಿಗಳು ಸಾಧಿಸಿದ ಇತರ ಕಾರ್ಯಗಳನ್ನೂ ನಾನು ವಿಸ್ತಾರವಾಗಿ ಕೇಳಲಿಚ್ಛಿಸಿದ್ದೇನೆ. ದಯೆಯಿಟ್ಟು ಹೇಳಿರಿ."

"ಮಹಾರಾಜ! ಅತಿಮಾನುಷಪ್ರಭಾವವುಳ್ಳ, ಮಹಾತೇಜಸ್ವಿಗಳಾದ ಅಗಸ್ತ್ಯರ ದಿವ್ಯವಾದ ಮತ್ತು ಅದ್ಭುತವಾದ ಇತರ ಕಾರ್ಯಗಳನ್ನೂ ಹೇಳುತ್ತೇನೆ; ಕೇಳುವವನಾಗು. ಕೃತಯುಗದಲ್ಲಿ ಯುದ್ಧವಿಶಾರದರಾದ, ಮದದಿಂದ ಕೊಬ್ಬಿದ, ಅತಿಭಯಂಕರರಾದ ಕಾಲಕೇಯರೆಂಬ ಹೆಸರಿನ ರಾಕ್ಷಸರಿದ್ದರು. ಆ ಕಾಲಕೇಯದಾನವರು ವೃತ್ರಾಸುರನನ್ನು ಆಶ್ರಯಿಸಿ ಅವನ ಸಹಕಾರವನ್ನು ಪಡೆದು ಅನೇಕವಿಧವಾದ ಶಸ್ತ್ರಾಯುಧಗಳಿಂದಲೂ ಕೂಡಿದವರಾಗಿ, ದೇವೇಂದ್ರನನ್ನೂ ಮತ್ತು ದೇವತೆಗಳನ್ನೂ ನಿಂತಲ್ಲಿ ನಿಲ್ಲಗೊಡದೇ ಮೂರು ಲೋಕಗಳಲ್ಲಿಯೂ ಸುತ್ತಾಡಿಸುತ್ತಾ ತ್ರಾಸಕೊಡುತ್ತಿದ್ದರು. ದೇವತೆಗಳಿಗೆ ಮುಂದೇನು ಮಾಡಬೇಕೆಂಬುದೇ ತೋರದಾಯಿತು. ಕಾಲಕೇಯರಿಗೆ ಆಶ್ರಯವನ್ನಿತ್ತ ವೃತ್ರಾಸುರನನ್ನು ಸಂಹರಿಸುವುದು ಅನಿವಾರ್ಯವೆನಿಸಿತು. ದೇವತೆಗಳೆಲ್ಲರೂ ಇಂದ್ರನನ್ನು ಮುಂದುಮಾಡಿಕೊಂಡು ಬ್ರಹ್ಮನ ಬಳಿಗೆ ಹೋದರು. ಬದ್ಧಾಂಜಲಿಗಳಾಗಿ ನಿಂತಿದ್ದ ದೇವತೆಗಳನ್ನು ನೋಡಿ ಪರಮೇಷ್ಠಿಯು ಹೇಳಿದನು :

"ದೇವತೆಗಳಿರಾ! ನೀವಿಲ್ಲಿಗೆ ಯಾವ ಕಾರಣದಿಂದ ಬಂದಿರುವಿರೆಂಬ ವಿಷಯವು ನನಗೆ ತಿಳಿದಿರುವುದು. ನೀವು ವೃತ್ರಾಸುರನ ವಧೆಗೆ ಉಪಾಯವನ್ನು ತಿಳಿಯಲೋಸುಗ ಬಂದಿರುವಿರಲ್ಲವೇ? ಯಾವ ಉಪಾಯದಿಂದ ನೀವು ವೃತ್ರಾಸುರನನ್ನು ಸಂಹರಿಸಬಹುದೆಂಬುದನ್ನು ನಾನು ನಿಮಗೆ ತಿಳಿಯಪಡಿಸುವೆನು. ಭೂಲೋಕದಲ್ಲಿ ಮಹಾತ್ಮನಾದ ದಧೀಚನೆಂಬ ಹೆಸರಿನ ಮಹರ್ಷಿಯೊಬ್ಬನಿದ್ದಾನೆ. ನೀವೆಲ್ಲರೂ ಇಂದ್ರಪುರಸ್ಸರರಾಗಿ ಆ ಮಹರ್ಷಿಯ

ಬಳಿಗೆ ಹೋಗಿ ಅವನಿಂದ ವರವೊಂದನ್ನು ಯಾಚಿಸಿರಿ. ಧರ್ಮಾತ್ಮನಾದ ದಧೀಚನು ಸುಪ್ರೀತನಾಗಿ ನಿಮಗೆ ವರಕೊಡುವನು. ವೃತ್ರಾಸುರನೊಡನೆ ನಡೆಯುವ ಯುದ್ಧದಲ್ಲಿ ಜಯಾಪೇಕ್ಷಿಗಳಾದ ನೀವು, ದಧೀಚನು ವರವನ್ನು ದಯಪಾಲಿಸಿದೊಡನೆಯೇ ಅವನನ್ನು–'ಮೂರು ಲೋಕಗಳಿಗೂ ಕಲ್ಯಾಣ ವನ್ನುಂಟುಮಾಡುವ ಸಲುವಾಗಿ ನಿನ್ನ ಅಸ್ಥಿಗಳನ್ನು ದಯಪಾಲಿಸು'–ಎಂದು ಪ್ರಾರ್ಥಿಸಿರಿ. ದಧೀಚನು ತಾನು ಕೊಟ್ಟ ಮಾತಿಗೆ ತಪ್ಪದೇ ನಿಮಗೆ ತನ್ನ ಮೂಳೆಗಳನ್ನು ಕೊಡಲು ಪ್ರಾಣವನ್ನು ತೊರೆಯುವನು. ಅವನ ಅಸ್ಥಿಗಳನ್ನು ತೆಗೆದುಕೊಂಡು ಅವುಗಳಿಂದ ಬಹುಭಯಂಕರವಾದ ಮತ್ತು ಬಹುಶಕ್ತಿ ಯುಕ್ತವಾದ ವಜ್ರಾಯುಧವನ್ನು ನಿರ್ಮಿಸಿರಿ. ದಧೀಚಮಹರ್ಷಿಯ ಮೂಳೆ ಗಳಿಂದ ಸಿದ್ಧಗೊಳಿಸುವ, ಘೋರವಾದ, ಘೋರಶಬ್ದಯುಕ್ತವಾದ ಆ ವಜ್ರಾಯುಧವು ಆರು ಕೋನಗಳನ್ನು ಹೊಂದಿದ್ದು ಎಂತಹ ಪ್ರಬಲನಾದ ಶತ್ರುವನ್ನೂ ವಿನಾಶಗೊಳಿಸಲು ಸಮರ್ಥವಾಗುವುದು. ಆ ವಜ್ರಾಯುಧ ದಿಂದಲೇ ಶತಕ್ರತುವಾದ ಇಂದ್ರನು ವೃತ್ರಾಸುರನನ್ನು ಸಂಹರಿಸುವನು. ದೇವತೆಗಳಿರಾ! ವೃತ್ರಾಸುರನ ಮರಣದ ರಹಸ್ಯವೆಲ್ಲವನ್ನೂ ನಾನು ನಿಮಗೆ ಹೇಳಿರುವೆನು. ನೀವು ಸಾವಕಾಶಮಾಡದೇ ನಾನು ಹೇಳಿರುವ ರೀತಿಯಲ್ಲಿ ಕಾರ್ಯವನ್ನು ಸಾಧಿಸಿರಿ." ಬ್ರಹ್ಮನಿಂದ ಈ ರೀತಿಯಾಗಿ ಆದೇಶಪಡೆದ ಇಂದ್ರಸಮೇತರಾದ ದೇವತೆಗಳು ಒಡನೆಯೇ ಬ್ರಹ್ಮಲೋಕದಿಂದ ಹೊರಟು ಶ್ರೀಮನ್ನಾರಾಯಣನನ್ನು ಸಂದರ್ಶಿಸಿ ಅವನಿಗೂ ಎಲ್ಲ ವಿಷಯಗಳನ್ನೂ ನಿವೇದಿಸಿ ಅವನನ್ನೇ ಮುಂದುಮಾಡಿಕೊಂಡು ದಧೀಚಮಹರ್ಷಿಯ ಆಶ್ರಮಕ್ಕೆ ತೆರಳಿದರು.

ಸರಸ್ವತೀನದಿಯ ತೀರದಲ್ಲಿದ್ದ ದಧೀಚಮಹರ್ಷಿಗಳ ಆಶ್ರಮವು ಬಹುರಮ್ಯವಾಗಿದ್ದಿತು. ಆಶ್ರಮದ ಸುತ್ತಲೂ ಫಲ-ಪುಷ್ಪಭರಿತವಾದ ವೃಕ್ಷ ಗಳೂ, ಬಳ್ಳಿಗಳೂ ಇದ್ದುವು. ಮಕರಂದವನ್ನು ಸವಿಯುತ್ತಿದ್ದ ಜೇನುಹುಳು ಗಳ ಝೇಂಕಾರನಿನಾದವು ಸಾಮಗಾನದಂತೆ ಕೇಳಿಬರುತ್ತಿದ್ದಿತು. ಆ ವೃಕ್ಷಗಳ ಮೇಲಿದ್ದ ಕೋಕಿಲ ಮತ್ತು ಚಕೋರಗಳ ಮಧುರನಿನಾದವು ಕರ್ಣಾ ನಂದಕರವಾಗಿದ್ದಿತು. ಮಹಿಷಗಳೂ, ವರಾಹಗಳೂ, ಜಿಂಕೆಗಳೂ, ಚಮರೀ ಮೃಗಗಳೂ ಆ ಆಶ್ರಮದಲ್ಲಿ ವ್ಯಾಘ್ರಗಳ ಭೀತಿಯು ಸ್ವಲ್ಪವಾದರೂ ಇಲ್ಲದೇ

ಸ್ವೇಚ್ಛೆಯಿಂದ ವಿಹರಿಸುತ್ತಿದ್ದುವು. ಮದಿಸಿದ ಆನೆಗಳು ಕಪೋಲಗಳಿಂದ ಮದೋದಕವನ್ನು ಸುರಿಸುತ್ತಾ ಹೆಣ್ಣಾನೆಗಳಿಂದೊಡಗೂಡಿ ಸರೋವರದಲ್ಲಿ ಧುಮುಕಿ ಆಟವಾಡುತ್ತಿದ್ದಾಗ ಅವುಗಳು ಮಾಡುತ್ತಿದ್ದ ಶಬ್ದವು ಆಶ್ರಮ ಪ್ರದೇಶವೆಲ್ಲವನ್ನೂ ವ್ಯಾಪಿಸಿದ್ದಿತು. ಸಿಂಹ-ವ್ಯಾಘ್ರಗಳ ಗರ್ಜನೆಗಳನ್ನು ಕೇಳಿ ಗುಹೆಗಳಲ್ಲಿ ಮಲಗಿರುತ್ತಿದ್ದ ಪ್ರಾಣಿಗಳೂ ಪ್ರತಿಧ್ವನಿಮಾಡುತ್ತಿದ್ದುವು. ಸ್ವರ್ಗದ



ನಂದನವನಕ್ಕೆ ಸದೃಶವಾದ ದಧೀಚಮಹರ್ಷಿಯ ಪವಿತ್ರವಾದ ದಿವ್ಯಾಶ್ರಮವನ್ನು ದೇವತೆಗಳು ಪ್ರವೇಶಿಸಿದರು. ಅಲ್ಲಿ ಸೂರ್ಯನ ತೇಜಸ್ಸಿಗೆ ಸಮಾನವಾದ ದಿವ್ಯತೇಜಸ್ಸಿನಿಂದಲೂ ಬ್ರಹ್ಮನಿಗೆ ಸಮಾನವಾದ ದಿವ್ಯದೇಹ ಕಾಂತಿಯಿಂದಲೂ ಕೂಡಿದ್ದ ದಧೀಚಮಹರ್ಷಿಯನ್ನು ಸಂದರ್ಶಿಸಿದರು.

ಅಮಿತವಾದ ತೇಜಸ್ಸಿನಿಂದ ಕೂಡಿದ್ದ ದಧೀಚಮಹರ್ಷಿಯ ಪಾದಾರವಿಂದ ಗಳಿಗೆ ನಮಸ್ಕರಿಸಿ ಬದ್ಧಾಂಜಲಿಗಳಾಗಿ ಬ್ರಹ್ಮನ ಆದೇಶಾನುಸಾರವಾಗಿ ವರವನ್ನು ಕೇಳಿದರು. ಯಾವ ವರವನ್ನಾದರೂ ಕೊಡುವೆನೆಂದು ದಧೀಚನು ಪ್ರತಿಜ್ಞೆಮಾಡಿದನಂತರ ದೇವತೆಗಳು ವೃತ್ರಾಸುರನ ಸಂಹಾರಕ್ಕಾಗಿ ಶರೀರಸ್ಥ ವಾಗಿರುವ ಅಸ್ಥಿಯನ್ನು ದಯಪಾಲಿಸಬೇಕೆಂದು ಕೇಳಿಕೊಂಡರು.

**ತತೋ ದಧೀಚಃ ಪರಮಪ್ರತೀತಃ**
**ಸುರೋತ್ತಮಾಂಸ್ತಾನಿದಮಭ್ಯುವಾಚ ।**
**ಕರೋಮಿ ಯದ್ವೋ ಹಿತಮದ್ಯ ದೇವಾ**
**ಸ್ವಂ ಚಾಪಿ ದೇಹಂ ಸ್ವಯಮುತ್ಸೃಜಾಮಿ ॥೨೧॥**

ಪರಮಪ್ರೀತನಾದ ದಧೀಚನು ಮುಗುಳ್ನಗೆಯೊಡನೆ ದೇವತೆಗಳನ್ನು ಕುರಿತು ಹೇಳಿದನು :

"ದೇವತೆಗಳಿರಾ! ನಿಮ್ಮೆಲ್ಲರಿಗೂ ಹಿತವುಂಟಾಗುವ ರೀತಿಯಲ್ಲಿ ನಾನು ವರ್ತಿಸುವೆನು. ನಿಮ್ಮ ಅನುಕೂಲಕ್ಕಾಗಿ ನನ್ನ ದೇಹವನ್ನು ಈಗಲೇ ಪರಿತ್ಯಾಗಮಾಡುವೆನು."

ಮಹಾತ್ಮನಾದ, ಜಿತೇಂದ್ರಿಯನಾದ ಮಹರ್ಷಿಯು ಹೀಗೆ ಹೇಳಿ ಒಡನೆಯೇ ತನ್ನ ಪಾರ್ಥಿವಶರೀರವನ್ನು ತೊರೆದನು. ಬ್ರಹ್ಮನ ನಿರ್ದೇಶದಂತೆ ದೇವತೆಗಳು ದಧೀಚಮಹರ್ಷಿಯ ಅಸ್ಥಿಯನ್ನು ತೆಗೆದುಕೊಂಡು ಸಂತುಷ್ಟರಾಗಿ ದಧೀಚಮಹರ್ಷಿಯ ತ್ಯಾಗವನ್ನು ಶ್ಲಾಘನೆಮಾಡುತ್ತಾ ಆ ಮೂಳೆಗಳನ್ನು ದೇವಶಿಲ್ಪಿಯಾದ ತ್ವಷ್ಟೃವಿನ ಬಳಿಗೆ ತೆಗೆದುಕೊಂಡು ಹೋದರು. ಆನಂದಭರಿತರಾದ ದೇವತೆಗಳು ತ್ವಷ್ಟೃವಿಗೆ ಬ್ರಹ್ಮನ ಆಶಯವನ್ನು ತಿಳಿಯಪಡಿಸಿದರು. ತ್ವಷ್ಟೃವು ಎಲ್ಲ ವಿಷಯಗಳನ್ನೂ ವಿವರವಾಗಿ ಕೇಳಿ ತಿಳಿದುಕೊಂಡು ಪರಮಪ್ರೀತನಾಗಿ, ಏಕಾಗ್ರಚಿತ್ತನಾಗಿ, ಬಹಳ ಜಾಗರೂಕತೆಯಿಂದ ದಧೀಚಮಹರ್ಷಿಯ ಮೂಳೆಗಳಿಂದ ಭಯಂಕರವಾದ ವಜ್ರಾಯುಧವನ್ನು ನಿರ್ಮಿಸಿದನು. ವಜ್ರಾಯುಧವನ್ನು ಇಂದ್ರನಿಗೊಪ್ಪಿಸುವ ಸಮಾರಂಭದಲ್ಲಿ ತ್ವಷ್ಟೃವು ಇಂದ್ರನಿಗೆ ಹೇಳಿದನು :

**ಅನೇನ ವಜ್ರಪ್ರವರೇಣ ದೇವ**
**ಭಸ್ಮೀಕುರುಷ್ವಾದ್ಯ ಸುರಾರಿಮುಗ್ರಮ್ ।**
**ತತೋ ಹತಾರಿಃ ಸಗಣಃ ಸುಖಂ ವೈ**
**ಪ್ರಶಾಧಿ ಕೃತ್ಸ್ನಂ ತ್ರಿದಿವಂ ದಿವಿಷ್ಠಃ ॥೨೪॥**

"ಮಹೇಂದ್ರನೇ! ಈ ದಿವ್ಯವಾದ ಮತ್ತು ಭಯಂಕರವಾದ ವಜ್ರಾಯುಧದಿಂದ ದೇವತೆಗಳ ಭೀಷಣಶತ್ರುವಾದ ವೃತ್ರನನ್ನು ಭಸ್ಮೀಭೂತನನ್ನಾಗಿಮಾಡು. ಶತ್ರುಗಳೆಲ್ಲರನ್ನೂ ನಿರ್ಮೂಲಮಾಡಿ ನಿಷ್ಕಂಟಕವಾದ ಸ್ವರ್ಗಲೋಕವನ್ನು ನಿನ್ನ ಅನುಯಾಯಿಗಳಾದ ಈ ದೇವತೆಗಳಿಂದೊಡಗೂಡಿ ಸುಖವಾಗಿ ಪರಿಪಾಲಿಸುವವನಾಗು."

ಹೀಗೆ ಹೇಳಿದ ತ್ವಷ್ಟೃವಿನ ಕೈಗಳಿಂದ ಇಂದ್ರನು ವಜ್ರಾಯುಧವನ್ನು ಆದರಪೂರ್ವಕವಾಗಿ ಪರಮಸಂತೋಷದಿಂದ ಸ್ವೀಕರಿಸಿದನು.

೧೦೦ನೆಯ ಅಧ್ಯಾಯವು ಮುಗಿಯಿತು.

೧೦೧ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ವೃತ್ರಾಸುರನ ವಧೆ : ರಾಕ್ಷಸರ ಮಂತ್ರಾಲೋಚನೆ

ಧರ್ಮಜ! ಅನಂತರದಲ್ಲಿ ಇಂದ್ರನು ವಜ್ರಾಯುಧಧರನಾಗಿ ಮಹಾಬಲಶಾಲಿಗಳಾದ ದೇವತೆಗಳ ಬೆಂಬಲವನ್ನು ಪಡೆದು, ಭೂಲೋಕ-ಸ್ವರ್ಗಲೋಕಗಳೆರಡನ್ನೂ ತನ್ನ ವಶಮಾಡಿಕೊಂಡಿದ್ದ ವೃತ್ರಾಸುರನ ಬಳಿಗೆ ಹೋದನು. ಮಹಾಕಾಯರಾದ ಕಾಲಕೇಯರಾಕ್ಷಸರು ಶಿಖರಗಳಿಂದ ಕೂಡಿದ ಪರ್ವತಗಳೋಪಾದಿಯಲ್ಲಿ ಆಯುಧಪಾಣಿಗಳಾಗಿ ವೃತ್ರಾಸುರನನ್ನು ಸುತ್ತುವರಿದು ನಿಂತು ಅವನನ್ನು ರಕ್ಷಿಸುತ್ತಿದ್ದರು. ದೇವ-ದಾನವರ ಘೋರಸಮರವು ಆರಂಭವಾಯಿತು. ಮುಹೂರ್ತಕಾಲ ನಡೆದ ಆ ಮಹಾಯುದ್ಧವು ಮೂರು ಲೋಕಗಳಿಗೂ ತ್ರಾಸದಾಯಕವಾಗಿದ್ದಿತು. ಕತ್ತಿಯನ್ನೆತ್ತಿ ಎದುರಾಳಿಗಳ ತಲೆಯನ್ನು ಕತ್ತರಿಸಲು ದೇವ-ದಾನವರು ಮುನ್ನುಗ್ಗುತ್ತಿದ್ದರು. ಎದುರುಗಡೆಯ ಸೈನಿಕರು ತಮ್ಮ ಕೈಚಳಕದಿಂದ ಖಡ್ಗಗಳನ್ನು ಹಿಡಿದು ಎದುರಿಸುತ್ತಿದ್ದರು. ಕತ್ತಿಗಳ ಪರಸ್ಪರಸಂಘರ್ಷಣೆಗಳಿಂದ ಮಹಾನಿನಾದವುಂಟಾಗು

ತ್ತಿದ್ದಿತು. ಒಮ್ಮೊಮ್ಮೆ ಆ ಖಡ್ಗಗಳು ಎದುರಾಳಿಗಳ ತಲೆಗಳನ್ನೇ ಕ್ಷಣಮಾತ್ರದಲ್ಲಿ ಕತ್ತರಿಸಿಬಿಡುತ್ತಿದ್ದುವು. ತಾಳೆಯ ಮರಗಳಿಂದ ತೊಟ್ಟು ಕಳಚಿ ಕೆಳಗುದುರುವ ತಾಳೆಯ ಫಲಗಳಂತೆ ರುಂಡಗಳೂ–ಖಡ್ಗಗಳನ್ನು ಹಿಡಿದ ಕೈಗಳೂ ಭೂಮಿಯ ಮೇಲೆ ಬಿದ್ದು ಘೋರವಾದ ಧ್ವನಿಯುಂಟಾಗುತ್ತಿದ್ದಿತು. ಸ್ವರ್ಣಮಯವಾದ ಕವಚಗಳನ್ನು ಧರಿಸಿ ಪರಿಘಾಯುಧವನ್ನು ಕೈಗಳಲ್ಲಿ ಹಿಡಿದು ಕಾಲೇಯರು ದಾವಾಗ್ನಿಯಿಂದ ದಗ್ಧವಾದ ಪರ್ವತಗಳೋ ಪಾದಿಯಲ್ಲಿ ದೇವತೆಗಳ ಮೇಲೆ ರಭಸದಿಂದ ಬೀಳುತ್ತಿದ್ದರು. ಅತಿರಭಸ ದಿಂದ ಮೇಲೆ ಬೀಳುತ್ತಿದ್ದ ದುರಭಿಮಾನಿಗಳಾದ ರಾಕ್ಷಸರ ಅವ್ಯಾಹತವಾದ ಪ್ರಹಾರವನ್ನು ಸಹಿಸಿಕೊಳ್ಳಲು ಅಸಮರ್ಥರಾದ ದೇವತೆಗಳು ಪಲಾಯನ ಮಾಡತೊಡಗಿದರು. ದೇವತೆಗಳು ದಿಕ್ಕುಗೆಟ್ಟು ಓಡುತ್ತಿರುವುದನ್ನೂ, ವೃತ್ರಾಸುರನ ಬಲವು ಕ್ಷಣ-ಕ್ಷಣಕ್ಕೂ ಅಭಿವೃದ್ಧಿಹೊಂದುತ್ತಿರುವುದನ್ನೂ ಕಂಡು ಇಂದ್ರನು ವ್ಯಾಕುಲಗೊಂಡನು. ಸಮುದ್ರದೋಪಾದಿಯಲ್ಲಿ ಮುನ್ನುಗ್ಗಿ ಬರುತ್ತಿದ್ದ ಕಾಲೇಯರನ್ನು ಎದುರಿಸಿ ನಿಲ್ಲಲು ಇಂದ್ರನಿಗೂ ಸಾಧ್ಯವಾಗಲಿಲ್ಲ. ಒಡನೆಯೇ ಇಂದ್ರನು ಪ್ರಭುವಾದ ಶ್ರೀಮನ್ನಾರಾಯಣನ ಮರೆಹೊಕ್ಕನು. ಬಹುವಾಗಿ ವ್ಯಾಕುಲಗೊಂಡಿದ್ದ ದೇವೇಂದ್ರನನ್ನು ಕಂಡು ಸನಾತನನಾದ ಮಹಾವಿಷ್ಣುವು ತನ್ನ ಬಲದಲ್ಲಿ ಒಂದಂಶವನ್ನು ಇಂದ್ರನಿಗಿತ್ತು ಇಂದ್ರನ ಬಲವನ್ನು ಹೆಚ್ಚಿಸಿದನು. ದಯಾಳುವಾದ ಮಹಾವಿಷ್ಣುವು ತನ್ನ ಬಲದ ಒಂದಂಶವನ್ನು ಇಂದ್ರನಿಗಿತ್ತು ಇಂದ್ರನನ್ನು ರಕ್ಷಿಸುತ್ತಿರುವುದನ್ನು ಕಂಡು ದೇವತೆಗಳೂ ತಮ್ಮ-ತಮ್ಮ ಬಲಗಳನ್ನು ಇಂದ್ರನಿಗೆ ಅನುಗ್ರಹಿಸಿಕೊಟ್ಟರು. ವಿಷ್ಣುವಿನಿಂದಲೂ, ದೇವತೆಗಳಿಂದಲೂ, ಬ್ರಹ್ಮರ್ಷಿಗಳಿಂದಲೂ ಸಹ ಅವರ ಬಲಗಳ ಅಂಶಗಳನ್ನು ಪಡೆದನಂತರ ದೇವೇಂದ್ರನು ಉಜ್ವಲಪರಾಕ್ರಮದಿಂದ ಪ್ರಜ್ವಲಿಸಿದನು. ಇಂದ್ರನು ಇತರ ದೇವತೆಗಳೆಲ್ಲರ ಬಲವನ್ನೂ ಪಡೆದು ಮಹಾಬಲಶಾಲಿಯಾದನೆಂದು ತಿಳಿದೊಡನೆಯೇ ವೃತ್ರಾಸುರನು ಮಾಡಿದ ಅನುಸ್ಯೂತವಾದ ಘೋರಗರ್ಜನೆಗಳಿಂದಾಗಿ ಸ್ವರ್ಗ-ಮರ್ತ್ಯಲೋಕ-ಪಾತಾಳಲೋಕಗಳೂ, ಪರ್ವತ-ಗಿರಿ-ದುರ್ಗಗಳೂ ನಡುಗತೊಡಗಿದುವು. ಆ ಘೋರನಿನಾದವನ್ನು ಕೇಳಿ ಇಂದ್ರನೂ ಭಯೋದ್ವಿಗ್ನನಾಗಿ ವೃತ್ರಾಸುರನನ್ನು ಒಡನೆಯೇ ಸಂಹರಿಸಿಬಿಡುವ ಆಶಯದಿಂದ ಕೈಯಲ್ಲಿದ್ದ ವಜ್ರಾಯುಧವನ್ನು ವೃತ್ರಾಸುರನ ಮೇಲೆ

ಪ್ರಯೋಗಿಸಿದನು. ಪೂರ್ವದಲ್ಲಿ ಮಹಾವಿಷ್ಣುವಿನ ಕೈಯಿಂದ ಬಿಡಲ್ಪಟ್ಟ ಚಕ್ರಾಯುಧದಿಂದ ಪರ್ವತಶ್ರೇಷ್ಠವಾದ ಮಂದರವು ಕೆಳಗುರುಳಿದಂತೆ–ಇಂದ್ರನ ವಜ್ರಾಯುಧಪ್ರಹಾರದಿಂದ ಕಾಂಚನಮಾಲೆಯನ್ನು ಧರಿಸಿದ್ದ ವೃತ್ರಾಸುರನು ಕೆಳಗೆ ಬಿದ್ದನು. ವಜ್ರಾಯುಧಪ್ರಹಾರದಿಂದ ಭಯಂಕರನಾದ ವೃತ್ರಾಸುರನು ಅಸುವನ್ನು ತೊರೆದು ಕೆಳಗುರುಳಿದರೂ ಇಂದ್ರನ ಮನಸ್ಸಿನಲ್ಲಿದ್ದ ಭಯವು ದೂರವಾಗಲೇ ಇಲ್ಲ. ವೃತ್ರಾಸುರನಿಂದ ತನ್ನ ಪ್ರಾಣವುಳಿಸಿಕೊಳ್ಳಬೇಕೆಂಬ ಭ್ರಾಂತಿಯಿಂದ ಸರೋವರವೊಂದರಲ್ಲಿ ಹುದುಗಿಕೊಳ್ಳುವ ಸಲುವಾಗಿ ಇಂದ್ರನು ಸರೋವರದ ಕಡೆಗೆ ಧಾವಿಸಿದನು. ವಜ್ರಾಯುಧವು ತನ್ನ ಕೈಯಿಂದ ಪ್ರಯೋಗಿಸಲ್ಪಟ್ಟಿತೆಂದೂ ಇಂದ್ರನು ಭಾವಿಸಲಿಲ್ಲ. ವೃತ್ರಾಸುರನ ಸಂಹಾರವಾಯಿತೆಂಬ ಅರಿವೂ ಇಂದ್ರನಿಗಿರಲಿಲ್ಲ. (ವೃತ್ರಾಸುರನನ್ನು–ದ್ದೇಶಿಸಿ ಪ್ರಯೋಗಿಸಲ್ಪಟ್ಟ ವಜ್ರಾಯುಧವು ನಿಮಿಷಾರ್ಧದಲ್ಲಿ ತನ್ನ ಕಾರ್ಯವನ್ನು ಮುಗಿಸಿ ಪುನಃ ಇಂದ್ರನ ಕೈಯನ್ನೇ ಬಂದು ಸೇರಿತು. ವಜ್ರಾಯುಧವು ತನ್ನ ಕೈಯಲ್ಲೇ ಇದ್ದಿತಾದ್ದರಿಂದ ಇಂದ್ರನಿಗೆ ಆ ವಿಧವಾದ ಭ್ರಾಂತಿಯುಂಟಾಗಲು ಕಾರಣವಾಯಿತು.)

ಅತ್ತಲಾಗಿ ವೃತ್ರಾಸುರನ ವಧೆಯಾದೊಡನೆಯೇ ಅವನ ರಕ್ಷಕರಾಗಿದ್ದ ಕಾಲೇಯರು ದುಃಖೋದ್ವಿಗ್ನರಾದರು. ನಾಯಕನೇ ಇಲ್ಲದೇ ಭಯವಿಹ್ವಲವಾಗಿದ್ದ ದಾನವಸೈನ್ಯವನ್ನು ದೇವತೆಗಳು ತಮ್ಮ ಪೂರ್ಣವಾದ ಬಲವನ್ನು ಪ್ರಯೋಗಿಸಿ ನಿರ್ಮೂಲಮಾಡಲು ತೊಡಗಿದರು. ದಾನವರ ಪರಿಘಾಯುಧಪ್ರಹಾರಗಳಿಂದ ದಿಕ್ಕುಗೆಟ್ಟು ಓಡಿಹೋಗಿದ್ದ ದೇವತೆಗಳು ಪುನಃ ಸಂಘಟಿತ ರಾಗಿ ಬಂದು ಕಾಲೇಯರೊಡನೆ ಯುದ್ಧಮಾಡುತ್ತಿರುವಾಗ ದೇವತೆಗಳ ದಾರುಣವಾದ ಪ್ರಹಾರವನ್ನು ಸಹಿಸಿಕೊಳ್ಳಲಾರದೆ ದಾನವರು ಪ್ರಾಣವುಳಿಸಿಕೊಳ್ಳುವ ಸಲುವಾಗಿ ಸಮುದ್ರದ ಕೆಳಭಾಗಕ್ಕೆ ಹೋಗಿ ಸೇರಿಕೊಂಡರು. ಮೊಸಳೆಗಳಿಂದಲೂ, ತಿಮಿ-ತಿಮಿಂಗಿಲಗಳಿಂದಲೂ, ಅನೇಕ ಜಾತಿಯ ಮೀನುಗಳಿಂದಲೂ ಕೂಡಿದ್ದ ಸಮುದ್ರದ ತಳಭಾಗದಲ್ಲಿ ಆ ಕಾಲೇಯರೆಲ್ಲರೂ ಸೇರಿಕೊಂಡು ಮೂರು ಲೋಕಗಳನ್ನೂ ವಿನಾಶಗೊಳಿಸಲು ಸಮಾಲೋಚನೆಯನ್ನು ಮಾಡತೊಡಗಿದರು. ಆ ದಾನವಸಮೂಹದಲ್ಲಿ ಮಹಾಮೇಧಾವಿಗಳೂ ಇದ್ದರು. ತಮ್ಮ ಶತ್ರುಗಳ ವಿನಾಶಾರ್ಥವಾಗಿ ತಮ-ತಮಗೆ

ತೋರಿದ ಉಪಾಯಗಳನ್ನು ಒಬ್ಬರಾದ ಮೇಲೆ ಮತ್ತೊಬ್ಬರು ಹೇಳತೊಡಗಿದರು. "ದೇವತೆಗಳು ಬಲಿಷ್ಠರಾಗಲು ಕಾರಣವೇನು? ಅವರ ಬಲಕ್ಕೆ ಮೂಲವು ಯಾವುದು? ಅವರ ಬಲದ ಮೂಲವನ್ನೇ ವಿನಾಶಮಾಡಬೇಕು. ಬಲದ ಮೂಲವನ್ನು ವಿನಾಶಗೊಳಿಸುವ ಬದಲಾಗಿ ನಾವು ದೇವತೆಗಳೊಡನೆ ನೇರವಾಗಿ ಸೆಣೆಸಹೋದರೆ ನಾವೆಲ್ಲರೂ ವಿನಾಶಹೊಂದುತ್ತೇವೆ"– ಇತ್ಯಾದಿಗಳೇ ಕಾಲೇಯರ ವಿಚಾರಧಾರೆಯಾಗಿದ್ದಿತು. ಆ ವಿಚಾರಧಾರೆಯ ಮೇಲೆ ಅವರು ಅತಿಘೋರವಾದ ನಿರ್ಧಾರಕ್ಕೂ ಬಂದರು. ದೇವತೆಗಳೊಡನೆ ಸದ್ಯದಲ್ಲಿ ನೇರವಾಗಿ ಯುದ್ಧಮಾಡಕೂಡದೆಂದೂ ಹಾಗೆ ತಾವೇನಾದರೂ ಯುದ್ಧಕ್ಕೆ ಹೋದಲ್ಲಿ ತಮ್ಮ ವಿನಾಶವು ನಿಶ್ಚಯವೆಂದೂ–ಒಮ್ಮತ್ರವಾಗಿ ನಿಶ್ಚಯಿಸಿದರು. ದೇವತೆಗಳ ಬಲದ ಮೂಲವು ಯಾವುದೆಂಬುದನ್ನು ನಿರ್ಧರಿಸಿ, ಮೊದಲನೆಯದಾಗಿ ವೇದವಿದ್ಯೆಯಲ್ಲಿ ನಿರತರಾಗಿರುವವರನ್ನೂ, ತಪಸ್ವಿಗಳಾಗಿರುವವರನ್ನೂ ವಿನಾಶಗೊಳಿಸಬೇಕೆಂದು ನಿಶ್ಚಯಿಸಿದರು. ಅವರ ಆ ನಿಶ್ಚಯಕ್ಕೆ ಪ್ರೇರಕವಾದ ವಿಚಾರಧಾರೆಯು ಹೀಗಿದ್ದಿತು :

ಯೇ ಸನ್ತಿ ವಿದ್ಯಾತಪಸೋಪಪನ್ನಾ-
ಸ್ತೇಷಾಂ ವಿನಾಶಃ ಪ್ರಥಮಂ ತು ಕಾರ್ಯಃ ।
ಲೋಕಾ ಹಿ ಸರ್ವೇ ತಪಸಾ ಧ್ರಿಯನ್ತೇ
ತಸ್ಮಾತ್ತ್ವರಧ್ವಂ ತಪಸಃ ಕ್ಷಯಾಯ ॥೨೦॥

ಯೇ ಸನ್ತಿ ಕೇಚಿಚ್ಚ ವಸುಂಧರಾಯಾಂ
ತಪಸ್ವಿನೋ ಧರ್ಮವಿದಶ್ಚ ತಜ್ಜ್ಞಾಃ ।
ತೇಷಾಂ ವಧಃ ಕ್ರಿಯತಾಂ ಕ್ಷಿಪ್ರಮೇವ
ತೇಷು ಪ್ರಣಷ್ಟೇಷು ಜಗತ್ಪ್ರಣಷ್ಟಮ್ ॥೨೧॥

'ಋಷಿ-ಮಹರ್ಷಿಗಳು ಮಾಡುತ್ತಿರುವ ತಪಸ್ಸಿನಿಂದಲೇ ಈ ಲೋಕಗಳಿಂದು ರಕ್ಷಿತವಾಗಿವೆ. ಆದುದರಿಂದ ಆ ತಪಸ್ಸನ್ನೇ ಅಥವಾ ತಪಸ್ವಿಗಳನ್ನೇ ವಿನಾಶಮಾಡಿಬಿಟ್ಟರೆ ಅರಕ್ಷಿತವಾದ ಈ ಲೋಕಗಳನ್ನು ಬಹುಸುಲಭವಾಗಿ ವಿನಾಶಮಾಡಬಹುದಾಗಿದೆ. ಆದುದರಿಂದ ಈ ಕೂಡಲೇ ನಾವೆಲ್ಲರೂ ತಪಸ್ಸಿನ ವಿನಾಶಕ್ಕೆ ಪ್ರಯತ್ನಿಸಬೇಕು. ಈ ಪೃಥ್ವಿಯಲ್ಲಿರುವ ತಪಸ್ವಿಗಳನ್ನೂ,

ಧರ್ಮಾತ್ಮರನ್ನೂ, ತತ್ತ್ವವಿದರನ್ನೂ ಕೂಡಲೇ ವಿನಾಶಮಾಡಬೇಕು. ಯಜ್ಞ-ಯಾಗಾದಿಗಳು ಎಲ್ಲಿಯೂ ನಡೆಯದಂತೆ ನೋಡಿಕೊಳ್ಳಬೇಕು. ಈಗಾಗಲೇ ಆರಂಭವಾಗಿರುವ ಯಜ್ಞಕ್ರಿಯೆಗಳು ಪೂರ್ಣವಾಗದಂತೆ ವಿನಾಶ ಗೊಳಿಸಬೇಕು. ಯಜ್ಞದ ಹವಿಸ್ಸಿನಿಂದಲೇ ದೇವತೆಗಳು ಬಲಿಷ್ಠರಾಗುತ್ತಾರೆ. ಆದುದರಿಂದ ಈ ಕಾರ್ಯಕ್ರಮವನ್ನು ನಾವು ಈ ಕೂಡಲೇ ಕೈಗೊಳ್ಳಬೇಕು. ಈ ಕಾರ್ಯಕ್ರಮದಲ್ಲಿ ನಮ್ಮನ್ನು ಯಾರೂ ಪ್ರತಿಭಟಿಸಲು ಬರುವುದಿಲ್ಲ. ನಾವು ಎಷ್ಟು ಬೇಗ ತಪಸ್ಸು, ಧರ್ಮ, ಸ್ವಾಧ್ಯಾಯ, ಪ್ರವಚನ, ಯಜ್ಞ– ಮುಂತಾದುವನ್ನು ವಿನಾಶಗೊಳಿಸಿದರೆ ಅಷ್ಟು ಬೇಗ ಈ ಜಗತ್ತೂ ವಿನಾಶ ಹೊಂದುತ್ತದೆ.'

ಯುಧಿಷ್ಠಿರ! ಅತಿದುರ್ಗಮವಾದ ವರುಣನ ನಿವಾಸಸ್ಥಾನವಾದ ಸಮುದ್ರವನ್ನು ಆಶ್ರಯಿಸಿದ್ದ ದುರ್ಮಾರ್ಗಿಗಳಾದ ದಾನವರು ಅಂತಹ ನಿರ್ಧಾರಕ್ಕೆ ಬಂದು ತಮ್ಮ ಶತ್ರುಗಳ ವಿನಾಶಕ್ಕೆ ಅತಿಸುಲಭವಾದ ಒಂದು ಉಪಾಯವು ಸಿಕ್ಕಿದುದಕ್ಕಾಗಿ ಬಹುಸಂತೋಷಗೊಂಡರು.

೧೦೧ನೆಯ ಅಧ್ಯಾಯವು ಮುಗಿಯಿತು.

೧೦೨ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಕಾಲೇಯರಿಂದ ತಪಸ್ವಿಗಳು, ಬ್ರಹ್ಮಚಾರಿಗಳು ಮೊದಲಾದವರ ವಿಧ್ವಂಸನ : ದೇವತೆಗಳಿಂದ ವಿಷ್ಣುಸ್ತುತಿ

ಯುಧಿಷ್ಠಿರ! ನಾನು ಹಿಂದೆ ಹೇಳಿದಂತೆ ಕಾಲೇಯರು ವರುಣನ ನಿವಾಸಸ್ಥಾನವಾದ ಅಂಭೋನಿಧಿಯಾದ ಸಮುದ್ರವನ್ನಾಶ್ರಯಿಸಿ ತಾವು ಮಾಡಿದ ಯೋಜನೆಗೆ ಅನುಸಾರವಾಗಿ ಪ್ರಪಂಚದ ವಿನಾಶಕಾರ್ಯವನ್ನು ಉಪಕ್ರಮಿಸಿದರು. ಕೋಪಾವಿಷ್ಟರಾಗಿ ರಾತ್ರಿಯ ವೇಳೆಯಲ್ಲಿ ಮುನಿಗಳನ್ನು ಭಕ್ಷಿಸುತ್ತಿದ್ದರು. ಆ ದುರಾತ್ಮರು ಮಹರ್ಷಿಗಳಾದ ವಸಿಷ್ಠರ ಆಶ್ರಮಕ್ಕೆ ಹೋಗಿ ನೂರ ಎಂಬತ್ತೆಂಟು ಮಂದಿ ಬ್ರಾಹ್ಮಣರನ್ನು ಭಕ್ಷಿಸಿದುದೇ ಅಲ್ಲದೇ ಒಂಬತ್ತು ಮಂದಿ ತಪಸ್ವಿಗಳನ್ನೂ ಭಕ್ಷಿಸಿದರು. ಅಲ್ಲಿಂದ ಮುಂದೆ ಪುಣ್ಯತಮ ವಾದ, ದ್ವಿಜನಿಷೇವಿತವಾದ ಚ್ಯವನಮಹರ್ಷಿಗಳ ದಿವ್ಯಾಶ್ರಮಕ್ಕೆ ನುಗ್ಗಿ

ಅಲ್ಲಿ ಫಲ-ಮೂಲಾಶನರಾಗಿದ್ದ ನೂರು ಮಂದಿ ಮುನಿಗಳನ್ನು ನುಂಗಿಹಾಕಿದರು. ಆ ಪಾಪಕಾರ್ಯವನ್ನವರು ರಾತ್ರಿಯ ಕತ್ತಲಲ್ಲಿ ಮಾಡಿಮುಗಿಸಿ ಬೆಳಗಾಗುತ್ತಲೇ ಸಮುದ್ರತಳಕ್ಕೆ ಹೋಗಿ ಸೇರಿಕೊಳ್ಳುತ್ತಿದ್ದರು. ಭರದ್ವಾಜಾಶ್ರಮದಲ್ಲಿಯೂ ಅನುಷ್ಠಾನಪರರಾದ, ಕೇವಲ ನೀರು-ಗಾಳಿಗಳನ್ನೇ ಆಹಾರವನ್ನಾಗಿ ಸೇವಿಸುತ್ತಿದ್ದ ಇಪ್ಪತ್ತು ಬ್ರಹ್ಮಚಾರಿಗಳನ್ನು ಭಕ್ಷಿಸಿದರು. ಕಾಲೇಯದಾನವರು ರಾತ್ರಿಯ ವೇಳೆಯಲ್ಲಿ ಋಷ್ಯಾಶ್ರಮಗಳಿಗೆ ನುಗ್ಗಿ ಅಲ್ಲಿರುತ್ತಿದ್ದ ತಪಸ್ವಿಗಳನ್ನೂ ಬ್ರಾಹ್ಮಣರನ್ನೂ ನುಂಗಿಹಾಕುತ್ತಿದ್ದರು. ಅವರ ಅಪ್ರತಿಹತವಾದ ಕ್ರೌರ್ಯಕಾರ್ಯದಿಂದಾಗಿ ಆಶ್ರಮಗಳಲ್ಲಿದ್ದ ಬ್ರಾಹ್ಮಣರ ಸಂಖ್ಯೆಯು ಕ್ಷಯಿಸಿಹೋಯಿತು. ಈ ರೀತಿಯಲ್ಲಿ ದಾನವರು ಅನುದಿನವೂ ಆಶ್ರಮಗಳಿಗೆ ನುಗ್ಗಿ ಬ್ರಾಹ್ಮಣರನ್ನು ವಧೆಮಾಡುತ್ತಿದ್ದರೂ–"ರಾತ್ರಿಯ ವೇಳೆಯಲ್ಲಿ ಯಾರು ಬರುತ್ತಾರೆ? ಹೇಗೆ ಬರುತ್ತಾರೆ? ಹೇಗೆ ಧ್ವಂಸ ಮಾಡುತ್ತಾರೆ? ಹೀಗೆ ಮಾಡಲು ಅವರ ಆಶಯವೇನು?"–ಇತ್ಯಾದಿಗಳಲ್ಲೊಂದೂ ಮಾನವರಿಗೆ ಗೋಚರವಾಗಲೇ ಇಲ್ಲ. ಪ್ರಾತಃಕಾಲವಾಯಿತೆಂದರೆ ಪವಿತ್ರವಾದ ಆಶ್ರಮಪ್ರದೇಶಗಳಲ್ಲಿ ತಪಸ್ಸಿನಿಂದ ಕೃಶರಾದ ತಪಸ್ವಿಗಳ ಮತ್ತು ಬ್ರಾಹ್ಮಣರ ಶರೀರಗಳು ನೆಲದ ಮೇಲೆ ಪ್ರಾಣರಹಿತವಾಗಿ ಬಿದ್ದಿರುತ್ತಿದ್ದುದನ್ನು ಕಾಣುತ್ತಿದ್ದರು. ಹೀಗೆ ಬಿದ್ದಿರುತ್ತಿದ್ದ ಕೆಲವರ ಶರೀರಗಳಲ್ಲಿ ರಕ್ತವೇ ಇರುತ್ತಿರಲಿಲ್ಲ. ಮತ್ತೆ ಕೆಲವರ ಶರೀರಗಳಲ್ಲಿ ಮಾಂಸವೇ ಇರುತ್ತಿರಲಿಲ್ಲ. ಕೆಲವರ ಶರೀರಗಳಲ್ಲಿ ಸ್ನಾಯುಗಳೇ ಇರುತ್ತಿರಲಿಲ್ಲ. ಅವಯವಗಳೆಲ್ಲವೂ ಪ್ರತ್ಯೇಕ-ಪ್ರತ್ಯೇಕವಾಗಿ ಬಿದ್ದಿರುತ್ತಿದ್ದುವು. ಅವರ ಅಸ್ಥಿಪಂಜರಗಳು ಶಂಖಗಳ ರಾಶಿಯಂತೆ ಆಶ್ರಮಸಮೀಪದಲ್ಲಿ ರಾಶಿ-ರಾಶಿಯಾಗಿ ಬಿದ್ದಿರುತ್ತಿದ್ದುವು. ಆಶ್ರಮದೊಳಗಿರುತ್ತಿದ್ದ ಪುಣ್ಯಾಹಕಲಶಗಳೂ, ಹೋಮಸಾಧನಗಳಾದ ಸ್ರುಕ್-ಸ್ರುವಗಳೂ ಚೂರು-ಚೂರಾಗಿ ಬಿದ್ದಿರುತ್ತಿದ್ದುವು. ಅಗ್ನಿಹೋತ್ರಾಗ್ನಿಯಿದ್ದ ಭಾಂಡಗಳೂ ಚೂರು-ಚೂರಾಗಿ ಅಗ್ನಿಯೊಡನೆ ಆಶ್ರಮದ ಸುತ್ತಲೂ ಚೆಲ್ಲಾಡಿರುತ್ತಿದ್ದುವು. ಕಾಲೇಯರ ಆ ಕ್ರೂರಕಾರ್ಯದಿಂದಾಗಿ ಪ್ರಪಂಚವೇ ನಡುಗಿತು. ಆಶ್ರಮಗಳಲ್ಲಿ ನಡೆಯುತ್ತಿದ್ದ ಅಧ್ಯಯನ ಮತ್ತು ಅಧ್ಯಾಪನಗಳು ಸಂಪೂರ್ಣವಾಗಿ ನಿಂತುಹೋದುವು. ಯಜ್ಞಾಂಗವಾದ

ಸ್ವಾಹಾಕಾರ-ವಷಟ್ಕಾರಗಳ ಶಬ್ದಗಳೇ ಆಶ್ರಮಗಳಲ್ಲಿ ಕೇಳಿಬರುತ್ತಿರಲಿಲ್ಲ. ಯಜ್ಞೋತ್ಸವಾದಿ ಕ್ರಿಯೆಗಳೆಲ್ಲವೂ ನಿಂತುಹೋದುವು. ಆಶ್ರಮಗಳೆಲ್ಲವೂ ತೇಜೋಹೀನವಾಗಿ ಪಾಳುಬಿದ್ದು ಹೋಗಿರುವಂತೆ ಕಾಣುತ್ತಿದ್ದುವು.

ಯುಧಿಷ್ಠಿರ! ಆಶ್ರಮಗಳಲ್ಲಿದ್ದ ಬ್ರಾಹ್ಮಣರೂ, ತಪಸ್ವಿಗಳೂ ಈ ರೀತಿಯಲ್ಲಿ ಕಾಲೇಯರ ಕ್ರೌರ್ಯಕ್ಕೆ ಸಿಕ್ಕಿ ನಿಧನಹೊಂದುತ್ತಿರಲಾಗಿ ಅಳಿದುಳಿದ ಕೆಲವು ಬ್ರಾಹ್ಮಣರು ಮತ್ತು ತಪಸ್ವಿಗಳು ತಮ್ಮ ಪ್ರಾಣಗಳನ್ನುಳಿಸಿಕೊಳ್ಳಲು ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದರು. ಕೆಲವರು ಪರ್ವತದ ಗುಹೆಗಳಲ್ಲಿ ಹೋಗಿ ಅಡಗಿಕೊಂಡರು. ಮತ್ತೆ ಕೆಲವರು ನದಿಗಳ ದಂಡೆಗಳಲ್ಲಿದ್ದ ಪೊದೆಗಳಲ್ಲಿ ಅಡಗಿಕೊಂಡರು. ಮತ್ತೆ ಕೆಲವರು ಭೀತ-ಭೀತರಾಗಿಯೇ ಪ್ರಾಣತೊರೆದರು. ಧನುರ್ಧಾರಿಗಳಾಗಿದ್ದ, ಧೈರ್ಯಶಾಲಿಗಳಾಗಿದ್ದ ಕೆಲವರು ಶೂರರು ಆಶ್ರಮವಿನಾಶಕರಾರೆಂಬುದನ್ನು ತಿಳಿಯಲು ಪ್ರಯತ್ನಿಸುತ್ತಿದ್ದರು. ಸಮುದ್ರದವರೆಗೂ ಅವರನ್ನು ಹಿಂಬಾಲಿಸಿ ಹೋಗಿ ಅನಂತರದಲ್ಲಿ ಸಮುದ್ರದೊಳಗೆ ಸೇರಿಕೊಂಡ ಕಾಲೇಯರು ಮುಂದೆ ಎಲ್ಲಿಗೆ ಹೋದರೆಂಬುದು ತಿಳಿಯದೇ ತಮ್ಮ-ತಮ್ಮ ನಿವಾಸಗಳಿಗೆ ಹಿಂದಿರುಗುತ್ತಿದ್ದರು. ದೈತ್ಯರು ರಾತ್ರಿಯ ವೇಳೆಯಲ್ಲಿ ಸಮುದ್ರದಿಂದ ಹೊರಕ್ಕೆ ಬಂದು ಆಶ್ರಮಗಳನ್ನು ಧ್ವಂಸಮಾಡಿ ಬೆಳಗಾಗುವುದರೊಳಗಾಗಿಯೇ ಸಮುದ್ರವನ್ನು ಸೇರಿಕೊಳ್ಳುತ್ತಾರೆಂಬ ವಿಷಯವನ್ನು ಗ್ರಹಿಸುತ್ತಿದ್ದರೇ ಹೊರತು ಸಮುದ್ರವನ್ನಾಶ್ರಯಿಸುತ್ತಿದ್ದ ಅವರನ್ನು ಹೊಂದುತ್ತಿರಲಿಲ್ಲ. ತಡೆಹಿಡಿದು ಎದುರಿಸುತ್ತಿರಲಿಲ್ಲ. (ದೈತ್ಯರನ್ನು ರಾತ್ರಿಯ ವೇಳೆಯಲ್ಲಿ ಎದುರಿಸಿ ಧ್ವಂಸಮಾಡುವ ಸಾಮರ್ಥ್ಯವು ಆ ವೀರಪುರುಷರಿಗಿರಲಿಲ್ಲ.)

ಯುಧಿಷ್ಠಿರ! ಈ ರೀತಿಯಲ್ಲಿ ಪ್ರಪಂಚವೆಲ್ಲವೂ ನಾಶಹೊಂದುತ್ತಿರಲಾಗಿ ಮತ್ತು ಯಜ್ಞ-ಯಾಗಾದಿಗಳೆಲ್ಲವೂ ನಿಂತುಹೋಗಲಾಗಿ, ಹವಿರ್ಭುಜರಾದ ದೇವತೆಗಳು ಬಹಳ ದುಃಖಿತರಾದರು. ಒಡನೆಯೇ ದೇವತೆಗಳೆಲ್ಲರೂ ಇಂದ್ರನ ಸಮೀಪಕ್ಕೆ ಹೋಗಿ ಪೃಥ್ವಿಯಲ್ಲಿ ಋಷಿ-ಮಹರ್ಷಿಗಳಿಗೂ ಬ್ರಾಹ್ಮಣರಿಗೂ ಒದಗಿರುವ ವಿಪತ್ತಿನ ವಿಷಯವಾಗಿ ಸುದೀರ್ಘವಾಗಿ ಸಮಾಲೋಚಿಸಿದರು. ಆ ವಿಪತ್ತಿಗೆ ಪರಿಹಾರಮಾರ್ಗವನ್ನು ಕಾಣದೇ ದೇವತೆಗಳು ಇಂದ್ರಪುರಸ್ಸರರಾಗಿ ಸಕಲರಿಗೂ ಶರಣ್ಯನಾದ, ಶರಣಾಗತವತ್ಸಲನಾದ,

ದೇವದೇವನಾದ, ಆದಿ-ಮಧ್ಯಾಂತರಹಿತನಾದ, ವಿಭುವಾದ, ವೈಕುಂಠಪತಿಯಾದ, ಅಪರಾಜಿತನಾದ ಶ್ರೀಮನ್ನಾರಾಯಣನ ಬಳಿಗೆ ಹೋಗಿ ಮಧುಸೂದನನನ್ನು ಸ್ತೋತ್ರಮಾಡಿದರು :

ತ್ವಂ ನಃ ಸ್ರಷ್ಟಾ ಚ ಭರ್ತಾ ಚ ಹರ್ತಾ ಚ ಜಗತಃ ಪ್ರಭೋ ।
ತ್ವಯಾ ಸೃಷ್ಟಮಿದಂ ವಿಶ್ವಂ ಯಚ್ಚೇಙ್ಗಂ ಯಚ್ಚ ನೇಙ್ಗತಿ ॥೨೦॥

ತ್ವಯಾ ಭೂಮಿಃ ಪುರಾ ನಷ್ಟಾ ಸಮುದ್ರಾತ್ಪುಷ್ಕರೇಕ್ಷಣ ।
ವಾರಾಹಂ ವಪುರಾಶ್ರಿತ್ಯ ಜಗದರ್ಥೇ ಸಮುದ್ಧೃತಾ ॥೨೧॥

ಆದಿದೈತ್ಯೋ ಮಹಾವೀರ್ಯೋ ಹಿರಣ್ಯಕಶಿಪುಃ ಪುರಾ ।
ನಾರಸಿಂಹಂ ವಪುಃ ಕೃತ್ವಾ ಸೂದಿತಃ ಪುರುಷೋತ್ತಮ ॥೨೨॥

ಅವಧ್ಯಃ ಸರ್ವಭೂತಾನಾಂ ಬಲಿಶ್ಚಾಪಿ ಮಹಾಸುರಃ ।
ವಾಮನಂ ವಪುರಾಶ್ರಿತ್ಯ ತ್ರೈಲೋಕ್ಯಾದ್ಭ್ರಂಶಿತಸ್ತ್ವಯಾ ॥೨೩॥

ಅಸುರಶ್ಚ ಮಹೇಷ್ವಾಸೋ ಜಮ್ಭ ಇತ್ಯಭಿವಿಶ್ರುತಃ ।
ಯಜ್ಞಕ್ಷೋಭಕರಃ ಕ್ರೂರಸ್ತ್ವಯೈವ ವಿನಿಪಾತಿತಃ ॥೨೪॥

ಏವಮಾದೀನಿ ಕರ್ಮಾಣಿ ಯೇಷಾಂ ಸಂಖ್ಯಾ ನ ವಿದ್ಯತೇ ।
ಅಸ್ಮಾಕಂ ಭಯಭೀತಾನಾಂ ತ್ವಂ ಗತಿರ್ಮಧುಸೂದನ ॥೨೫॥

ತಸ್ಮಾತ್ತ್ವಾಂ ದೇವದೇವೇಶ ಲೋಕಾರ್ಥಂ ಜ್ಞಾಪಯಾಮಹೇ ।
ರಕ್ಷ ಲೋಕಾಂಶ್ಚ ದೇವಾಂಶ್ಚ ಶಕ್ರಂ ಚ ಮಹತೋ ಭಯಾತ್ ॥೨೬॥

"ಪ್ರಭುವೇ! ಮೂರುಲೋಕಗಳ ಸೃಷ್ಟಿ-ಸ್ಥಿತಿ-ಲಯಗಳಿಗೂ ನೀನೇ ಕಾರಣನಾಗಿರುವೆ. ಸ್ಥಾವರ-ಜಂಗಮಗಳಿಂದ ಕೂಡಿರುವ ಈ ಪೃಥ್ವಿಯು ನಿನ್ನಿಂದಲೇ ಸೃಷ್ಟಿಸಲ್ಪಟ್ಟಿದೆ. ಕಮಲದಳನಯನನೇ! ಹಿಂದೆ ಭೂಮಿಯು ನಷ್ಟವಾಗಿ ಹೋಗಿದ್ದಾಗ (ಅಸುರನೊಬ್ಬನು ಭೂಮಿಯನ್ನು ಹೊತ್ತುಕೊಂಡು ಸಮುದ್ರದೊಳಗೆ ಹೊರಟುಹೋಗಿದ್ದಾಗ) ನೀನು ವರಾಹರೂಪವನ್ನು ಧರಿಸಿ ಸಮುದ್ರವನ್ನು ಹೊಕ್ಕು ಅಸುರನನ್ನು ಸಂಹರಿಸಿ, ನಿನ್ನ ಕೋರೆದಾಡೆಗಳಿಂದ ಈ ಪೃಥ್ವಿಯನ್ನು ಸಮುದ್ರದಿಂದ ಮೇಲೆತ್ತಿ ಉದ್ಧರಿಸಿದೆ. ಆದಿ

ದೈತ್ಯನೆನಿಸಿದ, ಮಹಾಪರಾಕ್ರಮಿಯಾದ ಹಿರಣ್ಯಕಶಿಪುವನ್ನು ಪ್ರಹ್ಲಾದನ ರಕ್ಷಣಾರ್ಥವಾಗಿ ಮತ್ತು ಈ ಜಗತ್ತಿನ ಉದ್ಧಾರಕ್ಕಾಗಿ ನರಸಿಂಹರೂಪವನ್ನು ಧರಿಸಿ ಸಂಹರಿಸಿದೆ. ಸಮಸ್ತಪ್ರಾಣಿಗಳಿಂದಲೂ ಅವಧ್ಯನೆಂದು ಪ್ರಸಿದ್ಧನಾಗಿದ್ದ ಮಹಾಪರಾಕ್ರಮಿಯಾಗಿದ್ದ, ಅಸುರನಾದ ಬಲಿಯನ್ನು ವಾಮನಾವತಾರವನ್ನು ಮಾಡಿ ತ್ರೈಲೋಕ್ಯಾಧಿಪತ್ಯದಿಂದ ಭ್ರಂಶಿತನನ್ನಾಗಿ ಮಾಡಿದೆ.



(ಮೂರು ಲೋಕಗಳಲ್ಲಿಯೂ ಅವನಿಗೆ ಸ್ಥಾನವೇ ಇಲ್ಲದಂತೆ ಮಾಡಿದೆ). ಮಹಾಧನುರ್ಧರನಾದ, ಯಜ್ಞಧ್ವಂಸಕನಾದ, ಮಹಾಕ್ರೂರನಾದ, ಜಂಭಾಸುರನೆಂದು ವಿಖ್ಯಾತನಾದ ಅಸುರನು ನಿನ್ನಿಂದಲೇ ಕೊಲ್ಲಲ್ಪಟ್ಟನು. ಸಕಲ

ಲೋಕಗಳಿಗೂ ಸೌಖ್ಯದಾಯಕವಾದ ನಿನ್ನ ಇಂತಹ ಕಾರ್ಯಗಳು ಅಗಣಿತ ವಾಗಿವೆ. ಪ್ರಭೋ! ದುಷ್ಟಶಿಕ್ಷಣ-ಶಿಷ್ಟಪರಿಪಾಲನೆಗಳಿಗಾಗಿ ನೀನು ಇಂತಹ ಕಾರ್ಯಗಳನ್ನು ಮಾಡಿರುವೆ.

ಮಧುಸೂದನನೇ! ಭಯದಿಂದ ವಿಹ್ವಲರಾಗಿರುವ ನಮಗಿಂದು ನೀನೇ ಶರಣ್ಯನು. ನೀನೇ ದಿಕ್ಕು. ಇಂದಾದರೂ ದುಷ್ಟಶಿಕ್ಷಣಾರ್ಥವಾಗಿಯೇ ನಾವು ನಿನ್ನಲ್ಲಿಗೆ ಬಂದು ನಿನ್ನನ್ನು ಪ್ರಾರ್ಥಿಸುತ್ತಿದ್ದೇವೆ. ಇಂದು ಪೃಥ್ವಿಯಲ್ಲಿ ನಡೆಯುತ್ತಿರುವ ದಾನವರ ಕ್ರೂರಕರ್ಮಗಳನ್ನು ನಿನ್ನಲ್ಲಿ ವಿಜ್ಞಾಪಿಸಲು ಬಂದಿರುವೆವು.

ಮಹಾನುಭಾವನೇ! ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಲೋಕಗಳನ್ನೂ, ದೇವತೆಗಳನ್ನೂ ಮತ್ತು ನಮ್ಮ ಅಧಿಪತಿಯಾದ ದೇವೇಂದ್ರನನ್ನೂ ಈ ಮಹಾಭಯದಿಂದ ಮುಕ್ತರನ್ನಾಗಿ ಮಾಡುವವನಾಗು. ನಮ್ಮನ್ನೂ ದಾನವರಿಂದ ಸಂರಕ್ಷಿಸು."

೧೦೨ನೆಯ ಅಧ್ಯಾಯವು ಮುಗಿಯಿತು.

೧೦೩ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಭಗವಾನ್ ವಿಷ್ಣುವಿನ ಆದೇಶದಂತೆ ದೇವತೆಗಳು ಅಗಸ್ತ್ಯರ ಆಶ್ರಮಕ್ಕೆ ಹೋಗಿ ಅವರನ್ನು ಸ್ತುತಿಸಿದುದು

ದೇವತೆಗಳು ಮುಂದುವರಿದು ಹೇಳಿದರು :

**ತವ ಪ್ರಸಾದಾದ್ವರ್ಧನ್ತೇ ಪ್ರಜಾಃ ಸರ್ವಾಶ್ಚತುರ್ವಿಧಾಃ ।**
**ತಾ ಭಾವಿತಾ ಭಾವಯನ್ತಿ ಹವ್ಯಕವ್ಯೈರ್ದಿವೌಕಸಃ ॥೧॥**

**ಲೋಕಾ ಹ್ಯೇವಂ ವಿವರ್ಧನ್ತೇ ಹ್ಯನ್ಯೋನ್ಯಂ ಸಮುಪಾಶ್ರಿತಾಃ ।**
**ತ್ವತ್ಪ್ರಸಾದಾನ್ನಿರುದ್ವಿಗ್ನಾಸ್ತ್ವಯೈವ ಪರಿರಕ್ಷಿತಾಃ ॥೨॥**

**ಇದಂ ಚ ಸಮನುಪ್ರಾಪ್ತಂ ಲೋಕಾನಾಂ ಭಯಮುತ್ತಮಮ್ ।**
**ನ ಚ ಜಾನೀಮ ಕೇನೇಮೇ ರಾತ್ರೌ ವಧ್ಯನ್ತಿ ಬ್ರಾಹ್ಮಣಾಃ ॥೩॥**

**ಕ್ಷೀಣೇಷು ಚ ಬ್ರಾಹ್ಮಣೇಷು ಪೃಥಿವೀ ಕ್ಷಯಮೇಷ್ಯತಿ ।**
**ತತಃ ಪೃಥಿವ್ಯಾಂ ಕ್ಷೀಣಾಯಾಂ ತ್ರಿದಿವಂ ಕ್ಷಯಮೇಷ್ಯತಿ ॥೪॥**

**ತ್ವತ್ಪ್ರಸಾದಾನ್ಮಹಾಬಾಹೋ ಲೋಕಾಃ ಸರ್ವೇ ಜಗತ್ಪತೇ ।**
**ವಿನಾಶಂ ನಾಧಿಗಚ್ಛೇಯುಸ್ತ್ವಯಾ ವೈ ಪರಿರಕ್ಷಿತಾಃ ॥೫॥**

"ಮಹಾನುಭಾವನೇ! ಭೂಮಿಯಲ್ಲಿ ನಿನ್ನಿಂದಲೇ ಸೃಷ್ಟಿಸಲ್ಪಟ್ಟಿರುವ ಬ್ರಹ್ಮ-ಕ್ಷತ್ರಿಯ-ವೈಶ್ಯ-ಶೂದ್ರರು ನಿನ್ನ ಕರುಣೆಯಿಂದಲೇ ಅಭಿವೃದ್ಧಿಯನ್ನು ಹೊಂದುತ್ತಾರೆ. ನಿನ್ನ ಇಚ್ಛೆಯಿಂದಲೇ ಪೃಥ್ವಿಯಲ್ಲಿ ಜನ್ಮತಾಳಿದ ಇವರೆಲ್ಲರೂ ಹವ್ಯ-ಕವ್ಯಾದಿಗಳಿಂದ ನಮ್ಮನ್ನೂ, ಪಿತೃದೇವತೆಗಳನ್ನೂ ತೃಪ್ತಿಪಡಿಸುತ್ತಾರೆ. (ಹವ್ಯ-ಕವ್ಯಗಳಿಂದ ತೃಪ್ತರಾದ ನಾವೂ ಕಾಲಕಾಲಕ್ಕೆ ಮಳೆ-ಬೆಳೆಗಳನ್ನು ನೀಡುತ್ತೇವೆ.) ಈ ರೀತಿಯಲ್ಲಿ ಲೋಕಗಳು ಅನ್ಯೋನ್ಯಾಶ್ರಯದಿಂದಲೂ, ನಿನ್ನ ಅನುಗ್ರಹದಿಂದಲೂ ಯಾವ ವಿಧವಾದ ಉಪದ್ರವಗಳೂ ಇಲ್ಲದೇ ನಿನ್ನಿಂದ ರಕ್ಷಿಸಲ್ಪಟ್ಟು ಅಭಿವೃದ್ಧಿಯನ್ನು ಹೊಂದುತ್ತಿರುತ್ತವೆ.

ಜಗತ್ಪತಿಯೇ! ಇತ್ತೀಚೆಗೆ ಭೂಲೋಕದಲ್ಲಿ ಮಾನವರು ಭಯದಿಂದ ಉದ್ವಿಗ್ನರಾಗಿದ್ದಾರೆ. ಈ ಭಯವು ಯಾರಿಂದ ಉಂಟಾಗುತ್ತಿದೆ? ಮತ್ತು ರಾತ್ರಿಯ ವೇಳೆಯಲ್ಲಿ ಬ್ರಾಹ್ಮಣರು ಯಾರಿಂದ ವಧಿಸಲ್ಪಡುತ್ತಿದ್ದಾರೆ? ಎಂಬುದನ್ನು ನಾವೂ ತಿಳಿಯದವರಾಗಿದ್ದೇವೆ. ಬ್ರಾಹ್ಮಣ್ಯವು ಕ್ಷೀಣಿಸಿದರೆ ಪೃಥ್ವಿಯೇ ಕ್ಷೀಣಿಸುತ್ತದೆ ; ಭೂಮಿಯೇ ವಿನಾಶಹೊಂದುತ್ತದೆ. ಭೂಮಿಯು ಕ್ಷೀಣಿಸಿದರೆ ಸ್ವರ್ಗವೂ ವಿನಾಶಹೊಂದುತ್ತದೆ. ಮಹಾಬಾಹುವೇ! ನಿನ್ನ ಅನುಗ್ರಹದಿಂದಾಗಿ ನಿನ್ನಿಂದ ಸುರಕ್ಷಿತವಾಗಿರುವ ಲೋಕಗಳು ವಿನಾಶವನ್ನು ಹೊಂದದಿರಲಿ. ಪ್ರೀತನಾಗಿ ಅನುಗ್ರಹಿಸು, ದೇವೇಶ!"

ದೇವತೆಗಳು ಭಕ್ತಿಪೂರ್ವಕವಾಗಿ ಹೇಳಿದ ಮಾತುಗಳನ್ನು ಕೇಳಿ ಶ್ರೀಮನ್ನಾರಾಯಣನು ಉತ್ತರಿಸಿದನು :

"ದೇವತೆಗಳಿರಾ! ಪ್ರಪಂಚದ ಪ್ರಜೆಗಳು ಕ್ಷಯಿಸುತ್ತಿರುವುದಕ್ಕೆ ಕಾರಣವನ್ನು ನಾನು ತಿಳಿದಿರುತ್ತೇನೆ. ನಿಮಗೂ ಈ ಕಾರಣವನ್ನು ವಿವರಿಸಿ ಹೇಳುತ್ತೇನೆ. ನಿಮ್ಮ ಮನಸ್ಸಿನ ವ್ಯಾಕುಲವನ್ನು ದೂರಮಾಡಿ ನಾನು ಹೇಳುವುದನ್ನು ಕೇಳಿರಿ.

ಪರಮದಾರುಣವಾದ ಮಹಾಭಯಂಕರವಾದ 'ಕಾಲೇಯ' ಎಂಬ

ಹೆಸರಿನ ರಾಕ್ಷಸಗಣವೊಂದಿರುವುದು. ಕಾಲೇಯದಾನವರು ವೃತ್ರಾಸುರನನ್ನು ತಮ್ಮ ನಾಯಕನನ್ನಾಗಿ ಮಾಡಿಕೊಂಡು ಮೂರು ಲೋಕಗಳನ್ನೂ ವಿಧ್ವಂಸಮಾಡುತ್ತಿದ್ದರು. ಸಹಸ್ರಾಕ್ಷನಾದ, ಧೀಮಂತನಾದ ದೇವೇಂದ್ರನಿಂದ ವೃತ್ರಾಸುರನು ಹತನಾದನೆಂದು ತಿಳಿದೊಡನೆಯೇ ಆ ಕಾಲೇಯದಾನವರು ತಮ್ಮ ಪ್ರಾಣಗಳನ್ನುಳಿಸಿಕೊಳ್ಳುವ ಸಲುವಾಗಿ ವರುಣಾಲಯವಾದಸಮುದ್ರದ ತಳಭಾಗದಲ್ಲಿ ಸೇರಿಕೊಂಡಿರುವರು. ಘೋರವಾದ ಮೊಸಳೆಗಳಿಂದಲೂ, ತಿಮಿ-ತಿಮಿಂಗಿಲಗಳಿಂದಲೂ ನಿಬಿಡವಾಗಿರುವ ಆ ಸಮುದ್ರದಲ್ಲಿ ಅಡಗಿಕೊಂಡಿರುವ ಕಾಲೇಯರು ರಾತ್ರಿಯ ವೇಳೆಯಲ್ಲಿ ಸಮುದ್ರದಿಂದ ಹೊರಕ್ಕೆ ಬಂದು ಪೃಥ್ವಿಯಲ್ಲಿ ಅಲೆದಾಡುತ್ತಾ ಕಣ್ಣಿಗೆ ಬಿದ್ದ ಆಶ್ರಮಗಳೆಲ್ಲವನ್ನೂ ಧ್ವಂಸಮಾಡುವರು. ಆಶ್ರಮವಾಸಿಗಳಾದ ತಪಸ್ವಿಗಳನ್ನೂ, ಬ್ರಾಹ್ಮಣರನ್ನೂ ಸಂಹರಿಸುವರು. ಈ ರೀತಿಯಲ್ಲಿ ಮೂರು ಲೋಕಗಳನ್ನೂ ವಿನಾಶಮಾಡಬೇಕೆಂಬುದೇ ಅವರ ಪರಮಧ್ಯೇಯವಾಗಿರುವುದು. ಅವರು ಸಮುದ್ರದ ತಳಭಾಗದಲ್ಲಿ ವಾಸಮಾಡುತ್ತಿರುವುದರಿಂದ ಅವರನ್ನು ಸಂಹಾರ ಮಾಡುವ ಸಾಧ್ಯತೆಯಿಲ್ಲ. ಆದುದರಿಂದ ನೀವು ಸಮುದ್ರವನ್ನೇ ಶೋಷಿಸಿ ಬಿಡಲು ಸಮರ್ಥನಾದವನೊಬ್ಬನನ್ನು ಈ ಕೂಡಲೇ ಹುಡುಕಬೇಕು. ಮಹರ್ಷಿಗಳಾದ ಅಗಸ್ತ್ಯರೊಬ್ಬರನ್ನುಳಿದು ಸಮುದ್ರವನ್ನು ಶೋಷಿಸಲು ಸಮರ್ಥರಾದವರು ಈ ಮೂರು ಲೋಕಗಳಲ್ಲಿಯೇ ಬೇರಾರೂ ಇರು ವುದಿಲ್ಲ. ಸಮುದ್ರವನ್ನು ಶೋಷಿಸಿದ ಹೊರತು ಕಾಲೇಯರನ್ನು ಸಂಹಾರ ಮಾಡುವ ಸಾಧ್ಯತೆಯೂ ಇಲ್ಲ."

ಮಹಾವಿಷ್ಣುವಿನ ಈ ಮಾತುಗಳನ್ನು ಕೇಳಿ ದೇವತೆಗಳು ಒಡನೆಯೇ ಚತುರ್ಮುಖನ ಬಳಿಗೆ ಹೋಗಿ ಅವನ ಅನುಮತಿಯನ್ನು ಪಡೆದು ಅಗಸ್ತ್ಯಾ ಶ್ರಮಕ್ಕೆ ತೆರಳಿದರು. ಬ್ರಹ್ಮಲೋಕದಲ್ಲಿ ಬ್ರಹ್ಮನನ್ನು ಸುತ್ತುವರಿದು ಬ್ರಹ್ಮನನ್ನು ಉಪಾಸನೆಮಾಡುತ್ತಾ ಅನೇಕಾನೇಕ ಬ್ರಹ್ಮರ್ಷಿಗಳು ಕುಳಿತಿರುವಂತೆ– ಅಗಸ್ತ್ಯಾಶ್ರಮದಲ್ಲಿ ಮಹಾತೇಜಸ್ವಿಗಳಾದ, ವರುಣನ ಪುತ್ರರಾದ, ಬ್ರಹ್ಮರ್ಷಿ ಗಳಾದ ಅಗಸ್ತ್ಯರನ್ನು ಸುತ್ತುವರಿದು ಅನೇಕಾನೇಕ ಋಷಿ-ಮಹರ್ಷಿಗಳು ಕುಳಿತಿದ್ದರು. ದೇವತೆಗಳು ಅಂತಹ ಮಹಾತೇಜಸ್ವಿಗಳಾದ, ಎಂದಿಗೂ ಧರ್ಮಮಾರ್ಗದಿಂದ ಚ್ಯುತರಾಗದ, ಆಶ್ರಮಸ್ಥರಾದ, ತಪೋರಾಶಿಯಾದ,

ಸ್ವಕರ್ಮಾನುಷ್ಠಾನದಲ್ಲಿಯೇ ನಿಯತಮನಸ್ಕರಾದ ಮೈತ್ರಾವರುಣಿಮಹರ್ಷಿಗಳನ್ನು ( ಅಗಸ್ತ್ಯರನ್ನು ) ಪ್ರಾರ್ಥಿಸಿದರು :

**ನಹುಷೇಣಾಭಿತಪ್ತಾನಾಂ ತ್ವಂ ಲೋಕಾನಾಂ ಗತಿಃ ಪುರಾ ।**
**ಭ್ರಂಶಿತಶ್ಚ ಸುರೈಶ್ವರ್ಯಾತ್ಸ್ವರ್ಲೋಕಾಲ್ಲೋಕಕಣ್ಟಕಃ ॥೧೫॥**

**ಕ್ರೋಧಾತ್ಪ್ರವೃದ್ಧಃ ಸಹಸಾ ಭಾಸ್ಕರಸ್ಯ ನಗೋತ್ತಮಃ ।**
**ವಚಸ್ತವಾನತಿಕ್ರಾಮನ್ವಿನ್ಧ್ಯಃ ಶೈಲೋ ನ ವರ್ಧತೇ ॥೧೬॥**



**ತಮಸಾ ಚಾವೃತೇ ಲೋಕೇ ಮೃತ್ಯುನಾಭ್ಯರ್ದಿತಾಃ ಪ್ರಜಾಃ ।**
**ತ್ವಾಮೇವ ನಾಥಮಾಸಾದ್ಯ ನಿರ್ವೃತಿಂ ಪರಮಾಂ ಗತಾಃ ॥೧೭॥**

**ಅಸ್ಮಾಕಂ ಭಯಭೀತಾನಾಂ ನಿತ್ಯಶೋ ಭಗವಾನ್ಗತಿಃ ।**
**ತತಸ್ತ್ವಾರ್ತಾಃ ಪ್ರಯಾಚಾಮೋ ವರಂ ತ್ವಾಂ ವರದೋ ಹ್ಯಸಿ ॥೧೮॥**

"ಮಹರ್ಷಿಗಳೇ! ತಮ್ಮ ಪ್ರಭಾವವನ್ನು ಎಷ್ಟು ಹೇಳಿದರೂ ಸಾಲದು. ಪೂರ್ವದಲ್ಲಿ ನಹುಷನಿಂದ ಪರಿತಪ್ತರಾಗಿದ್ದ ತ್ರಿಲೋಕವಾಸಿಗಳಿಗೆ ನೀವೇ ಶರಣ್ಯರಾದಿರಿ. ಲೋಕಕಂಟಕನಾಗಿದ್ದ ಮದಾಂಧನಾಗಿದ್ದ ಅವನು ಸ್ವರ್ಗ ಲೋಕದಿಂದಲೂ, ಸ್ವರ್ಗಸಿಂಹಾಸನದಿಂದಲೂ ಭ್ರಷ್ಟನಾಗಿಹೋದನು. ಹಿಂದೊಂದು ಸಮಯದಲ್ಲಿ ವಿಂಧ್ಯಪರ್ವತನು ಕುಪಿತನಾಗಿ ಸೂರ್ಯನ ಗತಿಯನ್ನೇ ತಡೆದುಬಿಡಬೇಕೆಂದು ಬೆಳೆಯತೊಡಗಿದನು. ಅದರಿಂದ ಪ್ರಪಂಚಕ್ಕೇ ಮಹತ್ತರವಾದ ಹಾನಿಯುಂಟಾಗುತ್ತಿದ್ದಿತು. ಆ ಸಮಯದಲ್ಲಿ ನೀವು ವಿಂಧ್ಯನ ಸಮೀಪಕ್ಕೆ ಹೋಗಿ ಅವನ ಬೆಳವಣಿಗೆಯು ಕುಂಠಿತವಾಗುವಂತೆ ಮಾಡಿದಿರಿ. ಅದರಿಂದಾಗಿ ಲೋಕಕ್ಷೇಮವೂ ಉಂಟಾಯಿತು. ಲೋಕವು ತಮಸ್ಸಿನಿಂದ ಆವರಿಸಲ್ಪಟ್ಟಿದ್ದಾಗ, ಪ್ರಜೆಗಳು ಮೃತ್ಯುವಿನಿಂದ ಪೀಡಿತರಾಗಿದ್ದಾಗ ಮಹಾತ್ಮರಾದ ನಿಮ್ಮನ್ನು ಶರಣ್ಯರನ್ನಾಗಿ ಪಡೆದು ಪ್ರಜೆಗಳು ಮೃತ್ಯುವಿನಿಂದ ಪಾರಾಗಿದ್ದಾರೆ. ಆದುದರಿಂದ ಸಕಲಚರಾಚರಪ್ರಾಣಿಗಳಿಗೂ ನೀವೊಬ್ಬರೇ ನಾಥರು. ಮಹಾನುಭಾವರೇ! ಭಯದಿಂದ ವಿಹ್ವಲರಾಗಿರುವ ನಮಗೂ ನೀವೇ ದಿಕ್ಕು. ಆರ್ತರಾಗಿರುವ ನಾವು ನಿಮ್ಮನ್ನು ಪ್ರಾರ್ಥಿಸುವ ಸಲುವಾಗಿ ನಿಮ್ಮ ಬಳಿಗೆ ಬಂದಿರುತ್ತೇವೆ. ವರದರಾಗಿರುವ ನೀವು ನಾವು ಕೇಳಲಿರುವ ವರವನ್ನು ಕೊಟ್ಟು ನಮ್ಮ ಭೀತಿಯನ್ನು ದೂರಮಾಡಲು ಸಮರ್ಥರಾಗಿರುವಿರಿ."

೧೦೩ನೆಯ ಅಧ್ಯಾಯವು ಮುಗಿಯಿತು.

೧೦೪ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಬೆಳೆಯುತ್ತಿರುವ ವಿಂಧ್ಯಪರ್ವತವನ್ನು ತಡೆಯುವಂತೆ ದೇವತೆಗಳು ಅಗಸ್ತ್ಯರನ್ನು ಪ್ರಾರ್ಥಿಸಿದುದು

ಯುಧಿಷ್ಠಿರನು ಲೋಮಶರನ್ನು ಪ್ರಶ್ನಿಸಿದನು :

"ಮಹರ್ಷಿಗಳೇ! ಯಾವ ಕಾರಣದಿಂದಾಗಿ ವಿಂಧ್ಯನು ಕ್ರೋಧ

ಮೂರ್ಛಿತನಾಗಿ ಬೆಳೆಯತೊಡಗಿದನೆಂಬುದನ್ನು ಸವಿಸ್ತರವಾಗಿಯೇ ತಿಳಿದು ಕೊಳ್ಳಲಿಚ್ಛಿಸಿದ್ದೇನೆ. ದಯೆಯಿಟ್ಟು ಹೇಳಿರಿ."

"ಯುಧಿಷ್ಠಿರ! ಸೂರ್ಯನು ಉದಯಾಸ್ತಮನಸಮಯಗಳಲ್ಲಿ ಸುಪ್ರಸಿದ್ಧವಾದ, ಸುವರ್ಣಮಯವಾದ ಮೇರುಪರ್ವತವನ್ನು ಪ್ರದಕ್ಷಿಣೆ ಮಾಡುತ್ತಾ ಪರಿಕ್ರಮಿಸುತ್ತಾನೆ. ಇದು ಅವನ ದೈನಂದಿನಕರ್ತವ್ಯವಾಗಿದೆ. ವಿಂಧ್ಯಪರ್ವತನು ಸೂರ್ಯನು ಮಾಡುತ್ತಿದ್ದ ಆ ಕಾರ್ಯವನ್ನು ಅನುದಿನವೂ ನೋಡುತ್ತಲೇ ಇದ್ದನು. 'ನನ್ನಂತೆಯೇ ಇರುವ ಮೇರುಪರ್ವತಕ್ಕೆ ಮಾತ್ರವೇ ಸೂರ್ಯನು ಅನುದಿನವೂ ಪ್ರದಕ್ಷಿಣೆಮಾಡಿ ಗೌರವಿಸುತ್ತಿರು ವನಲ್ಲಾ!'–ಎಂದು ವಿಂಧ್ಯನಿಗೆ ಬಹಳ ಖೇದವಾಯಿತು. ಒಮ್ಮೆ ಸೂರ್ಯ ನನ್ನೇ ಸಂಧಿಸಿ ಹೇಳಿದನು : "ಸೂರ್ಯದೇವನೇ! ನೀನು ಅನುದಿನವೂ ಮೇರುಪರ್ವತವನ್ನು ಯಾವ ರೀತಿಯಲ್ಲಿ ಪ್ರದಕ್ಷಿಣೆಮಾಡಿ ಗೌರವಿಸು ವೆಯೋ ಅದೇ ರೀತಿಯಲ್ಲಿ ಅವನಿಗೆ ಸದೃಶನಾಗಿಯೇ ಇರುವ ನನ್ನನ್ನೂ ಪ್ರದಕ್ಷಿಣೆಮಾಡಿ ಗೌರವಿಸು."

ಅದಕ್ಕುತ್ತರವಾಗಿ ಸೂರ್ಯನು ಹೇಳಿದನು :

**ನಾಹಮಾತ್ಮೇಚ್ಛಯಾ ಶೈಲಂ ಕರೋಮ್ಯೇನಂ ಪ್ರದಕ್ಷಿಣಮ್ ।**
**ಏಷ ಮಾರ್ಗಃ ಪ್ರದಿಷ್ಟೋ ಮೇ ಯೈರಿದಂ ನಿರ್ಮಿತಂ ಜಗತ್ ॥೫॥**

"ವಿಂಧ್ಯನೇ! ಸ್ವೇಚ್ಛೆಯಿಂದ ನಾನು ಮೇರುಪರ್ವತವನ್ನು ಪ್ರದಕ್ಷಿಣೆ ಮಾಡುತ್ತಲೂ ಇಲ್ಲ ; ಗೌರವಿಸುತ್ತಲೂ ಇಲ್ಲ. ಈ ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣರಾದವರು ನನ್ನ ಚಲನೆಗೆ ಈ ಮಾರ್ಗವನ್ನು ನಿರ್ಣಯಿಸಿ ದ್ದಾರೆ. (ಅವರು ನಿರ್ಣಯಿಸಿರುವ ಈ ಮಾರ್ಗವನ್ನು ಬಿಟ್ಟು ಸ್ವೇಚ್ಛೆಯಿಂದ ಒಂದು ಹೆಜ್ಜೆ ಮುಂದಿಡಲೂ, ಹಿಂದಿಡಲೂ ಅಥವಾ ಅಕ್ಕ-ಪಕ್ಕಗಳಲ್ಲಿಡಲೂ ನಾನು ಸ್ವತಂತ್ರನಲ್ಲ.)"

ಯುಧಿಷ್ಠಿರ! ಸೂರ್ಯನು ಹೀಗೆ ಹೇಳಿದೊಡನೆಯೇ ವಿಂಧ್ಯನಿಗೆ ಮಹಾಕೋಪವುಂಟಾಯಿತು. ಸೂರ್ಯ-ಚಂದ್ರರ ಗತಿಯನ್ನೇ ತಡೆದು ಬಿಡುವೆನೆಂದು ನಿಶ್ಚಯಿಸಿ ಎತ್ತರವಾಗಿ ಬೆಳೆಯಲುಪಕ್ರಮಿಸಿದನು. ವಿಂಧ್ಯನು ತನ್ನ ಮೇರೆಯನ್ನು ಮೀರಿ ಮೇಲ್ಮುಖವಾಗಿ ಬೆಳೆಯುತ್ತಿರುವುದನ್ನು ಕಂಡು

ದೇವತೆಗಳು ಭೀತರಾಗಿ ವಿಂಧ್ಯನ ಬಳಿಗೆ ಬಂದು ಸೃಷ್ಟಿಕ್ರಮದ ವ್ಯವಸ್ಥೆಯನ್ನು ಅವ್ಯವಸ್ಥೆಗೊಳಿಸಲು ಯತ್ನಿಸಬಾರದೆಂದು ಬಹುವಾಗಿ ಕೇಳಿಕೊಂಡರು. ದೇವತೆಗಳ ಮಾತಿಗೆ ವಿಂಧ್ಯನು ಮಣಿಯಲಿಲ್ಲ. ದೇವತೆಗಳು ತಮ್ಮ-ತಮ್ಮಲ್ಲಿಯೇ ಸಮಾಲೋಚಿಸಿ ಅಗಸ್ತ್ಯರನ್ನುಳಿದು ತಮಗೆ ಬೇರಾರೂ ರಕ್ಷಕರಿಲ್ಲವೆಂದು ನಿಶ್ಚಯಿಸಿ–ಆಶ್ರಮಸ್ಥರಾಗಿದ್ದ, ತಪಸ್ವಿಗಳಾದ, ಧರ್ಮಾತ್ಮರುಗಳಲ್ಲಿ ಶ್ರೇಷ್ಠರಾದ, ಅದ್ಭುತವಾದ ವೀರ್ಯದಿಂದ ಕೂಡಿರುವ, ಮಹಾತೇಜಸ್ವಿಗಳಾದ ಅಗಸ್ತ್ಯರನ್ನು ಸಂದರ್ಶಿಸಿ ಬದ್ಧಾಂಜಲಿಗಳಾಗಿ ಅವರನ್ನು ಕುರಿತು ಈ ಮಾತುಗಳನ್ನು ಹೇಳಿದರು :

**ಸೂರ್ಯಾಚನ್ದ್ರಮಸೋರ್ಮಾರ್ಗಂ ನಕ್ಷತ್ರಾಣಾಂ ಗತಿಂ ತಥಾ ।**
**ಶೈಲರಾಜೋ ವೃಣೋತ್ಯೇಷ ವಿನ್ಧ್ಯಃ ಕ್ರೋಧವಶಾನುಗಃ ॥೯॥**

**ತಂ ನಿವಾರಯಿತುಂ ಶಕ್ತೋ ನಾನ್ಯಃ ಕಶ್ಚಿದ್ದ್ವಿಜೋತ್ತಮ ।**
**ಋತೇ ತ್ವಾಂ ಹಿ ಮಹಾಭಾಗ ತಸ್ಮಾದೇನಂ ನಿವಾರಯ ॥೧೦॥**

"ಮಹರ್ಷಿಗಳೇ! ಕ್ರೋಧಮೂರ್ಛಿತನಾಗಿರುವ ಪರ್ವತರಾಜನಾದ ವಿಂಧ್ಯನು ಸೂರ್ಯ-ಚಂದ್ರರ ಮಾರ್ಗವನ್ನೂ ಮತ್ತು ನಕ್ಷತ್ರಗಳ ಸಂಚಾರವನ್ನೂ ತಡೆದುಬಿಡುವುದರಲ್ಲಿದ್ದಾನೆ. ಬ್ರಾಹ್ಮಣೋತ್ತಮರೇ! ಮಹಾಭಾಗರೇ! ನಿಮ್ಮೊಬ್ಬರನ್ನುಳಿದು ಮತ್ತಾರೂ ಅವನನ್ನು ಈ ದುಸ್ಸಾಹಸದಿಂದ ವಿಮುಖನನ್ನಾಗಿ ಮಾಡಲಾರರು. ಆದುದರಿಂದ ನೀವು ದಯಮಾಡಿ ಅವನ ಈ ಕಾರ್ಯವನ್ನು ಪ್ರತಿಬಂಧಿಸಿರಿ."

ದೇವತೆಗಳ ಪ್ರಾರ್ಥನೆಯನ್ನು ಕೇಳಿ ಕರುಣಾಮಯರಾದ ಅಗಸ್ತ್ಯರು ವಿಂಧ್ಯಪರ್ವತದ ಸಮೀಪಕ್ಕೆ ತೆರಳಿದರು. ಲೋಪಾಮುದ್ರೆಯೊಡನೆ ಆಗಮಿಸಿದ ಅಗಸ್ತ್ಯರು ವಿಂಧ್ಯನನ್ನು ಕುರಿತು ಹೇಳಿದರು :

**ಮಾರ್ಗಮಿಚ್ಛಾಮ್ಯಹಂ ದತ್ತಂ ಭವತಾ ಪರ್ವತೋತ್ತಮ ।**
**ದಕ್ಷಿಣಾಮಭಿಗನ್ತಾಸ್ಮಿ ದಿಶಂ ಕಾರ್ಯೇಣ ಕೇನಚಿತ್ ॥೧೨॥**

**ಯಾವದಾಗಮನಂ ಮಹ್ಯಂ ತಾವತ್ತ್ವಂ ಪ್ರತಿಪಾಲಯ ।**
**ನಿವೃತ್ತೇ ಮಯಿ ಶೈಲೇನ್ದ್ರ ತತೋ ವರ್ಧಸ್ವ ಕಾಮತಃ ॥೧೩॥**

"ಪರ್ವತರಾಜನೇ! ನಾನು ಒಂದು ಕಾರ್ಯಾರ್ಥವಾಗಿ ದಕ್ಷಿಣದ

ಕಡೆಗೆ ಹೋಗಬೇಕಾಗಿದೆ. ಆದುದರಿಂದ ದಕ್ಷಿಣದೇಶಕ್ಕೆ ಪ್ರಯಾಣಮಾಡಲು ನನಗೆ ಮಾರ್ಗವನ್ನು ಮಾಡಿಕೊಡು. (ನಿನ್ನನ್ನು ಹತ್ತಿಹೋಗಲು ಅವಕಾಶವನ್ನು ಕಲ್ಪಿಸಿಕೊಡು.) ಮತ್ತೊಂದು ವಿಷಯವೇನೆಂದರೆ : ನಾನು ಪುನಃ ಬರುವವರೆಗೂ ನೀನು ಈಗಿನಂತೆಯೇ ಇರಬೇಕು. ನೀನು ಅಗಾಧವಾಗಿ ಬೆಳೆದುಬಿಟ್ಟರೆ ನಾನು ಪುನಃ ಉತ್ತರಕ್ಕೆ ಹಿಂದಿರುಗಲು ಸಾಧ್ಯವಾಗದಿರಬಹುದು. ನಾನು ಉತ್ತರಕ್ಕೆ ಹಿಂದಿರುಗಿದನಂತರ ನಿನ್ನ ಇಚ್ಛೆಯಂತೆ ನೀನು ಬೆಳೆಯಬಹುದಾಗಿದೆ."



ಮಹರ್ಷಿಗಳ ಆ ಮಾತಿಗೆ ವಿಂಧ್ಯನು ಒಪ್ಪಿದನು. ತನ್ನ ಮೇಲೆ ಹತ್ತಿ ಹೋಗಲು ಲೋಪಾಮುದ್ರಾಸಮೇತರಾದ ಅಗಸ್ತ್ಯರಿಗೆ ಮಾರ್ಗವನ್ನು ಮಾಡಿ

ಕೊಟ್ಟನು. ಅಗಸ್ತ್ಯರ ನಿರ್ದೇಶದಂತೆ ತನ್ನ ಬೆಳವಣಿಗೆಯನ್ನು ಸ್ಥಗಿತಗೊಳಿಸಿದನು. ಆದರೆ ಮುಂದೆ ಅಗಸ್ತ್ಯರು ದಕ್ಷಿಣದಿಂದ ಉತ್ತರಕ್ಕೆ ಹಿಂದಿರುಗಲೂ ಇಲ್ಲ; ವಿಂಧ್ಯನು ಸೂರ್ಯ-ಚಂದ್ರರ ಗತಿಯನ್ನು ನಿರೋಧಿಸಲು ಪುನಃ ಬೆಳೆಯಲೂ ಇಲ್ಲ.

ಯುಧಿಷ್ಠಿರ! ನಿನ್ನ ಆಶಯದಂತೆ ವಿಂಧ್ಯನು ಕೋಪಿಸಿಕೊಂಡುದಕ್ಕೆ ಕಾರಣವನ್ನೂ ಮತ್ತು ಅಗಸ್ತ್ಯರ ಪ್ರಭಾವದಿಂದಾಗಿ ವಿಂಧ್ಯನು ತನ್ನ ಬೆಳವಣಿಗೆಯನ್ನು ಸ್ಥಗಿತಗೊಳಿಸಿದುದನ್ನೂ ನಿನಗೆ ಸವಿಸ್ತರವಾಗಿ ಹೇಳಿರುತ್ತೇನೆ. ಮುಂದೆ ದೇವತೆಗಳು ಅಗಸ್ತ್ಯರಲ್ಲಿ ಮಾಡಿದ ಪ್ರಾರ್ಥನೆಯ ಫಲವಾಗಿ ಕಾಲೇಯರು ಹೇಗೆ ಸಂಹಾರಮಾಡಲ್ಪಟ್ಟರೆಂಬ ಇತಿಹಾಸವನ್ನು ಹೇಳುವೆನು; ಕೇಳುವವನಾಗು.

ದೇವತೆಗಳು ಮಾಡಿದ ಸ್ತೋತ್ರದಿಂದ ಸುಪ್ರೀತರಾದ ಅಗಸ್ತ್ಯರು ಅವರನ್ನು ಪ್ರಶ್ನಿಸಿದರು :

"ನೀವೆಲ್ಲರೂ ಇಲ್ಲಿಗೇಕೆ ಆಗಮಿಸಿರುವಿರಿ? ನನ್ನಿಂದ ಯಾವ ವರವನ್ನು ಪಡೆಯಲು ಇಚ್ಛಿಸಿರುವಿರಿ?"

ಅಗಸ್ತ್ಯರ ಪ್ರಶ್ನೆಗಳಿಗೆ ಉತ್ತರವಾಗಿ ದೇವತೆಗಳು ಹೇಳಿದರು :

**ಏವಂ ತ್ವಯೇಚ್ಛಾಮ ಕೃತಂ ಹಿ ಕಾರ್ಯಂ**
**ಮಹಾರ್ಣವಂ ಪೀಯಮಾನಂ ಮಹಾತ್ಮನ್ ।**
**ತತೋ ವಧಿಷ್ಯಾಮ ಸಹಾನುಬಂಧಾ-**
**ನ್ಕಾಲೇಯಸಂಜ್ಞಾನ್ಸುರವಿದ್ವಿಷಸ್ತಾನ್ ॥೧೪॥**

"ಮಹಾತ್ಮರೇ! ಸುರಾಸುರರಿಂದಲೂ ಸಾಧಿಸಲಸಾಧ್ಯವಾದ ಒಂದು ಕಾರ್ಯವನ್ನು ನೀವು ಸಾಧಿಸಬೇಕಾಗಿದೆ. ಅದೇನೆಂದರೆ : ಮಹಾಸಮುದ್ರವನ್ನು ನೀವು ಪಾನಮಾಡಿ ಬತ್ತಿಸಿಬಿಡಬೇಕು. ಆ ಸಮುದ್ರದಲ್ಲಿ ದೇವತೆಗಳಿಗೆ ಶತ್ರುಗಳಾದ ಕಾಲೇಯರೆಂಬ ರಾಕ್ಷಸರು ಸೇರಿಕೊಂಡಿರುತ್ತಾರೆ. ಅವರು ರಾತ್ರಿಯ ವೇಳೆಯಲ್ಲಿ ಹೊರಗೆ ಬಂದು ಭೂಮಿಯ ಮೇಲಿರುವ ಋಷ್ಯಾಶ್ರಮಗಳೆಲ್ಲವನ್ನೂ ಧ್ವಂಸಮಾಡುತ್ತಿದ್ದಾರೆ. ಕರುಣಾಮಯರಾದ

ನೀವು ಸಮುದ್ರವನ್ನು ಪಾನಮಾಡಿ ಒಣಗಿಸಿದಿರಾದರೆ ನಾವೆಲ್ಲರೂ ಸೇರಿ ಕಾಲೇಯರನ್ನೂ ಅವರ ಅನುಬಂಧಿಗಳನ್ನೂ ನಿರ್ಮೂಲಮಾಡಿಬಿಡುವೆವು."

ದೇವತೆಗಳ ಆ ಮಾತುಗಳನ್ನು ಕೇಳಿ ದಯಾಮಯರಾದ ಅಗಸ್ತ್ಯರು ಮುಗುಳ್ನಗೆಯಿಂದ ಹೇಳಿದರು : "ತಥಾಸ್ತು. ನಿಮ್ಮ ಇಚ್ಛೆಯಂತೆಯೇ ಮಾನವಕೋಟಿಗೆ ಸುಖದಾಯಕವಾದ ಈ ಕಾರ್ಯವನ್ನು ಮಾಡಿಕೊಡುತ್ತೇನೆ."

ಹೀಗೆ ಹೇಳಿ ಅಗಸ್ತ್ಯರು ಋಷಿ-ಮಹರ್ಷಿಗಳಿಂದಲೂ, ಸಿದ್ಧಿಪಡೆದ ತಪಸ್ವಿಗಳಿಂದಲೂ ಅನುಸೃತರಾಗಿ ಸಮುದ್ರದ ಬಳಿಗೆ ತೆರಳಿದರು. ಮಹಾತ್ಮರಾದ ಅಗಸ್ತ್ಯಮಹರ್ಷಿಗಳ ಪರಮಾದ್ಭುತವಾದ ಆ ಕಾರ್ಯವನ್ನು ನೋಡುವ ಅಪೇಕ್ಷೆಯಿಂದ ಮಾನವರು, ಸರ್ಪಗಳು, ಗಂಧರ್ವ-ಯಕ್ಷ- ಕಿಂಪುರುಷರು ಎಲ್ಲರೂ ಮಹರ್ಷಿಗಳನ್ನು ಹಿಂಬಾಲಿಸಿ ಭಯಂಕರವಾದ ಗರ್ಜನೆಯಿಂದ ಕೂಡಿದ್ದ, ಅಲೆಗಳಿಂದ ನರ್ತಿಸುತ್ತಿರುವಂತಿದ್ದ, ಗಾಳಿಯಿಂದ ಚಲಿಸುತ್ತಿರುವಂತೆ ಕಾಣುತ್ತಿದ್ದ, ಬಿಳುಪಾದ ನೊರೆಗಳಿಂದ ಕೂಡಿದ್ದು ಮಂದಹಾಸದಿಂದ ನಗುತ್ತಿರುವಂತೆ ಕಾಣುತ್ತಿದ್ದ, ಕಂದರಗಳಲ್ಲಿ ಕೆಳಕ್ಕೆ ಧುಮ್ಮಿಕ್ಕುತ್ತಿದ್ದ, ನಾನಾವಿಧವಾದ ಮೀನುಗಳಿಂದಲೂ ತಿಮಿ-ತಿಮಿಂಗಿಲಗಳಿಂದಲೂ ಕೂಡಿದ್ದ, ನಾನಾವಿಧವಾದ ಪಕ್ಷಿಗಳಿಂದ ಸಂಕುಲಿತವಾಗಿದ್ದ ಸಮುದ್ರದ ಬಳಿಗೆ ಬಂದರು."

ಶ೦೪ನೆಯ ಅಧ್ಯಾಯವು ಮುಗಿಯಿತು.

ಶ೦೫ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಅಗಸ್ತ್ಯರು ಸಮುದ್ರವನ್ನು ಪಾನಮಾಡಿದುದು : ದೇವತೆಗಳಿಂದ ಕಾಲೇಯರ ವಧೆ : ಸಮುದ್ರವನ್ನು ಪುನಃ ನೀರಿನಿಂದ ತುಂಬಲು ಸಾಧಕವಾದ ಉಪಾಯವನ್ನು ತಿಳಿದುಕೊಳ್ಳಲು ದೇವತೆಗಳು ಬ್ರಹ್ಮನ ಬಳಿಗೆ ಪ್ರಯಾಣಮಾಡಿದುದು

ಭಗವತ್ಸದೃಶರಾದ, ವರುಣನ ಮಕ್ಕಳಾದ ಭಗವಾನ್ ಅಗಸ್ತ್ಯರು, ಋಷಿ-ಮಹರ್ಷಿಗಳು ಮತ್ತು ದೇವತೆಗಳೊಡನೆ ಸಮುದ್ರತೀರವನ್ನು ಸೇರಿದ ನಂತರ ತಮ್ಮ ಸುತ್ತಲೂ ನೆರೆದಿದ್ದ ದೇವ-ಮಾನವರನ್ನು ಕುರಿತು ಇಂತೆಂದರು:

"ಭೋ ದೇವತೆಗಳಿರಾ! ವರುಣನ ನಿವಾಸಸ್ಥಾನವಾದ ಈ ಸಮುದ್ರವನ್ನು ನಾನೀಗಲೇ ಕುಡಿದುಬಿಡುತ್ತೇನೆ. ಸಮುದ್ರದ ಶೋಷಣೆಯಾದ ನಂತರ ಮಾಡಬೇಕಾದ ಕಾರ್ಯಕ್ಕೆ ನೀವೀಗಲೇ ಸಿದ್ಧರಾಗಿರಿ."

ಹೀಗೆಂದು ಹೇಳಿ ಕ್ಷಯರಹಿತರಾದ ಮೈತ್ರಾವರುಣಿಗಳು ಕೋಪಗೊಂಡವರಾಗಿ ದೇವ-ಮಾನವರು ನೋಡುತ್ತಿರುವಂತೆಯೇ ಸಮುದ್ರವನ್ನು ಪಾನಮಾಡಲು ಉಪಕ್ರಮಿಸಿದರು. ಸಮುದ್ರವು ಮಹಾಪ್ರವಾಹರೂಪವಾಗಿ ಅಗಸ್ತ್ಯರ ಗುಹಾಸದೃಶವಾದ ಬಾಯೊಳಕ್ಕೆ ಪ್ರವೇಶಿಸುತ್ತಿರುವುದನ್ನು ಕಂಡು ದೇವತೆಗಳೆಲ್ಲರೂ ಆಶ್ಚರ್ಯಭರಿತರಾಗಿ ಅಗಸ್ತ್ಯರನ್ನು ಅನೇಕಾನೇಕ ಸ್ತೋತ್ರಗಳಿಂದ ಸ್ತುತಿಸಿದರು :

**ತ್ವಂ ನಸ್ತ್ರಾತಾ ವಿಧಾತಾ ಚ ಲೋಕಾನಾಂ ಲೋಕಭಾವನ ।**
**ತ್ವತ್ಪ್ರಸಾದಾತ್ಸಮುಚ್ಛೇದಂ ನ ಗಚ್ಛೇತ್ಸಾಮರಂ ಜಗತ್ ॥೫॥**

"ಲೋಕಪೂಜ್ಯರೇ! ನೀವೇ ನಮ್ಮ ರಕ್ಷಕರು. ನೀವೇ ಬ್ರಹ್ಮನೂ ಆಗಿರುತ್ತೀರಿ. ಜಗತ್ತುಗಳ ಉತ್ಪತ್ತಿಗೂ ನೀವೇ ಕಾರಣರಾಗಿರುತ್ತೀರಿ. ನಿಮ್ಮ ಪ್ರಸಾದದಿಂದಲೇ ದೇವತೆಗಳಿಂದ ಕೂಡಿರುವ ಈ ಪ್ರಪಂಚವು ವಿನಾಶವನ್ನು ಹೊಂದದಿರಲು ಸಾಧ್ಯವಾಗಿದೆ."

ಇದೇ ಮುಂತಾಗಿ ದೇವತೆಗಳು ಸ್ತೋತ್ರಮಾಡುತ್ತಿದ್ದರು. ಗಂಧರ್ವರು ಸುಮನೋಹರವಾದ ವಾದ್ಯಗಳನ್ನು ನುಡಿಸುತ್ತಿದ್ದರು. ಮಹಾತ್ಮರಾದ ಅಗಸ್ತ್ಯರ ಮೇಲೆ ಅನವರತವಾಗಿ ಪುಷ್ಪವೃಷ್ಟಿಯಾಗುತ್ತಿದ್ದಿತು. ಆ ಮಧ್ಯದಲ್ಲಿ ಅಗಸ್ತ್ಯರು ಸಮುದ್ರದ ಅಪಾರವಾದ ನೀರನ್ನು ಕುಡಿದು ಮುಗಿಸಿಬಿಟ್ಟರು.

ದೇವತೆಗಳು ಸಮುದ್ರವನ್ನು ದಿಟ್ಟಿಸಿ ನೋಡಿದರು. ಅಲ್ಲಿ ಒಂದು ತೊಟ್ಟಾದರೂ ನೀರಿರಲಿಲ್ಲ. ಅದರಿಂದ ಅವರು ಆಶ್ಚರ್ಯಭರಿತರಾದರು ; ಅಮಿತಾನಂದವನ್ನು ಹೊಂದಿದರು. ಮಹರ್ಷಿಗಳು ಸೂಚನೆಯನ್ನಿತ್ತಿದ್ದಂತೆ ದೇವತೆಗಳೆಲ್ಲರೂ ಆಯುಧಪಾಣಿಗಳಾಗಿ ರಕ್ಷಣಾರಹಿತರಾಗಿದ್ದ ಕಾಲೇಯ ದಾನವರ ಮೇಲೆ ರಭಸದಿಂದ ನುಗ್ಗಿದರು. ಮಹಾತ್ಮರಾದ, ಮಹಾಬಲರಾದ, ಮಹಾವೇಗಿಗಳಾದ ದೇವತೆಗಳಿಂದ ಆಕ್ರಮಿತರಾದ ರಾಕ್ಷಸರು ದೇವತೆಗಳ

ಪರಮದಾರುಣವಾದ ಆಯುಧಪ್ರಹಾರಗಳನ್ನು ತಡೆದುಕೊಳ್ಳಲು ಅಸಮರ್ಥರಾಗಿದ್ದರೂ ತಮ್ಮ ಬಲವೆಲ್ಲವನ್ನೂ ಕೇಂದ್ರೀಕರಿಸಿ ಘೋರಗರ್ಜನೆಗಳನ್ನು ಮಾಡುತ್ತಾ ದೇವತೆಗಳಿಗೆ ಅಭಿಮುಖವಾಗಿ ನಿಂತು ಸ್ವಲ್ಪಕಾಲ ಹೋರಾಡಿದರು. ಆದರೆ ಪಾಪಭೂಯಿಷ್ಠರಾದ, ಕ್ರೂರಿಗಳಾದ ದಾನವರು ನಿರ್ದೋಷಿಗಳಾದ ತಪಸ್ವಿಗಳನ್ನು ಕೊಂದು ಅವರ ತಪಃಪ್ರಭಾವದಿಂದ ಆ



ಮೊದಲೇ ದಗ್ಧರಾಗಿ ಹೋಗಿದ್ದುದರಿಂದ (ನಿಸ್ತೇಜರಾಗಿ ಮಾಡಲ್ಪಟ್ಟಿದ್ದುದರಿಂದ) ದೇವತೆಗಳೊಡನೆ ಹೆಚ್ಚುಕಾಲ ಸೆಣೆಸಲು ಆ ದಾನವರಿಗೆ ಸಾಧ್ಯವಾಗಲಿಲ್ಲ. ದೇವ-ಬ್ರಾಹ್ಮಣರ ರಕ್ಷಣೆಗಾಗಿ ಯುದ್ಧಮಾಡುತ್ತಿದ್ದ ದೇವತೆಗಳು ಸ್ವಲ್ಪ ಕಾಲದಲ್ಲಿಯೇ ಕಾಲೇಯದಾನವರನ್ನು ನಿರ್ಮೂಲನಮಾಡಿದರು. ಕರ್ಣ

ಕುಂಡಲಗಳನ್ನೂ, ಭುಜಕೀರ್ತಿಗಳನ್ನೂ ಧರಿಸಿದ್ದ ದಾನವರು ದೇವತೆಗಳ ವರಾಯುಧಗಳಿಂದ ಕತ್ತರಿಸಲ್ಪಟ್ಟವರಾಗಿ–ಹೂಗಳಿಂದ ತುಂಬಿರುವ ಮುತ್ತುಗದ ಗಿಡಗಳಂತೆ ಪ್ರಕಾಶಿಸಿದರು. ಅಳಿದುಳಿದ ಹತ್ತಾರು ಮಂದಿ ಕಾಲೇಯ ದಾನವರು ದೇವತೆಗಳ ಪ್ರಹಾರವನ್ನು ತಪ್ಪಿಸಿಕೊಂಡು ತಮ್ಮ ಭುಜಬಲದಿಂದ ಭೂಮಿಯನ್ನು ಸೀಳಿಕೊಂಡು ತನ್ಮೂಲಕವಾಗಿ ಪಾತಾಳಲೋಕವನ್ನು ಹೊಕ್ಕು ಪ್ರಾಣವುಳಿಸಿಕೊಂಡರು.

ಕಾಲೇಯದಾನವರನ್ನು ಧ್ವಂಸಮಾಡಿ ಕೃತಕೃತ್ಯರಾದ ದೇವತೆಗಳು ಪುನಃ ಅಗಸ್ತ್ಯರ ಬಳಿಗೆ ಬಂದು ಮಹರ್ಷಿಗಳನ್ನು ಬಹುವಾಗಿ ಸ್ತೋತ್ರಮಾಡುತ್ತಾ ಹೇಳಿದರು :

**ತ್ವತ್ಪ್ರಸಾದಾನ್ಮಹಾಭಾಗ ಲೋಕೈಃ ಪ್ರಾಪ್ತಂ ಮಹತ್ಸುಖಮ್ ।**
**ತ್ವತ್ತೇಜಸಾ ಚ ನಿಹತಾಃ ಕಾಲೇಯಾಃ ಕ್ರೂರವಿಕ್ರಮಾಃ ॥೧೪॥**

**ಪೂರಯಸ್ವ ಮಹಾಬಾಹೋ ಸಮುದ್ರಂ ಲೋಕಭಾವನ ।**
**ಯತ್ತ್ವಯಾ ಸಲಿಲಂ ಪೀತಂ ತದಸ್ಮಿನ್ಪುನರುತ್ಸೃಜ ॥೧೫॥**

"ಮಹಾಭಾಗರೇ! ಮಹಾತ್ಮರೇ! ನಿಮ್ಮ ಅನುಗ್ರಹದಿಂದಾಗಿ ಮೂರು ಲೋಕಗಳಿಗೂ ಮಹಾಸುಖವುಂಟಾಯಿತು. ಮಹಾಪರಾಕ್ರಮಿಗಳೆನಿಸಿದ್ದ ಕಾಲೇಯರನ್ನು ನಿಮ್ಮಿಂದ ಅನುಗ್ರಹೀತರಾದ ನಾವು ಧ್ವಂಸಮಾಡಿದೆವು. ನಿಮ್ಮ ಅಪಾರವಾದ ಶಕ್ತಿಯಿಂದಲೇ ಅವರು ನಿರ್ನಾಮ ಹೊಂದಿದರು. ಜಗದುತ್ಪಾದಕರೇ! ನೀವು ಕುಡಿದಿರುವ ಸಮುದ್ರದ ನೀರನ್ನು ಉತ್ಸರ್ಜಿಸಿ ಬತ್ತಿಹೋಗಿರುವ ಸಮುದ್ರವನ್ನು ತುಂಬಿರಿ."

ಹೀಗೆ ಹೇಳಿದ ದೇವತೆಗಳಿಗೆ ಅಗಸ್ತ್ಯರು ಉತ್ತರಿಸಿದರು :

**ಜೀರ್ಣಂ ತದ್ಧಿ ಮಯಾ ತೋಯಮುಪಾಯೋಽನ್ಯಃ ಪ್ರಚಿನ್ತ್ಯತಾಮ್ ।**
**ಪೂರಣಾರ್ಥಂ ಸಮುದ್ರಸ್ಯ ಭವದ್ಭಿರ್ಯತ್ನಮಾಸ್ಥಿತೈಃ ॥೧೬॥**

"ದೇವತೆಗಳಿರಾ! ನಾನು ಕುಡಿದ ಸಮುದ್ರದ ನೀರು ಈಗಾಗಲೇ

ಜೀರ್ಣವಾಗಿ ಹೋಗಿರುವುದು. ಸಮುದ್ರವನ್ನು ಪುನಃ ತುಂಬಿಸಬೇಕಾದರೆ ನೀವು ಪ್ರಯತ್ನಪೂರ್ವಕವಾಗಿ ಬೇರಾವುದಾದರೂ ಉಪಾಯವನ್ನು ಯೋಚಿಸಲೇಬೇಕು."

ಭಾವಿತಾತ್ಮರಾದ ಮಹರ್ಷಿಗಳ ಆ ಮಾತನ್ನು ಕೇಳಿ ದೇವತೆಗಳು ವಿಸ್ಮಿತರೂ ಮತ್ತು ವಿಷಣ್ಣರೂ ಆದರು.

ಪರಮಾದ್ಭುತವಾದ ದೃಶ್ಯವನ್ನು ಕಾಣಲು ಸಮುದ್ರತೀರಕ್ಕೆ ಬಂದಿದ್ದ ಮಾನವರೂ, ಋಷಿ-ಮಹರ್ಷಿಗಳೂ ಪರಸ್ಪರವಾಗಿ ತಮ್ಮ ತಮ್ಮ ಆನಂದ ವನ್ನು ವ್ಯಕ್ತಪಡಿಸುತ್ತಾ ಮಹರ್ಷಿಗಳಾದ ಅಗಸ್ತ್ಯರನ್ನು ನಮಿಸಿ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು. ಸಮುದ್ರವನ್ನು ಪುನಃ ತುಂಬಿಸುವುದು ಹೇಗೆಂಬ ಸಮಸ್ಯೆಯು ದೇವತೆಗಳಿಗುಂಟಾಯಿತು. ವಿಷ್ಣುಪ್ರಮುಖರಾದ ದೇವತೆಗಳು ಒಡನೆಯೇ ಬ್ರಹ್ಮನ ಬಳಿಗೆ ಹೋದರು. ಮೊದಲು ತಮ್ಮಲ್ಲಿಯೇ ಮಾತನಾಡಿಕೊಂಡು ಅನಂತರದಲ್ಲಿ ಬ್ರಹ್ಮನ ಸಮ್ಮುಖದಲ್ಲಿ ಕೈಜೋಡಿಸಿ ನಿಂತು ಸಮುದ್ರವನ್ನು ಪುನಃ ನೀರಿನಿಂದ ತುಂಬಿಸುವ ವಿಷಯವನ್ನು ಪ್ರಸ್ತಾಪಿಸಿದರು."

೧೦೫ನೆಯ ಅಧ್ಯಾಯವು ಮುಗಿಯಿತು.

೧೦೬ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಸಂತಾನಾರ್ಥವಾಗಿ ಸಗರನು ಈಶ್ವರನನ್ನು ಕುರಿತು ತಪಸ್ಸು ಮಾಡಿದುದು : ಶಿವನಿಂದ ವರಪ್ರದಾನ

ಲೋಮಶರು ಮುಂದುವರಿದು ಹೇಳಿದರು :

"ಧರ್ಮಜ! ದೇವತೆಗಳು ಬ್ರಹ್ಮನನ್ನು ಕುರಿತು ಸಮುದ್ರವನ್ನು ಪುನಃ ನೀರಿನಿಂದ ತುಂಬಿಸುವ ವಿಷಯವನ್ನು ಪ್ರಸ್ತಾಪಿಸಲಾಗಿ ಚತುರ್ಮುಖನು ಅವರೊಡನೆ ಹೇಳಿದನು :

"ದೇವತೆಗಳಿರಾ! ನೀವು ಪ್ರಸಕ್ತಸಮಯದಲ್ಲಿ ನಿಮ್ಮ ಇಚ್ಛಾನುಸಾರ ವಾಗಿ ಪ್ರಯಾಣಮಾಡಿರಿ. ಸಮುದ್ರವು ಮೊದಲಿನಂತೆಯೇ ನೀರಿನಿಂದ ಪೂರ್ಣವಾಗಬೇಕಾದರೆ ಇನ್ನೂ ಬಹಳ ಕಾಲ ಬೇಕಾಗುವುದು. ಸಮುದ್ರವು

ತನ್ನ ಪೂರ್ವದ ಸ್ಥಿತಿಯನ್ನು ಪಡೆಯಲು ಜ್ಞಾತಿಗಳನ್ನು ಉದ್ಧರಿಸುವ ಸಲುವಾಗಿ ಪ್ರಯತ್ನಿಸುವ ಭಗೀರಥನು ಕಾರಣನಾಗುವನು."

ಚತುರ್ಮುಖನ ಆ ಮಾತುಗಳನ್ನು ಕೇಳಿ ದೇವತೆಗಳು ತಮ್ಮ ತಮ್ಮ ಸ್ಥಾನಗಳಿಗೆ ಪ್ರಯಾಣಮಾಡಿ ಬ್ರಹ್ಮನು ಹೇಳಿದ ಕಾಲವನ್ನು ಪ್ರತೀಕ್ಷಿಸುತ್ತಿದ್ದರು."

ಲೋಮಶರು ಹೀಗೆಂದು ಹೇಳಿ ವಿರಮಿಸಿದನಂತರ ಯುಧಿಷ್ಠಿರನು ಬದ್ಧಾಂಜಲಿಯಾಗಿ ಲೋಮಶರನ್ನು ಪ್ರಶ್ನಿಸಿದನು :

"ಮಹರ್ಷಿಗಳೇ! ಸಮುದ್ರವು ಪೂರ್ವಸ್ಥಿತಿಯನ್ನು ಪುನಃ ಪಡೆದುದು ಹೇಗೆ? ಅದಕ್ಕೆ ಭಗೀರಥನ ಜ್ಞಾತಿಗಳು ಹೇಗೆ ಕಾರಣರಾದರು?–ಆ ವಿಷಯವನ್ನು ಸವಿಸ್ತರವಾಗಿ ನಿಮ್ಮ ಮುಖಾರವಿಂದದಿಂದ ಕೇಳಲಿಚ್ಛಿಸಿದ್ದೇನೆ. ನೀವು ಹೇಳುತ್ತಿರುವ ರಾಜರ ಸುಚರಿತಗಳನ್ನು ಕೇಳುತ್ತಿದ್ದಂತೆಲ್ಲಾ ನನಗೆ ಮತ್ತೂ ಕೇಳಬೇಕೆಂಬ ಆಶಯವುಂಟಾಗುತ್ತಿದೆ. ದಯೆಯಿಟ್ಟು ಹೇಳಿರಿ."

ಮಹಾತ್ಮನಾದ ಯುಧಿಷ್ಠಿರನ ಈ ಮಾತುಗಳನ್ನು ಕೇಳಿ ಸುಪ್ರೀತರಾದ, ಬ್ರಾಹ್ಮಣೋತ್ತಮರಾದ ಲೋಮಶರು ಸಗರಚಕ್ರವರ್ತಿಯು ಸಾಧಿಸಿದ ಅದ್ಭುತಕಾರ್ಯಗಳನ್ನು ವಿಶದವಾಗಿ ಹೇಳತೊಡಗಿದರು :

"ಯುಧಿಷ್ಠಿರ! ಇಕ್ಷ್ವಾಕುವಂಶದಲ್ಲಿ ಹುಟ್ಟಿದ ಸಗರನೆಂಬ ಹೆಸರಿನ ರಾಜನಿದ್ದನು. ಅವನು ಮಹಾಬಲಿಷ್ಠನಾಗಿಯೂ ಸುಂದರಾಂಗನಾಗಿಯೂ ಇದ್ದನು. ಆದರೆ ಅವನು ಅಪುತ್ರವಂತನಾಗಿದ್ದನು. ಅವನು ತನ್ನ ಭುಜಬಲ-ಪರಾಕ್ರಮಗಳಿಂದ ಹೈಹಯರ ರಾಜ್ಯವನ್ನೂ, ತಾಲಜಂಘರ ರಾಜ್ಯವನ್ನೂ ಆಕ್ರಮಿಸಿ ಅವರನ್ನು ಯುದ್ಧದಲ್ಲಿ ಪರಾಜಯಗೊಳಿಸಿ, ತನ್ನ ಆಶ್ರಿತರನ್ನಾಗಿ ಮಾಡಿಕೊಂಡು ರಾಜ್ಯವಾಳುತ್ತಿದ್ದನು. ಅವನಿಗೆ ರೂಪದಿಂದಲೂ ಯೌವನದಿಂದಲೂ ದರ್ಪಿತರಾಗಿದ್ದ ಇಬ್ಬರು ಪತ್ನಿಯರಿದ್ದರು. ಒಬ್ಬಳು ವಿದರ್ಭದೇಶದ ರಾಜಕುಮಾರಿಯು ; ಮತ್ತೊಬ್ಬಳು ಶಿಬಿಚಕ್ರವರ್ತಿಯ ವಂಶದವಳು. ಬಹಳ ಕಾಲದವರೆಗೂ ಮಕ್ಕಳಾಗದ ಕಾರಣ ಸಗರಚಕ್ರವರ್ತಿಯು ತನ್ನ ಪತ್ನಿಯರೊಡನೆ ಕೈಲಾಸಪರ್ವತಕ್ಕೆ ಹೋಗಿ ಮಕ್ಕಳನ್ನು ಪಡೆಯುವ ಆಶಯದಿಂದ ಅತ್ಯಂತಕ್ಲೇಶಕರವಾದ ತಪಸ್ಸಿನಲ್ಲಿ

ನಿರತನಾದನು. ಸಗರನು ಅಷ್ಟಾಂಗಯೋಗಯುಕ್ತವಾದ ತಪಶ್ಚರಣೆಯನ್ನು ಮಾಡುತ್ತಿರಲಾಗಿ ಒಮ್ಮೆ ಮಹಾತ್ಮನಾದ ತ್ರಿಣೇತ್ರನ ದಿವ್ಯದರ್ಶನವನ್ನು ಪಡೆದನು. ತ್ರಿಪುರಮರ್ದನನಾದ, ಮಂಗಳದಾಯಕನಾದ, ನಿತ್ಯನಾದ, ಜಗತ್ತಿಗೆ ಶಾಸಕನಾದ, ಪಿನಾಕಪಾಣಿಯಾದ, ತ್ರಿಶೂಲಧಾರಿಯಾದ, ತ್ರ್ಯಂಬಕ



ನಾದ, ಮಂಗಳಸ್ವರೂಪನಾದ, ಉಗ್ರನಾದ, ಭೂತಗಳಿಗೆ ಒಡೆಯನಾದ, ಬಹುರೂಪಿಯಾದ, ಉಮಾಪತಿಯಾದ ರುದ್ರದೇವನನ್ನು ನೋಡಿದೊಡನೆಯೇ ಸಗರನು ತನ್ನ ಪತ್ನಿಯರ ಸಮೇತನಾಗಿ ಮಹಾದೇವನ ಪಾದಾರವಿಂದಗಳಲ್ಲಿ ನಮಸ್ಕರಿಸಿ ನಾನಾವಿಧವಾಗಿ ಸ್ತೋತ್ರಮಾಡಿ ಮಕ್ಕಳನ್ನು ಅನುಗ್ರಹಿಸಬೇಕೆಂದು ವಿನಯದಿಂದ ಕೇಳಿಕೊಂಡನು. ಸಗರನ ಸ್ತೋತ್ರಕ್ಕೂ–

ತಪಸ್ಸಿಗೂ ಮೆಚ್ಚಿದ ಶಿವನು ಧರ್ಮಿಷ್ಠನಾದ, ಪತ್ನಿಯರೊಡನಿದ್ದ ಸಗರನನ್ನು ಕುರಿತು ಹೇಳಿದನು : "ಮಹಾರಾಜ! ನೀನು ವರವನ್ನು ಕೇಳಿರುವ ಮುಹೂರ್ತದಲ್ಲಿರುವ ಗ್ರಹಗತಿಗಳ ಪ್ರಕಾರ ನಿನಗೆ ಮಹಾಬಲಿಷ್ಠರಾದ, ದರ್ಪಿತರಾದ ಅರುವತ್ತು ಸಾವಿರ ಮಕ್ಕಳು ಒಬ್ಬಳು ಪತ್ನಿಯಲ್ಲಿ ಹುಟ್ಟುತ್ತಾರೆ. ಪ್ರಾಪ್ತವಯಸ್ಕರಾದನಂತರ ಯಾವುದೋ ಒಂದು ಕಾರಣದಿಂದಾಗಿ ಅವರೆಲ್ಲರೂ ಏಕಕಾಲದಲ್ಲಿಯೇ ಅವಸಾನವನ್ನು ಹೊಂದುತ್ತಾರೆ. ನಿನ್ನ ಮತ್ತೊಬ್ಬಳು ಪತ್ನಿಯಲ್ಲಾದರೋ ವಂಶಪ್ರದೀಪಕನಾದ, ಶೂರನಾದ ಒಬ್ಬನೇ ಮಗನು ಹುಟ್ಟುತ್ತಾನೆ"–ಹೀಗೆಂದು ಹೇಳಿ ಪರಶಿವನು ಅಂತರ್ಧಾನಹೊಂದಿದನು. ವರಪ್ರದಾನದಿಂದ ಸುಪ್ರೀತನಾದ ಸಗರನು ತನ್ನ ಪತ್ನಿಯರೊಡನೆ ರಾಜಧಾನಿಗೆ ಹಿಂದಿರುಗಿದನು.

ಮನುಜಶ್ರೇಷ್ಠನೇ! ಪರಶಿವನ ವರಪ್ರಸಾದದಂತೆಯೇ ವಿದರ್ಭ ರಾಜಕುಮಾರಿಯೂ ಮತ್ತು ಶೈಬ್ಯೆಯೂ ಗರ್ಭಧಾರಣೆ ಮಾಡಿದರು. ಕೆಲವು ಕಾಲಾನಂತರದಲ್ಲಿ ವೈದರ್ಭಿಯು ಸೋರೆಕಾಯಿನಂತಹ ಗರ್ಭಪಿಂಡವನ್ನು ಪ್ರಸವಿಸಿದಳು. ಶೈಬ್ಯೆಯಾದರೋ ದೇವರೂಪಿಯಾದ ಕುಮಾರನಿಗೆ ಜನ್ಮ ವನ್ನಿತ್ತಳು. ರಾಜನು ವೈದರ್ಭಿಗೆ ಸೋರೇಕಾಯಿನ ಆಕಾರದ ಗರ್ಭಪಿಂಡವು ಹುಟ್ಟಿದುದನ್ನು ತಿಳಿದು ಬಹುಖಿನ್ನನಾಗಿ ಅದನ್ನು ವಿಸರ್ಜಿಸಲು ನಿಶ್ಚಯಿ ಸಿದನು. ಆ ಸಮಯಕ್ಕೆ ಸರಿಯಾಗಿ ಅಶರೀರವಾಣಿಯು ಆಕಾಶದ ಕಡೆಯಿಂದ ಕೇಳಿಬಂದಿತು. ಆ ವಾಣಿಯು ಗಂಭೀರವಾಗಿಯೂ–ಸ್ಪಷ್ಟವಾಗಿಯೂ ಇದ್ದಿತು.

**ರಾಜನ್ಮಾಸಾಹಸಂ ಕಾರ್ಷೀಃ ಪುತ್ರಾನ್ನ ತ್ಯಕ್ತುಮರ್ಹಸಿ ।**
**ಅಲಾಬುಮಧ್ಯಾನ್ನಿಷ್ಕೃಷ್ಯ ಬೀಜಂ ಯತ್ನೇನ ಗೋಪ್ಯತಾಮ್ ॥೨೧॥**

**ಸೋಪಸ್ವೇದೇಷು ಪಾತ್ರೇಷು ಘೃತಪೂರ್ಣೇಷು ಭಾಗಶಃ ।**
**ತತಃ ಪುತ್ರಸಹಸ್ರಾಣಿ ಷಷ್ಟಿಂ ಪ್ರಾಪ್ಸ್ಯಸಿ ಪಾರ್ಥಿವ ॥೨೨॥**

**ಮಹಾದೇವೇನ ದಿಷ್ಟಂ ತೇ ಪುತ್ರಜನ್ಮ ನರಾಧಿಪ ।**
**ಅನೇನ ಕ್ರಮಯೋಗೇನ ಮಾ ತೇ ಬುದ್ಧಿರತೋಽನ್ಯಥಾ ॥೨೩॥**

"ಮಹಾರಾಜ! ಮಕ್ಕಳನ್ನು ವಿಸರ್ಜಿಸುವ ಸಾಹಸಕಾರ್ಯವನ್ನು

ಮಾಡಲು ಯತ್ನಿಸಬೇಡ. ಸೋರೇಕಾಯಿನ ರೂಪದಲ್ಲಿರುವ ಈ ಗರ್ಭ ಪಿಂಡವನ್ನು ಮಧ್ಯಕ್ಕೆ ಸರಿಯಾಗಿ ಕತ್ತರಿಸಿ ಅದರಲ್ಲಿರುವ ಬೀಜಗಳನ್ನು ತೆಗೆದು ಜಾಗರೂಕತೆಯಿಂದ ಕಾಪಾಡು. ಆ ಗರ್ಭಪಿಂಡದಲ್ಲಿ ಎಷ್ಟು ಬೀಜ ಗಳಿವೆಯೋ ಅಷ್ಟು ಬೀಜಗಳನ್ನೂ ಪ್ರತ್ಯೇಕಿಸಿ ಒಂದೊಂದು ಬೀಜವನ್ನೂ ಒಂದೊಂದು ಪಾತ್ರೆಯಲ್ಲಿಟ್ಟು ಆ ಪಾತ್ರೆಗಳ ಅರ್ಧಭಾಗವನ್ನು ತುಪ್ಪದಿಂದ ತುಂಬಿಸು. ಎಲ್ಲ ಪಾತ್ರೆಗಳನ್ನೂ ಶಾಖವಾಗಿಟ್ಟಿರಬೇಕು. ಸ್ವಲ್ಪಕಾಲಾನಂತರ ದಲ್ಲಿ ಆ ಪಾತ್ರೆಗಳ ಮೂಲಕವಾಗಿ ನೀನು ಅರುವತ್ತು ಸಾವಿರ ಮಂದಿ ಮಕ್ಕಳನ್ನು ಪಡೆಯುವೆ. ಮಹಾರಾಜ! ಮಹಾದೇವನು ನಿನಗೆ ಅರುವತ್ತು ಸಾವಿರ ಮಂದಿ ಮಕ್ಕಳಾಗುವಂತೆ ವಿಧಾಯಕಮಾಡಿದ್ದಾನೆ. ಪರಶಿವನ ಮಾತನ್ನು ಸುಳ್ಳಾಗಿಸಲು ಯತ್ನಿಸಬೇಡ. ಅದು ಸಾಧ್ಯವೂ ಇಲ್ಲ. ಆದುದರಿಂದ ಈ ಗರ್ಭಪಿಂಡವನ್ನು ಪರಿತ್ಯಾಗಮಾಡಬೇಕೆನ್ನುವ ನಿನ್ನ ಆಶಯವನ್ನು ದೂರಮಾಡಿ ನಾನು ಹೇಳಿದ ರೀತಿಯಲ್ಲಿ ಅದರಲ್ಲಿರುವ ಅರುವತ್ತು ಸಾವಿರ ಬೀಜಗಳನ್ನೂ ತುಪ್ಪದ ಪಾತ್ರೆಯಲ್ಲಿಟ್ಟು ಕಾಪಾಡು.”

೧೦೬ನೆಯ ಅಧ್ಯಾಯವು ಮುಗಿಯಿತು.

೧೦೭ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಸಗರನಿಗೆ ಅರುವತ್ತು ಸಾವಿರ ಮಕ್ಕಳು ಹುಟ್ಟಿದುದು : ಕಪಿಲ ಮಹರ್ಷಿಯ ಕ್ರೋಧಾಗ್ನಿಗೆ ಸಿಕ್ಕಿ ಎಲ್ಲರೂ ಭಸ್ಮೀಭೂತರಾದುದು : ಸಗರನು ಅಸಮಂಜಸನನ್ನು ಪರಿತ್ಯಾಗಮಾಡಿದುದು : ಅಂಶುಮಂತನ ಪ್ರಯತ್ನದಿಂದಾಗಿ ಸಗರನ ಯಾಗವು ಪೂರ್ತಿಯಾದುದು : ಅಂಶುಮಂತನ ನಂತರ ದಿಲೀಪನೂ ದಿಲೀಪನ ನಂತರ ಭಗೀರಥನೂ ರಾಜರಾದುದು

ಲೋಮಶರು ಹೇಳುತ್ತಾರೆ :

“ಯುಧಿಷ್ಠಿರ! ಸಗರನು ಆಕಾಶದ ಕಡೆಯಿಂದ ಬಂದ ಅಶರೀರವಾಣಿ ಯನ್ನು ಕೇಳಿ ಆ ವಾಣಿಯಲ್ಲಿ ನಂಬಿಕೆಯನ್ನಿಟ್ಟು ಅದು ಹೇಳಿದಂತೆಯೇ ಎಲ್ಲ ವನ್ನೂ ಮಾಡಲು ನಿರ್ಧರಿಸಿದನು. ಗರ್ಭಪಿಂಡದಲ್ಲಿದ್ದ ಅರುವತ್ತು ಸಾವಿರ

ಬೀಜಗಳನ್ನೂ ಪ್ರತ್ಯೇಕಿಸಿ, ಅರುವತ್ತು ಸಾವಿರ ಘೃತಪೂರ್ಣವಾದ ಭಾಂಡಗಳನ್ನು ತರಿಸಿ ಅವುಗಳಲ್ಲಿ ನಿಕ್ಷೇಪಿಸಿದನು. ಅವುಗಳನ್ನು ಜಾಗರೂಕತೆಯಿಂದ ನೋಡಿಕೊಳ್ಳಲು ಅರುವತ್ತು ಸಾವಿರ ದಾಸಿಯರು ರಾಜನಿಂದ ನಿಯುಕ್ತರಾದರು. ಅನೇಕವರ್ಷಗಳು ಕಳೆದನಂತರ ಘೃತಭಾಂಡಗಳಿಂದ ಮಹಾಬಲಶಾಲಿಗಳೂ, ಅಮಿತಪರಾಕ್ರಮಿಗಳೂ ಆದ ಅರುವತ್ತು ಸಾವಿರ ಮಂದಿ ಮಕ್ಕಳು ಹುಟ್ಟಿದರು. ರುದ್ರದೇವನ ಅನುಗ್ರಹದಂತೆ ತಪಸ್ವಿಯಾದ ರಾಜನು ಈ ರೀತಿಯಲ್ಲಿ ಅರುವತ್ತು ಸಾವಿರ ಮಕ್ಕಳನ್ನು ಪಡೆದನು.

ಯುಧಿಷ್ಠಿರ! ಸಗರನ ಆ ಅರುವತ್ತು ಸಾವಿರ ಮಕ್ಕಳೂ ಮಹಾಘೋರರೂಪಿಗಳೂ ಕ್ರೂರಕರ್ಮಿಗಳೂ ಆಗಿದ್ದರು. ಅವರಿಗೆ ದೇವತೆಗಳಂತೆ ಆಕಾಶಮಾರ್ಗದಲ್ಲಿ ಸಂಚರಿಸುವ ಸಾಮರ್ಥ್ಯವೂ ಇದ್ದಿತು. ಅವರು ತಮ್ಮ ಸಂಖ್ಯಾಬಲದಿಂದಾಗಿ ಮತ್ತು ಅಮಿತಪರಾಕ್ರಮದಿಂದಾಗಿ ದೇವತೆಗಳನ್ನೂ ಕೂಡ ಲೆಕ್ಕಿಸುತ್ತಿರಲಿಲ್ಲ. ದೇವತೆಗಳನ್ನೂ, ಗಂಧರ್ವರನ್ನೂ, ರಾಕ್ಷಸರನ್ನೂ ಪೀಡಿಸತೊಡಗಿದರು. ಯಾವಾಗಲೂ ಯುದ್ಧೋನ್ಮುಖರಾಗಿದ್ದು ಸಕಲ ಪ್ರಾಣಿಗಳನ್ನೂ ಪೀಡಿಸುತ್ತಿದ್ದರು. ಮಂದಬುದ್ಧಿಯ ಆ ಸಗರಪುತ್ರರಿಂದ ಪೀಡಿತರಾದ ದೇವ-ಗಂಧರ್ವ-ಮಾನವರು ರಕ್ಷಣೆಗಾಗಿ ಬ್ರಹ್ಮನನ್ನು ಆಶ್ರಯಿಸಿದರು. ಭೂತ-ಭವಿಷ್ಯದ್ವರ್ತಮಾನಗಳನ್ನು ತಿಳಿದಿದ್ದ ಬ್ರಹ್ಮನು–"ದೇವ-ಗಂಧರ್ವ-ಮಾನವರೇ! ನೀವು ಬಂದಿರುವ ಕಾರಣವನ್ನು ನಾನು ತಿಳಿದಿರುವೆನು. ನೀವು ನಿಶ್ಚಿಂತರಾಗಿ ನಿಮ್ಮ ನಿಮ್ಮ ನಿವಾಸಗಳಿಗೆ ತೆರಳಿರಿ. ಅತ್ಯಲ್ಪಕಾಲದಲ್ಲಿಯೇ ಸ್ವಾಪರಾಧದಿಂದಲೇ ಸಗರನ ಮಕ್ಕಳು ವಿನಾಶಹೊಂದುತ್ತಾರೆ. ನಿಮಗೆ ಅವರಿಂದ ಪೀಡೆಯೂ ತಪ್ಪುತ್ತದೆ"–ಎಂದು ಹೇಳಿದನು.

ಬ್ರಹ್ಮನಿಂದ ಈ ರೀತಿಯಲ್ಲಿ ಆಶ್ವಾಸನೆಯನ್ನು ಪಡೆದ ದೇವ-ಗಂಧರ್ವ-ಮಾನವರು ಸಂತುಷ್ಟಚಿತ್ತರಾಗಿ ಬ್ರಹ್ಮನಿಗೆ ನಮಸ್ಕರಿಸಿ, ಅವನ ಅನುಮತಿಯನ್ನು ಪಡೆದು ತಮ್ಮ-ತಮ್ಮ ನಿವಾಸಗಳಿಗೆ ಹಿಂದಿರುಗಿದರು.

ಯುಧಿಷ್ಠಿರ! ಇತ್ತಲಾಗಿ ಸಗರಚಕ್ರವರ್ತಿಯು ಅಶ್ವಮೇಧಯಾಗ ಮಾಡಲು ದೀಕ್ಷೆಯನ್ನು ಕೈಗೊಂಡನು. ಯಥಾವಿಧಿಯಾಗಿ ಅಶ್ವಮೇಧಾಶ್ವವು ಪ್ರಪಂಚಪರ್ಯಟನಕ್ಕೆ ಬಿಡಲ್ಪಟ್ಟಿತು. ಸಗರನ ಅರುವತ್ತು ಸಾವಿರ ಮಂದಿ

ಮಕ್ಕಳು ಅದರ ರಕ್ಷಣೆಯಲ್ಲಿ ನಿಯುಕ್ತರಾಗಿದ್ದರು. ಅಶ್ವಮೇಧಾಶ್ವವು ಅಲ್ಲಲ್ಲಿ ಸಂಚರಿಸುತ್ತಾ ಅಗಸ್ತ್ಯಮಹರ್ಷಿಗಳಿಂದ ಶುಷ್ಕವಾಗಿ ಮಾಡಲ್ಪಟ್ಟಿದ್ದ ಸಮುದ್ರಪ್ರದೇಶವನ್ನು ಪ್ರವೇಶಿಸಿತು. ಮಹಾಬಲಿಷ್ಠರಾದ ಸಗರನ ಮಕ್ಕಳು ಕುದುರೆಯನ್ನು ಬಹಳ ಜಾಗರೂಕತೆಯಿಂದ ರಕ್ಷಿಸುತ್ತಿದ್ದರೂ ಕೂಡ ಕುದುರೆಯು ಶುಷ್ಕವಾಗಿ ಹೋಗಿದ್ದ ಆ ಸಮುದ್ರಪ್ರದೇಶವನ್ನು ಪ್ರವೇಶಿಸಿ ದೊಡನೆಯೇ ಅದೃಶ್ಯವಾಯಿತು. ಕುದುರೆಯನ್ನು ಯಾರಾದರೂ ಕಟ್ಟಿಹಾಕಿದ್ದರೆ ಅವರೊಡನೆ ಯುದ್ಧಮಾಡಿ ಪುನಃ ಕುದುರೆಯನ್ನು ಪಡೆಯುವ ಸಾಮರ್ಥ್ಯವು ಸಗರನ ಮಕ್ಕಳಿಗಿತ್ತೇ ಹೊರತು ಅದೃಶ್ಯವಾಗಿ ಹೋದ ಕುದುರೆಯನ್ನು ಕಂಡುಹಿಡಿಯಲು ಅವರಿಗೆ ಸಾಧ್ಯವಾಗಲಿಲ್ಲ. ಯಾರೋ ದುರಾತ್ಮರು ಅಪಹರಿಸಿದ್ದಾರೆಂದು ನಿಶ್ಚಯಿಸಿದವರಾಗಿ ಮುಂದೇನು ಮಾಡಬೇಕೆಂದು ತೋರದೇ ತಮ್ಮ ತಂದೆಯ ಬಳಿಗೆ ಆಗಮಿಸಿ ನಡೆದುದೆಲ್ಲವನ್ನೂ ಯಥಾವತ್ತಾಗಿ ನಿವೇದಿಸಿದರು.

ಸಗರನಿಗೂ ಆ ವಿಷಯವು ಆಶ್ಚರ್ಯವನ್ನುಂಟುಮಾಡಿತು. ತನ್ನ ಅಜೇಯರಾದ ಮಕ್ಕಳು ಕುದುರೆಯ ರಕ್ಷಣೆಯಲ್ಲಿರುವಾಗ ಕುದುರೆಯನ್ನು ಯಾರೊಬ್ಬರೂ ಕಟ್ಟಿಹಾಕಲು ಮುಂದೆ ಬರಲಾರರೆಂಬುದು ಸಗರನ ನಿಶ್ಚಯವಾಗಿತ್ತು. ಆದರೆ ಈಗ ಕುದುರೆಯು ಅಪಹೃತವಾಯಿತೆಂದ ಮಾತ್ರಕ್ಕೆ ಸುಮ್ಮನಿರುವಂತೆಯೂ ಇಲ್ಲ. ಬ್ರಹ್ಮಾಂಡದ ಯಾವ ಭಾಗದಲ್ಲಿ ಆ ಕುದುರೆಯಿದ್ದರೂ ಅದನ್ನು ಕರೆತಂದು ಯಾಗವನ್ನು ಪೂರೈಸಲೇಬೇಕು. ಇದು ಅಶ್ವಮೇಧಯಾಗದ ವಿಧಿ.

ಸಗರನು ತನ್ನ ಮಕ್ಕಳನ್ನು ಕುರಿತು ಹೇಳಿದನು : "ಕುದುರೆಯನ್ನು ಯಾರಾದರೂ ಅಪಹರಿಸಿರಬಹುದೇ ಹೊರತು ಕುದುರೆಯೇ ವಿಶ್ವದಲ್ಲಿ ಇಲ್ಲದಿಲ್ಲ. ಆದುದರಿಂದ ನೀವೀಗಲೇ ಹೋಗಿ ವಿಶ್ವದ ಎಲ್ಲ ಭಾಗವನ್ನೂ ಸಂಶೋಧಿಸಿ ಕುದುರೆಯನ್ನು ಕರೆತನ್ನಿರಿ."

ಯುಧಿಷ್ಠಿರ! ತಂದೆಯ ಆಜ್ಞೆಯಂತೆ ಸಗರನ ಮಕ್ಕಳು ವಿಶ್ವದ ಸಕಲ ಭಾಗಗಳನ್ನೂ ಸಂಶೋಧಿಸಿಬಿಟ್ಟರು. ವಿಶ್ವದಲ್ಲಿ ಅವರು ಕುದುರೆಯನ್ನು ಹುಡುಕದಿರುವ ಸ್ಥಳವೇ ಉಳಿಯಲಿಲ್ಲ. ಎಷ್ಟೇ ಹುಡುಕಿದರೂ ಅವರಿಗೆ

ಕುದುರೆಯನ್ನು ಕದ್ದ ಕಳ್ಳನಾಗಲೀ-ಕುದುರೆಯಾಗಲೀ ಸಿಕ್ಕಲಿಲ್ಲ. ಮುಂದೇನು ಮಾಡಬೇಕೆಂದು ತೋರದೇ ಪುನಃ ತಂದೆಯ ಬಳಿಗೆ ಬಂದು ಸಗರನೊಡನೆ ಹೇಳಿದರು : "ಮಹಾರಾಜ! ನಿನ್ನ ಆಜ್ಞೆಯಂತೆ ನಾವು ಈ ವಿಶ್ವದಲ್ಲಿರುವ ಸಮುದ್ರ-ವನ-ದ್ವೀಪ-ನದೀ-ನದ-ಸರೋವರ-ಪರ್ವತಗಳನ್ನೂ ಸಕಲದೇಶ ಗಳನ್ನೂ, ಸುತ್ತಾಡಿ ಕುದುರೆಯನ್ನು ಹುಡುಕಿದೆವು. ಆದರೂ ನಮಗೆ ಕುದುರೆಯನ್ನು ಅಪಹರಿಸಿದವನಾಗಲೀ–ಕುದುರೆಯಾಗಲೀ ಸಿಕ್ಕಲಿಲ್ಲ."

ವೀರಪುತ್ರರ ಮಾತುಗಳನ್ನು ಕೇಳಿ ಸಗರನಿಗೆ ಮಹಾಕೋಪವುಂಟಾ ಯಿತು. ವಿಧಿಯ ನಿಯಮವೂ ಹಾಗೆಯೇ ಇತ್ತೆಂದು ಹೇಳಬಹುದು. ಸಗರನು ಕೋಪಾವಿಷ್ಟನಾಗಿ ಹೇಳಿದನು :

**ಅನಾಗಮಾಯ ಗಚ್ಛಧ್ವಂ ಭೂಯೋ ಮಾರ್ಗತ ವಾಜಿನಮ್ ।**
**ಯಜ್ಞಿಯಂ ತಂ ವಿನಾ ಹ್ಯಶ್ವಂ ನಾಗನ್ತವ್ಯಂ ಹಿ ಪುತ್ರಕಾಃ ॥೨೧॥**

"ಮಕ್ಕಳೇ! ನೀವೆಲ್ಲರೂ ಹಿಂದಿರುಗಿಬಾರದಂತೆ ಹೊರಟುಹೋಗಿರಿ! ಕುದುರೆಯು ಸಿಕ್ಕಲಿಲ್ಲವೆಂದು ಹೇಳಲು ಪುನಃ ಬರಬೇಡಿರಿ. ಕುದುರೆಯು ಎಲ್ಲಿಯೇ ಇರಲಿ–ಅದನ್ನು ಹುಡುಕಿ ತರದೇ ನೀವುಗಳು ಖಂಡಿತವಾಗಿಯೂ ನನ್ನ ಬಳಿಗೆ ಪುನಃ ಬರಬೇಡಿರಿ."

ಪಿತ್ರಾಜ್ಞಾಪರಿಪಾಲಕರಾದ, ವಿಧೇಯರಾದ ಸಾಗರರು ತಂದೆಯ ಆಜ್ಞೆ ಯನ್ನು ಶಿರಸಾವಹಿಸಿ, ಪುನಃ ವಿಶ್ವಾದ್ಯಂತ ಕುದುರೆಯನ್ನು ಹುಡುಕಲು ಉಪಕ್ರಮಿಸಿದರು. ಹಾಗೆಯೇ ಅವರು ಸುತ್ತಾಡುತ್ತಿರುವಾಗ ಸಮುದ್ರವು ಶುಷ್ಕವಾಗಿದ್ದ ಪ್ರದೇಶದಲ್ಲಿ ಭೂಮಿಯು ಬಿರುಕುಬಿಟ್ಟಿರುವುದು ಅವರ ಕಣ್ಣಿಗೆ ಬಿದ್ದಿತು. ಆ ಸ್ಥಳದಲ್ಲಿಯೇ ಸಗರನ ಮಕ್ಕಳು ಭೂಮಿಯನ್ನು ಅಗೆಯ ತೊಡಗಿದರು. ಗುದ್ದಲಿಗಳಿಂದಲೂ ಪಿಕಾಶಿಗಳಿಂದಲೂ ಸಗರನ ಮಕ್ಕಳು ಸಮುದ್ರದ ತಳವನ್ನು ಅಗಾಧವಾಗಿ ಅಗೆದು ತೋಡಿದರು. ವರುಣನ ಆಲಯವಾದ ಸಮುದ್ರವು ಈ ರೀತಿಯಲ್ಲಿ ಸಗರನ ಮಕ್ಕಳಿಂದ ಸುತ್ತಲೂ ಆಳವಾಗಿ ಅಗೆಯಲ್ಪಟ್ಟ ಕಾರಣ ಅಲ್ಲಿನ ನಿವಾಸಿಗಳೆಲ್ಲರಿಗೂ ಜೀವನವೇ ದುರ್ಭರವಾಯಿತು. ಅನೇಕಾನೇಕ ಸರ್ಪಗಳೂ, ರಾಕ್ಷಸರೂ ಸಗರನ ಮಕ್ಕಳ

ಕೈಗೆ ಸಿಕ್ಕಿ ಪ್ರಾಣತೊರೆದರು. ಸಾವಿರಾರು ಪ್ರಾಣಿಗಳು ಸಗರಪುತ್ರರ ಆಯುಧ ಗಳಿಗೆ ಸಿಕ್ಕಿ ಶಿರೋವಿಹೀನವಾಗಿ ಕೈ-ಕಾಲುಗಳು ಬೇರೆಯಾಗಿ ಪ್ರಾಣೋ ತ್ಕ್ರಮಣಸಂಕಟವನ್ನನುಭವಿಸುತ್ತಾ ಕರ್ಕಶಧ್ವನಿಮಾಡುತ್ತಿದ್ದುವು. ಯಾವು ದನ್ನೂ ಲೆಕ್ಕಿಸದೇ ಸಗರನ ಮಕ್ಕಳು ವರುಣಾಲಯವಾದ ಸಮುದ್ರವನ್ನು ಅವ್ಯಾಹತವಾಗಿ ಅಗೆಯುತ್ತಲೇ ಇದ್ದರು. ಬಹಳ ಕಾಲವೂ ಕಳೆದು ಹೋಯಿತು. ಸಮುದ್ರವೂ ಅಗಾಧವಾಯಿತು. ಅಷ್ಟಾದರೂ ಕುದುರೆಯು ಮಾತ್ರ ಸಿಕ್ಕಲಿಲ್ಲ. ಬಹುವಾಗಿ ಖತಿಗೊಂಡ ಸಗರನ ಮಕ್ಕಳು ಸಮುದ್ರದ ಈಶಾನ್ಯಭಾಗದಲ್ಲಿ ಪಾತಾಳಲೋಕದವರೆಗೂ ಭೂಮಿಯನ್ನು ಕೊರೆದು ಬಿಟ್ಟರು. ಕಟ್ಟಕಡೆಗೆ ಆ ಪ್ರದೇಶದಲ್ಲಿ ಅಶ್ವಮೇಧಾಶ್ವವನ್ನು ಸಗರನ ಮಕ್ಕಳು ನೋಡಿದರು. ಕುದುರೆಗೆ ಅನತಿದೂರದಲ್ಲಿಯೇ ತೇಜೋರಾಶಿಯಂತಿದ್ದ ಮಹಾತ್ಮನಾದ ಕಪಿಲಮಹರ್ಷಿಯು ತಪಸ್ಸಿನಲ್ಲಿ ಮಗ್ನನಾಗಿ ಕುಳಿತಿರು ವುದನ್ನೂ ಕಂಡರು. ಜ್ವಾಲೆಗಳಿಂದ ಕೂಡಿದ ಯಜ್ಞೇಶ್ವರನಂತೆಯೇ ದಿವ್ಯ ತೇಜಸ್ಸಿನಿಂದ ದೇದೀಪ್ಯಮಾನನಾಗಿದ್ದ ಮಹರ್ಷಿಯನ್ನೂ ಮತ್ತು ಕುದುರೆ ಯನ್ನೂ ಕಂಡು ಸಗರನ ಮಕ್ಕಳು ಆನಂದದಿಂದ ರೋಮಾಂಚಿತರಾದರು. (ಕುದುರೆ ಮತ್ತು ಕುದುರೆಯ ಕಳ್ಳ ಇಬ್ಬರೂ ಒಟ್ಟಾಗಿಯೇ ಸಿಕ್ಕಿದರೆಂಬುದೇ ಅವರ ಅಮಿತಾನಂದಕ್ಕೆ ಕಾರಣವಾಗಿದ್ದಿತು.)

ಮದಾಂಧರಾಗಿದ್ದ ಅವರೆಲ್ಲರೂ ವಿಧಿಯಿಂದ ಪ್ರಚೋದಿತರಾದವ ರಂತೆ ಕ್ರುದ್ಧರಾಗಿ ಕುದುರೆಯ ಸಮೀಪದಲ್ಲಿ ಯಜ್ಞೇಶ್ವರನಂತೆ ಮಹಾತೇಜಸ್ಸಿ ನಿಂದ ವಿರಾಜಿಸುತ್ತಿದ್ದ ಕಪಿಲಮಹರ್ಷಿಯನ್ನು ಅಲಕ್ಷಿಸಿ ಕುದುರೆಯನ್ನು ಹಿಡಿ ಯಲು ವೀರಗರ್ಜನೆಯನ್ನು ಮಾಡುತ್ತಾ ಧಾವಿಸಿದರು. ಪ್ರಶಾಂತನಾಗಿ ಕುಳಿ ತಿದ್ದ, ಮುನಿಶ್ರೇಷ್ಠನಾದ, ವಾಸುದೇವನೆಂದು ಋಷಿ-ಮಹರ್ಷಿಗಳಿಂದ ಸ್ತುತಿ ಸಲ್ಪಡುತ್ತಿದ್ದ ಕಪಿಲಮಹರ್ಷಿಯು ಆ ಘೋರಗರ್ಜನೆಗಳಿಂದ ತಪೋಭಂಗ ವನ್ನು ಹೊಂದಿ ಕ್ರುದ್ಧನಾಗಿ, ಕ್ರೂರದೃಷ್ಟಿಯಿಂದ ಸಗರನ ಅರುವತ್ತು ಸಾವಿರ ಮಕ್ಕಳನ್ನೂ ಒಮ್ಮೆ ನೋಡಿದನು. ಮರುಕ್ಷಣದಲ್ಲಿಯೇ ಕ್ರೂರದೃಷ್ಟಿಯಿಂದ ಉದ್ಭೂತವಾದ ಅಗ್ನಿಯು ಮಂದಬುದ್ಧಿಯಿಂದ ಕೂಡಿದ್ದ ಸಗರನ ಅರುವತ್ತು ಸಾವಿರ ಮಂದಿ ಮಕ್ಕಳನ್ನೂ ನಿಮಿಷಮಾತ್ರದಲ್ಲಿ ಭಸ್ಮೀಭೂತರನ್ನಾಗಿ ಮಾಡಿಬಿಟ್ಟಿತು. ಮಹಾತಪಸ್ವಿಗಳಾದ, ತ್ರಿಲೋಕಸಂಚಾರಿಗಳಾದ ನಾರದರು

ಆ ಭಯಂಕರದೃಶ್ಯವನ್ನು ಕಂಡು ಒಡನೆಯೇ ಸಗರನ ಬಳಿಗೆ ಹೋಗಿ ಪುತ್ರ ವಿನಾಶದ ವರ್ತಮಾನವನ್ನು ತಿಳಿಸಿದರು. ಮಹರ್ಷಿಗಳ ಮುಖಾರವಿಂದ ದಿಂದ ಆ ದುರ್ವಾರ್ತೆಯನ್ನು ಕೇಳಿ ರಾಜರ್ಷಿಯಾದ ಸಗರನು ಮುಹೂರ್ತ ಕಾಲ ಬಹಳ ಖಿನ್ನನಾಗಿ ಕುಳಿತಿದ್ದನು. ತನ್ನ ಮಕ್ಕಳ ಪರಾಕ್ರಮ, ಅವರ



ವೀರ್ಯೋತ್ಸಾಹಗಳು ಮತ್ತು ಅವರ ಜನನವೃತ್ತಾಂತ–ಇತ್ಯಾದಿಗಳನ್ನು ಸ್ಮರಿಸುತ್ತಿದ್ದಾಗ ಸಗರನಿಗೆ ಪರಶಿವನು ಹೇಳಿದ್ದ ಮಾತಿನ ನೆನಪುಂಟಾಯಿತು. ಎಲ್ಲವೂ ವಿಧಿನಿಯಮವೆಂದು ನಿಶ್ಚಯಿಸಿ ಸಮಾಧಾನ ಹೊಂದಿದವನಾಗಿ ತನ್ನ ಮುಂದಿನ ಕರ್ತವ್ಯವನ್ನು ಸಮಾಲೋಚಿಸಿ ತನ್ನ ಮೊಮ್ಮಗನಾದ ಅಂಶುಮಂತನನ್ನು ತನ್ನ ಬಳಿಗೆ ಬರಮಾಡಿಕೊಂಡು ಸಗರನು ಅವನೊಡನೆ ಹೇಳಿದನು :

"ಮಗು! ಅಂಶುಮಂತ! ಅತುಲಪರಾಕ್ರಮಿಗಳೆನಿಸಿದ್ದ ನನ್ನ ಅರುವತ್ತು ಸಾವಿರ ಮಂದಿ ಮಕ್ಕಳೂ ಕಪಿಲಮಹರ್ಷಿಯ ಕೋಪಾಗ್ನಿಗೆ ಸಿಕ್ಕಿ ಭಸ್ಮೀಭೂತರಾಗಿ ಹೋದರು. ಈ ದುರ್ವಾರ್ತೆಯನ್ನು ಈಗ ತಾನೇ ನಾರದ ರಿಂದ ಕೇಳಿದೆನು. ರಾಜನ ಕರ್ತವ್ಯನಿರ್ವಹಣೆಯ ದೃಷ್ಟಿಯಿಂದಲೂ ಮತ್ತು ಪ್ರಜೆಗಳಿಗೆ ಒಳ್ಳೆಯದನ್ನುಂಟುಮಾಡುವ ಆಶಯದಿಂದಲೂ ನಿನ್ನ ತಂದೆಯೂ ಮತ್ತು ನನ್ನ ಹಿರಿಯ ಮಗನೂ ಆದ ಅಸಮಂಜಸನನ್ನೂ ನಾನೇ ಪರಿತ್ಯಜಿಸಿದೆನು."

ಲೋಮಶರು ಕಥೆಯನ್ನು ಮುಂದುವರಿಸುತ್ತಿರುವಾಗ ಮಧ್ಯದಲ್ಲಿ ಯುಧಿಷ್ಠಿರನು ತನ್ನ ಆಕಾಂಕ್ಷೆಯನ್ನು ವ್ಯಕ್ತಪಡಿಸುತ್ತಾ ಲೋಮಶರನ್ನು ಕೇಳಿದನು:

"ತಪೋಧನರೇ! ಸ್ವಲ್ಪ ತಾಳಿರಿ. ರಾಜಶಾರ್ದೂಲನಾದ ಸಗರಚಕ್ರ ವರ್ತಿಯು ಪರಿತ್ಯಾಗಕ್ಕೆ ಅನರ್ಹನಾದ ಆತ್ಮಜನನ್ನು ಯಾವ ಕಾರಣಕ್ಕಾಗಿ ಪರಿತ್ಯಜಿಸಿದನೆಂಬುದನ್ನು ಕೇಳಲು ಉತ್ಸುಕನಾಗಿದ್ದೇನೆ. ಇದನ್ನು ಹೇಳಿದ ನಂತರ ಮುಂದಿನ ಪ್ರವಚನವು ನಡೆಯಲಿ."

"ಧರ್ಮಜ! ಸಗರನಿಗೆ ವೈದರ್ಭಿಯಲ್ಲಿ ಒಂದು ಗರ್ಭಪಿಂಡವು ಹುಟ್ಟಿ ಅದರಿಂದ ಅರುವತ್ತು ಸಾವಿರ ಮಕ್ಕಳಾದರು. ಶೈಬ್ಯೆಯಲ್ಲಿ ವಂಶಪ್ರದೀಪಕನಾದ ಒಬ್ಬ ಮಗನು ಹುಟ್ಟಿದನೆಂಬ ವಿಷಯವನ್ನು ನಾನು ನಿನಗಾಗಲೇ ಹೇಳಿರುವೆನು. ಶೈಬ್ಯೆಯ ಮಗನ ಹೆಸರು ಅಸಮಂಜಸ. ಅವನಿಗೆ ಒಂದು ದುರಭ್ಯಾಸವಿದ್ದಿತು. ಬೀದಿಯಲ್ಲಾಡುವ ಮಕ್ಕಳ ಕತ್ತನ್ನು ಹಿಸುಕಿ ನದಿಯಲ್ಲಿ ಹಾಕುತ್ತಿದ್ದನು. ಆ ಮಕ್ಕಳು ಸಾಯುವ ಮೊದಲು ಮೂರು ಬಾರಿ ಮುಳುಗಿ ತೇಲುತ್ತಾ ಬುದ್ಬುದಶಬ್ದಮಾಡುತ್ತಿದ್ದುದನ್ನು ಕಂಡು ಆನಂದಿಸುತ್ತಿದ್ದನು. ಹೀಗೆ ಅನುದಿನವೂ ಮಾಡುತ್ತಿದ್ದುದರಿಂದ ರಾಜಧಾನಿಯಲ್ಲಿ ಮಕ್ಕಳ ಸಂಖ್ಯೆಯು ದಿನ-ದಿನಕ್ಕೂ ಕ್ಷೀಣಿಸಿತು. ಒಂದೆರಡು ದಿನಗಳು ರಾಜಪುತ್ರನೆಂಬ ಭಯದಿಂದ ಪುತ್ರಶೋಕವನ್ನು ಬಹುಕಷ್ಟ ದಿಂದ ಸಹಿಸಿಕೊಂಡ ಜನರು ಅಸಮಂಜಸನ ಅನುದಿನದ ಆ ದುರ್ವರ್ತನೆ ಯನ್ನು ಸಹಿಸದವರಾದರು. ಹೀಗೆಯೇ ಸುಮ್ಮನಿದ್ದರೆ ತಮ್ಮ ವಂಶವೇ

ವಿನಾಶವಾಗಿಬಿಡಬಹುದೆಂದು ಭೀತರಾದ ಪ್ರಜೆಗಳು ಬಹುದುಃಖಿತರಾಗಿ ಮುಂದೇನು ಮಾಡಬೇಕೆಂಬುದನ್ನು ತಮ್ಮಲ್ಲಿಯೇ ನಿಶ್ಚಯಿಸಿಕೊಂಡು ಸಗರ ಚಕ್ರವರ್ತಿಯ ಸಮ್ಮುಖಕ್ಕೆ ಹೋಗಿ ಬದ್ಧಾಂಜಲಿಗಳಾಗಿ ತಮ್ಮ ಕಷ್ಟಗಳನ್ನು ಹೇಳಿಕೊಂಡರು :

"ಮಹಾರಾಜ! ನಮ್ಮ ಮೇಲೆ ಬೀಳಲಿರುವ ಶತ್ರುಗಳನ್ನು ನಿವಾರಣೆ ಮಾಡಿ ನಮ್ಮನ್ನು ರಕ್ಷಣೆಮಾಡುವವನು ನೀನೇ ಆಗಿರುವೆ. ಆದುದರಿಂದ ನಮ್ಮೆಲ್ಲರಿಗೂ ಘೋರರೂಪನಾಗಿರುವ, ಭಯೋತ್ಪಾದಕನಾಗಿರುವ ಈ ಅಸಮಂಜಸನಿಂದಲೂ ನಮ್ಮನ್ನು ರಕ್ಷಿಸುವುದು ನಿನ್ನ ಕರ್ತವ್ಯವಾಗಿರುತ್ತದೆ."

ಪ್ರಜೆಗಳ ಮಾತನ್ನು ಕೇಳಿ ಸಗರಚಕ್ರವರ್ತಿಯು ಮುಹೂರ್ತಕಾಲ ಚಿಂತಾಮಗ್ನನಾಗಿ ಕುಳಿತಿದ್ದನು. ಮಗನಿಗಿಂತಲೂ ಪ್ರಜೆಗಳ ಹಿತರಕ್ಷಣೆಯೇ ತನ್ನ ಮುಖ್ಯಕರ್ತವ್ಯವೆಂದು ನಿಶ್ಚಯಿಸಿದನು. ಒಡನೆಯೇ ತನ್ನ ಅಮಾತ್ಯರನ್ನು ಕರೆಯಿಸಿ ಆಜ್ಞೆಮಾಡಿದನು.

"ಸಚಿವೋತ್ತಮರೇ! ಈ ಕೂಡಲೇ ನನ್ನ ಮಗನಾದ ಅಸಮಂಜಸನನ್ನು ಈ ದೇಶದಿಂದಲೇ ಹೊರಹಾಕಿರಿ. ನನ್ನ ಮೇಲೆ ನಿಮಗೆ ಅಭಿಮಾನ ವಿರುವುದಾದರೆ, ನನ್ನನ್ನು ಗೌರವಿಸುವಿರಾದರೆ–ಈ ಕಾರ್ಯವನ್ನು ಈಗಲೇ ಮಾಡಿ ಮುಗಿಸಿರಿ. ಸಾವಕಾಶಮಾಡಬೇಡಿರಿ."

ಧರ್ಮಜ! ಸಗರನು ಹೀಗೆ ಆಜ್ಞೆಮಾಡಿದನಂತರ ಅವನ ಮಂತ್ರಿಗಳು ವಿಧಿಯಿಲ್ಲದೇ ಅಸಮಂಜಸನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೋಗಿ ದೇಶಭ್ರಷ್ಟನನ್ನಾಗಿ ಮಾಡಿದರು. ಈ ರೀತಿಯಲ್ಲಿ ಪ್ರಜೆಗಳ ಹಿತಕ್ಕಾಗಿ ಸಗರನು ತನ್ನ ಪುತ್ರನನ್ನೇ ಪರಿತ್ಯಾಗಮಾಡಬೇಕಾಯಿತು. ಪ್ರಜೆಗಳ ಮಾತಿಗೆ ಮಣಿಯಬೇಕಾಯಿತು. ಯುಧಿಷ್ಠಿರ! ನಿನ್ನ ಆಶಯದಂತೆ ಅಸಮಂಜಸನ ಪರಿತ್ಯಾಗದ ಇತಿಹಾಸವನ್ನೂ ಹೇಳಿದೆನಲ್ಲವೇ? ಇನ್ನು ಮುಂದೆ ಮಹಾ ಧನುರ್ಧಾರಿಯಾದ ಅಂಶುಮಂತನಿಗೆ ಸಗರನು ಏನು ಹೇಳಿದನೆಂಬುದನ್ನು ತಿಳಿಸುತ್ತೇನೆ.

ಸಗರನು ಮುಂದುವರಿದು ಮೊಮ್ಮಗನನ್ನು ಕುರಿತು ಹೇಳಿದನು :

"ಮಗು! ನಿನ್ನ ತಂದೆಯನ್ನು ಪರಿತ್ಯಾಗಮಾಡಿರುವುದಕ್ಕೂ, ಇಂದು

ನನ್ನ ಅರುವತ್ತು ಸಾವಿರ ಮಕ್ಕಳೂ ಮಹರ್ಷಿಯ ಕೋಪಾಗ್ನಿಗೆ ಸಿಕ್ಕಿ ಭಸ್ಮೀಭೂತರಾಗಿರುವುದಕ್ಕೂ, ಎಲ್ಲಕ್ಕಿಂತಲೂ ಹೆಚ್ಚಾಗಿ ನಾನು ಆರಂಭಿಸಿರುವ ಈ ಅಶ್ವಮೇಧಯಾಗವು ಕುದುರೆಯಿಲ್ಲದೇ ಪರಿಸಮಾಪ್ತಿಯಾಗದಿರುವುದಕ್ಕೂ ಬಹಳ ದುಃಖಿತನಾಗಿರುವೆನು. ಪುತ್ರಶೋಕದಿಂದ ಅತಿದುಃಖಿತನಾಗಿರುವ ಮತ್ತು ಯಜ್ಞವಿಘ್ನದಿಂದ ಬಹುವಾಗಿ ಪರಿತಪಿಸುತ್ತಿರುವ ನನ್ನನ್ನು ಉಭಯಸಂಕಟಗಳಿಂದ ಪಾರುಮಾಡುವ ಸಲುವಾಗಿ ನೀನೀಗಲೇ ಹೋಗಿ ಅಶ್ವಮೇಧಾಶ್ವವನ್ನು ಹುಡುಕಿಕೊಂಡು ಬಾ."

ಪಿತಾಮಹನ ಆಜ್ಞೆಯನ್ನು ಶಿರಸಾವಹಿಸಿ ದುಃಖದಿಂದ ಅತಿಭಾರವಾದ ಹೃದಯದಿಂದ ಕೂಡಿದ್ದ ಅಂಶುಮಂತನು ಕುದುರೆಯ ಆಹರಣಕ್ಕಾಗಿ ಹೊರಟನು. ಸಗರನ ಮಕ್ಕಳು ಅಗೆದಿದ್ದ ಸಮುದ್ರದ ಬಳಿಗೆ ಹೋಗಿ ಅವರು ಸಮುದ್ರದ ಈಶಾನ್ಯಭಾಗದಲ್ಲಿ ಮಾಡಿದ ಸುರಂಗದ ಮೂಲಕವಾಗಿಯೇ ಪಾತಾಳವನ್ನು ಪ್ರವೇಶಿಸಿದನು. ಅವನು ಅಲ್ಲಿ ಮಹಾತೇಜಸ್ವಿಯಾದ ಕಪಿಲ ಮಹರ್ಷಿಯನ್ನೂ–ಅಶ್ವಮೇಧಾಶ್ವವನ್ನೂ ಕಂಡನು. ತೇಜೋರಾಶಿಯಾದ, ಪುರಾಣಪುರುಷನಾದ, ಋಷಿಶ್ರೇಷ್ಠನಾದ ಕಪಿಲಮಹರ್ಷಿಗೆ ದೀರ್ಘದಂಡ ನಮಸ್ಕಾರಮಾಡಿ ತಾನು ಬಂದಿರುವ ಕಾರ್ಯವನ್ನು ಮಹರ್ಷಿಗೆ ವಿನಯ ಪೂರ್ವಕವಾಗಿ ಹೇಳಿದನು. ಮಹಾತ್ಮನಾದ ಕಪಿಲಮಹರ್ಷಿಯು ಅಂಶುಮಂತನ ಸೌಶೀಲ್ಯಕ್ಕೆ ಸುಪ್ರೀತನಾಗಿ ಅವನೊಡನೆ ಹೇಳಿದನು :

"ಅಂಶುಮಂತನೇ! ನಿನ್ನ ವಿಷಯದಲ್ಲಿ ನಾನು ಸುಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರಗಳನ್ನು ಕೇಳು. ಕೊಡುವೆನು, ಮಗು!"

ಮಹರ್ಷಿಯ ಮುಖಾರವಿಂದದಿಂದ ಹೊರಟ ಮಾತುಗಳನ್ನು ಕೇಳಿ ಅಂಶುಮಂತನು ವಿನೀತನಾಗಿ ಹೇಳಿದನು :

"ಮಹರ್ಷಿಗಳೇ! ನಮ್ಮ ಪಿತಾಮಹನು ಆರಂಭಿಸಿರುವ ಅಶ್ವಮೇಧ ಯಜ್ಞವು ಪೂರ್ಣವಾಗಲು ಈ ಅಶ್ವಮೇಧಾಶ್ವವನ್ನು ದಯಪಾಲಿಸಿರಿ ಮತ್ತು ಭಸ್ಮೀಭೂತರಾಗಿರುವ ಈ ನನ್ನ ಪಿತೃಗಳಿಗೆ ಸದ್ಗತಿಯುಂಟಾಗುವಂತೆ ಅನುಗ್ರಹಿಸಿರಿ."

**ದದಾನಿ ತವ ಭದ್ರಂ ತೇ ಯದ್ವತ್ತ್ವಾರ್ಥಯಸೇಽನಘ ।**
**ತ್ವಯಿ ಕ್ಷಮಾ ಚ ಧರ್ಮಶ್ಚ ಸತ್ಯಂ ಚಾಪಿ ಪ್ರತಿಷ್ಠಿತಮ್ ॥೫೪॥**

ತ್ವಯಾ ಕೃತಾರ್ಥಃ ಸಗರಃ ಪುತ್ರವಾಂಶ್ಚ ತ್ವಯಾ ಪಿತಾ ।
ತವ ಚೈವ ಪ್ರಭಾವೇಣ ಸ್ವರ್ಗಂ ಯಾಸ್ಯನ್ತಿ ಸಾಗರಾಃ ॥೫೫॥
ಪೌತ್ರಶ್ಚ ತೇ ತ್ರಿಪಥಗಾಂ ತ್ರಿದಿವಾದಾನಯಿಷ್ಯತಿ ।
ಪಾವನಾರ್ಥಂ ಸಾಗರಾಣಾಂ ತೋಷಯಿತ್ವಾ ಮಹೇಶ್ವರಮ್ ॥೫೬॥
ಹಯಂ ನಯಸ್ವ ಭದ್ರಂ ತೇ ಯಜ್ಞಿಯಂ ನರಪುಙ್ಗವ ।
ಯಜ್ಞಃ ಸಮಾಪ್ಯತಾಂ ತಾತ ಸಗರಸ್ಯ ಮಹಾತ್ಮನಃ ॥೫೭॥



"ಮಗು! ನೀನು ಕೇಳಿದ ವರಗಳೆಲ್ಲವನ್ನೂ ಅನುಗ್ರಹಿಸುತ್ತೇನೆ. ನಿನಗೆ ಮಂಗಳವಾಗಲಿ. ಕ್ಷಮೆ, ಸತ್ಯ, ಧರ್ಮಗಳು ನಿನ್ನಲ್ಲಿ ಪ್ರತಿಷ್ಠಿತ ವಾಗಿವೆ. ನಿನ್ನಿಂದ ಸಗರಚಕ್ರವರ್ತಿಯು ಕೃತಾರ್ಥನಾಗುತ್ತಾನೆ. ನಿನ್ನ

ತಂದೆಯೂ ನಿನ್ನಿಂದ ಸುಪುತ್ರವಂತನಾಗಿರುತ್ತಾನೆ. ನಿನ್ನ ಪ್ರಭಾವದಿಂದಲೇ ಭಸ್ಮೀಭೂತರಾಗಿರುವ ಸಗರನ ಮಕ್ಕಳು ಸ್ವರ್ಗವನ್ನು ಸೇರುತ್ತಾರೆ. ನಿನ್ನ ಮೊಮ್ಮಗನು ಸಗರನ ಮಕ್ಕಳನ್ನು ಪರಿಶುದ್ಧಗೊಳಿಸಲು ಅತಿದಾರುಣವಾದ ತಪಸ್ಸನ್ನು ಮಾಡಿ ಮಹೇಶ್ವರನ ಅನುಗ್ರಹವನ್ನು ಪಡೆದು ತ್ರಿಪಥಗಾಮಿನಿಯಾದ ಗಂಗಾದೇವಿಯನ್ನು ಸ್ವರ್ಗದಿಂದ ಇಲ್ಲಿಗೆ ಕರೆತರುತ್ತಾನೆ. ನಿನಗೆ ಶುಭವಾಗಲಿ. ನೀನು ಸಾವಕಾಶಮಾಡದೆ ಈ ಅಶ್ವಮೇಧಾಶ್ವವನ್ನು ನಿನ್ನೊಡನೆ ಕರೆದುಕೊಂಡು ಹೋಗಿ ನಿಮ್ಮ ಅಜ್ಜನು ಆರಂಭಿಸಿರುವ ಯಜ್ಞವನ್ನು ಪೂರ್ಣಗೊಳಿಸುವವನಾಗು."

ಅಂಶುಮಂತನು ಕಪಿಲಮಹರ್ಷಿಗಳ ಮಾತುಗಳನ್ನು ಕೇಳಿ, ಪುನಃ ಅವರಿಗೆ ದೀರ್ಘದಂಡನಮಸ್ಕಾರಮಾಡಿ, ಕುದುರೆಯೊಡನೆ ರಾಜಧಾನಿಯನ್ನು ಸೇರಿ, ಮಹಾತ್ಮನಾದ ಸಗರನಿದ್ದ ಯಜ್ಞಮಂಟಪವನ್ನು ಪ್ರವೇಶಿಸಿದನು. ಪಿತಾಮಹನಾದ ಸಗರನನ್ನು ಕಂಡೊಡನೆಯೇ ಅಂಶುಮಂತನು ಅವನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿದನು. ಸಗರನು ಪರಮಪ್ರೀತನಾಗಿ ಮೊಮ್ಮಗನನ್ನು ಹಿಡಿದೆತ್ತಿ–ನೆತ್ತಿಯನ್ನು ಆಘ್ರಾಣಿಸಿ, ತನ್ನ ಹತ್ತಿರದ ಆಸನವೊಂದರಲ್ಲಿ ಕುಳ್ಳಿರಿಸಿಕೊಂಡನು. ಅಂಶುಮಂತನು ತನ್ನ ಅಜ್ಜನಿಗೆ ನಡೆದ ವೃತ್ತಾಂತವೆಲ್ಲವನ್ನೂ ಸವಿಸ್ತರವಾಗಿ ಹೇಳಿ ಅಶ್ವಮೇಧಾಶ್ವವನ್ನೂ ಕರೆತಂದು ಯಜ್ಞಶಾಲೆಯ ಬಳಿ ಕಟ್ಟಿಹಾಕಿರುವುದಾಗಿ ಹೇಳಿದನು. ಅಂಶುಮಂತನು ಹೇಳಿದ ಮಾತುಗಳೆಲ್ಲವನ್ನು ಕೇಳಿ, ಕುದುರೆಯು ಆಗಮಿಸಿತೆಂಬ ವೃತ್ತಾಂತವನ್ನೂ ತಿಳಿದನಂತರ ಸಗರನು ತನ್ನ ಮಕ್ಕಳಿಗಾಗಿ ಹೆಚ್ಚು ಶೋಕಿಸಲಿಲ್ಲ. ಅಂಶುಮಂತನ ಕಾರ್ಯವನ್ನು ಬಹುವಾಗಿ ಶ್ಲಾಘಿಸಿ ತಾನು ಆರಂಭಿಸಿದ್ದ ಅಶ್ವಮೇಧಯಾಗವನ್ನು ವಿಧಿಪೂರ್ವಕವಾಗಿ ಪೂರ್ಣಗೊಳಿಸಿದನು. ಯಜ್ಞದ ಹವಿರ್ಭಾಗಗಳನ್ನು ಪಡೆದ ದೇವತೆಗಳು ಸಗರಚಕ್ರವರ್ತಿಯನ್ನು ಹರಸಿದರು. ದೇವತೆಗಳ ಅನುಗ್ರಹದಿಂದಲೇ ಸಗರನು ತನ್ನ ಮಕ್ಕಳಿಂದ ಖನನಮಾಡಲ್ಪಟ್ಟ ವರುಣನ ಆಲಯವಾದ ಸಮುದ್ರವನ್ನು ತನ್ನ ಮಗನನ್ನಾಗಿ ಮಾಡಿಕೊಂಡನು. ಅಂದಿನಿಂದಲೇ ಸಮುದ್ರಕ್ಕೆ ಸಾಗರವೆಂದು ಹೆಸರಾಯಿತು.

ಕಮಲಾಕ್ಷನಾದ ಸಗರನು ಮುಂದೆ ಅನೇಕವರ್ಷಗಳವರೆಗೆ ಧರ್ಮದಿಂದ ರಾಜ್ಯಪಾಲನೆಯನ್ನು ಮಾಡುತ್ತಿದ್ದು ಕಡೆಯಲ್ಲಿ ತನ್ನ ಮೊಮ್ಮಗನಾದ

ಅಂಶುಮಂತನಿಗೆ ಸಿಂಹಾಸನದ ಪಟ್ಟಗಟ್ಟಿ ರಾಜ್ಯಭಾರವನ್ನು ವಹಿಸಿಕೊಟ್ಟು ಕೆಲವು ದಿನಗಳಲ್ಲಿಯೇ ದಿವಂಗತನಾದನು. ಧರ್ಮಾತ್ಮನಾದ ಅಂಶುಮಂತನೂ ತನ್ನ ಅಜ್ಜನು ತೋರಿಸಿದ ಧರ್ಮಮಾರ್ಗದಲ್ಲಿಯೇ ನಡೆಯುತ್ತಾ ಸಮುದ್ರಾಂತವಾದ ಭೂಮಿಯನ್ನು ಅನೇಕವರ್ಷಗಳ ಪರ್ಯಂತವಾಗಿ ಆಳಿದನು. ಅಂಶುಮಂತನಿಗೆ ದಿಲೀಪನೆಂಬ ಧರ್ಮನಿಷ್ಠನಾದ ಮಗನಿದ್ದನು. ತನ್ನ ಅಜ್ಜನಂತೆಯೇ ಅಂಶುಮಂತನೂ ವೃದ್ಧಾಪ್ಯದಲ್ಲಿ ತನ್ನ ಮಗನಾದ ದಿಲೀಪನಿಗೆ ರಾಜ್ಯಭಾರವನ್ನು ವಹಿಸಿಕೊಟ್ಟು ಕೆಲವು ದಿನಗಳಲ್ಲಿಯೇ ದೇಹತ್ಯಾಗಮಾಡಿದನು.

ದಿಲೀಪನು ತನ್ನ ಚಿಕ್ಕತಾತಂದಿರಿಗೆ ಪ್ರಾಪ್ತವಾದ ದುರ್ಮರಣವನ್ನು ಕೇಳಿ ಬಹುದುಃಖಿತನಾಗಿ ಅವರಿಗೆ ಸದ್ಗತಿಯುಂಟಾಗಲು ಮಾಡಬಹುದಾದ ಕಾರ್ಯದ ಬಗೆಗೆ ಬಹುವಾಗಿ ಯೋಚಿಸುತ್ತಿದ್ದನು. ತನ್ನ ತಪಶ್ಚರಣೆಯಿಂದ ಗಂಗಾದೇವಿಯನ್ನು  ಭೂಮಿಗೆ ಕರೆತರಲು ಅವನೂ ಬಹುವಾಗಿ ಯತ್ನಿಸಿದನು. ಆದರೆ ಎಷ್ಟೇ ಪ್ರಯತ್ನಮಾಡಿದರೂ ಅವನ ಆಶಯವು ಪೂರ್ಣವಾಗಲಿಲ್ಲ. ದಿಲೀಪನಿಗೆ ಸುಂದರಕಾಯನೂ, ಧರ್ಮನಿಷ್ಠನೂ, ಸತ್ಯವಂತನೂ, ಅಸೂಯಾರಹಿತನೂ ಆದ ಭಗೀರಥನೆಂಬ ಮಗನು ಹುಟ್ಟಿದನು.

ಯುಧಿಷ್ಠಿರ! ಭಗೀರಥನು ಪ್ರಾಪ್ತವಯಸ್ಕನಾಗಲಾಗಿ ದಿಲೀಪನು ರಾಜ್ಯಭಾರವನ್ನು ಮಗನಿಗೆ ವಹಿಸಿಕೊಟ್ಟು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಪತ್ನಿಯೊಡನೆ ಅರಣ್ಯಕ್ಕೆ ತೆರಳಿದನು. ದಿಲೀಪನು ಅರಣ್ಯದಲ್ಲಿ ಸರ್ವದಾ ತಪೋನಿಷ್ಠನಾಗಿದ್ದು ಸಿದ್ಧಿಯನ್ನು ಪಡೆದು ಕಡೆಗೆ ಪಾರ್ಥಿವಶರೀರವನ್ನು ತೊರೆದು ಸ್ವರ್ಗವನ್ನು ಸೇರಿದನು.

ಧ೦೭ನೆಯ ಅಧ್ಯಾಯವು ಮುಗಿಯಿತು.

೧೦೮ನೆಯ ಅಧ್ಯಾಯ — ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಭಗೀರಥನು ಹಿಮವತ್ಪರ್ವತದಲ್ಲಿ ತಪಶ್ಚರಣೆಯಿಂದ ಗಂಗೆಯನ್ನೂ ಮಹಾದೇವನನ್ನೂ ಪ್ರಸನ್ನಗೊಳಿಸಿ ವರಪಡೆದುದು

ಯುಧಿಷ್ಠಿರ! ಮಹಾರಥನೂ ಚಕ್ರವರ್ತಿಯೂ ಆಗಿದ್ದ ಭಗೀರಥನು

ತನ್ನ ಸುವ್ಯವಸ್ಥಿತವಾದ ರಾಜ್ಯಪರಿಪಾಲನೆಯಿಂದಾಗಿ ಪ್ರಜೆಗಳ ಮನಸ್ಸಿಗೂ ಕಣ್ಣುಗಳಿಗೂ ಆನಂದದಾಯಕನಾಗಿದ್ದನು. ತನ್ನ ಪ್ರಪಿತಾಮಹರು ಮಹಾತ್ಮನಾದ ಕಪಿಲಮಹರ್ಷಿಯ ಕೋಪಾಗ್ನಿಗೆ ಸಿಕ್ಕಿ ಭಸ್ಮೀಭೂತರಾದ ವಿಷಯವೂ ಮತ್ತು ಅದೇ ಕಾರಣದಿಂದಾಗಿ ಅವರಿಗೆ ಸದ್ಗತಿಯು ಸಿಗದಿರುವ ವಿಷಯವೂ ಮಹಾಬಾಹುವಾದ ಭಗೀರಥನಿಗೆ ತಿಳಿಯಿತು. ತನ್ನ ಪ್ರಪಿತಾಮಹರಿಗೆ ಸದ್ಗತಿಯು ಸಿಗದಿರುವ ವಿಷಯವನ್ನು ತಿಳಿದು ಭಗೀರಥನಿಗೆ ಬಹಳ ದುಃಖವುಂಟಾಯಿತು. ಉಗ್ರವಾದ ತಪಸ್ಸನ್ನು ಮಾಡಿಯಾದರೂ ತನ್ನ ಪಿತೃಗಳಿಗೆ ಸದ್ಗತಿಯು ಸಿಗುವಂತೆ ಮಾಡಬೇಕೆಂಬ ಏಕೈಕಧ್ಯೇಯದಿಂದ ರಾಜ್ಯಾಡಳಿತವೆಲ್ಲವನ್ನೂ ಮಂತ್ರಿಗಳಿಗೆ ವಹಿಸಿಕೊಟ್ಟು ತಪಶ್ಚರಣೆಮಾಡುವ ಸಲುವಾಗಿ ಹಿಮಾಲಯದ ತಪ್ಪಲಿಗೆ ತೆರಳಿದನು. ಗಂಗಾದೇವಿಯನ್ನು ತಪಸ್ಸಿನಿಂದ ಒಲಿಸಿಕೊಳ್ಳುವ ಸಲುವಾಗಿಯೂ, ತನ್ನ ಪಾಪಗಳನ್ನು ಪರಿಹಾರಮಾಡಿಕೊಳ್ಳುವ ಸಲುವಾಗಿಯೂ ಪ್ರಯಾಣಮಾಡಿದ ಭಗೀರಥನು ಪರ್ವತರಾಜನಾದ ಹಿಮಾಲಯವನ್ನು ಸಂದರ್ಶಿಸಿದನು. ಹಿಮವತ್ಪರ್ವತವು ನಾನಾವಿಧವಾದ ಆಕಾರಗಳುಳ್ಳ ಅಸಂಖ್ಯಾತವಾದ ಶಿಖರಗಳಿಂದ ಕೂಡಿದ್ದಿತು. ಆ ಶಿಖರಗಳೆಲ್ಲವೂ ಗೈರಿಕಾದಿ ಧಾತುಗಳಿಂದ ಅಲಂಕೃತವಾಗಿದ್ದುವು. ವಾಯುದೇವನು ಮೇಘಗಳೆಂಬ ಮಾಲೆಗಳಿಂದ ಆ ಶಿಖರಗಳನ್ನು ಸಿಂಪಡಿಸಿದ್ದನು. (ವಾಯುವಿನಿಂದ ಪ್ರಚೋದಿತವಾದ ಮೋಡಗಳು ಆ ಶಿಖರಗಳ ಮೇಲೆ ನೀರುಸುರಿಸುತ್ತಿದ್ದುವು.) ಆ ಶಿಖರಗಳಲ್ಲಿಯೇ ಅನೇಕನದಿಗಳೂ, ಚಿಲುಮೆಗಳೂ ಹುಟ್ಟಿ ಹರಿಯುತ್ತಿದ್ದುವು. ಅವುಗಳ ದಂಡೆಗಳಲ್ಲಿ ಅನೇಕ ಲತಾಗೃಹಗಳಿದ್ದುವು. ಆ ಪರ್ವತದ ಗುಹೆಗಳಲ್ಲಿ ಸಿಂಹ-ವ್ಯಾಘ್ರಾದಿಮೃಗಗಳು ವಾಸಿಸುತ್ತಿದ್ದುವು. ಶಿಖರಗಳಲ್ಲಿಯೇ ಗೂಡುಗಳನ್ನು ಕಟ್ಟಿಕೊಂಡಿದ್ದ ಅನೇಕ ಜಾತಿಯ ಚಿತ್ರ-ವಿಚಿತ್ರವಾದ ಪಕ್ಷಿಗಳಿದ್ದುವು. ಅವುಗಳಲ್ಲಿ ಒಂದೊಂದೂ ಒಂದೊಂದು ವಿಧವಾಗಿ ಧ್ವನಿಮಾಡುತ್ತಿದ್ದುವು. ಭೃಂಗರಾಜ, ಹಂಸ, ಚಾತಕ, ನೀರುಕೋಳಿ, ನವಿಲು, ಶತಪತ್ರ, ಚಕ್ರವಾಕ, ಕೋಗಿಲೆ, ಚಕೋರ, ಅಸಿತಾಪಾಂಗ, ಪುತ್ರಪ್ರಿಯ–ಇವೇ ಮುಂತಾದ ಪಕ್ಷಿಗಳಿಂದ ಶಿಖರಗಳು ನಿಬಿಡವಾಗಿದ್ದುವು.

ಶಿಖರಗಳ ನಡುವೆ ಇರುವ ಕೊಳಗಳಲ್ಲಿ ಅನೇಕವಿಧವಾದ ಕಮಲಗಳ

ಬಳ್ಳಿಗಳಿದ್ದು ವಿಕಸಿತವಾದ ಸಾವಿರಾರು ಕಮಲಗಳಿಂದ ಶೋಭಾಯಮಾನ ವಾಗಿದ್ದುವು. ಸಾರಸಪಕ್ಷಿಗಳು ಸುಮಧುರವಾಗಿ ನಿನಾದಮಾಡುತ್ತಿದ್ದುವು. ಕಿನ್ನರರೂ ಮತ್ತು ಅಪ್ಸರೆಯರೂ ಆ ಶಿಖರಗಳಲ್ಲಿದ್ದ ಬಂಡೆಗಳ ಮೇಲೆ ಕುಳಿತು ವಿನೋದದಿಂದ ಕಾಲಕಳೆಯುತ್ತಿದ್ದರು. ಮದಿಸಿದ ಆನೆಗಳು ತಮ್ಮ ದಂತಾಗ್ರಗಳಿಂದ ಶಿಖರಗಳ ಕೆಳಭಾಗದಲ್ಲಿದ್ದ ಅನೇಕಾನೇಕ ವೃಕ್ಷಗಳನ್ನು ಉಜ್ಜಿರುವುದು ಕಾಣುತ್ತಿತ್ತು. ವಿದ್ಯಾಧರರು ಸುಂದರವಾದ ಆ ಪರ್ವತದಲ್ಲಿ ಸಂಚರಿಸುತ್ತಿದ್ದರು. ಆ ಶಿಖರಗಳು ನಾನಾವಿಧವಾದ ರತ್ನಗಳಿಂದ ಕೂಡಿ ದ್ದುವು. ಅನೇಕವಿಷಸರ್ಪಗಳೂ ಅಲ್ಲಿ ವಾಸಮಾಡುತ್ತಿದ್ದುವು. ಅಲ್ಲಿ ಕೆಲವು ಶಿಖರಗಳು ಕಾಂಚನಮಯವಾಗಿರುವಂತೆ ಶೋಭಿಸುತ್ತಿದ್ದುವು. ಮತ್ತೆ ಕೆಲವು ಬೆಳ್ಳಿಯಂತೆ ಹೊಳೆಯುತ್ತಿದ್ದುವು. ಮತ್ತೆ ಕೆಲವು ಶಿಖರಗಳು ಅಂಜನದ ರಾಶಿಯಂತೆ ಕಪ್ಪಾಗಿ ಕಾಣುತ್ತಿದ್ದುವು. ಅಂತಹ ಅನುಪಮವಾದ ಪ್ರಕೃತಿ ಸೌಂದರ್ಯದಿಂದ ಕೂಡಿರುವ ಹಿಮವತ್ಪರ್ವತದ ತಪ್ಪಲಿಗೆ ಭಗೀರಥನು ತಪಶ್ಚರಣೆಮಾಡುವ ಸಲುವಾಗಿ ಆಗಮಿಸಿದನು. ಯುಧಿಷ್ಠಿರ! ನರಶ್ರೇಷ್ಠನಾದ ಭಗೀರಥನು ಆ ಪರ್ವತದ ತಪ್ಪಲಿನಲ್ಲಿ ಅತ್ಯುಗ್ರವಾದ ತಪಸ್ಸನ್ನು ಮಾಡಲು ಉಪಕ್ರಮಿಸಿದನು. ಒಂದು ಸಹಸ್ರವರ್ಷಗಳ ಪರ್ಯಂತವಾಗಿ ಭಗೀರಥನು ಕಂದ-ಮೂಲ-ಜಲಗಳನ್ನು ಮಾತ್ರವೇ ಸೇವಿಸುತ್ತಾ ಗಂಗಾದೇವಿಯನ್ನು ಕುರಿತು ತಪಶ್ಚರಣೆಮಾಡಿದನು. ಒಂದು ದಿವ್ಯಸಹಸ್ರವರ್ಷಗಳು ಕಳೆದನಂತರ ಸುಪ್ರಸನ್ನಳಾದ ಗಂಗಾದೇವಿಯು ಮೂರ್ತಿಮತ್ತಾಗಿ ಬಂದು ಭಗೀರಥನಿಗೆ ದರ್ಶನವನ್ನಿತ್ತು, ಹೇಳಿದಳು :

"ಭಗೀರಥ! ನೀನು ಯಾವ ಅಪೇಕ್ಷೆಯಿಂದ ತಪಸ್ಸನ್ನು ಮಾಡುತ್ತಿ ರುವೆ? ನಾನು ನಿನಗೆ ಏನನ್ನು ಕೊಡಲಿ? ಹೇಳು. ಮಹಾರಾಜ! ನೀನು ಕೇಳಿದುದನ್ನು ನಾನು ಕೊಡಲು ಸಿದ್ಧಳಾಗಿ ಬಂದಿರುವೆನು."

ಭಗೀರಥನು ಬದ್ಧಾಂಜಲಿಯಾಗಿ ನಿಂತು ಗಂಗಾದೇವಿಯ ಪ್ರಶ್ನೆಗೆ ಉತ್ತರವನ್ನು ಹೇಳಿದನು : "ಪರ್ವತರಾಜಕುಮಾರಿಯೇ! ವರದಳೇ! ಸರಿತ್ ಶ್ರೇಷ್ಠಳೇ! ನನ್ನ ತಂದೆಯ ಅರುವತ್ತು ಸಾವಿರ ಮಂದಿ ಅಜ್ಜಂದಿರು ಅಶ್ವಮೇಧಾಶ್ವವನ್ನು ಹುಡುಕುತ್ತಿದ್ದ ಕಾಲದಲ್ಲಿ ಮಹಾತ್ಮರಾದ ಕಪಿಲ ಮಹರ್ಷಿಗಳ ಕೋಪಾಗ್ನಿಗೆ ಸಿಕ್ಕಿ ನಿಮಿಷಮಾತ್ರದಲ್ಲಿ ಮೃತಿಹೊಂದಿದರು.

ಹಾಗೆ ದುರ್ಮರಣಕ್ಕೀಡಾದ ಅವರಿಗೆ ಸ್ವರ್ಗದಲ್ಲಿ ಸ್ಥಳವು ಸಿಕ್ಕದಾಗಿದೆ. (ಸದ್ಗತಿಯುಂಟಾಗಲಿಲ್ಲ.) ಗಂಗಾದೇವಿ! ಎಂದಿನವರೆಗೆ ನಿನ್ನ ಪವಿತ್ರೋದಕ ದಿಂದ ನನ್ನ ಮುತ್ತಾತಂದಿರ ಅವಶೇಷಗಳು ಅಭಿಷೇಚನ ಮಾಡಲ್ಪಡುವು ದಿಲ್ಲವೋ–ಅಂದಿನವರೆಗೂ ಅವರಿಗೆ ಸದ್ಗತಿಯು ಸಿಕ್ಕಲಾರದು. ಆದುದ ರಿಂದ ದಯಮಾಡಿ ನೀನು ನನ್ನೊಡನೆ ಆಗಮಿಸಿ ನನ್ನ ಮುತ್ತಾತಂದಿರ ಅಸ್ಥಿ



ಗಳನ್ನು ನಿನ್ನ ಪವಿತ್ರೋದಕದಿಂದ ಅಭಿಷೇಚಿಸಿ ಅವರನ್ನು ಸ್ವರ್ಗಕ್ಕೆ ಕರೆದೊಯ್ಯುವವಳಾಗು. ಈ ಕಾರಣಕ್ಕಾಗಿಯೇ ನಾನು ನಿನ್ನನ್ನು ಕುರಿತು ತಪಸ್ಸನ್ನು ಮಾಡಿದೆನು. ದಯಮಾಡಿ ಅನುಗ್ರಹಿಸು, ತಾಯೇ!”

ಯುಧಿಷ್ಠಿರ! ಸಕಲಲೋಕಪೂಜ್ಯಳಾದ ಗಂಗಾದೇವಿಯು ಭಗೀರಥ

ಚಕ್ರವರ್ತಿಯ ಮಾತುಗಳನ್ನು ಕೇಳಿ ಪರಮಪ್ರೀತಳಾಗಿ ಅವನನ್ನು ಕುರಿತು ಹೇಳಿದಳು :

"ಮಹಾರಾಜ! ನೀನು ಕೇಳಿದ ವರವನ್ನು ಕೊಡಲು ನಾನೇನೋ ಸಿದ್ಧಳಿರುವೆನು. ಈ ವಿಷಯದಲ್ಲಿ ನೀನು ಸ್ವಲ್ಪವಾದರೂ ಸಂಶಯಿಸುವ ಕಾರಣವಿಲ್ಲ. ಆದರೆ ನಾನು ಆಕಾಶದಿಂದ ರಭಸದಿಂದ ಕೆಳಕ್ಕೆ ಜಲಪಾತ ರೂಪವಾಗಿ ಧುಮ್ಮಿಕ್ಕಿ ಬರುವಾಗ ನನ್ನನ್ನು ಯಾರೂ ತಡೆಹಿಡಿಯಲಾರರು. (ಭೂದೇವಿಗೆ ನನ್ನ ರಭಸವನ್ನು ಸಹಿಸಿಕೊಳ್ಳುವ ಸಾಮರ್ಥ್ಯವಿರುವುದಿಲ್ಲ.) ಭೂದೇವಿಯು ಮಾತ್ರವೇಕೆ? ಸ್ವರ್ಗ-ಭೂಮಿ-ಪಾತಾಳಗಳಲ್ಲಿಯೇ ನನ್ನ ರಭಸವನ್ನು ತಡೆಯುವ ಸಾಮರ್ಥ್ಯವುಳ್ಳವರು–ದೇವದೇವನಾದ, ವಿಷಕಂಠನಾದ ಪರಮಶಿವನ ಹೊರತಾಗಿ–ಮತ್ತಾರೂ ಇರುವುದಿಲ್ಲ. ಆದುದರಿಂದ ನೀನೀಗಲೇ ವರದನಾದ ಪರಶಿವನನ್ನು ಕುರಿತು ತಪಸ್ಸುಮಾಡುವವನಾಗು. ನಿನ್ನ ತಪಸ್ಸಿಗೆ ಮೆಚ್ಚಿದ ಶಿವನು ಅಂತರಿಕ್ಷದಿಂದ ಧುಮ್ಮಿಕ್ಕುವ ನನ್ನನ್ನು ತನ್ನ ಜಟೆಯಲ್ಲಿ ಧಾರಣಮಾಡಿಕೊಳ್ಳುತ್ತಾನೆ. ಆ ಮಹಾನುಭಾವನಿಂದಲೇ ನಿನ್ನ ಇಚ್ಛೆಯು ಪೂರ್ಣವಾಗುತ್ತದೆ"–ಹೀಗೆಂದು ಹೇಳಿ ಗಂಗಾದೇವಿಯು ಅಂತರ್ಧಾನಹೊಂದಿದಳು.

ಗಂಗಾದೇವಿಯ ಆಜ್ಞೆಯಂತೆ ಒಡನೆಯೇ ಭಗೀರಥನು ಕೈಲಾಸಶಿಖರವನ್ನೇರಿ ಪವಿತ್ರವಾದೊಂದು ಸ್ಥಳದಲ್ಲಿ ಅನೇಕವರ್ಷಗಳವರೆಗೆ ಶಿವನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದನು. ಹಲವಾರು ವರ್ಷಗಳು ಕಳೆದ ಬಳಿಕ ಭಕ್ತಪ್ರಿಯನಾದ ಪರಶಿವನು ಭಗೀರಥನಿಗೆ ಪ್ರತ್ಯಕ್ಷನಾಗಿ ಅಪೇಕ್ಷಿಸಿದ ವರವನ್ನಿತ್ತನು.

ಯುಧಿಷ್ಠಿರ! ಈ ರೀತಿಯಲ್ಲಿ ಭಗೀರಥನು ತನ್ನ ಮುತ್ತಾತಂದಿರಿಗೆ ಸದ್ಗತಿಯನ್ನುಂಟುಮಾಡುವ ಸಲುವಾಗಿ ಅಂತರಿಕ್ಷದಿಂದ ಧುಮ್ಮಿಕ್ಕಿಬರುವ ಗಂಗೆಯನ್ನು ಶಿರಸಾವಹಿಸುವೆನೆಂಬ ವರವನ್ನು ಪರಶಿವನಿಂದ ಪಡೆದನು.

೧೦೮ನೆಯ ಅಧ್ಯಾಯವು ಮುಗಿಯಿತು.

## ಭೂಮಿಗೆ ಗಂಗಾವತರಣ : ಸಮುದ್ರಪೂರಣ : ಸಗರಪುತ್ರರ ಉದ್ಧಾರ

ಯುಧಿಷ್ಠಿರ! ದಯಾಮಯನಾದ ಪರಮೇಶ್ವರನು ಭಗೀರಥನ ಪ್ರಾರ್ಥನೆಯನ್ನು ಕೇಳಿ ದೇವತೆಗಳಿಗೂ ಪ್ರಿಯವನ್ನುಂಟುಮಾಡುವ ಆಶಯ ದಿಂದ ಅವನನ್ನು ಕುರಿತು ಹೇಳಿದನು :

"ಮಹಾಭಾಗನೇ! ನಿನ್ನ ಪ್ರಾರ್ಥನೆಯಂತೆ ನಿನ್ನ ಅಭಿಲಾಷೆಯನ್ನು ನೆರವೇರಿಸುವೆನು. ನಿನ್ನ ಸಲುವಾಗಿ ನಾನು ಅಂತರಿಕ್ಷದಿಂದ ಧುಮ್ಮಿಕ್ಕಿ ಬರಲಿರುವ, ಮಂಗಳಸ್ವರೂಪಳಾದ, ದಿವ್ಯಳಾದ, ಪುಣ್ಯವತಿಯಾದ, ಪರಮ ಪವಿತ್ರಳಾದ ದೇವಗಂಗೆಯನ್ನು ಶಿರಸ್ಸಿನಿಂದ ವಹಿಸುವೆನು."–ಹೀಗೆ ಹೇಳಿ ಪರಮೇಶ್ವರನು ಒಡನೆಯೇ ಆಯುಧಪಾಣಿಗಳಾಗಿದ್ದ ಭೂತಗಣಗಳಿಂದ ಪರಿವೃತನಾಗಿ ಹಿಮವತ್ಪರ್ವತವನ್ನೇರಿದನು. ಹಿಮವತ್ಪರ್ವತದ ಮೇಲೆ ನಿಂತಿದ್ದ ಪರಶಿವನು ಪುನಃ ಭಗೀರಥನಿಗೆ ಹೇಳಿದನು :

"ಮಹಾಬಾಹುವೇ! ಪರ್ವತರಾಜಕುಮಾರಿಯಾದ ಗಂಗಾದೇವಿ ಯನ್ನು ನೀನು ಈ ಕೂಡಲೇ ಸ್ವರ್ಗದಿಂದ ಕೆಳಗಿಳಿದು ಬರುವಂತೆ ಪ್ರಾರ್ಥಿಸು. ನಾನಿಲ್ಲಿಯೇ ನಿಂತು ಮೂರನೆಯ ಲೋಕದಿಂದ ರಭಸವಾಗಿ ಕೆಳಗಿಳಿದು ಬರುವ ಆ ಮಹಾನದಿಯನ್ನು ನನ್ನ ಶಿರಸ್ಸಿನಲ್ಲಿ ಧಾರಣೆಮಾಡುವೆನು."

ಮಹಾದೇವನು ಹೇಳಿದ ಮಾತುಗಳನ್ನು ಕೇಳಿ ಭಗೀರಥನು ಕೂಡಲೇ ಗಂಗಾದೇವಿಯನ್ನು ಏಕಾಗ್ರಚಿತ್ತದಿಂದ ಧ್ಯಾನಮಾಡತೊಡಗಿದನು. ತನ್ನನ್ನು ಕುರಿತು ಭಗೀರಥನು ಧ್ಯಾನಾಸಕ್ತನಾಗಿರುವುದನ್ನೂ, ತನ್ನನ್ನು ಶಿರಸ್ಸಿನಲ್ಲಿ ಧಾರಣೆಮಾಡುವ ಸಲುವಾಗಿ ಪರಮೇಶ್ವರನು ಹಿಮವತ್ಪರ್ವತವನ್ನು ಹತ್ತಿನಿಂತಿರುವುದನ್ನೂ ಕಂಡು ಶುಭಜಲಳಾದ ಗಂಗಾದೇವಿಯು ಅಂತರಿಕ್ಷದ ಮೂಲಕವಾಗಿ ಬಹುವೇಗದಿಂದ ಪ್ರವಹಿಸಿದಳು. ಅವಳು ಅತಿರಭಸದಿಂದ ಧುಮ್ಮಿಕ್ಕುತ್ತಿರುವುದನ್ನು ನೋಡುವ ಸಲುವಾಗಿ ದೇವ-ಮಹರ್ಷಿ-ಗಂಧ ರ್ವರೂ, ಯಕ್ಷ-ಕಿನ್ನರ-ಕಿಂಪುರುಷರೂ ಧಾವಿಸಿಬಂದರು. ಅವರೆಲ್ಲರೂ

ನೋಡುತ್ತಿರುವಂತೆಯೇ ಗಂಗೆಯು ಹಿಮವತ್ಪರ್ವತದ ಮೇಲೆ ನಿಂತಿದ್ದ ಪರಮೇಶ್ವರನೆಡೆಗೆ ಧುಮ್ಮಿಕ್ಕಿದಳು. ಅವಳ ಪ್ರವಾಹದಲ್ಲಿ ಅನೇಕಾನೇಕ ಸುಳಿಗಳಿದ್ದುವು ; ಅನೇಕಾನೇಕ ಮೀನುಗಳೂ, ಮೊಸಳೆಗಳೂ ಇದ್ದುವು.

ಆಕಾಶದ ಒಡ್ಯಾಣದಂತೆ ಪ್ರಕಾಶಿಸುತ್ತಿದ್ದ, ಲಲಾಟಪ್ರದೇಶಕ್ಕೆ ಸರಿಯಾಗಿ ಧುಮ್ಮಿಕ್ಕಿದ ಗಂಗಾದೇವಿಯನ್ನು ಮುತ್ತಿನ ಮಾಲೆಯನ್ನು ಧರಿಸುವಂತೆ ಪರಶಿವನು ತನ್ನ ತಲೆಯಲ್ಲಿ ಧರಿಸಿದನು. ಅನಂತರದಲ್ಲಿ ಪರಮೇಶ್ವರನ ಜಟಾಗಹ್ವರಮಂಡಲದಿಂದ ವಿನಿಃಸೃತಳಾದ ಗಂಗಾದೇವಿಯು ಮೂರು ಪ್ರವಾಹಗಳಾಗಿ ಹೊರಟಳು. ಅವಳ ಆ ಪ್ರವಾಹಗಳು ಮಹಾರಭಸದಿಂದ ಕೂಡಿ ಅಚ್ಚಬಿಳುಪಾದ ನೊರೆಯ ಪಂಕ್ತಿಗಳಿಂದ ಕೂಡಿದುದಾಗಿ ಬಿಳಿಯದಾದ ಹಂಸಪಕ್ಷಿಗಳ ಸಾಲುಗಳಂತೆಯೇ ಕಂಗೊಳಿಸಿದುವು. ಕೆಲವೆಡೆಗಳಲ್ಲಿ ಡೊಂಕು-ಡೊಂಕಾಗಿಯೂ, ಮತ್ತೆ ಕೆಲವೆಡೆಗಳಲ್ಲಿ ನೇರವಾಗಿಯೂ, ಮತ್ತೆ ಕೆಲವೆಡೆಗಳಲ್ಲಿ ಜಾರಿಬೀಳುತ್ತಿರುವಂತೆಯೂ ಪ್ರವಹಿಸುತ್ತಾ ನೊರೆಯೆಂಬ ಶ್ವೇತವಸ್ತ್ರವನ್ನು ಧರಿಸಿದವಳಾಗಿ–ಮದಿಸಿದ ಸ್ತ್ರೀಯೊಬ್ಬಳು ಮನಬಂದೆಡೆಗೆ ಸ್ವೇಚ್ಛಾವಿಹಾರಿಣಿಯಾಗಿ ಹೋಗುವಂತೆ–ಗಂಗಾದೇವಿಯು ಸ್ವೇಚ್ಛೆಯಿಂದ ಪ್ರವಹಿಸುತ್ತಿದ್ದಳು. ಕೆಲವೆಡೆಗಳಲ್ಲಿ ತನ್ನ ಜಲಪ್ರವಾಹದಿಂದಾಗಿ ಇಂಪಾಗಿ ನಾದಮಾಡುತ್ತಲೂ ಮತ್ತೆ ಕೆಲವೆಡೆಗಳಲ್ಲಿ ಕರ್ಕಶವಾಗಿ ಗರ್ಜನೆ ಮಾಡುತ್ತಲೂ ಪ್ರವಹಿಸುತ್ತಿದ್ದಳು. ಈ ರೀತಿಯಲ್ಲಿ ನಾನಾರೂಪಗಳನ್ನು ತಾಳಿ ಆಕಾಶದಿಂದ ಭೂಮಿಗಿಳಿದು ಬಂದ ಗಂಗಾದೇವಿಯು ಭಗೀರಥರಾಜನನ್ನು ಕುರಿತು ಹೇಳಿದಳು : "ಭಗೀರಥ! ನಾನು ಮುಂದೆಲ್ಲಿ ಪ್ರವಹಿಸಬೇಕೆಂಬುದನ್ನು ಸೂಚಿಸುವವನಾಗು. ನಾನು ನಿನ್ನ ಸಲುವಾಗಿಯೇ ಸ್ವರ್ಗದಿಂದ ಭೂಮಿಗೆ ಅವತರಿಸಿರುವೆನು."

ಯುಧಿಷ್ಠಿರ! ಗಂಗಾದೇವಿಯ ಮಾತುಗಳನ್ನು ಕೇಳಿದ ಕೂಡಲೇ ಭಗೀರಥನು ತನ್ನ ಮುತ್ತಾತಂದಿರು ಭಸ್ಮೀಭೂತರಾಗಿ ಬಿದ್ದಿದ್ದ ಸ್ಥಳಕ್ಕೆ ಗಂಗಾದೇವಿಯನ್ನು ಕರೆದೊಯ್ದನು. ಅವರ ಅವಶೇಷವು ಗಂಗಾನದಿಯಲ್ಲಿ ಕದಡಿಹೋಗುವಂತೆ ಮಾಡಬೇಕೆಂಬುದೇ ಅವನ ಮುಖ್ಯಧ್ಯೇಯವಾಗಿದ್ದಿತು.

ಇತ್ತಲಾಗಿ ಪರಶಿವನು ಭಗೀರಥನ ಪ್ರಾರ್ಥನೆಯಂತೆ ಗಂಗೆಯನ್ನು

ತಲೆಯಲ್ಲಿ ಧಾರಣೆಮಾಡಿದನಂತರ ಸಕಲದೇವತೆಗಳಿಂದಲೂ ಮತ್ತು ಋಷಿ-ಮಹರ್ಷಿಗಳಿಂದಲೂ ಸ್ತುತಿಸಲ್ಪಟ್ಟವನಾಗಿ ದೇವತೆಗಳಿಂದೊಡಗೂಡಿ ಪರ್ವತಶ್ರೇಷ್ಠವಾದ ಕೈಲಾಸಕ್ಕೆ ಅಭಿಮುಖವಾಗಿ ತೆರಳಿದನು.

ಅನಂತರ ಭಗೀರಥನೊಡನೆ ಹೊರಟ ಗಂಗಾದೇವಿಯು ಮೊತ್ತ ಮೊದಲು–ಅಗಸ್ತ್ಯರ ಪ್ರಾಶನದಿಂದ ನೀರಿಲ್ಲದೇ ಬತ್ತಿಹೋಗಿದ್ದ ಸಮುದ್ರವನ್ನು ಪ್ರವೇಶಿಸಿ, ಅದನ್ನು ತನ್ನ ಶುಭಜಲದಿಂದ ತುಂಬಿದಳು. ಅನಂತರದಲ್ಲಿ ಸಗರನ ಅರುವತ್ತು ಸಾವಿರ ಮಕ್ಕಳ ಅವಶೇಷವನ್ನೂ ತನ್ನ ಶುಭಜಲದಲ್ಲಿ ಲೀನಮಾಡಿಬಿಟ್ಟಳು. ಭಗೀರಥನು ಆನಂದಭರಿತನಾದನು. ಗಂಗೆಯನ್ನೇ ತನ್ನ ಮಗಳನ್ನಾಗಿಯೂ ಮಾಡಿಕೊಂಡನು. ಅಂದಿನಿಂದ ಗಂಗೆಗೆ 'ಭಾಗೀರಥಿ' ಎಂದೇ ಹೆಸರಾಯಿತು. ಭಾಗೀರಥಿಯ ಶುಭಜಲದಿಂದ ತನ್ನ ಪಿತೃಗಳೆಲ್ಲ ರಿಗೂ ತರ್ಪಣಮಾಡಿ ಭಗೀರಥನು ಕೃತಕೃತ್ಯನಾದನು.

ಯುಧಿಷ್ಠಿರ! ನಾನು ನಿನಗೆ ಗಂಗೆಯು ಆಕಾಶದಿಂದ ತ್ರಿಪಥಗಾಮಿನಿ ಯಾಗಿ ಬಂದ ವಿಷಯವನ್ನೂ, ಸಮುದ್ರವನ್ನು ನೀರಿನಿಂದ ತುಂಬಿದುದನ್ನೂ, ಅಗಸ್ತ್ಯರು ಸಮುದ್ರವನ್ನು ಆಪೋಶನವಾಗಿ ತೆಗೆದುಕೊಂಡ ಕಾರಣವನ್ನೂ ಮತ್ತು ಬ್ರಾಹ್ಮಣಹಂತಕನಾದ ವಾತಾಪಿಯು ಅಗಸ್ತ್ಯರಿಂದ ವಿನಾಶಹೊಂದಿದ ವಿಷಯವನ್ನೂ ಸವಿಸ್ತರವಾಗಿ ಹೇಳಿರುತ್ತೇನೆ"–ಎಂದು ಹೇಳಿ ಲೋಮಶರು ವಿರಮಿಸಿದರು."

೧೦೯ನೆಯ ಅಧ್ಯಾಯವು ಮುಗಿಯಿತು.

೧೧೦ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಋಷಭಪರ್ವತಸಂದರ್ಶನ : ಕೌಶಿಕೀಮಾಹಾತ್ಮ್ಯ : ಋಷ್ಯಶೃಂಗೋಪಾಖ್ಯಾನ : ಋಷ್ಯಶೃಂಗನನ್ನು ತನ್ನ ರಾಜ್ಯಕ್ಕೆ ಕರೆತರಲು ಲೋಮಪಾದನ ಪ್ರಯತ್ನ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಗಂಗಾವತರಣದ ಕಥೆಯನ್ನು ಯುಧಿಷ್ಠಿರನು

ಲೋಮಶರಿಂದ ಕೇಳಿ ತಿಳಿದನಂತರ ಆನಂದಭರಿತನಾಗಿ ಮುಂದೆ ನಂದಾ ಮತ್ತು ಅಪರನಂದಾ ಎಂಬ ಎರಡು ನದಿಗಳ ಕಡೆಗೆ ಪರಿವಾರಸಮೇತನಾಗಿ ಪ್ರಯಾಣಮಾಡಿದನು. ಆ ಮಹಾನದಿಗಳಲ್ಲಿ ಸ್ನಾನಮಾಡುವುದರಿಂದ ಮಹಾಪಾಪಗಳೂ ಪರಿಹಾರವಾಗುತ್ತವೆ. ಯುಧಿಷ್ಠಿರನು ಪರಿವಾರಸಮೇತನಾಗಿ ಆ ಪುಣ್ಯನದಿಗಳ ಸಮೀಪದಲ್ಲಿದ್ದ ಸಕಲಸೌಖ್ಯದಾಯಕವಾದ ಹೇಮಕೂಟಪರ್ವತವನ್ನು ಸಂದರ್ಶಿಸಿದನು. ಆ ಪರ್ವತದಲ್ಲಿ ಮನಸ್ಸಿನ ಯೋಚನೆಗೂ ನಿಲುಕದೇ ಇರತಕ್ಕ ಅನೇಕಾನೇಕ ವಿಚಿತ್ರದೃಶ್ಯಗಳನ್ನು ಯುಧಿಷ್ಠಿರನು ಕಂಡನು. ಅಲ್ಲಿ ಇದ್ದಕ್ಕಿದ್ದಂತೆಯೇ ಮೇಘಗಳು ಸುತ್ತಲೂ ಆವರಿಸುವುವು. ಆಲಿಕಲ್ಲಿನ ಮಳೆಗರೆಯತೊಡಗುವುದು. ಅದನ್ನು ಕಂಡು ಯಾತ್ರಿಕರು ಬಹುಖಿನ್ನರಾಗಿ ಆ ಪರ್ವತದ ಮೇಲೆ ಹತ್ತುವ ಧೈರ್ಯವನ್ನು ಮಾಡುತ್ತಿರಲಿಲ್ಲ. ಆ ಪರ್ವತದ ಮೇಲೆ ಗಾಳಿಯು ಸದಾ ರಭಸದಿಂದ ಬೀಸುತ್ತಿದ್ದಿತು. ಎಲ್ಲ ಕಾಲಗಳಲ್ಲಿಯೂ ಮಳೆಗರೆಯುತ್ತಿದ್ದಿತು. ಆಗಾಗ ವೇದಾಧ್ಯಯನದ ಘೋಷವೂ ಕೇಳಿಬರುತ್ತಿದ್ದಿತು. ಆದರೆ ವೇದಾಧ್ಯಯನವನ್ನು ಯಾರು ಮಾಡುತ್ತಿರುವರೆಂಬುದು ಮಾತ್ರ ಕಣ್ಣಿಗೆ ಗೋಚರವಾಗುತ್ತಿರಲಿಲ್ಲ. ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಆ ಪರ್ವತದ ಮೇಲೆ ಯಜ್ಞೇಶ್ವರನು ದೃಗ್ಗೋಚರನಾಗುತ್ತಿದ್ದನು. ತಪಸ್ಸಿಗೆ ಪ್ರತಿಬಂಧಕವನ್ನುಂಟು ಮಾಡುವ ಅನೇಕಮಕ್ಷಿಕಗಳು (ಕಾಡುನೊಣಗಳು) ಆ ಪರ್ವತದಲ್ಲಿದ್ದುವು. ಅವುಗಳು ಯಾತ್ರಿಕರನ್ನು ಎಡೆಬಿಡದೇ ಕಚ್ಚುತ್ತಿದ್ದುವು. ಅಲ್ಲಿನ ಕಷ್ಟಾನುಭವದಿಂದಾಗಿ ಯಾತ್ರಿಕರಿಗೆ ಯಾತ್ರೆಯೇ ಸಾಕೆನ್ನಿಸುತ್ತಿತ್ತು. ತಮ್ಮ-ತಮ್ಮ ಮನೆ-ಮಠಗಳನ್ನು ಯಾತ್ರಿಕರು ಸ್ಮರಣೆಮಾಡಿಕೊಳ್ಳುತ್ತಿದ್ದರು. ವಿಚಿತ್ರತರವಾದ, ಅದ್ಭುತವಾದ ಆ ದೃಶ್ಯಗಳನ್ನು ಕಂಡು ಯುಧಿಷ್ಠಿರನು ಲೋಮಶರನ್ನು ಕೇಳಿದನು :

"ಮಹರ್ಷಿಗಳೇ! ಈ ಪರ್ವತದಲ್ಲಿ ಇಷ್ಟೊಂದು ವಿಚಿತ್ರದೃಶ್ಯಗಳು ಕಾಣುತ್ತಿರುವುದಕ್ಕೆ ಕಾರಣವೇನು? ದಯಮಾಡಿ ತಿಳಿಸಿರಿ."

ಯುಧಿಷ್ಠಿರ! ಈ ಪರ್ವತದ ವಿಷಯವಾಗಿ ನಾನು ಹಿಂದೆ ಕೇಳಿರುವ ವಿಷಯವನ್ನೇ ಯಥಾವತ್ತಾಗಿ ನಿನಗಿಂದು ಹೇಳುವೆನು. ಸಮಾಧಾನಚಿತ್ತ

ನಾಗಿ ಕೇಳು. ಕುಂತೀಪುತ್ರನೇ! ಈ ಹೇಮಕೂಟಪರ್ವತಕ್ಕೆ ಋಷಭ ಪರ್ವತವೆಂದು ಮತ್ತೊಂದು ನಾಮಧೇಯವೂ ಇರುವುದು. ಈ ಋಷಭ ಪರ್ವತದಲ್ಲಿ ಋಷಭನೆಂದೇ ನಾಮಧೇಯವನ್ನು ಹೊಂದಿದ್ದ ಮಹರ್ಷಿ ಯೊಬ್ಬನಿದ್ದನು. ಅವನು ಅನೇಕ ಸಹಸ್ರವರ್ಷಗಳ ಪರ್ಯಂತವಾಗಿ ಇಲ್ಲಿಯೇ ತಪಸ್ಸನ್ನು ಮಾಡುತ್ತಿದ್ದನು. ಅಷ್ಟುಕಾಲ ತಪಸ್ಸುಮಾಡಿದರೂ ಅವನಿಗೆ ಕೋಪವನ್ನು ಪರಿತ್ಯಜಿಸಲು ಸಾಧ್ಯವಾಗಲಿಲ್ಲ. ಅವನು ಶೀಘ್ರಕೋಪಿ ಯಾಗಿದ್ದನು. ಅವನೊಮ್ಮೆ ಕೆಲವು ತಪಸ್ವಿಗಳೊಡನೆ ಮಾತನಾಡುತ್ತಿದ್ದನು. ಆ ಸಮಯಕ್ಕೆ ಸರಿಯಾಗಿ ಪರ್ವತಾರೋಹಿಗಳಾದ ಕೆಲವು ಯಾತ್ರಿಕರು ತಮ್ಮ-ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು. (ಕಲ-ಕಲಧ್ವನಿಮಾಡು ತ್ತಿದ್ದರು.) ಋಷಭಮಹರ್ಷಿಗೆ ಅದು ಸಹ್ಯವಾಗಲಿಲ್ಲ. ತಾನು ತಪಸ್ವಿಗಳೊಡನೆ ಮಾತನಾಡುವುದಕ್ಕೆ ಪ್ರತಿಬಂಧಕವಾಯಿತೆಂದು ಮಹರ್ಷಿಯು ಭಾವಿಸಿದನು. ಒಡನೆಯೇ ಪರ್ವತರಾಜನನ್ನು ಕರೆದು ಆಜ್ಞಾಪಿಸಿದನು. "ಪರ್ವತರಾಜನೇ! ಪರ್ವತದ ಮೇಲೆ ನಿಂತು ಯಾರಾದರೂ ಮಾತನಾಡಿದರೆ ಅವರ ಮೇಲೆ ಕಲ್ಲಿನ ಮಳೆಗರೆದು ಅವರು ಮಾತನಾಡುವುದನ್ನು ನಿಲ್ಲಿಸು." ಪರ್ವತಕ್ಕೆ ಮಹರ್ಷಿಯು ಹೀಗೆ ಆಜ್ಞೆಮಾಡಿದುದಲ್ಲದೇ ವಾಯುದೇವನನ್ನು ಕರೆದು ಅವನಿಗೂ–"ವಾಯುದೇವನೇ! ನೀನಿಲ್ಲಿ ಶಬ್ದಮಾಡಬೇಡ"–ಎಂದು ಆಜ್ಞಾಪಿಸಿದನು. ಇಷ್ಟುಮಾತ್ರದಿಂದಲೂ ಮಹರ್ಷಿಗೆ ಸಮಾಧಾನ ವುಂಟಾಗಲಿಲ್ಲ. "ಯಾರಾದರೂ ಈ ಪರ್ವತದ ಮೇಲೆ ನಿಂತು ಮಾತನಾಡಿದರೆ ಮೇಘಗಳು ಗರ್ಜನೆಮಾಡಿ ಅವರ ಮಾತು ಯಾರಿಗೂ ಕೇಳದಂತೆ ಮಾಡಲಿ"–ಎಂದೂ ಮಹರ್ಷಿಯು ಶಾಪವನ್ನಿತ್ತನು.

ತಾನು ತಪಸ್ವಿಗಳೊಡನೆ ಮಾತನಾಡುತ್ತಿದ್ದಾಗ ಉಂಟಾದ ಸ್ವಲ್ಪ ಶಬ್ದಕ್ಕಾಗಿ ಕುಪಿತನಾದ ಮಹರ್ಷಿಯು ಈ ಪ್ರಕಾರವಾಗಿ ನಾನಾವಿಧವಾದ ಪ್ರತಿಬಂಧಕಗಳನ್ನು ಯಾತ್ರಿಕರಿಗೆ ಕಲ್ಪಿಸಿಬಿಟ್ಟನು.

ಈ ಪರ್ವತದ ಸಮೀಪದಲ್ಲಿ ಕಲ-ಕಲನಿನಾದವುಂಟಾಗಲು ಒಂದು ಕಾರಣವಿತ್ತು. ಯುಧಿಷ್ಠಿರ! ಈ ನಂದಾನದಿಗೆ ದೇವತೆಗಳೆಲ್ಲರೂ ಆಗಮಿ ಸುತ್ತಿದ್ದರು. ಆ ಸಮಯದಲ್ಲಿ ಅವರ ಸಂದರ್ಶನಾರ್ಥವಾಗಿ ಸಾವಿರಾರು ಜನರು ಕಲ-ಕಲಧ್ವನಿಮಾಡುತ್ತಾ ಇಲ್ಲಿಗೆ ಬರುತ್ತಿದ್ದರು.

ಆದರೆ ಇಂದ್ರಪ್ರಮುಖರಾದ ದೇವತೆಗಳು ಯಾತ್ರಿಕರಿಗೆ ದರ್ಶನ ವೀಯುವ ಇಚ್ಛೆಯುಳ್ಳವರಾಗಿರಲಿಲ್ಲ. ದೇವತೆಗಳು ಈ ಋಷಭಪರ್ವತ ವನ್ನು ಮನುಷ್ಯರಿಗೆ ದುರ್ಗಮವನ್ನಾಗಿ ಮಾಡಿದರು. (ಬಹುವಿಘ್ನಗಳನ್ನು ಕಲ್ಪಿಸಿ ಮನುಷ್ಯರು ಆ ಬೆಟ್ಟಕ್ಕೆ ಬರಲು ಸಾಧ್ಯವಾಗದಂತೆ ಮಾಡಿದರು.) ಯಾತ್ರಿಕರು ದೇವತೆಗಳನ್ನು ಕಾಣುವ ಸಲುವಾಗಿ ಪರ್ವತವನ್ನು ಹತ್ತುವಾಗ ಕಲ-ಕಲಧ್ವನಿಮಾಡುತ್ತಿದ್ದರು. ಆ ಕಲ-ಕಲಧ್ವನಿಯೇ ಋಷಭಮಹರ್ಷಿಗೆ ಕೋಪವನ್ನುಂಟುಮಾಡಿತು. ಮಹರ್ಷಿಯು ಪರ್ವತಾರೋಹಣಕ್ಕೆ ನಾನಾ ವಿಧವಾದ ಪ್ರತಿಬಂಧಕವನ್ನು ಉಂಟುಮಾಡಿದ ದಿನದಿಂದ ಈ ಪರ್ವತದ ಕಡೆಗೆ ಯಾತ್ರಿಕರು ತಮ್ಮ ದೃಷ್ಟಿಗಳನ್ನು ಹೊರಳಿಸಲೂ ಮನಸ್ಸು ಮಾಡುತ್ತಿರಲಿಲ್ಲ. ಹೀಗಿರುವಾಗ ಈ ಪರ್ವತವನ್ನು ಹತ್ತುವ ಸಾಧ್ಯತೆ ಯೆಲ್ಲಿಯದು?

**ನಾತಪ್ತತಪಸಾ ಶಕ್ಯೋ ದ್ರಷ್ಟುಮೇಷ ಮಹಾಗಿರಿಃ ।**
**ಆರೋಢುಂ ವಾಪಿ ಕೌನ್ತೇಯ ತಸ್ಮಾನ್ನಿಯತವಾಗ್ಭವ ॥೧೫॥**

ತಪಶ್ಚರಣೆಮಾಡದವನು, ನಿಯತವ್ರತಾನುಷ್ಠಾನವಿಲ್ಲದವನು–ಈ ಪರ್ವತವನ್ನು ನೋಡಲಾರನು. ಅಂತಹವನಿಗೆ ಈ ಪರ್ವತವು ಕಾಣಿಸು ವುದಿಲ್ಲ. ಹತ್ತಲಂತೂ ಸಾಧ್ಯವೇ ಇಲ್ಲ. ಆದುದರಿಂದ ನೀನು ಈ ಸ್ಥಳದಲ್ಲಿ ಮೌನವನ್ನು ಧರಿಸುವವನಾಗು. ಈ ಸ್ಥಳದಲ್ಲಿಯೇ ದೇವತೆಗಳು ಅನೇಕಾನೇಕ ಯಾಗಗಳನ್ನು ಮಾಡಿರುವರು. ಅವರಂದು ಮಾಡಿದ ಯಾಗದ ಚಿಹ್ನೆಗಳು (ಯೂಪ-ಯಜ್ಞಶಾಲೆ ಇತ್ಯಾದಿಗಳು) ಇಂದೂ ಅಚ್ಚಳಿಯದೇ ಉಳಿದಿವೆ. ಯುಧಿಷ್ಠಿರ! ಈ ಪ್ರದೇಶದಲ್ಲಿರುವ ಹುಲ್ಲೂ ದರ್ಭೆಯ ರೂಪವಾಗಿದೆ. ಈ ಪ್ರದೇಶದ ಭೂಮಿಯು ಪವಿತ್ರವಾದ ದರ್ಭೆಯ ಹುಲ್ಲಿನಿಂದ ಮುಚ್ಚಿಹೋಗಿದೆ. ಇಲ್ಲಿರುವ ವೃಕ್ಷಗಳೂ ನೇರವಾಗಿಯೂ, ಉದ್ದವಾಗಿಯೂ ಬೆಳೆದಿದ್ದು ಯಜ್ಞದ ಯೂಪಸ್ತಂಭಗಳಂತೆಯೇ ಪ್ರಕಾಶಿಸುತ್ತಿವೆ. ಈ ಪವಿತ್ರ ಸ್ಥಳದಲ್ಲಿ ಈಗಲೂ ದೇವತೆಗಳೂ ಮತ್ತು ದೇವರ್ಷಿಗಳೂ ವಾಸಮಾಡು ತ್ತಿರುವರು. ಅವರ ಹೋಮಾಗ್ನಿಯು ಸಾಯಂಕಾಲದಲ್ಲಿಯೂ ಮತ್ತು ಪ್ರಾತಃಕಾಲದಲ್ಲಿಯೂ ಗೋಚರಿಸುತ್ತಿರುತ್ತದೆ. ಈ ಪವಿತ್ರನದಿಯಲ್ಲಿ ಸ್ನಾನ

ಮಾಡಿದವನ ಪಾಪವು ಒಡನೆಯೇ ಪರಿಹಾರವಾಗುವುದು. ಕುರುಶ್ರೇಷ್ಠನೇ! ಕೌಂತೇಯ! ಆದಕಾರಣ ನೀನೀಗಲೇ ನಿನ್ನ ಅನುಜರಿಂದೊಡಗೂಡಿ ಈ ಪವಿತ್ರನದಿಯಲ್ಲಿ ಸ್ನಾನಮಾಡುವವನಾಗು. ಈ ನಂದಾನದಿಯಲ್ಲಿ ಸ್ನಾನ ಮಾಡಿದನಂತರ ನೀನು ಪರಿವಾರಸಮೇತನಾಗಿ ಸುಪ್ರಸಿದ್ಧವಾದ ಕೌಶಿಕೀ ನದಿಯ ತೀರಕ್ಕೆ ಪ್ರಯಾಣಮಾಡಬಹುದಾಗಿದೆ. ಕೌಶಿಕೀನದಿಯ ಹಿರಿಮೆ ಯನ್ನು ಕೇಳಿರುವೆಯಾ? ಯುಧಿಷ್ಠಿರ! ಆ ನದಿಯ ತೀರದಲ್ಲಿಯೇ ಮಹಾತ್ಮ ನಾದ ವಿಶ್ವಾಮಿತ್ರನು ಬಹುದಾರುಣವಾದ ತಪಸ್ಸನ್ನು ಮಾಡಿದನು."

ಲೋಮಶರು ಹೀಗೆಂದು ಹೇಳುತ್ತಲೇ ಯುಧಿಷ್ಠಿರನು ನಂದಾನದಿ ಯಲ್ಲಿ ಅನುಜರೊಡನೆ ಮಿಂದು, ದೇವ-ಪಿತೃಗಳನ್ನು ಪೂಜಾ-ತರ್ಪಣಾದಿ ಗಳಿಂದ ತೃಪ್ತಿಪಡಿಸಿ, ಅನಂತರದಲ್ಲಿ ಲೋಮಶರಿಂದೊಡಗೂಡಿ ಕೌಶಿಕೀನದಿಯ ತೀರಕ್ಕೆ ಪ್ರಯಾಣಮಾಡಿದನು.

ಲೋಮಶರು ಈ ಹಿಂದೆ ಆರಂಭಿಸಿದ್ದ ಕೌಶಿಕೀನದಿಯ ವೃತ್ತಾಂತ ವನ್ನು ಮುಂದುವರಿಸಿ ಹೇಳಿದರು : "ಭರತಕುಲಾವತಂಸನೇ! ಈ ಕೌಶಿಕೀ ನದಿಯು ಪರಮಪುಣ್ಯದಾಯಕವಾದ ದೇವನದಿಯಾಗಿದೆ. ವಿಶ್ವಾಮಿತ್ರರ ರಮ್ಯವಾದ ಆಶ್ರಮವೂ ಈ ನದಿಯ ತೀರದಲ್ಲಿಯೇ ಕಂಗೊಳಿಸುತ್ತಿದೆ. ಇತ್ತಲಾಗಿ ಕಾಣುತ್ತಿರುವ ಈ ದಿವ್ಯಾಶ್ರಮವು ಕಶ್ಯಪವಂಶೋದ್ಭವರಾದ ವಿಭಾಂಡಕಮಹರ್ಷಿಗಳ ದಿವ್ಯಾಶ್ರಮವಾಗಿರುತ್ತದೆ. ತಪಸ್ಸಿನಲ್ಲಿಯೇ ಸರ್ವದಾ ನಿರತನಾದ, ಜಿತೇಂದ್ರಿಯನಾದ ಋಷ್ಯಶೃಂಗಮಹರ್ಷಿಯು ವಿಭಾಂಡಕ ಮಹರ್ಷಿಗಳ ಮಗನು. ಋಷ್ಯಶೃಂಗನು ತನ್ನ ತಪಃಪ್ರಭಾವದಿಂದ ಇಂದ್ರನು ಮಳೆಗರೆಯುವಂತೆ ಮಾಡಿದನು. ಮಳೆಯೇ ಇಲ್ಲದ ಕಾಲದಲ್ಲಿ, ವೀರ ಕ್ಷಾಮವು ಪ್ರಾಪ್ತವಾಗಿದ್ದ ಕಾಲದಲ್ಲಿ ಋಷ್ಯಶೃಂಗನ ತಪಃಪ್ರಭಾವದಿಂದ ಭೀತ ನಾದ, ಬಲಹಂತಕನಾದ ದೇವೇಂದ್ರನು ಅವ್ಯಾಹತವಾಗಿ ಮಳೆಗರೆದನು. ಹೆಣ್ಣುಜಿಂಕೆಯಲ್ಲಿ ಹುಟ್ಟಿದ ಮಹಾತೇಜಸ್ವಿಯಾದ ವಿಭಾಂಡಕರ ಮಗನಾದ ಋಷ್ಯಶೃಂಗನು ಲೋಮಪಾದನ ದೇಶದಲ್ಲಿ ಪರಮಾದ್ಭುತವಾದ ಕಾರ್ಯ ವನ್ನೇ ಮಾಡಿದನು. ಮಳೆಯು ಯಥೇಚ್ಛವಾಗಿ ಸುರಿದು ಕ್ಷಾಮವು ಪರಿಹಾರ ವಾಗಿ ದೇಶವು ಸಸ್ಯಸಂಪತ್ತಿನಿಂದ ಸಮೃದ್ಧವಾಗಲಾಗಿ–ಸೂರ್ಯದೇವನು ತನ್ನ ಮಗಳಾದ ಸಾವಿತ್ರಿಯನ್ನು ಬ್ರಹ್ಮನಿಗೆ ಕೊಟ್ಟು ಮದುವೆಮಾಡಿದಂತೆ–

ಲೋಮಪಾದರಾಜನು ತನ್ನ ಮಗಳಾದ ಶಾಂತಾದೇವಿಯನ್ನು ಋಷ್ಯಶೃಂಗನಿಗೆ ಕೊಟ್ಟು ವಿವಾಹಮಾಡಿದನು.”

ಲೋಮಶರ ಮಾತುಗಳನ್ನು ಕೇಳಿ ಆಶ್ಚರ್ಯಭರಿತನಾದ ಯುಧಿಷ್ಠಿರನು ಲೋಮಶರನ್ನು ಪ್ರಶ್ನಿಸಿದನು :

“ತಾಪಸೋತ್ತಮರೇ! ನೀವು ಹೇಳಿದ ವಿಷಯವು ನನಗೆ ಬಹಳ ಆಶ್ಚರ್ಯವನ್ನುಂಟುಮಾಡಿದೆ. ವಿಭಾಂಡಕರ ಮಗನಾದ ಋಷ್ಯಶೃಂಗನು ಹೆಣ್ಣುಜಿಂಕೆಯಲ್ಲಿ ಹುಟ್ಟಿದುದು ಹೇಗೆ? ಜಿಂಕೆಯ ಹೊಟ್ಟೆಯಲ್ಲಿ ಹುಟ್ಟಿದವನು ತಪಸ್ವಿಯಾದುದು ಹೇಗೆ? ಅಂತಹವನ ತಪಸ್ಸಿಗೆ ಹೆದರಿ ಇಂದ್ರನು ಮಳೆಗರೆದನೆಂಬುದರ ರಹಸ್ಯವಾದರೂ ಏನು? ಅದರಲ್ಲಿಯೂ ಇಂದ್ರನು ಮಳೆಗರೆದುದು ವಾರ್ಷಿಕವಾದ ಮಳೆಯಲ್ಲ. ವೀರಕ್ಷಾಮದಿಂದ ಪರಿತಪ್ತವಾಗಿದ್ದ ದೇಶದಲ್ಲಿ ಋಷ್ಯಶೃಂಗನ ಪ್ರಭಾವಕ್ಕೆ ಹೆದರಿ ಮಳೆಗರೆದನೆಂದು ಹೇಳುತ್ತಿದ್ದೀರಿ. ಇದು ಹೇಗೆ ಸಾಧ್ಯವಾಯಿತು? ರೂಪವತಿಯಾದ, ರಾಜಪುತ್ರಿಯಾದ, ಅನುಷ್ಠಾನಪರಳಾದ ಶಾಂತಾದೇವಿಯು ಜಿಂಕೆಯಲ್ಲಿ ಹುಟ್ಟಿದ ಆ ಮಹರ್ಷಿಯನ್ನು ಹೇಗೆ ಮದುವೆಯಾದಳು? ಜಿತೇಂದ್ರಿಯನಾದ ಮಹರ್ಷಿಯ ಮನಸ್ಸು ಅವಳಲ್ಲಿ ವ್ಯಾಮೋಹಿತವಾದುದು ಹೇಗೆ? ಲೋಮಪಾದರಾಜನು ಧರ್ಮಾತ್ಮನೆಂದೂ–ಸತ್ಯಸಂಧನೆಂದೂ ಕೇಳಿದ್ದೇನೆ. ಅಂತಹವನ ರಾಜ್ಯದಲ್ಲಿ ವೀರಕ್ಷಾಮವು ಆವಿರ್ಭಾವವಾಗಲು ಕಾರಣವೇನು? ಬಲಸಂಹಾರಕನಾದ ಇಂದ್ರನು ಅವನ ರಾಜ್ಯದಲ್ಲಿ ಅನೇಕವರ್ಷಗಳ ಪರ್ಯಂತವಾಗಿ ಮಳೆಗರೆಯಲಿಲ್ಲವೇಕೆ?–ಈ ವಿಷಯಗಳೆಲ್ಲವನ್ನೂ ನನಗೆ ವಿಸ್ತಾರವಾಗಿಯೇ ಹೇಳಿರಿ. ನಾನೀ ಭವ್ಯಕಥೆಯನ್ನು ಕೇಳುವ ಆಸಕ್ತಿಯುಳ್ಳವನಾಗಿರುತ್ತೇನೆ. ಮಹರ್ಷಿಯಾದ ಋಷ್ಯಶೃಂಗನ ಜೀವನಚರಿತವನ್ನು ಕೇಳಬೇಕೆಂಬ ಅಭಿಲಾಷೆಯು ನನಗೆ ಬಹಳವಾಗಿರುವುದು.”

ಲೋಮಶರು ನಸುನಗುತ್ತಾ ಋಷ್ಯಶೃಂಗಮಹರ್ಷಿಯ ದಿವ್ಯಚರಿತವನ್ನು ಹೇಳಲು ಉಪಕ್ರಮಿಸಿದರು :

“ಯುಧಿಷ್ಠಿರ! ಬ್ರಾಹ್ಮಣೋತ್ತಮರಾದ, ಅನುಸ್ಯೂತವಾದ ತಪಶ್ಚರಣೆಯಿಂದ ಪೂತಾತ್ಮರಾಗಿದ್ದ, ಅಮೋಘವೀರ್ಯವಂತರಾಗಿದ್ದ, ಬ್ರಹ್ಮನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ವಿಭಾಂಡಕಮಹರ್ಷಿಗಳಿಗೆ

ಮಹಾಪ್ರತಾಪಶಾಲಿಯಾದ, ಸರ್ವಪೂಜ್ಯನಾದ, ಮಹಾತೇಜಸ್ವಿಯಾದ, ಬಾಲನಾಗಿದ್ದರೂ ವೃದ್ಧರಿಂದ ಪುರಸ್ಕೃತನಾಗಿದ್ದ ಋಷ್ಯಶೃಂಗನು ಹೇಗೆ ಹುಟ್ಟಿದನೆಂಬುದನ್ನು ಹೇಳುವೆನು ; ಕೇಳು :

ಕಶ್ಯಪವಂಶೀಯರಾದ ವಿಭಾಂಡಕಮಹರ್ಷಿಗಳು ಒಂದು ಸರೋವರದ ಸಮೀಪದಲ್ಲಿ ಆಶ್ರಮವನ್ನು ಕಟ್ಟಿಕೊಂಡು ಸದಾಕಾಲದಲ್ಲಿಯೂ ತಪಸ್ಸಿನಲ್ಲಿಯೇ ನಿರತರಾಗಿರುತ್ತಿದ್ದರು. ದೇವಸಮಾನರಾದ ಆ ಮಹರ್ಷಿಗಳು ಅನೇಕವರ್ಷಗಳ ಅವ್ಯಾಹತವಾದ ತಪಶ್ಚರಣೆಯಿಂದ ಪರಿಶ್ರಾಂತರಾದರು. ಒಂದು ದಿನ ಮಹರ್ಷಿಗಳು ಸರೋವರದಲ್ಲಿಳಿದು ಸ್ನಾನಮಾಡುತ್ತಿದ್ದ ಸಮಯಕ್ಕೆ ಸರಿಯಾಗಿ ಉರ್ವಶಿಯೆಂಬ ಅಪ್ಸರೆಯು ಕಾಣಿಸಿಕೊಂಡಳು. ಸರ್ವಾಂಗಸುಂದರಳಾಗಿದ್ದ ಅಪ್ಸರೆಯನ್ನು ಕಂಡೊಡನೆಯೇ ಅನೇಕಸಹಸ್ರ ವರ್ಷಗಳಿಂದಲೂ ಅಸ್ಖಲಿತವಾಗಿದ್ದ ಮಹರ್ಷಿಗಳ ರೇತಸ್ಸು ಸ್ಖಲಿತವಾಗಿ ನೀರಿನಲ್ಲಿ ಬಿದ್ದಿತು. ಆ ವೇಳೆಗೆ ಸರಿಯಾಗಿ ಅದೇ ಸರೋವರದಲ್ಲಿ ನೀರು ಕುಡಿಯುತ್ತಿದ್ದ ಹೆಣ್ಣು ಜಿಂಕೆಯೊಂದು ನೀರಿನೊಡನೆ ಮಹರ್ಷಿಗಳ ರೇತಸ್ಸನ್ನೂ ಕುಡಿದುಬಿಟ್ಟಿತು. ಅದರಿಂದಾಗಿ ಆ ಜಿಂಕೆಯು ಗರ್ಭವನ್ನು ಧರಿಸಿತು.

ಯುಧಿಷ್ಠಿರ! ಆ ಜಿಂಕೆಯು ಹಿಂದೆ ಒಬ್ಬ ದೇವತೆಯಾಗಿದ್ದಳು. ಯಾವುದೋ ಅಪರಾಧಕ್ಕಾಗಿ ಅವಳಿಗೆ ಜಿಂಕೆಯ ಜನ್ಮತಾಳುವಂತೆ ಬ್ರಹ್ಮನು ಶಾಪವನ್ನಿತ್ತಿದ್ದನು. ದೇವಕನ್ಯೆಯು ವಿಶಾಪವನ್ನು ಪ್ರಾರ್ಥಿಸಲಾಗಿ ಬ್ರಹ್ಮನು :

**ದೇವಕನ್ಯಾ ಮೃಗೀ ಭೂತ್ವಾ ಮುನಿಂ ಸೂಯ ವಿಮೋಕ್ಷ್ಯಸೇ ॥**

"ನೀನೊಬ್ಬ ಮಹರ್ಷಿಗೆ ಜನ್ಮವನ್ನಿತ್ತ ದಿನ ಜಿಂಕೆಯ ಜನ್ಮವನ್ನು ತೊರೆದು ಶಾಪವಿಮೋಚನೆಯಾಗಿ ಪುನಃ ನಿನ್ನ ದೇವತ್ವವನ್ನು ಪಡೆಯುವೆ"– ಎಂದು ಹೇಳಿದ್ದನು.

**ಅಮೋಘತ್ವಾದ್ವಿಧೇಶ್ಚೈವ ಭಾವಿತ್ವಾದ್ದೈವನಿರ್ಮಿತಾತ್ ।**
**ತಸ್ಯಾಂ ಮೃಗ್ಯಾಂ ಸಮಭವತ್ತಸ್ಯ ಪುತ್ರೋ ಮಹಾನೃಷಿಃ ॥೩೭॥**

ಬ್ರಹ್ಮನ ಶಾಪವು ಅಮೋಘವಾದುದರಿಂದಲೂ, ವಿಧಿನಿಯಮವು

ಅಪರಿಹಾರ್ಯವಾದುದರಿಂದಲೂ ಆ ಹೆಣ್ಣುಜಿಂಕೆಯಲ್ಲಿಯೇ ಶಿಶುವು ಜನಿಸಿತು. ವಿಭಾಂಡಕಮಹರ್ಷಿಗಳ ಪುತ್ರನು ಮಹರ್ಷಿಯೇ ಆದನು.

ಕಾಲಕರ್ಮಸಂಯೋಗದಿಂದ ಜಿಂಕೆಯು ಅಂದು ವಿಭಾಂಡಕ ಮಹರ್ಷಿಗಳ ರೇತಸ್ಸನ್ನು ಪ್ರಾಶನಮಾಡಿ ಗರ್ಭವನ್ನು ಧರಿಸಿತು. ನವಮಾಸ ಗಳು ತುಂಬುತ್ತಲೇ ಮಹಾತೇಜಸ್ವಿಯಾದ ಶಿಶುವಿಗೆ ಜನ್ಮವನ್ನಿತ್ತು ಶಾಪ



ದಿಂದ ಬಿಡುಗಡೆಹೊಂದಿ ದೇವತ್ವವನ್ನು ಪಡೆಯಿತು. ಇದರಿಂದಾಗಿ ಆ ಶಿಶು ವಿಗೆ ತಾಯಿಯಿಲ್ಲದಂತಾಗಿ ತಂದೆಯಾದ ವಿಭಾಂಡಕರ ಪೋಷಣೆಯಲ್ಲಿಯೇ ಅದು ಬೆಳೆಯತೊಡಗಿತು. ಆ ಶಿಶುವಿಗೆ ಆಪಾದಮಸ್ತಕವೂ ಮನುಷ್ಯರೂಪ ವಿದ್ದು ಜಿಂಕೆಯ ಪುತ್ರನೆಂಬುದನ್ನು ಸೂಚಿಸಲೋ ಎಂಬಂತೆ ತಲೆಯಲ್ಲಿ

ಮಾತ್ರ ಒಂದು ಕೊಂಬಿದ್ದಿತು. ಈ ಕಾರಣದಿಂದಲೇ ಆ ಶಿಶುವಿಗೆ ವಿಭಾಂಡಕರು ಋಷ್ಯಶೃಂಗನೆಂದೇ ನಾಮಕರಣಮಾಡಿದರು. ಶಿಶುವು ಬೆಳೆಯುವಾಗಲೇ ತಪಸ್ವಿಯಾಗಿ ಬೆಳೆಯಿತು. ಋಷ್ಯಶೃಂಗನು ಯಾವಾಗಲೂ ತಪಸ್ಸಿನಲ್ಲಿಯೇ ನಿರತನಾಗಿರುತ್ತಿದ್ದನು. ವೇದಾಧ್ಯಯನಸಂಪನ್ನನಾಗಿದ್ದನು. ತನ್ನ ತಂದೆಯೊಬ್ಬನ ಹೊರತಾಗಿ ಮತ್ತಾವ ಮಾನವನನ್ನೂ ಋಷ್ಯಶೃಂಗನು ಕಂಡವನೇ ಅಲ್ಲ. ಅದರಿಂದಾಗಿ ಅವನ ಮನಸ್ಸು ಯಾವಾಗಲೂ ಬ್ರಹ್ಮಚರ್ಯಾಶ್ರಮೋಕ್ತವಾದ ಕರ್ಮಾನುಷ್ಠಾನಗಳಲ್ಲಿಯೇ ಲೀನ ವಾಗಿರುತ್ತಿದ್ದಿತು.

ಯುಧಿಷ್ಠಿರ! ಅದೇ ಸಮಯದಲ್ಲಿ ಅಂಗದೇಶಕ್ಕೆ ಲೋಮಪಾದನು ಅಧಿಪತಿಯಾಗಿದ್ದನು. ಅವನು ಮಹಾತ್ಮನಾದ ದಶರಥನ ಮಿತ್ರನೂ ಆಗಿದ್ದನು. ಲೋಮಪಾದನೊಮ್ಮೆ ಬ್ರಾಹ್ಮಣನೊಬ್ಬನಿಗೆ ಕೇಳಿದುದನ್ನು ಕೊಡುವೆನೆಂದು ವಚನವನ್ನಿತ್ತು ಅನಂತರದಲ್ಲಿ ಬ್ರಾಹ್ಮಣನು ತನಗೆ ಬೇಕಾದ ದಾನವನ್ನು ಕೇಳಲು–ರಾಜನು ತಾನು ವಚನವನ್ನೇ ಕೊಟ್ಟಿಲ್ಲವೆಂದು ಹೇಳಿ ಬ್ರಾಹ್ಮಣನನ್ನು ಶೂನ್ಯಹಸ್ತನನ್ನಾಗಿಯೇ ಕಳುಹಿಸಿಬಿಟ್ಟನೆಂದು ಕೇಳಿದ್ದೇವೆ. ಆ ಕಾರ್ಯವನ್ನವನು ಪರಿಹಾಸಕ್ಕಾಗಿ ಮಾಡಿದನೆಂದೂ ಕೆಲವರು ಹೇಳುತ್ತಾರೆ. ಅವನು ಮಾಡಿದ ಆ ಅಪರಾಧಕ್ಕಾಗಿ ಬ್ರಾಹ್ಮಣರೆಲ್ಲರೂ ರಾಜನನ್ನು ಪರಿತ್ಯಜಿಸಿ ಹೊರಟುಹೋದರು. ಅವನ ಸಮೀಪದಲ್ಲಿ ನಿತ್ಯ-ನೈಮಿತ್ತಿಕ ಕರ್ಮಗಳನ್ನೂ, ಯಜ್ಞ-ಯಾಗಾದಿಗಳನ್ನೂ ಮಾಡಿಸುವ ಪುರೋಹಿತರೇ ಇಲ್ಲವಾದರು. ರಾಜ್ಯದಲ್ಲಿ ಯಜ್ಞ-ಯಾಗಾದಿಗಳೇ ನಡೆಯದಿದ್ದರೆ ಮಳೆ-ಬೆಳೆಗಳಾಗುವುದಾದರೂ ಹೇಗೆ? ಲೋಮಪಾದನ ದೇಶದಲ್ಲಿ ನಿತ್ಯ- ನೈಮಿತ್ತಿಕ ಕರ್ಮಗಳೂ, ಯಜ್ಞ-ಯಾಗಾದಿಗಳೂ ನಡೆಯದೇ ಇದ್ದುದರಿಂದ ಇಂದ್ರನು ಕುಪಿತನಾಗಿ ಅನೇಕವರ್ಷಗಳು ಮಳೆಗರೆಯಲಿಲ್ಲ. ಇದರಿಂದಾಗಿ ಅಂಗದೇಶದ ಪ್ರಜೆಗಳು ಬಹಳ ದುಃಖಕ್ಕೀಡಾದರು.

ಲೋಮಪಾದರಾಜನೂ ಬಹುದುಃಖಿತನಾಗಿ ಕ್ಷಾಮಪರಿಹಾರಕ್ಕೆ ಉಪಾಯಗಳನ್ನು ಮಂತ್ರಿಗಳೊಡನೆ ಸಮಾಲೋಚಿಸಿದನು. ಅವರ ಸಲಹೆಯಂತೆ ಲೋಮಪಾದನು ತಪಸ್ವಿಗಳಾದ, ಮನನಶೀಲರಾದ, ಇಂದ್ರನನ್ನು ಆರಾಧಿಸಿ ಮಳೆಗರೆಸುವುದರಲ್ಲಿ ಸಮರ್ಥರೆಂದು ಪ್ರಸಿದ್ಧರಾದ ಬ್ರಾಹ್ಮಣರನ್ನು

ಅನ್ಯದೇಶಗಳಿಂದಲೂ ಕರೆಯಿಸಿ ಅವರನ್ನು ಯಥೋಚಿತವಾಗಿ ಸತ್ಕರಿಸಿ–ದೇಶದಲ್ಲಿ ಮಳೆಗರೆದು ಸುಭಿಕ್ಷವುಂಟಾಗುವಂತೆ ಮಾಡಬೇಕೆಂದೂ–ಅದಕ್ಕಿರುವ ಪ್ರತಿಬಂಧಕವು ಹೋಗಿ ಸುವೃಷ್ಟಿಯಾಗುವ ಉಪಾಯವನ್ನು ಸೂಚಿಸಬೇಕೆಂದೂ ಲೋಮಪಾದನು ಬದ್ಧಾಂಜಲಿಯಾಗಿ ಪ್ರಾರ್ಥಿಸಿದನು. ವಿದ್ವಾಂಸರಾದ ಆ ವಿಪ್ರರು ಒಬ್ಬೊಬ್ಬರೂ ಒಂದೊಂದು ವಿಧವಾದ ಸಲಹೆಗಳನ್ನು ನೀಡಿದರು. ಅವರುಗಳಲ್ಲಿ ಒಬ್ಬ ಮುನಿಶ್ರೇಷ್ಠನು ಲೋಮಪಾದನನ್ನು ಕುರಿತು ಹೀಗೆಂದು ಹೇಳಿದನು :

"ಮಹಾರಾಜ! ನೀನು ಮಾಡಿದ ಅಪರಾಧದ ಕಾರಣದಿಂದಾಗಿ ಬ್ರಾಹ್ಮಣರು ನಿನ್ನ ಮೇಲೆ ಕುಪಿತರಾಗಿದ್ದಾರೆ. ಆದುದರಿಂದ ನೀನು ಅವರನ್ನು ಸಮಾಧಾನಗೊಳಿಸಲು ಈ ಕೂಡಲೇ ಪ್ರಯತ್ನಿಸಬೇಕು. ತಪಸ್ವಿಯೊಬ್ಬನ ಏಕಮಾತ್ರಪುತ್ರನಾದ ಋಷ್ಯಶೃಂಗನೆಂಬುವವನು ನಿನ್ನ ದೇಶಕ್ಕೆ ಅನತಿದೂರದಲ್ಲಿರುವ ಅರಣ್ಯದಲ್ಲಿ ವಾಸಮಾಡುತ್ತಿದ್ದಾನೆ. ಹೆಣ್ಣೆಂಬ ಜಾತಿಯೊಂದಿರುವುದೆಂಬ ಅರಿವೇ ಅವನಿಗಿರುವುದಿಲ್ಲ. ಅವನು ಬಹಳ ಋಜುಸ್ವಭಾವದವನಾಗಿದ್ದಾನೆ. ಕಪಟವೆಂದರೇನೆಂಬುದು ಅವನಿಗೆ ತಿಳಿಯದು. ಮಹಾತಪಸ್ವಿಯಾದ ಆ ಋಷ್ಯಶೃಂಗನು ನಿನ್ನ ರಾಜ್ಯದೊಳಗೆ ಪ್ರವೇಶಿಸಿದ್ದೇ ಆದರೆ-ಒಡನೆಯೇ ಇಂದ್ರನು ವೃಷ್ಟಿಯನ್ನು ದಯಪಾಲಿಸುವನು. ಈ ವಿಷಯದಲ್ಲಿ ಸ್ವಲ್ಪವಾದರೂ ಸಂಶಯಪಡುವ ಕಾರಣವಿಲ್ಲ. ಆದುದರಿಂದ ಈ ದೇಶದ ಕ್ಷಾಮವು ಪರಿಹಾರವಾಗಬೇಕಾದರೆ ಮಹಾತಪಸ್ವಿಯಾದ ಋಷಿಪುತ್ರನನ್ನು ನಿನ್ನ ದೇಶಕ್ಕೆ ಕರೆಯಿಸಲು ಕೂಡಲೇ ಪ್ರಯತ್ನಿಸು."

ವೃದ್ಧನಾದ ತಪಸ್ವಿಯ ಈ ಮಾತುಗಳನ್ನು ಕೇಳಿ ರಾಜನು ಬ್ರಾಹ್ಮಣರ ವಿಷಯದಲ್ಲಿ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡನು. ಕೋಪಗೊಂಡು ತನ್ನ ದೇಶವನ್ನೇ ಬಿಟ್ಟುಹೋಗಿದ್ದ ಬ್ರಾಹ್ಮಣರ ಬಳಿಗೆ ಹೋಗಿ ಅವರನ್ನು ಸಮಾಧಾನಗೊಳಿಸಿ ಪುನಃ ತನ್ನ ದೇಶಕ್ಕೆ ಕರೆತಂದನು. ಮಂತ್ರಜ್ಞರಾದ, ತಪೋನಿಷ್ಠರಾದ ಬ್ರಾಹ್ಮಣರನ್ನು ರಾಜನು ಸಮಾಧಾನಪಡಿಸಿ ಪುನಃ ತನ್ನ ದೇಶಕ್ಕೆ ಕರೆತಂದುದನ್ನು ಕಂಡು ಪ್ರಜೆಗಳು ಆನಂದಭರಿತ

ರಾದರು. ಅನಂತರದಲ್ಲಿ ರಾಜನು ತನ್ನ ಮಂತ್ರಿಗಳನ್ನು ಕರೆಯಿಸಿ ಋಷ್ಯ ಶೃಂಗನನ್ನು ತನ್ನ ದೇಶಕ್ಕೆ ಕರೆತರುವ ಯೋಜನೆಗಳನ್ನು ಸಿದ್ಧಗೊಳಿಸಲು ಅವರೊಡನೆ ಸಮಾಲೋಚಿಸಿದನು. ಆದರೆ ತಂದೆಯೊಬ್ಬನನ್ನು ಬಿಟ್ಟು ಬೇರೆ ಮಾನವರಿರುವರೆಂಬುದನ್ನೇ ತಿಳಿಯದ, ಸರ್ವದಾ ತಪಸ್ಸಿನಲ್ಲಿಯೇ ನಿರತ ನಾಗಿದ್ದ ಋಷ್ಯಶೃಂಗನನ್ನು ಕರೆತರುವುದು ಅಷ್ಟು ಸುಲಭಸಾಧ್ಯವಾದ ಕಾರ್ಯವಾಗಿರಲಿಲ್ಲ. ಶಾಸ್ತ್ರಜ್ಞರೊಡನೆಯೂ, ಅರ್ಥನೀತಿಯನ್ನು ತಿಳಿದವ ರೊಡನೆಯೂ, ನೀತಿಶಾಸ್ತ್ರಕೋವಿದರೊಡನೆಯೂ ರಾಜನು ಸುದೀರ್ಘವಾಗಿ ಸಮಾಲೋಚಿಸಿ, ಕಷ್ಟಸಾಧ್ಯವಾದ ಯೋಜನೆಯೊಂದನ್ನು ಸಿದ್ಧಗೊಳಿಸಿದನು. ಆ ಯೋಜನೆಯ ಪ್ರಕಾರ ರಾಜಧಾನಿಯಲ್ಲಿದ್ದ ಸುಂದರಿಯರಾದ, ಚತುರೆ ಯರಾದ ವೇಶ್ಯೆಯರನ್ನು ಅರಮನೆಗೆ ಕರೆತರಲಾಯಿತು. ರಾಜಾಜ್ಞೆಯಂತೆ ಅರಮನೆಗೆ ಆಗಮಿಸಿದ ವೇಶ್ಯೆಯರನ್ನು ಕುರಿತು ರಾಜನು ಹೇಳಿದನು :

"ವರಾಂಗನೆಯರೇ! ನಮ್ಮ ದೇಶದ ಸಮೀಪದಲ್ಲಿರುವ ಅರಣ್ಯದಲ್ಲಿ ವಾಸವಾಗಿರುವ, ಋಷಿಪುತ್ರನಾದ, ಮಹಾತಪಸ್ವಿಯಾದ ಋಷ್ಯಶೃಂಗನನ್ನು ಮೋಹಪರವಶನಾಗುವಂತೆ ಮಾಡಿ, ಅವನಿಗೆ ನಮ್ಮ ವಿಷಯದಲ್ಲಿ ನಂಬಿಕೆ ಯನ್ನು ಹುಟ್ಟಿಸಿ, ನಮ್ಮ ದೇಶಕ್ಕೆ ಉಪಾಯಾಂತರದಿಂದ ಕರೆತರಬೇಕು. ಅವನಾಗಲೀ, ಅವನ ತಂದೆಯಾಗಲೀ–ಕೋಪಗೊಳ್ಳದಂತೆ ಎಚ್ಚರಿಕೆಯನ್ನು ವಹಿಸಬೇಕು. ಈ ಕಾರ್ಯವು ನಿಮ್ಮ ಚಾತುರ್ಯದಿಂದ ಮಾತ್ರವೇ ಸಾಧ್ಯ ವಾದೀತು."

ರಾಜನ ಮಾತುಗಳನ್ನು ಕೇಳಿದ ವೇಶ್ಯೆಯರು ಒಬ್ಬರ ಮುಖವನ್ನು ಮತ್ತೊಬ್ಬರು ನೋಡತೊಡಗಿದರು. ಅವರಿಗೆ ರಾಜನ ಮಾತನ್ನು ಉಲ್ಲಂಘಿ ಸುವ ಸಾಮರ್ಥ್ಯವೂ ಇರಲಿಲ್ಲ ; ಋಷಿಪುತ್ರನನ್ನು ಕೆಣಕುವ ಧೈರ್ಯವೂ ಇರಲಿಲ್ಲ. ಋಷಿಪುತ್ರನ ಶಾಪಕ್ಕೆ ಗುರಿಯಾದೇವೆಂಬ ಭೀತಿಯು ಅವರ ಮುಖಕಮಲಗಳನ್ನಾವರಿಸಿತು. ಖಿನ್ನವದನೆಯರಾದ ಅವರು ಆ ಕಾರ್ಯವು ತಮ್ಮ ಶಕ್ತಿಗೆ ಮೀರಿದುದೆಂದು ಒಕ್ಕೊರಲಿನಿಂದ ಹೇಳಿಬಿಟ್ಟರು. ಅವರ ಮಾತುಗಳನ್ನು ಕೇಳಿ ರಾಜನ ಮುಖವು ಮ್ಲಾನಹೊಂದಲಾಗಿ ವೇಶ್ಯೆಯರ ಮಧ್ಯದಲ್ಲಿದ್ದ ವೃದ್ಧವೇಶ್ಯೆಯೊಬ್ಬಳು ಮುಂದೆ ಬಂದು ರಾಜನಿಗೆ ಹೇಳಿದಳು: "ಮಹಾರಾಜ! ತಪೋಧನನಾದ ಋಷ್ಯಶೃಂಗನನ್ನು ಕರೆತರಲು ನಾನು

ಪ್ರಯತ್ನಿಸುತ್ತೇನೆ. ಆದರೆ ನನ್ನ ಯೋಜನೆಗೆ ಅಂಗವಾಗಿ ನಾನು ಕೇಳುವ ಕೆಲವು ವಸ್ತುಗಳನ್ನು ತಾವು ಸಿದ್ಧಮಾಡಿಕೊಡಬೇಕು. ನಾನು ಕೇಳಲಿರುವ ವಸ್ತುಗಳೆಲ್ಲವನ್ನೂ ತಾವು ಒದಗಿಸಿಕೊಡುವುದಾದಲ್ಲಿ ಮಾತ್ರ ನಾನು ಋಷಿ ಪುತ್ರನನ್ನು ನಮ್ಮ ದೇಶಕ್ಕೆ ಕರೆತರಲು ಸಮರ್ಥಳಾದೇನು."

ವೃದ್ಧವೇಶ್ಯೆಯ ಮಾತಿಗೆ ರಾಜನು ಸಂತೋಷದಿಂದ ಒಪ್ಪಿದನು. ಅವಳಿಗೆ ಬೇಕಾದುದೆಲ್ಲವನ್ನೂ ಒದಗಿಸಿಕೊಡುವಂತೆ ರಾಜನು ತನ್ನ ಮಂತ್ರಿಗಳಿಗೆ ಒಡನೆಯೇ ಆಜ್ಞಾಪಿಸಿದನು. ಅನೇಕಾನೇಕವಸ್ತ್ರಾಭರಣಗಳನ್ನು ತರಿಸಿ ರಾಜನು ವೃದ್ಧವೇಶ್ಯೆಗೆ ಕೊಟ್ಟನು. ವೃದ್ಧಸ್ತ್ರೀಯೂ ತನ್ನ ಯೋಜನೆಗೆ ಅನುಗುಣವಾಗಿ ಅಲ್ಲಿ ನೆರೆದಿದ್ದ ವೇಶ್ಯೆಯರಲ್ಲಿ ಚೆಲುವೆಯರಾದ, ಚತುರೆಯರಾದ, ಧೈರ್ಯಶಾಲಿನಿಯರಾದ ಕೆಲವು ವೇಶ್ಯೆಯರನ್ನು ಆರಿಸಿಕೊಂಡು, ಯೋಜನೆಯ ಅಂಗವಾಗಿ ತಾನು ಕೇಳಿದ್ದ ವಸ್ತುಗಳೆಲ್ಲವನ್ನೂ ಪಡೆದು, ಸ್ವಲ್ಪವೂ ಸಾವಕಾಶಮಾಡದೇ ಋಷಿಕುಮಾರನಿದ್ದ ಅರಣ್ಯದ ಕಡೆಗೆ ಹೊರಟಳು.

೧೧೦ನೆಯ ಅಧ್ಯಾಯವು ಮುಗಿಯಿತು.

೧೧೧ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ವೇಶ್ಯೆಯರು ಋಷ್ಯಶೃಂಗನನ್ನು ಪ್ರಲೋಭನಗೊಳಿಸಿದುದು: ಆಶ್ರಮಕ್ಕೆ ಬಂದ ವಿಭಾಂಡಕರು ಮಗನ ಚಿಂತೆಗೆ ಕಾರಣವನ್ನು ಪ್ರಶ್ನಿಸಿದುದು

ಧರ್ಮಜ! ವೃದ್ಧವೇಶ್ಯೆಯು ಸುಂದರಿಯರಾದ ಅನೇಕವೇಶ್ಯೆಯರಿಂದೊಡಗೂಡಿ ಅರಣ್ಯಕ್ಕೆ ಪ್ರಯಾಣಮಾಡಿದನಂತರ ಋಷ್ಯಶೃಂಗನ ಆಶ್ರಮಕ್ಕೆ ಸ್ವಲ್ಪದೂರದಲ್ಲಿದ್ದ ನದಿಯ ಮೇಲೆ ದೋಣಿಯಂತೆ ತೇಲುವ ಆಶ್ರಮವೊಂದನ್ನು ನಿರ್ಮಿಸಿಕೊಂಡಳು. ಕಾರ್ಯಸಾಧನೆಗಾಗಿ ವೃದ್ಧ ವೇಶ್ಯೆಯ ಯೋಜನೆಗೆ ಅನುಗುಣವಾಗಿ ನೌಕಾಶ್ರಮವನ್ನು ಕಲ್ಪಿಸಬೇಕೆಂದು ರಾಜಾಜ್ಞೆಯೂ ಆಗಿದ್ದಿತು. ಆ ಆಶ್ರಮದ ಸುತ್ತಲೂ ಫಲ-ಪುಷ್ಪಭರಿತವಾದ ಕೃತಕವಾದ ಮರ-ಗಿಡಗಳೂ, ಲತೆಗಳೂ, ಲತಾಗುಲ್ಮಗಳೂ ಇದ್ದುವು. ಅಪೇಕ್ಷಿಸಿದ ಹಣ್ಣುಗಳು ಅಲ್ಲಿ ಸಿಕ್ಕುತ್ತಿದ್ದುವು. ಕೃತಕವಾದ ಪಕ್ಷಿಗಳಿಂದಲೂ ಜಿಂಕೆಗಳಿಂದಲೂ ಕೂಡಿದ್ದ ಆ ಆಶ್ರಮವು ನೋಡಲು ಬಹುರಮ್ಯವಾಗಿ

ಕಾಣುತ್ತಿದ್ದುದಲ್ಲದೇ–ಮಾಯೆಯಿಂದ ನಿರ್ಮಿತವಾಗಿದೆಯೋ ಎಂಬ ಭ್ರಾಂತಿಯನ್ನೂ ಉಂಟುಮಾಡುವುದಾಗಿದ್ದಿತು. ವೇಶ್ಯೆಯರಿಂದ ಕೂಡಿದ್ದ ಆ ನೌಕಾಶ್ರಮವನ್ನು ವೃದ್ಧವೇಶ್ಯೆಯು ವಿಭಾಂಡಕರ ಆಶ್ರಮಕ್ಕೆ ಅನತಿದೂರದಲ್ಲಿ ನಿಲ್ಲಿಸಿ ವಿಭಾಂಡಕಮಹರ್ಷಿಗಳ ಚಲನ-ವಲನಗಳನ್ನು ತನ್ನ ಗೂಢಚಾರರ ಮೂಲಕವಾಗಿ ತಿಳಿದುಕೊಂಡಳು. ವಿಭಾಂಡಕಮಹರ್ಷಿಗಳು ಆಶ್ರಮದಲ್ಲಿಲ್ಲವೆಂಬ ವಾರ್ತೆಯನ್ನು ತಿಳಿದು, ಯೋಜನೆಯೊಂದನ್ನು ಸಿದ್ಧಪಡಿಸಿ, ಅದಕ್ಕೆ ಅನುಗುಣವಾಗಿ ಅತಿಚತುರೆಯಾದ ತನ್ನ ಮಗಳ ಕಿವಿಯಲ್ಲಿ ಕೆಲವು ಮಾತುಗಳನ್ನು ಹೇಳಿ, ಅವಳನ್ನು ಆಶ್ರಮದ ಸಮೀಪಕ್ಕೆ ಕಳುಹಿಸಿಕೊಟ್ಟಳು. ಮಹಾಚತುರೆಯಾದ, ಕುಶಲೆಯಾದ ಆ ವೇಶ್ಯಾ ಪುತ್ರಿಯು ಆಶ್ರಮದ ಸಮೀಪಕ್ಕೆ ಹೋಗಿ ಸರ್ವದಾ ತಪಸ್ಸಿನಲ್ಲಿಯೇ ನಿರತನಾಗಿದ್ದ ಋಷಿಪುತ್ರನನ್ನು ಕಂಡಳು.

ವೇಶ್ಯಾಪುತ್ರಿಯು ಮಂದಹಾಸದಿಂದ ಮೆಲ್ಲ-ಮೆಲ್ಲನೆ ಹೆಜ್ಜೆಗಳನ್ನಿಡುತ್ತಾ ಋಷ್ಯಶೃಂಗನ ಸಮೀಪಕ್ಕೆ ಹೋಗಿ ಅವನನ್ನು ಕುರಿತು ಹೇಳಿದಳು :

"ತಾಪಸೋತ್ತಮನೇ! ಈ ದಿವ್ಯಾಶ್ರಮದಲ್ಲಿರುವ ತಪಸ್ವಿಗಳೆಲ್ಲರೂ ಕುಶಲಿಗಳಾಗಿರುವರಲ್ಲವೇ? ನಿಮಗೆ ಬೇಕಾಗುವ ಕಂದ-ಮೂಲ-ಫಲಗಳು ಈ ಅರಣ್ಯದಲ್ಲಿ ಯಥೇಚ್ಛವಾಗಿ ಸಿಕ್ಕುವುದಲ್ಲವೇ? ನೀನು ಈ ದಿವ್ಯಾಶ್ರಮ ದಲ್ಲಿ ಆನಂದದಿಂದ ಕಾಲಕಳೆಯುತ್ತಿರುವೆಯಲ್ಲವೇ? ಋಷಿಪುತ್ರನೇ! ನಾನು ನಿನ್ನನ್ನು ನೋಡುವ ಸಲುವಾಗಿಯೇ ಇಲ್ಲಿಗೆ ಬಂದಿರುವೆನು. ತಪಃ ಸ್ವಾಧ್ಯಾಯಗಳೂ ಮತ್ತು ಅಗ್ನಿಹೋತ್ರಾದಿಗಳೂ ದಿನ-ದಿನಕ್ಕೂ ಅಭಿವೃದ್ಧಿ ಹೊಂದುತ್ತಿರುವುದೆಂದು ನಾನು ಭಾವಿಸಿದ್ದೇನೆ. ನಿನ್ನ ತಂದೆಯು ವೃದ್ಧ ನಾಗಿದ್ದರೂ ಮಹಾತೇಜಸ್ವಿಯಾಗಿರುತ್ತಾನೆ. ಅವನು ನಿನ್ನ ವಿಷಯದಲ್ಲಿ ಹೆಚ್ಚು ಮಮತೆಯಿಂದ ವರ್ತಿಸುತ್ತಿರುವನಲ್ಲವೇ? ನೀನೂ ಅವನನ್ನು ಶುಶ್ರೂಷೆಮಾಡುತ್ತಾ ವೇದಾಧ್ಯಯನದಲ್ಲಿ ನಿರತನಾಗಿರುವೆಯೆಂದು ಭಾವಿಸುತ್ತೇನೆ."

ಋಷ್ಯಶೃಂಗನು ಸಾಲಂಕೃತೆಯಾದ ವೇಶ್ಯೆಯ ಮನಮೋಹಕವಾದ ರೂಪವನ್ನು ನೋಡಿದೊಡನೆಯೇ ಭ್ರಾಂತನಾಗಿ ಅವಳೊಡನೆ ಹೇಳಿದನು :

(ಋಷ್ಯಶೃಂಗನು ಸ್ತ್ರೀಜಾತಿಯನ್ನೇ ತಿಳಿಯದವನಾಗಿದ್ದುದರಿಂದ ಬಂದಿರುವ ವೇಶ್ಯೆಯು ಮಹಾತೇಜಸ್ವಿಯಾದ ಬ್ರಾಹ್ಮಣೋತ್ತಮನೇ ಆಗಿರಬಹುದೆಂದು ಭಾವಿಸಿ ಮಾತನಾಡತೊಡಗಿದನು.)

"ಅತಿಥಿಶ್ರೇಷ್ಠನೇ! ನಿಶ್ಚಯವಾಗಿಯೂ ನೀನು ಜ್ಯೋತಿಯಂತೆಯೇ ಬೆಳಗುತ್ತಿರುವೆ. ನನ್ನ ಕಣ್ಣಿಗೆ ನೀನು ಜ್ಯೋತಿಯ ರಾಶಿಯಂತೆಯೇ ಕಾಣು



ತ್ತಿರುವೆ. ನನ್ನ ಅಭಿವಾದನಕ್ಕೆ ನೀನು ಅರ್ಹನಾಗಿರುವೆಯೆಂದು ನಾನು ಭಾವಿಸಿದ್ದೇನೆ. ಆದುದರಿಂದಲೇ ನಾನೀಗ ನಿನಗೆ ಪಾದ್ಯವನ್ನು ಅರ್ಪಿಸುತ್ತೇನೆ. ನಿನಗೆ ಬೇಕಾದ ರುಚಿಕರವಾದ ಫಲಗಳನ್ನು ಫಲಾಹಾರಕ್ಕಾಗಿ ಅರ್ಪಿಸುತ್ತೇನೆ. ಅಯಾಚಿತನಾಗಿ ಬಂದ ಅತಿಥಿಯನ್ನು ಅದರಲ್ಲಿಯೂ ಜ್ಯೋತಿಸ್ವರೂಪನಾದ

ನಿನ್ನನ್ನು ಹೀಗೆ ಸತ್ಕರಿಸುವುದು ನನ್ನ ಧರ್ಮವಾಗಿದೆ. ಆದುದರಿಂದ ದಯಮಾಡಿ ಪವಿತ್ರತಮವಾದ ಈ ಕುಶಾಸನದ ಮೇಲೆ ಯಥಾನುಕೂಲ ವಾಗಿ ಉಪವಿಷ್ಟನಾಗು. ಈ ಕುಶಾಸನವು ಕರಿಯ ಜಿಂಕೆಯ ಚರ್ಮದಿಂದ ಆಚ್ಛಾದಿಸಲ್ಪಟ್ಟಿದ್ದಾಗಿ ಕುಳಿತುಕೊಳ್ಳಲು ಬಹಳ ಮೃದುವಾಗಿರುವುದು. ಬ್ರಾಹ್ಮಣೋತ್ತಮನೇ! ನಿನ್ನ ಆಶ್ರಮವೆಲ್ಲಿರುವುದು? ನಿಜವಾಗಿಯೂ ನೀನು ನನಗೆ ಸಾಕ್ಷಾತ್ ದೇವತೆಯಂತೆಯೇ ಕಾಣುತ್ತಿರುವೆ. ನೀನೀಗ ಆಚರಿಸುತ್ತಿರುವ ವ್ರತದ ಹೆಸರೇನು?–ಇವೆಲ್ಲವನ್ನೂ ತಿಳಿಯುವ ಅಭಿಲಾಷೆಯಿಂದಿರುವೆನು.''

ಋಷ್ಯಶೃಂಗನ ಮಾತುಗಳನ್ನು ಕೇಳಿ ವೇಶ್ಯಾಪುತ್ರಿಯು ಹೇಳಿದಳು : ``ಋಷಿಪುತ್ರನೇ! ಅದೋ ಅಲ್ಲಿ ನೋಡು! ದೂರದಲ್ಲಿ ಕಾಣುವ ಆ ಪರ್ವತದ ಪಕ್ಕದಲ್ಲಿಯೇ ನಮ್ಮ ಆಶ್ರಮವಿರುವುದು. ಇಲ್ಲಿಗೆ ಸುಮಾರು ಮೂರು ಯೋಜನಗಳಾಗಬಹುದು. ನಮ್ಮ ಆಶ್ರಮವು ಬಹುಸುಂದರವಾದ ಆಶ್ರಮ. ಯಾರಿಂದಲೂ ಅಭಿವಾದನಮಾಡಿಸಿಕೊಳ್ಳಕೂಡದೆಂಬುದು ನನ್ನ ವ್ರತವಾಗಿದೆ. ಆದುದರಿಂದ ನೀನು ನನಗೆ ಅಭಿವಾದನವನ್ನು ಮಾಡಲಾಗದು. ನಾನು ಈಗ ಕೈಗೊಂಡಿರುವ ವ್ರತಾನುಷ್ಠಾನದಂತೆ ಪಾಣಿ-ಪಾದಗಳನ್ನು ತೊಳೆದುಕೊಳ್ಳಲು ಅರ್ಘ್ಯ-ಪಾದ್ಯಾದಿಗಳನ್ನು ಸ್ವೀಕರಿಸುವಂತಿಲ್ಲ. ಮೇಲಾಗಿ ನಾನು ನಿನ್ನಂತಹ ಮಹಾತಪಸ್ವಿಯಿಂದ ನಮಸ್ಕೃತನಾಗಲು ಖಂಡಿತ ವಾಗಿಯೂ ಯೋಗ್ಯನಲ್ಲ. ನಿಮ್ಮಂತಹ ತಪಸ್ವಿಗಳನ್ನು ನಾನೇ ಅಭಿನಂದಿಸಿ ನಮಸ್ಕರಿಸಬೇಕು. ಬ್ರಾಹ್ಮಣೋತ್ತಮನೇ! ನನ್ನ ಧರ್ಮದಂತೆ ನಾನು ನಿನ್ನನ್ನು ಈ ನನ್ನ ನೀಳವಾದ ಕೈಗಳಿಂದ ಈ ರೀತಿಯಾಗಿ ಬಿಗಿದಪ್ಪಿಕೊಳ್ಳ ಬೇಕು''–ಎಂದು ಹೇಳುತ್ತಾ ವೇಶ್ಯಾಪುತ್ರಿಯು ತನ್ನ ಬಾಹುಲತೆಗಳಿಂದ ಋಷಿಕುಮಾರನನ್ನೊಮ್ಮೆ ಬಿಗಿದಪ್ಪಿಕೊಂಡಳು.

ಇದೂ ಒಂದು ಅಭಿವಂದನೆಯ ಸಂಪ್ರದಾಯವೆಂದು ಭಾವಿಸಿದ್ದ ಋಷ್ಯಶೃಂಗನು ಪುನಃ ಹೇಳಿದನು :

``ಬ್ರಾಹ್ಮಣೋತ್ತಮನೇ! ನಿನ್ನ ಉಪಾಹಾರಕ್ಕಾಗಿ ಪಕ್ವವಾಗಿರುವ ಭಲ್ಲಾತಕ, ನೆಲ್ಲಿ, ಕರೂಷ, ಇಂಗುದ ಮತ್ತು ಅಂಜೂರದ ಹಣ್ಣುಗಳನ್ನು

ಸಿದ್ಧಪಡಿಸುವೆನು. ಈ ಹಣ್ಣುಗಳಲ್ಲಿ ನಿನಗೆ ಹೆಚ್ಚಿನ ಅಭಿರುಚಿಯುಂಟಾಗ ಬಹುದೆಂದು ನಾನು ಭಾವಿಸುತ್ತೇನೆ."

ವೇಶ್ಯಾಪುತ್ರಿಯು–ಋಷ್ಯಶೃಂಗನು ತಂದ ಹಣ್ಣುಗಳೆಲ್ಲವನ್ನೂ ತಿರಸ್ಕರಿಸಿ ತನ್ನೊಡನೆ ತಂದಿದ್ದ ಋಷಿಭೋಜನಕ್ಕೆ ಅನರ್ಹವಾದ ಭಕ್ಷ್ಯಗಳನ್ನು ಋಷಿಕುಮಾರನಿಗೆ ತಿನ್ನಲು ಕೊಟ್ಟಳು. ಅಂತಹ ಭಕ್ಷ್ಯಗಳನ್ನು ಋಷ್ಯಶೃಂಗನು ಹುಟ್ಟಿದಂದಿನಿಂದ ಕಂಡಿರಲಿಲ್ಲ. ಆ ಭಕ್ಷ್ಯಗಳು ನೋಡಲೂ ಚೆನ್ನಾಗಿದ್ದುವು ; ತಿನ್ನಲೂ ಬಹಳ ರುಚಿಕರವಾಗಿಯೂ ಇದ್ದುವು. ತಿನ್ನಲು ಭಕ್ಷ್ಯಗಳನ್ನು ಕೊಟ್ಟುದಲ್ಲದೇ ವೇಶ್ಯಾಪುತ್ರಿಯು ಸುಗಂಧಮಯವಾದ ಹೂವಿನ ಹಾರಗಳನ್ನೂ ಋಷ್ಯಶೃಂಗನ ಕೊರಳಿಗೆ ಹಾಕಿದಳು. ಉಡಲು ಥಳ-ಥಳಿಸುವ ಪೀತಾಂಬರವನ್ನು ಕೊಟ್ಟಳು. ಗಂಧವನ್ನು ಪರಿ-ಪರಿಯಾಗಿ ಋಷಿಕುಮಾರನ ಮೇಲೆ ಚುಮುಕಿಸಿದಳು. ಕುಡಿಯಲು ಅತ್ಯುತ್ಕೃಷ್ಟವಾದ ಪಾನೀಯಗಳನ್ನು ಕೊಟ್ಟಳು. ಈ ವಿಧವಾಗಿ ಋಷ್ಯಶೃಂಗನನ್ನು ಅಲಂಕರಿಸಿ ಆದರಿಸಿ ಅವನೊಡನೆ ಚೆಲ್ಲಾಟವಾಡತೊಡಗಿದಳು. ಒಮ್ಮೆ ದೂರದಲ್ಲಿ ನಿಂತು ಪಕ-ಪಕನೆ ನಗುವಳು. ಮತ್ತೊಮ್ಮೆ ಹತ್ತಿರಕ್ಕೆ ಬಂದು ಋಷ್ಯಶೃಂಗನಿಗೆ ಮುತ್ತಿಕ್ಕುವಳು. ಅವನ ಸಮೀಪದಲ್ಲಿಯೇ ನಿಂತು ಅವನೊಡನೆ ಚೆಂಡಾಟವನ್ನಾಡುವಳು. ಪದ್ಮದ ಮೊಗ್ಗಿನಂತಹ ಕುಚಯುಗ್ಮವನ್ನು ಹೊಂದಿದ್ದ ಕೃಶಾಂಗಿಯಾದ ವೇಶ್ಯಾಪುತ್ರಿಯು ಋಷ್ಯಶೃಂಗನ ಅಂಗಗಳಿಗೆ ಸ್ಪರ್ಶಸುಖವನ್ನುಂಟುಮಾಡುತ್ತಾ ಋಷ್ಯಶೃಂಗನನ್ನು ಬಿಗಿದಪ್ಪುವಳು. ಈ ರೀತಿಯಲ್ಲಿ ಮದೋನ್ಮತ್ತೆಯಾಗಿ ತನ್ನ ಹಾವ-ಭಾವ ಗಳಿಂದಲೂ, ವಿಲಾಸ-ವಿಭ್ರಮಗಳಿಂದಲೂ, ಆಲಿಂಗನ-ಚುಂಬನಾದಿ ಗಳಿಂದಲೂ ಋಷ್ಯಶೃಂಗನಲ್ಲಿ ಸುಪ್ತವಾಗಿದ್ದ ಕಾಮವನ್ನು ಉದ್ಬೋಧಗೊಳಿಸುತ್ತಾ ಆಶ್ರಮದ ಬಳಿಯಲ್ಲಿದ್ದ ಪುಷ್ಪಭರಿತವಾದ ಮರಗಳ ರೆಂಬೆಗಳನ್ನು ಮುರಿದು ಚೆಲ್ಲಾಟವಾಡಿದಳು. ಮಧುಪಾನದಿಂದ ಪ್ರಮತ್ತೆಯಾಗಿದ್ದ ಅವಳು ಸಾಲಾಶೋಕ-ತಮಾಲವೃಕ್ಷಗಳ ರೆಂಬೆಗಳನ್ನು ಬಾಗಿಸಿ ಮುರಿದುಹಾಕುತ್ತಾ ನಾಚಿಕೆಗೊಂಡವಳಂತೆ ನಟಿಸುತ್ತಾ ಋಷ್ಯಶೃಂಗನನ್ನು ಪ್ರಲೋಭನಗೊಳಿಸಿದಳು. ಬಾರಿ-ಬಾರಿಗೂ ಚುಂಬಿಸಿ, ಪದೇ-ಪದೇ ಆಲಿಂಗಿಸಿದ ಕಾರಣದಿಂದ ಋಷ್ಯಶೃಂಗನಲ್ಲಿ ಕಾಮೋದ್ದೀಪನವಾದುದನ್ನು ತಿಳಿದು ಮಹಾಚತುರೆಯಾದ ವೇಶ್ಯಾಪುತ್ರಿಯು

ಋಷಿಕುಮಾರನನ್ನು ಓರೆಗಣ್ಣಿನಿಂದಲೇ ಕ್ಷಣ-ಕ್ಷಣಕ್ಕೂ ಹಿಂದಿರುಗಿ ನೋಡುತ್ತಾ ಅಗ್ನಿಹೋತ್ರವನ್ನು ಮಾಡಬೇಕೆಂಬ ನೆಪದಿಂದ ಮೆಲ್ಲ-ಮೆಲ್ಲನೆ ಹೊರಟುಹೋದಳು.

ವೇಶ್ಯಾಪುತ್ರಿಯು ಅತ್ತಲಾಗಿ ಹೊರಟುಹೋದೊಡನೆಯೇ ಋಷಿ ಪುತ್ರನು ಕಾಮಪರವಶನಾಗಿ ಮತಿಗೆಟ್ಟುಹೋದನು. ಋಷಿಕುಮಾರನ ಮನಸ್ಸು ವೇಶ್ಯಾಪುತ್ರಿಯನ್ನು ಅನುಸರಿಸಿಯೇ ಹೊರಟುಹೋಯಿತು. ಶರೀರವು ಮಾತ್ರ ವಿವೇಕಶೂನ್ಯವಾಗಿ ಅಲ್ಲಿಯೇ ಉಳಿದಿತ್ತು. ಅವಳು ಹೊರಟುಹೋದೊಡನೆಯೇ ಋಷ್ಯಶೃಂಗನಿಗೆ ಪ್ರಪಂಚವೆಲ್ಲವೂ ಶೂನ್ಯ ವಾಗಿ ಕಂಡಿತು. ಅತುಲೈಶ್ವರ್ಯವನ್ನೂ ಕಳೆದುಕೊಂಡವನಂತೆ ಕ್ಷಣ-ಕ್ಷಣಕ್ಕೂ ನಿಟ್ಟುಸಿರುಬಿಡುತ್ತಿದ್ದನು. ಹೇಳಲು ತಿಳಿಯದ ಸಂಕಟವನ್ನು ಋಷ್ಯಶೃಂಗನು ಅನುಭವಿಸುತ್ತಿದ್ದನು. ಆ ಸಮಯಕ್ಕೆ ಸರಿಯಾಗಿ ವಿಭಾಂಡಕ ಮಹರ್ಷಿಗಳು ಆಶ್ರಮಕ್ಕೆ ಬಂದರು. ಆ ಮಹರ್ಷಿಗಳ ಕಣ್ಣುಗಳು ಪಿಂಗಳ ವರ್ಣದಿಂದ ಕೂಡಿದ್ದುವು. ಅವರ ದೇಹವು ನಖಾಗ್ರದವರೆಗೂ ಕೂದಲಿ ನಿಂದ ವ್ಯಾಪ್ತವಾಗಿದ್ದಿತು. ಅವರು ಯಾವಾಗಲೂ ಅಧ್ಯಯನಪರಾಯಣ ರಾಗಿಯೂ ತಪೋನಿಷ್ಠರಾಗಿಯೂ ಇರುತ್ತಿದ್ದರು. ಅವರ ಜೀವನವು ಪವಿತ್ರ ತಮವಾಗಿದ್ದಿತು. ಅವರು ಆಶ್ರಮದೊಳಕ್ಕೆ ಬಂದರೂ ಋಷ್ಯಶೃಂಗನಿಗೆ ತಂದೆಯವರು ಬಂದರೆಂಬ ಅರಿವಾಗಲೇ ಇಲ್ಲ. ಯಾವುದೋ ಚಿಂತನೆಯಲ್ಲಿ ಮಗ್ನನಾಗಿ, ಕುಂದಿದ ಮುಖದಿಂದ ಕೂಡಿದವನಾಗಿ ಕ್ಷಣ-ಕ್ಷಣಕ್ಕೂ ನಿಟ್ಟುಸಿರು ಬಿಡುತ್ತಾ, ಎತ್ತಕಡೆಗೋ ಎವೆಯಿಕ್ಕದೇ ದೃಷ್ಟಿಯನ್ನಿಟ್ಟು ನೋಡುತ್ತಾ ಕುಳಿತಿದ್ದ ತಮ್ಮ ಮಗನನ್ನು ವಿಭಾಂಡಕರು ಕಂಡರು. ಮಗನ ಆ ಸ್ಥಿತಿಯನ್ನು ಕಂಡು ವಿಭಾಂಡಕರಿಗೆ ಅತ್ಯಾಶ್ಚರ್ಯವಾಯಿತು. ಮಗನನ್ನು ಕುರಿತು ಕೇಳಿದರು : "ಮಗು! ಅಗ್ನಿಕಾರ್ಯಕ್ಕಾಗಿ ಸಮಿತ್ತುಗಳನ್ನು ತರಲಿಲ್ಲವೇ? ನೀನು ಅಗ್ನಿಹೋತ್ರಮಾಡಿ ಮುಗಿಸಿದೆಯಲ್ಲವೇ? ಅಗ್ನಿಹೋತ್ರಕ್ಕೆ ಬೇಕಾದ ಸ್ರುಕ್ಸ್ರುವಗಳನ್ನು ಪರಿಶುದ್ಧಮಾಡಿ, ಹೋಮದ್ರವ್ಯಕ್ಕಾಗಿ ಹಾಲುಕರೆಯಲು ಹಸುವನ್ನೂ–ಕರುವನ್ನೂ ಕರೆತರಲಿಲ್ಲವೇ? ಮಗು! ನೀನು ಹಿಂದಿದ್ದಂತೆ ಇರುವ ಹಾಗೆ ಕಾಣುತ್ತಿಲ್ಲ. ನಿನ್ನ ಬುದ್ಧಿಯು ವೈಪರೀತ್ಯವನ್ನು ಹೊಂದಿರು ವಂತೆ ಕಾಣುತ್ತಿದೆ. ನೀನು ಚಿಂತಾಯುಕ್ತನಾಗಿರುವುದು ಮಾತ್ರವಲ್ಲದೇ ನಿನ್ನ

ಮನಸ್ಸೇ ಇಲ್ಲಿ ಇಲ್ಲದಂತಿದೆ. ನೀನೇಕಿಂದು ಇಷ್ಟು ವಿಚಲಿತನಾಗಿರುವೆ? ಈ ನಮ್ಮ ಆಶ್ರಮಪ್ರದೇಶಕ್ಕೆ ಯಾರಾದರೂ ಬಂದಿದ್ದರೇ? ಹೇಳು ಮಗು!"

೧೧೧ನೆಯ ಅಧ್ಯಾಯವು ಮುಗಿಯಿತು.

೧೧೨ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಋಷ್ಯಶೃಂಗನು ತನ್ನ ಚಿಂತೆಗೆ ಕಾರಣವನ್ನು ತಂದೆಯೊಡನೆ ತಿಳಿಸಿದುದು : ಆಶ್ರಮಕ್ಕೆ ಆಗಮಿಸಿದ್ದ ಬ್ರಹ್ಮಚಾರಿಯ ರೂಪ ಮತ್ತು ನಡೆ-ನುಡಿಗಳನ್ನು ವರ್ಣಿಸಿದುದು

ವಿಭಾಂಡಕರ ಮಾತನ್ನು ಕೇಳಿ ಋಷ್ಯಶೃಂಗನು ಉತ್ತರಿಸಿದನು :

"ತಂದೆಯೇ! ಇಂದು ನಮ್ಮ ಆಶ್ರಮಕ್ಕೆ ಬ್ರಹ್ಮಚಾರಿಯೊಬ್ಬನು ಬಂದಿದ್ದನು. ಅವನ ತಲೆಯ ತುಂಬಾ ಉದ್ದವಾದ ಕೇಶರಾಶಿಯಿದ್ದಿತು. ಆ ಬ್ರಹ್ಮಚಾರಿಯು ಕುಳ್ಳನಾಗಿಯೂ ಇರಲಿಲ್ಲ; ಹೆಚ್ಚು ಎತ್ತರವಾಗಿಯೂ ಇರಲಿಲ್ಲ. ಅವನು ಚಿನ್ನದ ಬಣ್ಣದವನಾಗಿದ್ದನು. ಅವನ ಕಣ್ಣುಗಳು ಕಮಲ ಪುಷ್ಪದಂತೆ ವಿಶಾಲವಾಗಿದ್ದುವು. ನೀನು ಹಿಂದೆ ದೇವತೆಗಳ ದಿವ್ಯರೂಪವನ್ನು ವರ್ಣಿಸುತ್ತಿದ್ದೆಯಲ್ಲವೇ? ಇಂದು ಬಂದಿದ್ದ ಆ ಬ್ರಹ್ಮಚಾರಿಯ ರೂಪವೂ ಆ ದೇವತೆಗಳ ರೂಪಕ್ಕೆ ಅನುರೂಪವಾಗಿದ್ದಿತು. ಅವನು ಬಹಳ ಸುಂದರನಾಗಿದ್ದು ಸೂರ್ಯನಂತೆಯೇ ಪ್ರಕಾಶಮಾನನಾಗಿದ್ದನು. ಅವನ ಕಪ್ಪಾದ ಕಣ್ಣುಗಳಂತೂ ಬಲುಸುಂದರವಾಗಿದ್ದುವು. ಅವನ ಜಟೆಯು ನೀಳವಾಗಿಯೂ ಘಮ-ಘಮಿಸುತ್ತಲೂ ಇದ್ದುದಲ್ಲದೇ ಚಿನ್ನದ ದಾರದಿಂದ ಅದು ಬಿಗಿಯಲ್ಪಟ್ಟು ನಯನಮನೋಹರವೂ ಆಗಿದ್ದಿತು. ಅವನ ಕುತ್ತಿಗೆಯಲ್ಲಿ ಥಳ-ಥಳಿಸುವ ಒಂದು ಹಾರವಿದ್ದಿತು. ಆ ಹಾರವು ಅದರಲ್ಲಿನ ಕಲ್ಲುಗಳಿಂದ ಪ್ರತಿಕ್ಷಣದಲ್ಲಿಯೂ ಮಿಂಚಿನಂತೆಯೇ ಕಾಂತಿಯನ್ನು ಪ್ರಸರಿಸುತ್ತಿದ್ದಿತು. ಸುಂದರವಾದ ಆ ಕಂಠದ ಕೆಳಭಾಗದಲ್ಲಿ ಎರಡು ಚರ್ಮದ ಪಿಂಡಗಳಿದ್ದುವು. ಅವುಗಳ ಮೇಲೆ ಕೂದಲೇ ಇರಲಿಲ್ಲ. ಕಮಲದ ಮೊಗ್ಗಿನಂತಿದ್ದ ಆ ಚರ್ಮದ ಪಿಂಡಗಳೂ ನೋಡಲು ಸುಂದರವಾಗಿ ಕಾಣುತ್ತಿದ್ದವು. ಅವನಿಗೆ

ಸೊಂಟವಿರುವಂತೆಯೇ ಕಾಣುತ್ತಿರಲಿಲ್ಲ. ಅದು ಅಷ್ಟು ಸಣ್ಣದಾಗಿತ್ತು. ಅವನಿಗೆ ಆಳವಾದ ನಾಭಿಯಿದ್ದಿತು. ಅವನ ಕಟಿಪ್ರದೇಶವೂ ಬಹುಕೃಶವಾಗಿದ್ದಿತು. ನನ್ನ ಸೊಂಟದಲ್ಲಿರುವ ಮೌಂಜಿಯಂತೆಯೇ ಆ ಬ್ರಹ್ಮಚಾರಿಯುಟ್ಟಿದ್ದ ಬಟ್ಟೆಯೊಳಗೆ ಥಳ-ಥಳಿಸುವ ಚಿನ್ನದ ಉಡಿದಾರವು ಕಾಣುತ್ತಿದ್ದಿತು. ಅವನು ಕಾಲಿಗೆ ಏನನ್ನೋ ಕಟ್ಟಿಕೊಂಡಿದ್ದನು. ಅವುಗಳ ಆಕಾರವು ಬಹುವಿಚಿತ್ರವಾಗಿತ್ತು ಮತ್ತು ಅವನು ಓಡಾಡುತ್ತಿದ್ದಂತೆಲ್ಲಾ ಆ ವಸ್ತುಗಳು ಝುಣ-ಝುಣ ಎಂದು ಇಂಪಾಗಿ ಧ್ವನಿಮಾಡುತ್ತಿದ್ದುವು. ಅವನ ಕೈಗಳಲ್ಲಿದ್ದ ಆಭರಣಗಳಿಂದಲೂ ಅದೇ ವಿಧವಾದ ಧ್ವನಿಯುಂಟಾಗುತ್ತಿದ್ದಿತು. ಅವನ ಹಸ್ತಾಭರಣಗಳು ನಮ್ಮ ಕೈಗಳಲ್ಲಿರುವ ಅಕ್ಷಮಾಲೆಗಳಂತೆಯೇ ಕಾಣುತ್ತಿದ್ದುವು. ಅವನು ಆ ಹಸ್ತಾಭರಣಗಳನ್ನೂ, ಕಾಲುಗಳಲ್ಲಿ ವಿಚಿತ್ರವಾದ ಆಭರಣಗಳನ್ನೂ ಧರಿಸಿ ಅತ್ತಲಿತ್ತ ಓಡಾಡುತ್ತಾ ಚೇಷ್ಟೆಮಾಡುತ್ತಿದ್ದಾಗ ಉಂಟಾಗುತ್ತಿದ್ದ ಝುಣ-ಝುಣಾತ್ಕಾರವು–ಪ್ರಮತ್ತವಾದ ಹಂಸಪಕ್ಷಿಗಳು ಸರೋವರದಲ್ಲಿ ಮಾಡುವ ಕಲ-ಕಲಧ್ವನಿಯಂತೆ–ಬಹಳ ಇಂಪಾಗಿ ಕೇಳಿಸುತ್ತಿದ್ದಿತು. ಅಪ್ಪಾ! ಅವನುಟ್ಟಿದ್ದ ಬಟ್ಟೆಯಂತೂ ವಿಚಿತ್ರವಾಗಿದ್ದಿತು. ಬಹಳ ನವಿರಾಗಿದ್ದಿತು. ಅವನ ಬಟ್ಟೆಯ ಮುಂದೆ ಈ ನನ್ನ ನಾರುಮಡಿಯು ಸ್ವಲ್ಪವೂ ಅಂದವಾಗಿ ಕಾಣುತ್ತಿರಲಿಲ್ಲ. ಅವನ ಮುಖವಂತೂ ನೋಡಲು ಬಹಳ ಆಹ್ಲಾದಕರವಾಗಿದ್ದು ಮತ್ತೆ ಮತ್ತೆ ನೋಡಬೇಕೆನ್ನಿಸುತ್ತಿದ್ದಿತು. ಅವನ ಮಾತುಗಳಂತೂ ಕೇಳಲು ಬಹಳ ಇಂಪಾಗಿರುತ್ತಿದ್ದುವು. ಅವನಾಡುತ್ತಿದ್ದ ಮಾತುಗಳನ್ನು ಕೇಳುತ್ತಿದ್ದಂತೆಲ್ಲಾ ನನ್ನ ಮನಸ್ಸಿಗೆ ಏನೋ ಒಂದು ವಿಧವಾದ ಆನಂದವಾಗುತ್ತಿದ್ದಿತು. ಅಲ್ಲಿ ನೋಡಪ್ಪಾ! ಆ ಗಂಡುಕೋಗಿಲೆಯು ಧ್ವನಿಮಾಡುತ್ತಿದೆಯಲ್ಲ! ಅವನ ಧ್ವನಿಯೂ ಆ ಗಂಡುಕೋಗಿಲೆಯ ಸ್ವರಕ್ಕೆ ಸದೃಶವಾಗಿದ್ದಿತು. ಕೋಗಿಲೆಯ ಧ್ವನಿಗೆ ಸಮಾನವಾದ ಧ್ವನಿಯಿಂದ ಅವನು ನನ್ನನ್ನು ಮಾತನಾಡಿಸುತ್ತಿದ್ದರೆ ನನ್ನ ಅಂತರಾತ್ಮವೂ ಮಿಡಿಯುತ್ತಿದ್ದಿತು.

ತಂದೆಯೇ! ವನವು ವಸಂತಮಾಸದಲ್ಲಿ ಸುವಾಸನೆಯುಳ್ಳ ಗಾಳಿಯಿಂದ ಚಲಿತವಾದಾಗ ಹೇಗೆ ಶೋಭಿಸುತ್ತದೆಯೋ–ಹಾಗೆಯೇ ಸುಗಂಧ

ಯುಕ್ತನಾದ ಆ ಬ್ರಹ್ಮಚಾರಿಯು ವಾಯುವಿನಿಂದ ಸೇವಿಸಲ್ಪಡುತ್ತಾ ಶೋಭಿಸುತ್ತಿದ್ದನು. ಸುಗಂಧಮಯವಾದ ಗಾಳಿಯು ಅವನ ಮೇಲೆ ಬೀಸಿದಾಗ ಅವನ ಸಮೀಪದಲ್ಲಿದ್ದ ನನಗೆ ಏನೋ ಒಂದು ವಿಧವಾದ ಆನಂದವುಂಟಾಗುತ್ತಿದ್ದಿತು. ಗಾಳಿಯು ಬೀಸುತ್ತಿದ್ದ ಸಮಯದಲ್ಲಿ ಅವನು ಇನ್ನೂ ಹೆಚ್ಚು ಸುಂದರನಾಗಿ ಕಾಣುತ್ತಿದ್ದನು. ಅವನ ಕಪ್ಪಾದ ಮತ್ತು ನೀಳವಾದ ಜಟೆಯು ಸುಂದರವಾಗಿ ಬಂಧಿಸಲ್ಪಟ್ಟಿದ್ದಿತು ಮತ್ತು ಆ ಕೇಶರಾಶಿಯು ನಡುನೆತ್ತಿಗೆ ಸರಿಯಾಗಿ ವಿಭಾಗಿಸಲ್ಪಟ್ಟಿದ್ದಿತು. ಆ ಬ್ರಹ್ಮಚಾರಿಯ ಕಿವಿಗಳೂ ಚಿತ್ರವಾಗಿರುವ ಚಕ್ರವಾಕಪಕ್ಷಿಗಳಂತೆ ಚಿತ್ರ-ವಿಚಿತ್ರವಾದ ಮತ್ತು ದುಂಡಾದ ಆಭರಣಗಳಿಂದ ಅಲಂಕೃತವಾಗಿದ್ದುವು. ಅವನ ಹತ್ತಿರ ಹಣ್ಣಿನಂತೆಯೇ ದುಂಡಾದ ಒಂದು ಪದಾರ್ಥವಿದ್ದಿತಪ್ಪಾ! ಅದನ್ನು ಆ ಬ್ರಹ್ಮಚಾರಿಯು ಕ್ಷಣ-ಕ್ಷಣಕ್ಕೂ ನೆಲಕ್ಕೆ ಅಪ್ಪಳಿಸಿ ಹೊಡೆಯುತ್ತಿದ್ದನು. ಆದರೆ ಆ ವಸ್ತುವು ಒಡೆದುಹೋಗುತ್ತಿರಲಿಲ್ಲ. ನೆಲಕ್ಕೆ ಅಪ್ಪಳಿಸಿ ಹೊಡೆದೊಡನೆಯೇ ಅಂತರಿಕ್ಷಕ್ಕೆ ನೇರವಾಗಿ ಹಾರುತ್ತಿದ್ದಿತು. ಅದು ಅಂತರಿಕ್ಷಕ್ಕೆ ಹಾರಿದೊಡನೆಯೇ ಗರ-ಗರನೆ ತಿರುಗುತ್ತಾ ಅಂತರಿಕ್ಷದಿಂದ ಕೆಳಗೆ ಬೀಳುತ್ತಿದ್ದಾಗ ಅವನು ಆ ವಸ್ತುವನ್ನು ಕೈಯಲ್ಲಿ ಹಿಡಿದುಕೊಳ್ಳುತ್ತಿದ್ದನು. ಅವನು ಗರ-ಗರನೆ ತಿರುಗುತ್ತಿರುವಾಗ ಅವನನ್ನು ನೋಡಿದರೆ ಗಾಳಿಯಿಂದ ಕಂಪಿಸುವ ವೃಕ್ಷದಂತೆ ತೋರುತ್ತಿದ್ದನು. ಅವನು ನನ್ನ ಕಣ್ಣಿಗೆ ಸಾಕ್ಷಾತ್ ದೇವಪುತ್ರನಂತೆಯೇ ಕಾಣುತ್ತಿದ್ದನು. ತಂದೆಯೇ! ನನಗುಂಟಾಗುತ್ತಿದ್ದ ಸಂತೋಷಕ್ಕೆ ಪಾರವೇ ಇರುತ್ತಿರಲಿಲ್ಲ. ಅವನ ವಿಷಯದಲ್ಲಿ ನನಗೆ ಹೆಚ್ಚಿನ ಅನುರಾಗವುಂಟಾಯಿತು.

ಅಪ್ಪ! ಮತ್ತೊಂದು ವಿಧವಾದ ಆನಂದವನ್ನೂ ನಾನು ಅನುಭವಿಸಿದೆನು. ಅವನು ನನ್ನ ಸಮೀಪಕ್ಕೆ ಬಂದು, ನನ್ನನ್ನು ತಬ್ಬಿಕೊಂಡು ನನ್ನ ಜಟೆಯನ್ನು ತನ್ನ ಬಲಗೈಯಿಂದ ಹಿಡಿದು, ನನ್ನ ತಲೆಯನ್ನು ಸ್ವಲ್ಪಭಾಗ ಹಿಂದಕ್ಕೆ ಬಗ್ಗಿಸಿ, ತನ್ನ ತುಟಿಯನ್ನು ನನ್ನ ತುಟಿಗೆ ತಾಗಿಸಿ ಒಂದು ವಿಧವಾದ ಶಬ್ದಮಾಡಿದನು. ಆ ಶಬ್ದವು ನಿಶ್ಚಯವಾಗಿಯೂ ನನಗೆ ಬಹಳ ಆನಂದದಾಯಕವಾಗಿದ್ದಿತು. ಹೀಗವನು ಹಲವಾರು ಬಾರಿ ಮಾಡಿದನಪ್ಪಾ!

ನಮ್ಮ ಆಶ್ರಮಕ್ಕೆ ಆಗಮಿಸಿದ ಆ ಅತಿಥಿಗೆ ನಾನು ಕಾಲುತೊಳೆಯಲು

ಪಾದ್ಯವನ್ನು ಕೊಡಲು ಹೋದೆನು. ಅವನು ತನಗೆ ಅರ್ಘ್ಯ-ಪಾದ್ಯಾದಿಗಳು ಬೇಡವೆಂದು ತಿರಸ್ಕರಿಸಿಬಿಟ್ಟನು. ನಾನು ಕೊಟ್ಟ ಹಣ್ಣುಗಳನ್ನೂ ತಿನ್ನಲಿಲ್ಲ. ಅವನ ವ್ರತಾನುಷ್ಠಾನವೇ ಅಂತಹುದಪ್ಪಾ. ಅವನು ತನ್ನ ಆಶ್ರಮವನ್ನು ಬಿಟ್ಟು ಬೇರೆಯ ಆಶ್ರಮಕ್ಕೆ ಹೋದರೆ ಅರ್ಘ್ಯ-ಪಾದ್ಯಾದಿಗಳನ್ನಾಗಲೀ, ಫಲಗಳನ್ನಾಗಲೀ ಸ್ವೀಕರಿಸಕೂಡದೆಂಬುದೇ ಅವನ ವ್ರತವಂತೆ. ಅವನೇ ಹಾಗೆಂದು ಹೇಳಿದನು. ಆದರೆ ಅವನು ತನ್ನೊಡನೆಯೇ ಹಲವಾರು ಹಣ್ಣುಗಳನ್ನು ತಂದಿದ್ದನಪ್ಪಾ! ಅವುಗಳನ್ನು ನನಗೂ ಕೊಟ್ಟನು. ನಾನೂ ಅವುಗಳನ್ನು ಸವಿದೆನು. ಬಹಳ ರುಚಿಕರವಾಗಿದ್ದುವು. ನಮ್ಮಲ್ಲಿರುವ ಹಣ್ಣುಗಳಲ್ಲಿ ಅಷ್ಟು ರುಚಿಯಾದ ಯಾವ ಹಣ್ಣುಗಳೂ ಇಲ್ಲವಪ್ಪಾ! ಅವನು ತಂದ ಹಣ್ಣುಗಳಲ್ಲಿ ನಮ್ಮ ಹಣ್ಣುಗಳಲ್ಲಿರುವಂತೆ ನಾರುಗಳಾಗಲೀ, ಬೀಜಗಳಾಗಲೀ, ತೊಗಟೆಗಳಾಗಲೀ ಇರಲಿಲ್ಲ. ಅತಿಸುಂದರನಾದ ಆ ಬ್ರಹ್ಮಚಾರಿಯು ಹಣ್ಣುಗಳನ್ನೇ ಮಾತ್ರವಲ್ಲ ; ಕುಡಿಯಲು ನೀರನ್ನೂ ತಂದಿದ್ದನು. ಅವನು ತಂದ ನೀರು ನಮ್ಮಲ್ಲಿ ನಾವು ಕುಡಿಯುವ ನೀರಿಗಿಂತಲೂ ಬಹುರುಚಿಯಾಗಿದ್ದಿತು. ಸುವಾಸನೆಯಿಂದ ಕೂಡಿದ್ದಿತು. ಆ ನೀರನ್ನು ಕುಡಿದೊಡನೆಯೇ ನನಗೆ ಬಹಳ ಆನಂದವಾಯಿತಪ್ಪಾ! ಕುಡಿದ ಸ್ವಲ್ಪ ಹೊತ್ತಿನಲ್ಲೇ ನನ್ನ ಪದತಲದಲ್ಲಿರುವ ಈ ಭೂಮಿಯೇ ಸುತ್ತುತ್ತಿರುವಂತೆ ಕಾಣುತ್ತಿದ್ದಿತು. ಅಲ್ಲಿ ನೋಡಪ್ಪಾ! ಅವನು ಕುತ್ತಿಗೆಯಲ್ಲಿ ಧರಿಸಿದ್ದ ಸುಗಂಧಮಯವಾದ ಪುಷ್ಪಹಾರಗಳು ಅಲ್ಲಿಯೇ ಬಿದ್ದಿವೆ. ಅವುಗಳೆಲ್ಲವೂ ಅವನದೇ ಆಗಿವೆ. ಸತತವಾದ ತಪಶ್ಚರಣೆಯಿಂದ ಜಾಜ್ವಲ್ಯಮಾನವಾದ ತೇಜಸ್ಸನ್ನು ಪಡೆದಿದ್ದ ಅವನು ಆಟವಾಡುವ ಸಮಯದಲ್ಲಿ ಆ ಪುಷ್ಪಹಾರಗಳೆಲ್ಲವನ್ನೂ ಇಲ್ಲಿಯೇ ಹಾಕಿ ತನ್ನ ಆಶ್ರಮಕ್ಕೆ ಹೊರಟುಹೋದನು. ಅವನು ಹೊರಟುಹೋದುದೇ ನನ್ನ ಹೃದಯವೇದನೆಗೆ ಕಾರಣವಾಗಿದೆಯಪ್ಪಾ! ಅವನು ನನ್ನನ್ನು ಬಿಟ್ಟು ಹೋದುದರಿಂದ ನನ್ನ ಅಂಗಾಂಗಗಳೆಲ್ಲವೂ ದಹಿಸುತ್ತಿರುವಂತೆ ನನಗೆ ಭಾಸವಾಗುತ್ತಿದೆ. ನಾನು ಸಾಧ್ಯವಾದಷ್ಟು ಬೇಗ ಅವನಲ್ಲಿಗೆ ಹೋಗಿಬಿಡಬೇಕೆಂದಿದ್ದೇನೆ ಮತ್ತು ಅನುದಿನವೂ ಅವನನ್ನಿಲ್ಲಿಗೆ ಕರೆತರಬೇಕೆಂದಿದ್ದೇನೆ. ಈ ಕ್ಷಣದಲ್ಲಿಯೇ ನಾನವನಿರುವಲ್ಲಿಗೆ ಹೋಗಲು ಅನುಮತಿಯನ್ನು ನೀಡು.

ತಂದೆಯೇ! ಅವನ ಬ್ರಹ್ಮಚರ್ಯವ್ರತವಾವುದೆಂಬುದನ್ನೂ, ಅದರ ವಿಧಿ-ನಿಯಮಗಳನ್ನೂ ತಿಳಿಯಲು ನಾನು ಬಹುಕಾತರನಾಗಿದ್ದೇನೆ. ಆರ್ಯರ ಧರ್ಮಾನುವರ್ತಿಯಾಗಿರುವ ಆ ಬ್ರಹ್ಮಚಾರಿಯು ಯಾವ ರೀತಿಯಲ್ಲಿ ತಪಃಶ್ಚರಣೆಯನ್ನು ಮಾಡುವನೋ ಅದೇ ರೀತಿಯಲ್ಲಿ ನಾನೂ ತಪಶ್ಚರಣೆಮಾಡಿಕೊಂಡು ಅವನ ಜೊತೆಯಲ್ಲಿಯೇ ಇದ್ದುಬಿಡುವೆನು. ಅವನಿಲ್ಲಿ ಮಾಡಿದ ಅನುಷ್ಠಾನಗಳನ್ನೇ ನಾನೂ ಮಾಡಬೇಕೆಂದು ನನ್ನ ಹೃದಯವು ತವಕಿಸುತ್ತಿದೆ. ನಾನವನನ್ನು ನೋಡದಿದ್ದರೆ ನನ್ನ ಹೃದಯವು ನಿಶ್ಚಯವಾಗಿಯೂ ಬಹಳ ಯಾತನೆಯನ್ನನುಭವಿಸುತ್ತದೆ. ಆದುದರಿಂದ ನಾನು ಈ ಕೂಡಲೇ ಅವನ ಬಳಿಗೆ ಹೊರಟುಹೋಗಲು ಅನುಮತಿಯನ್ನು ದಯಪಾಲಿಸು."

೧೧೨ನೆಯ ಅಧ್ಯಾಯವು ಮುಗಿಯಿತು.

೧೧೩ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಋಷ್ಯಶೃಂಗನು ಲೋಮಪಾದನ ದೇಶಕ್ಕೆ ಪ್ರಯಾಣಮಾಡಿದುದು: ರಾಜಕನ್ಯೆಯಾದ ಶಾಂತೆಯೊಡನೆ ವಿವಾಹ : ಮಗನನ್ನು ನೋಡಲು ಬಂದ ವಿಭಾಂಡಕಮಹರ್ಷಿಗಳಿಗೆ ಸತ್ಕಾರ

ಧರ್ಮಜ! ಪ್ರಿಯದರ್ಶನನಾದ 'ಬ್ರಹ್ಮಚಾರಿ' ಯನ್ನು ದರ್ಶನ ಮಾಡಲು ಕಾತರನಾಗಿದ್ದ ಋಷ್ಯಶೃಂಗನನ್ನು ಕುರಿತು ವಿಭಾಂಡಕರು ಹೇಳಿದರು:

"ಮಗು! ನಿನಗೆ ಮನಮೋಹಕವಾದ ರೂಪಿನಿಂದ ಕಂಡನಲ್ಲಾ! ಅವನು ರಾಕ್ಷಸನು. ರಾಕ್ಷಸರು ಈ ಪ್ರಕಾರವಾಗಿ ಸುಂದರರೂಪವನ್ನು ಧರಿಸಿ ತಿರುಗುತ್ತಿರುತ್ತಾರೆ. ಅದೂ ಅಲ್ಲದೇ ಅವರು ನಮ್ಮ ತಪಸ್ಸಿಗೆ ತೊಂದರೆ ಮಾಡುವುದನ್ನೇ ಯಾವಾಗಲೂ ಯೋಚಿಸುತ್ತಿರುತ್ತಾರೆ. ಅದಕ್ಕಾಗಿಯೇ ಈ ರಾಕ್ಷಸರು ಮನಮೋಹಕವಾದ ರೂಪಗಳನ್ನು ಧರಿಸಿ ನಾನಾವಿಧವಾದ ಉಪಾಯಗಳಿಂದ ತಪಸ್ವಿಗಳನ್ನು ಪ್ರಲೋಭನಗೊಳಿಸಲು ಯತ್ನಿಸುತ್ತಾರೆ. ಉಗ್ರ ರೂಪಿಗಳಾದ ಆ ರಾಕ್ಷಸರು ಸುಂದರರೂಪಗಳನ್ನು ಧರಿಸಿ ಅರಣ್ಯದಲ್ಲಿರುವ

ತಪಸ್ವಿಗಳನ್ನು ಪ್ರಲೋಭನಗೊಳಿಸಿ ಅವರನ್ನು ತಪಸ್ಸಿನಿಂದ ವಿಮುಖರನ್ನಾಗಿ ಮಾಡಿ ಬಹಳ ಕಾಲ ತಪಸ್ಸಿನಿಂದ ಗಳಿಸಿದ್ದ ಉತ್ತಮಲೋಕಗಳಿಂದಲೂ ಮತ್ತು ಆ ಲೋಕಗಳಲ್ಲಿ ಪ್ರಾಪ್ತವಾಗಬಹುದಾದ ಸುಖಗಳಿಂದಲೂ ಭ್ರಷ್ಟ ರನ್ನಾಗಿ ಮಾಡಿಬಿಡುತ್ತಾರೆ. (ಋಷಿ-ಮಹರ್ಷಿಗಳು ರಾಕ್ಷಸರ ಆ ಮಾಯೆಗೆ ಮೋಸಹೋಗಿ ತಮ್ಮ ತಪಸ್ಸಿನ ಫಲವೆಲ್ಲವನ್ನೂ ಕಳೆದುಕೊಂಡು ತತ್ಪರಿಣಾಮವಾಗಿ ತಾವು ಪಡೆಯಬಹುದಾದ ಉತ್ತಮಲೋಕಗಳನ್ನೂ ಮತ್ತು ತತ್ಸಂಬಂಧವಾದ ಸುಖವನ್ನೂ ಕಳೆದುಕೊಳ್ಳುತ್ತಾರೆ.) ಆದುದರಿಂದ ನಿಯತಾತ್ಮನಾದವನು–ಸತ್ಪುರುಷರು ಪಡೆಯಬಹುದಾದ ಉತ್ತಮಲೋಕ ಗಳನ್ನು ಪಡೆಯಲು ಅಭಿಲಾಷೆಯುಳ್ಳವನು–ಖಂಡಿತವಾಗಿಯೂ ಮೋಹನಾಕಾರವನ್ನು ಧರಿಸಿರುವ ಅಂತಹ ರಾಕ್ಷಸರನ್ನು ಸೇವಿಸಲು ಹೋಗ ಬಾರದು. ಪಾಪಿಷ್ಠರಾದ ಅವರು ತಪಸ್ಸಿಗೆ ವಿಘ್ನವನ್ನುಂಟುಮಾಡುತ್ತಾ ಈ ಅರಣ್ಯದಲ್ಲಿಯೇ ಸಂಚರಿಸುತ್ತಿರುತ್ತಾರೆ. ಅಂತಹವರನ್ನು ತಪಸ್ವಿಗಳಾದ ನಾವು ಖಂಡಿತವಾಗಿಯೂ ನೋಡಬಾರದು. ಮಗು! ಅವನು ನಿನಗೆ ಕೊಟ್ಟ ಪಾನೀಯಗಳೂ ಕುಡಿಯಲು ಯೋಗ್ಯವಾದುವುಗಳಲ್ಲ. ಆ ಮಧುರಸಗಳು ಅಸತ್ಪುರುಷರು ಸೇವಿಸುವ ಅಪೇಯಪಾನೀಯಗಳು. ಅವರು ನಿನಗೆ ಕೊಟ್ಟ ಮನಮೋಹಕವಾದ ಸುಗಂಧಮಯವಾದ ನಾನಾಬಣ್ಣಗಳ ಆ ಪುಷ್ಪಹಾರ ಗಳು ತಪಸ್ವಿಗಳು ಧರಿಸಲು ಯೋಗ್ಯವಾದುವುಗಳಲ್ಲ."

ಯುಧಿಷ್ಠಿರ! ವಿಭಾಂಡಕಮಹರ್ಷಿಗಳು ಈ ರೀತಿಯಲ್ಲಿ ಅಲ್ಲಿಗೆ ಬಂದಿದ್ದವನು ರಾಕ್ಷಸನೆಂದೂ, ಅವನನ್ನು ನೋಡಬಾರದೆಂದೂ–ಮಗನಿಗೆ ಬುದ್ಧಿಹೇಳಿ ಅವನಲ್ಲಿಗೆ ಹೋಗುವುದನ್ನು ತಡೆದು, ಆಶ್ರಮಕ್ಕೆ ಬಂದಿದ್ದವಳು ಹೆಂಗಸೇ ಆಗಿರಬೇಕೆಂದು ನಿಶ್ಚಯಿಸಿ, ಅವಳನ್ನು ನೋಡುವ ಸಲುವಾಗಿ ತಾವೇ ಹೊರಟರು. ಮೂರು ದಿನಗಳು ಅರಣ್ಯದಲ್ಲಿ ಸುತ್ತಾಡಿದರೂ ಆ ಯುವತಿಯು ಸಿಕ್ಕದಿರಲು ವಿಭಾಂಡಕರು ಆಶ್ರಮಕ್ಕೆ ಹಿಂದಿರುಗಿದರು.

ನಿತ್ಯವಿಧಿಯಂತೆ ವಿಭಾಂಡಕರು ಪುಷ್ಪ-ಫಲಾದಿಗಳನ್ನು ತರಲು ಆಶ್ರಮ ದಿಂದ ಹೊರಟುಹೋದರು. ತಂದೆಯ ಮಾತಿನಂತೆ ಋಷ್ಯಶೃಂಗನು ಬ್ರಹ್ಮ ಚಾರಿಯನ್ನು ನೋಡಲು ಹೋಗದೇ ಆಶ್ರಮದಲ್ಲಿಯೇ ಇದ್ದುಬಿಟ್ಟನು. ಹಿಂದೆ

ಬಂದಿದ್ದ ವೇಶ್ಯಾಕನ್ಯೆಯೇ ಆಶ್ರಮದಲ್ಲಿದ್ದ ಅವನ ಸಮೀಪಕ್ಕೆ ಪುನಃ ಬಂದು ಹಿಂದಿನ ರೀತಿಯಲ್ಲಿಯೇ ಋಷ್ಯಶೃಂಗನನ್ನು ಪ್ರಲೋಭನಗೊಳಿಸಲು ಯತ್ನಿಸಿದಳು. ಋಷ್ಯಶೃಂಗನು ತಂದೆಯ ಮಾತಿನ ಪ್ರಕಾರ ಯುವತಿಯಿದ್ದೆಡೆಗೆ ಹೋಗಬೇಕೆಂದಿದ್ದ ತನ್ನ ಅಭಿಲಾಷೆಯನ್ನು ತೊರೆದಿದ್ದನೇ ಹೊರತು ಅವನ ಮನಸ್ಸಿನಲ್ಲಿದ್ದ ಆಕಾಂಕ್ಷೆಯು ವಿಭಾಂಡಕರ ಉಪದೇಶದಿಂದ ನಶಿಸಿ ಹೋಗಿರಲಿಲ್ಲ. ಪ್ರಲೋಭನಗೊಳಿಸಲು ಪುನಃ ಆಗಮಿಸಿದ ವೇಶ್ಯೆಯನ್ನು ಕಂಡೊಡನೆಯೇ ಋಷ್ಯಶೃಂಗನು ಅವಳ ಬಳಿಗೆ ಓಡಿಹೋಗಿ ಅವಳನ್ನು ಕುರಿತು ಹೇಳಿದನು :

"ನನ್ನ ತಂದೆಯು ಬರುವುದರೊಳಗೆ ನಿನ್ನ ಆಶ್ರಮಕ್ಕೆ ನಾವಿಬ್ಬರೂ ಹೊರಟುಹೋಗೋಣ."

ಋಷಿಪುತ್ರನ ಮಾತನ್ನು ಕೇಳಿದೊಡನೆಯೇ ವೇಶ್ಯೆಯು ಅತ್ಯಂತ ಸಂತೋಷದಿಂದ ವಿಭಾಂಡಕರ ಏಕಮಾತ್ರಪುತ್ರನಾದ ಋಷ್ಯಶೃಂಗನನ್ನು ಆಶ್ರಮರೂಪದಲ್ಲಿದ್ದ ನಾವೆಯೊಳಕ್ಕೆ ಕರೆದೊಯ್ದಳು. ನಾವೆಯು ಹೊರಟಿತು. ನಾನಾವಿಧವಾದ ಕ್ರೀಡಾ-ವಿನೋದಗಳಿಂದಲೂ ತಿಂಡಿ-ತಿನಿಸುಗಳಿಂದಲೂ ವೇಶ್ಯಾಯುವತಿಯರು ಋಷ್ಯಶೃಂಗನನ್ನು ಪರಮಹೃಷ್ಟನನ್ನಾಗಿ ಮಾಡಿದರು. ನಾವೆಯು ಅಂಗದೇಶದ ಎಲ್ಲೆಯೊಳಗೆ ಪ್ರವೇಶಿಸಿತು. ಋಷ್ಯಶೃಂಗನನ್ನು ಉಪಾಯಾಂತರದಿಂದ ನಾವೆಯಿಂದ ಕೆಳಗಿಳಿಸಿ ರಾಜನಿರ್ಮಿತವಾಗಿದ್ದ, ಚಿತ್ರ-ವಿಚಿತ್ರವಾಗಿದ್ದ ಹೊಸ ನಾವೆಯಲ್ಲಿದ್ದ ಆಶ್ರಮದೊಳಕ್ಕೆ ಕರೆದೊಯ್ದರು. ಋಷ್ಯಶೃಂಗನು ಅಂಗದೇಶವನ್ನು ಪ್ರವೇಶಿಸುತ್ತಲೇ ದೇವೇಂದ್ರನು ಯಥೇಚ್ಛವಾಗಿ ಮಳೆಗರೆದನು. ಜಗತ್ತೆಲ್ಲವೂ ನೀರಿನಿಂದ ತುಂಬಿಹೋಯಿತು. ಪರಮಸಂತುಷ್ಟನಾದ ಲೋಮಪಾದನು ವಿಭಾಂಡಕರ ಏಕಮಾತ್ರಪುತ್ರನಾದ ಋಷ್ಯಶೃಂಗನನ್ನು ನಾವೆಯ ಆಶ್ರಮದಿಂದ ತನ್ನ ಅಂತಃಪುರಕ್ಕೆ ಬರಮಾಡಿಕೊಂಡು ತನ್ನ ಹಿಂದಿನ ನಿರ್ಧಾರದಂತೆ ತನ್ನ ಮಗಳಾದ ಶಾಂತಾದೇವಿಯನ್ನು ಋಷ್ಯಶೃಂಗನಿಗೆ ಮದುವೆಮಾಡಿಕೊಟ್ಟನು.

ಪುತ್ರವ್ಯಾಮೋಹದ ಕಾರಣದಿಂದ ವಿಭಾಂಡಕರು ಕುಪಿತರಾಗುವರೆಂಬ ಭಯವು ಲೋಮಪಾದನಿಗುಂಟಾಯಿತು. ಒಡನೆಯೇ ರಾಜಭಟರನ್ನು ಕರೆಯಿಸಿ ವಿಭಾಂಡಕರು ಬರುವ ಮಾರ್ಗದಲ್ಲಿ ಹಸುಗಳನ್ನು ನಿಲ್ಲಿಸಿರಬೇಕೆಂದೂ,

ಭೂಮಿಯನ್ನು ಉತ್ತಿರಬೇಕೆಂದೂ ಹೇಳಿ, ಗೋಪಾಲಕರನ್ನೂ ಕರೆಯಿಸಿ ಹೀಗೆಂದು ಹೇಳಿದನು :

"ಗೋಪಾಲಕರೇ! ವಿಭಾಂಡಕಮಹರ್ಷಿಗಳು ತಮ್ಮ ಮಗನನ್ನು ನೋಡುವ ಸಲುವಾಗಿ ಮಾರ್ಗದಲ್ಲಿ ಬರುತ್ತಿರುವಾಗ ನಿಮ್ಮನ್ನು ನೋಡಿ ಋಷ್ಯಶೃಂಗನೆಲ್ಲೆಂದು ಕೇಳಿದರೆ ಅದಕ್ಕುತ್ತರವಾಗಿ ನೀವು ಎರಡು ಕೈಗಳನ್ನೂ ಜೋಡಿಸಿಕೊಂಡು ಹೀಗೆ ಹೇಳಬೇಕು :

"ಮಹರ್ಷಿಗಳೇ! ಉತ್ತು-ಬಿತ್ತಿರುವ ಈ ಭೂಮಿಯು ಋಷ್ಯಶೃಂಗ ಮಹರ್ಷಿಗಳಿಗೆ ಸೇರಿದುದೇ ಆಗಿರುವುದು ಮತ್ತು ಅಪಾರವಾದ ಈ ಗೋಧನವೂ ಅವರದೇ ಆಗಿರುವುದು. ನಾವು ನಿಮ್ಮ ಕಿಂಕರರಾಗಿ ನಿಮ್ಮ ಸೇವೆಮಾಡಲು ಸರ್ವದಾ ಸಿದ್ಧರಾಗಿದ್ದೇವೆ."

ಲೋಮಪಾದನು ಗೋಪಾಲರಿಗೆ ಹೀಗೆ ಆಜ್ಞಾಪಿಸಿ ಸಾವಿರಾರು ಹಸುಗಳನ್ನು ಅವರೊಡನೆ ಕಳುಹಿಸಿಕೊಟ್ಟನು.

ಇತ್ತಲಾಗಿ ವಿಭಾಂಡಕಮಹರ್ಷಿಗಳು ಕಂದ-ಮೂಲ-ಫಲಗಳನ್ನು ಸಂಗ್ರಹಿಸಿಕೊಂಡು ಆಶ್ರಮಕ್ಕೆ ಹಿಂದಿರುಗಿದರು. ಆ ವೇಳೆಗೆ ಆಶ್ರಮದಲ್ಲಿ ಮಗನಿರಲಿಲ್ಲ. ಆಶ್ರಮದ ಸುತ್ತಲೂ 'ಋಷ್ಯಶೃಂಗ!' ಎಂದು ಹಲವು ಬಾರಿ ಕೂಗುತ್ತಾ ಸುತ್ತಾಡಿದರು. ತಮ್ಮ ಮಗನು ಎಲ್ಲಿಯೂ ಕಾಣದಿರಲು ಮಹರ್ಷಿಗಳಿಗೆ ಬಹಳ ಕೋಪವುಂಟಾಯಿತು. ಕೋಪಾಗ್ನಿಯಿಂದ ಅವರ ಶರೀರವೇ ಸಿಡಿದುಹೋಗುತ್ತದೆಯೋ ಎಂಬಂತೆ ಕಾಣುತ್ತಿದ್ದಿತು. ಕೋಪಾವೇಶದಿಂದ ಪ್ರಕಂಪಿಸುತ್ತಿದ್ದ ವಿಭಾಂಡಕಮಹರ್ಷಿಗಳು ತಮ್ಮ ಮಗನನ್ನಪಹರಿಸಿದ ಕಾರ್ಯವು ರಾಜನದೇ ಆಗಿರಬಹುದೆಂದು ಶಂಕಿಸಿದರು. ಅಂಗರಾಜನೇ ತಮ್ಮ ಮಗನನ್ನು ಕರೆದೊಯ್ದಿರಬಹುದೆಂದು ನಿರ್ಧಾರಮಾಡಿ, ರಾಜನನ್ನೂ ಅವನ ಪಟ್ಟಣವನ್ನೂ ಮತ್ತು ಅವನ ಅಖಂಡದೇಶವನ್ನೂ ಸುಟ್ಟು ಭಸ್ಮಮಾಡಲು ನಿಶ್ಚಯಿಸಿ ಲೋಮಪಾದನ ರಾಜಧಾನಿಯಾದ ಚಂಪಾನಗರದ ಅಭಿಮುಖವಾಗಿ ಧಾವಿಸಿಹೋದರು. ರಾಜಾಜ್ಞೆಯಂತೆ ವಿಭಾಂಡಕಮಹರ್ಷಿಗಳು ಬರುತ್ತಿರುವ ದಾರಿಯಲ್ಲಿ ಅನೇಕ ಗೋಪಾಲಕರು ಸಾವಿರಾರು ಹಸುಗಳೊಡನೆ ಅವರಿಗೆದುರಾಗಿ ಬರುತ್ತಿದ್ದರು. ಆ ವೇಳೆಗೆ ಸರಿಯಾಗಿ ಮಹರ್ಷಿ

ಗಳೂ ಹಸಿವು-ಬಾಯಾರಿಕೆಗಳಿಂದಲೂ, ಮಾರ್ಗಾಯಾಸದಿಂದಲೂ ಬಳಲಿ ಬೆಂಡಾಗಿದ್ದರು. ಗೋಪಾಲಕರು ಗೊಲ್ಲರಹಳ್ಳಿಗೆ ಆಗಮಿಸಿದ ವಿಭಾಂಡಕ ಮಹರ್ಷಿಗಳನ್ನು ಆದರದಿಂದ ಸ್ವಾಗತಿಸಿ ಯಥೋಚಿತವಾಗಿ ಸತ್ಕರಿಸಿದರು. ರಾಜಯೋಗ್ಯವಾದ ಸತ್ಕಾರವೇ ವಿಭಾಂಡಕಮಹರ್ಷಿಗಳಿಗೂ ನಡೆಯಿತು. ಗೋಪಾಲಕರಿಂದ ಬಹುವಾಗಿ ಸತ್ಕೃತರಾದ ಮಹರ್ಷಿಗಳು ರಾತ್ರಿಯನ್ನು



ಅಲ್ಲೇ ಕಳೆದು ಬೆಳಗಾದೊಡನೆಯೇ ಪ್ರಾತರಾಹ್ನಿಕಗಳನ್ನು ಮುಗಿಸಿ ಗೋಪಾಲಕರನ್ನು ಕರೆದು ಕೇಳಿದರು :

"ನೀವು ಯಾರ ಕಡೆಯವರು?"

"ಬ್ರಾಹ್ಮಣೋತ್ತಮರೇ! ಇಲ್ಲಿರುವ ನಾವು, ಈ ಅಸಂಖ್ಯಾತವಾದ ಗೋವುಗಳು, ಪೈರು-ಪಚ್ಚೆಗಳಿಂದ ಕೂಡಿರುವ ಈ ಭೂಮಿ–ಇವುಗಳೆಲ್ಲವೂ ನಿಮ್ಮ ಮಗನಿಗಾಗಿ ಕೊಡಲ್ಪಟ್ಟಿವೆ"–ಎಂದು ಗೋಪಾಲಕರೆಲ್ಲರೂ ಕೈಮುಗಿದು ಹೇಳಿದರು. ವಿಭಾಂಡಕರು ಅಲ್ಲಿಂದ ಮುಂದೆ ಪ್ರಯಾಣಮಾಡಿದರು. ದಾರಿ



ಯುದ್ಧಕ್ಕೂ ಅಲ್ಲಲ್ಲಿ ಗೋಪಾಲಕರು ಅವರನ್ನು ಯಥೋಚಿತವಾಗಿ ಸತ್ಕರಿಸಿ ಅವರು ಕೇಳುತ್ತಿದ್ದ ಪ್ರಶ್ನೆಗಳಿಗೆ ಹಿಂದಿನ ಗೋಪಾಲಕರು ಹೇಳಿದಂತೆಯೇ ಉತ್ತರಕೊಡುತ್ತಿದ್ದರು. ಗೋಪಾಲಕರು ಮಾಡುತ್ತಿದ್ದ ರಾಜಯೋಗ್ಯವಾದ ಸತ್ಕಾರದಿಂದಲೂ, ಅವರಾಡುತ್ತಿದ್ದ ಮಾತಿನಿಂದಲೂ ಮಹರ್ಷಿಗಳ ಕೋಪವು ಕಡಿಮೆಯಾಗುತ್ತಾ ಬಂದಿತು.

ಮಹರ್ಷಿಗಳು ಪಟ್ಟಣವನ್ನು ಪ್ರವೇಶಮಾಡುತ್ತಲೇ ರಾಜನೇ ಮುಂದೆ ಹೋಗಿ ಬದ್ಧಾಂಜಲಿಯಾಗಿ ಮಹರ್ಷಿಗಳನ್ನು ಆದರದಿಂದ ಸ್ವಾಗತಿಸಿ, ಅರಮನೆಗೆ ಕರೆದೊಯ್ದು ಅರ್ಘ್ಯ-ಪಾದ್ಯಾದಿಗಳನ್ನಿತ್ತು ಯಥೋಚಿತವಾಗಿ ಸತ್ಕರಿಸಿದನು. ಸಾಕ್ಷಾತ್ ದೇವೇಂದ್ರನೋಪಾದಿಯಲ್ಲಿ ಕಾಣುತ್ತಿದ್ದ ಮಗನೂ, ಮೋಡದಿಂದ ಹೊರಬರುವ ಮಿಂಚಿನಂತೆ ಅತ್ಯಂತಕಾಂತಿಮತಿಯಾದ ಶಾಂತಾದೇವಿಯೂ ಬಂದು ವಿಭಾಂಡಕಮಹರ್ಷಿಗಳಿಗೆ ನಮಸ್ಕರಿಸಿದರು.

ಮಗನಿಗೆ ಬಳುವಳಿಯಾಗಿ ಬಂದಿದ್ದ ಗ್ರಾಮಗಳನ್ನೂ, ಸಾವಿರಾರು ಗೋವುಗಳನ್ನೂ ಮತ್ತು ಚೆಲುವೆಯಾದ ಶಾಂತಾದೇವಿಯನ್ನೂ ಕಂಡು ವಿಭಾಂಡಕರು ರಾಜನ ವಿಷಯದಲ್ಲಿ ಹೆಚ್ಚು ಪ್ರಸನ್ನತೆಯನ್ನು ತೋರಿದರು. ಸೂರ್ಯಾಗ್ನಿಗಳಿಗೆ ಸಮಾನವಾದ ದಿವ್ಯತೇಜಸ್ಸಿನಿಂದ ಕೂಡಿದ್ದ ವಿಭಾಂಡಕ ಮಹರ್ಷಿಗಳು ತಮ್ಮ ಮಗನಾದ ಋಷ್ಯಶೃಂಗನನ್ನು ತಾತ್ಕಾಲಿಕವಾಗಿ ಅಲ್ಲಿಯೇ ಬಿಡಲೊಪ್ಪಿ ಮಗನೊಡನೆ ಈ ಮಾತುಗಳನ್ನು ಹೇಳಿದರು :

"ಮಗು! ಋಷ್ಯಶೃಂಗ! ರಾಜನು ಅಪೇಕ್ಷಿಸಿರುವ ಕಾರ್ಯಗಳೆಲ್ಲವನ್ನೂ ಮಾಡಿ ಮುಗಿಸಿ ನಿನಗೊಬ್ಬ ಮಗನು ಹುಟ್ಟಿದೊಡನೆಯೇ ನೀನು ಅರಣ್ಯಕ್ಕೆ ತಪ್ಪದೇ ಹೊರಟುಬರಬೇಕು."

ಸ ತದ್ವಚಃ ಕೃತವಾನೃಷ್ಯಶೃಙ್ಗೋ
ಯಯೌ ಚ ಯತ್ರಾಸ್ಯ ಪಿತಾ ಬಭೂವ ।
ಶಾನ್ತಾ ಚೈನಂ ಪರ್ಯಚರನ್ನರೇನ್ದ್ರ
ಖೇ ರೋಹಿಣೀ ಸೋಮಮಿವಾನುಕೂಲಾ ॥೨೨॥

ಅರುನ್ಧತೀ ವಾ ಸುಭಗಾ ವಸಿಷ್ಠಂ
ಲೋಪಾಮುದ್ರಾ ವಾ ಯಥಾ ಹ್ಯಗಸ್ತ್ಯಮ್ ।
ನಲಸ್ಯ ವೈ ದಮಯನ್ತೀ ಯಥಾಭೂ-
ದ್ಯಥಾ ಶಚೀ ವಜ್ರಧರಸ್ಯ ಚೈವ
ನಾರಾಯಣೀ ಚೇನ್ದ್ರಸೇನಾ ಬಭೂವ
ವಶ್ಯಾ ನಿತ್ಯಂ ಮುದ್ಗಲಸ್ಯಾಜಮೀಢ ।
ತಥಾ ಶಾನ್ತಾ ಋಷ್ಯಶೃಙ್ಗಂ ವನಸ್ಥಂ
ಪ್ರೀತ್ಯಾ ಯುಕ್ತಾ ಪರ್ಯಚರನ್ನರೇನ್ದ್ರ ॥೨೪॥

ಋಷ್ಯಶೃಂಗನು ತಂದೆಯು ಹೇಳಿದಂತೆಯೇ ಮಾಡಿದನು. ವಂಶೋದ್ಧಾರಕನಾದ ಮಗನೊಬ್ಬನು ಹುಟ್ಟಿದನಂತರ ಲೋಮಪಾದನ ಅನುಮತಿಯನ್ನು ಪಡೆದು ತನ್ನ ತಂದೆಯ ಆಶ್ರಮಕ್ಕೆ ಹೊರಟುಹೋದನು. ರಾಜಕುಮಾರಿಯಾದ ಶಾಂತಾದೇವಿಯೂ ಪತಿಯನ್ನನುಸರಿಸಿ ಅರಣ್ಯಕ್ಕೆ ಹೊರಟಳು. ಅಂತರಿಕ್ಷದಲ್ಲಿ ಚಂದ್ರನನ್ನು ಅನುಸರಿಸುತ್ತಿರುವ ರೋಹಿಣಿಯಂತೆ–ವಸಿಷ್ಠರ ಆಜ್ಞಾನುವರ್ತಿನಿಯಾದ ಅರುಂಧತಿಯಂತೆ–ಅಗಸ್ತ್ಯರ ಪಾದಸೇವಕಳಾದ ಲೋಪಾಮುದ್ರೆಯಂತೆ–ಶಾಂತಾದೇವಿಯು ಋಷ್ಯಶೃಂಗನ ಸೇವೆಯಲ್ಲಿ ಸರ್ವದಾ ನಿರತಳಾಗಿರುತ್ತಿದ್ದಳು. ದಮಯಂತಿಯು ನಲನಿಗೆ ವಿಧೇಯಳಾಗಿದ್ದಂತೆ–ಶಚೀದೇವಿಯು ಇಂದ್ರನಿಗೆ ವಿಧೇಯಳಾಗಿರುವಂತೆ–ನಾರಾಯಣನ ಮಗಳಾದ ಇಂದ್ರಸೇನೆಯು ಮುದ್ಗಲಮಹರ್ಷಿಗೆ ವಿಧೇಯಳಾಗಿದ್ದಂತೆ–ಶಾಂತಾದೇವಿಯೂ ಋಷ್ಯಶೃಂಗನಿಗೆ ವಿಧೇಯಳಾಗಿದ್ದು ಆದರದಿಂದ ಪತಿಸೇವೆಯನ್ನು ಮಾಡುತ್ತಾ ಕಾಲಕಳೆಯುತ್ತಿದ್ದಳು.

ಯುಧಿಷ್ಠಿರ! ಈ ದಿವ್ಯಾಶ್ರಮವೇ ಹಿಂದೆ ಋಷ್ಯಶೃಂಗರ ಪರಮ ಪವಿತ್ರವಾದ ಆಶ್ರಮವಾಗಿತ್ತು. ಸಮೀಪದಲ್ಲಿಯೇ ಕಾಣುತ್ತಿರುವ ಸರೋವರವನ್ನು ಈ ಆಶ್ರಮವು ಶೋಭಾಯಮಾನವನ್ನಾಗಿ ಮಾಡಿದೆಯಲ್ಲವೇ? ಈ ಆಶ್ರಮದ ಸಂಬಂಧದಿಂದ ಈ ಸರೋವರವೂ ಪರಮಪವಿತ್ರವಾಗಿದೆ. ಇಲ್ಲಿ ನೀನು ಸ್ನಾನಮಾಡಿ ಪರಿಶುದ್ಧನಾಗು. ಇಲ್ಲಿ ಸ್ನಾನಾದಿಗಳನ್ನು ಮುಗಿಸಿಕೊಂಡನಂತರ ಮುಂದಿನ ಪುಣ್ಯಕ್ಷೇತ್ರಗಳಿಗೆ ಪ್ರಯಾಣಮಾಡಬಹುದಾಗಿದೆ.”

೧೧೩ನೆಯ ಅಧ್ಯಾಯವು ಮುಗಿಯಿತು.

೧೧೪ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಕೌಶಿಕೀ, ಗಂಗಾ–ಸಾಗರಸಂಗಮ ಮತ್ತು ವೈತರಣೀನದಿಗಳ ಯಾತ್ರೆಯನ್ನು ಮುಗಿಸಿ ಮಹೇಂದ್ರಪರ್ವತಕ್ಕೆ ಯುಧಿಷ್ಠಿರನ ಪ್ರಯಾಣ

ವೈಶಂಪಾಯನರು ಹೇಳುತ್ತಾರೆ :

“ಜನಮೇಜಯ! ಪಾಂಡುಪುತ್ರನಾದ ಯುಧಿಷ್ಠಿರನು ಕೌಶಿಕೀ

ನದಿಯಿಂದ ಪ್ರಾರಂಭಿಸಿ ಅನುಕ್ರಮವಾಗಿ ಎಲ್ಲ ಪವಿತ್ರಯಾತ್ರಾಸ್ಥಳಗಳನ್ನೂ, ತೀರ್ಥಗಳನ್ನೂ ಲೋಮಶರೊಡನೆ ಸಂದರ್ಶಿಸಿದನು. ಹಾಗೆಯೇ ಯಾತ್ರೆ ಮಾಡುತ್ತಾ ಎಲ್ಲರೂ ಗಂಗಾನದಿಯು ಸಮುದ್ರಕ್ಕೆ ಸೇರುವ ಪವಿತ್ರವಾದ ಸಂಗಮಸ್ಥಳಕ್ಕೆ ಬಂದು ಸೇರಿದರು. ಆ ಸ್ಥಳದಲ್ಲಿ ಗಂಗಾನದಿಯೊಡನೆ ಐದು ನೂರು ನದಿಗಳು ಸಮುದ್ರಕ್ಕೆ ಸೇರುತ್ತವೆ. ಅಂತಹ ಪರಮಪವಿತ್ರವಾದ ಸ್ಥಳದಲ್ಲಿ ಯುಧಿಷ್ಠಿರನು ಸ್ನಾನಮಾಡಿ ತರ್ಪಣಾದಿಗಳನ್ನು ಮಾಡಿದನು.

ಅನಂತರದಲ್ಲಿ ಯುಧಿಷ್ಠಿರನು ಸಮುದ್ರದ ದಂಡೆಯಲ್ಲಿಯೇ ಪ್ರಯಾಣಮಾಡುತ್ತಾ ತನ್ನ ಅನುಜರೊಡನೆಯೂ, ದ್ರೌಪದಿಯೊಡನೆಯೂ ಕಳಿಂಗದೇಶಕ್ಕೆ ಬಂದನು.

ಕಳಿಂಗದೇಶದ ಇತಿಹಾಸವನ್ನು ಲೋಮಶರು ಯುಧಿಷ್ಠಿರನೊಡನೆ ಹೇಳತೊಡಗಿದರು : "ಯುಧಿಷ್ಠಿರ! ಕಳಿಂಗರೆಂಬ ಹೆಸರಿನ ಜನರು ವಾಸ ಮಾಡುವ ಈ ಪ್ರದೇಶಕ್ಕೆ ಕಳಿಂಗದೇಶವೆಂದೇ ಹೆಸರಾಗಿದೆ. ಈ ದೇಶದ ಮೂಲಕವಾಗಿಯೇ 'ವೈತರಣೀ'–ಎಂದು ಮಹಾನದಿಯು ಪ್ರವಹಿಸುವುದು. ಈ ನದಿಯ ತೀರದಲ್ಲಿಯೇ ಯಮಧರ್ಮನು ದೇವತೆಗಳ ರಕ್ಷಣೆಯನ್ನು ಪಡೆದು ಮಹಾಯಾಗವೊಂದನ್ನು ಮಾಡಿದನು. ವೈತರಣಿಯ ಈ ಉತ್ತರತೀರವು ಅನೇಕ ಋಷಿ-ಮಹರ್ಷಿಗಳಿಂದ ಸಂಸೇವ್ಯಮಾನವಾಗಿರು ವುದು. ಯಜ್ಞ-ಯಾಗಾದಿಗಳನ್ನು ಮಾಡಲು ಈ ಸ್ಥಳವು ಬಹುಪ್ರಶಸ್ತ ವಾಗಿರುವುದು. ಇಲ್ಲಿರುವ ಈ ಪರ್ವತವೂ ಈ ಸ್ಥಳಕ್ಕೆ ಅಲಂಕಾರಪ್ರಾಯ ವಾಗಿರುವುದು. ಈ ಪವಿತ್ರಸ್ಥಳಕ್ಕೆ ನಿಷ್ಠರಾದ ಬ್ರಾಹ್ಮಣರು ಆಗಿಂದಾಗ್ಯೆ ಬಂದು ಹೋಗುತ್ತಿರುವರು. ಸ್ವರ್ಗಕ್ಕೆ ಹೋಗಲಿಚ್ಛಿಸುವವನಿಗೆ ವೈತರಣೀ ನದಿಯ ಈ ಉತ್ತರತೀರವು ದೇವಯಾನಕ್ಕೆ ಸಮಾನವಾಗಿದೆ. ಇಲ್ಲಿಯೇ ಹಿಂದೆ ಋಷಿ-ಮಹರ್ಷಿಗಳು ಒಟ್ಟಾಗಿ ಕಲೆತು ಅನೇಕ ಯಜ್ಞ-ಯಾಗಾದಿಗಳಿಂದ ದೇವತೆಗಳನ್ನು ಆರಾಧಿಸುತ್ತಿದ್ದರು.

**ಅತ್ರೈವ ರುದ್ರೋ ರಾಜೇನ್ದ್ರ ಪಶುಮಾದತ್ತವಾನ್ಮಖೇ ।**
**ಪಶುಮಾದಾಯ ರಾಜೇನ್ದ್ರ ಭಾಗೋಽಯಮಿತಿ ಚಾಬ್ರವೀತ್ ॥೭॥**

**ಹೃತೇ ಪಶೌ ತದಾ ದೇವಾಸ್ತಮೂಚುರ್ಭರತರ್ಷಭ ।**
**ಮಾ ಪರಸ್ವಮಭಿದ್ರೋಗ್ಧಾ ಮಾ ಧರ್ಮಾನ್ಸಕಲಾನ್ನಶೀಃ ॥೮॥**

**ತತಃ ಕಲ್ಯಾಣರೂಪಾಭಿರ್ವಾಗ್ಭಿಸ್ತೇ ರುದ್ರಮಸ್ತುವನ್ ।**
**ಇಷ್ಟ್ವಾ ಚೈನಂ ತರ್ಪಯಿತ್ವಾ ಮಾನಯಾಂ ಚಕ್ರಿರೇ ತದಾ ॥೯॥**

**ತತಃ ಸ ಪಶುಮುತ್ಸೃಜ್ಯ ದೇವಯಾನೇನ ಜಗ್ಮಿವಾನ್ ।**
**ತತ್ರಾನುವಂಶೋ ರುದ್ರಸ್ಯ ತಂ ನಿಬೋಧ ಯುಧಿಷ್ಠಿರ ॥೧೦॥**

**ಅಯಾತಯಾಮಂ ಸರ್ವೇಭ್ಯೋ ಭಾಗೇಭ್ಯೋ ಭಾಗಮುತ್ತಮಮ್ ।**
**ದೇವಾಃ ಸಂಕಲ್ಪಯಾಮಾಸುರ್ಭಯಾದ್ರುದ್ರಸ್ಯ ಶಾಶ್ವತಮ್ ॥೧೧॥**

**ಇಮಾಂ ಗಾಥಾಮತ್ರ ಗಾಯನ್ನಪಃ ಸ್ಪೃಶತಿ ಯೋ ನರಃ ।**
**ದೇವಯಾನೋಽಸ್ಯ ಪನ್ಥಾಶ್ಚ ಚಕ್ಷುಷಾಭಿಪ್ರಕಾಶತೇ ॥೧೨॥**

ವೈತರಣೀನದಿಯ ಈ ತೀರಪ್ರದೇಶದಲ್ಲಿ ಒಮ್ಮೆ ಋಷಿ-ಮಹರ್ಷಿಗಳು ಯಾಗಮಾಡುತ್ತಿದ್ದಾಗ ರುದ್ರದೇವನು ಯಜ್ಞಪಶುವನ್ನು ಹಿಡಿದು ಅದು ತನಗೆ ಸೇರತಕ್ಕ ಭಾಗವಾಗಿದೆಯೆಂದು ಹೇಳಿ ತೆಗೆದುಕೊಂಡು ಹೊರಟುಹೋದನು. ದೇವತೆಗಳೆಲ್ಲರೂ ಅವನನ್ನು ಹಿಂಬಾಲಿಸಿ ಹೋಗಿ ಪರಶಿವನನ್ನು ಕುರಿತು ಹೇಳಿದರು :

"ಪಶುಪತಿಯೇ! ಇತರರಿಗೆ ಸೇರಬೇಕಾದ ಭಾಗವನ್ನು ವಿನಾಶಗೊಳಿಸಬೇಡ. ಧರ್ಮಸಾಧನಭೂತವಾದ ಯಜ್ಞದ ಹವಿರ್ಭಾಗಗಳೆಲ್ಲವನ್ನೂ ನೀನೊಬ್ಬನೇ ಆಶಿಸಬೇಡ."

ದೇವತೆಗಳ ಆ ಮಾತಿನಿಂದ ರುದ್ರನು ಪ್ರಸನ್ನನಾಗಲಿಲ್ಲ. ಪುನಃ ದೇವತೆಗಳು ಕಲ್ಯಾಣಕರವಾದ ಮಂಗಳಸ್ತೋತ್ರಗಳಿಂದ ಪರಶಿವನನ್ನು ಸ್ತೋತ್ರಮಾಡಿದರು. ಪರಮೇಶ್ವರನನ್ನು ಪೂಜಾದಿಗಳಿಂದಲೂ, ಹೋಮ-ಯಾಗಾದಿಗಳಿಂದಲೂ ಸತ್ಕರಿಸಿ ಗೌರವಿಸಿದರು. ಅದರಿಂದ ಪ್ರಸನ್ನನಾದ ಪರಶಿವನು ಯಜ್ಞಪಶುವನ್ನು ದೇವತೆಗಳಿಗೆ ಬಿಟ್ಟುಕೊಟ್ಟು ದೇವಮಾರ್ಗದ ಮೂಲಕವಾಗಿ ಹೊರಟುಹೋದನು. ರುದ್ರನು ಹೀಗೆ ಮಾಡಲು ಕಾರಣವಿಲ್ಲದಿರಲಿಲ್ಲ. ದೇವತೆಗಳು ಅದಕ್ಕೆ ಮೊದಲು ರುದ್ರನಿಗೆ ಸರಿಯಾಗಿ ಹವಿ

ಭಾಗವನ್ನೇ ಕೊಡುತ್ತಿರಲಿಲ್ಲ. ಈ ಕಾರಣದಿಂದ ರುದ್ರನು ಕುಪಿತನಾಗಿ ಯಜ್ಞಪಶುವನ್ನೇ ಅಪಹರಿಸಿದನು. ಅಲ್ಲಿಂದ ಮುಂದೆ ದೇವತೆಗಳು ರುದ್ರ ದೇವನಿಗೆ ಹೆದರಿ ಎಲ್ಲರಿಗಿಂತಲೂ ಹೆಚ್ಚಾದ ಮತ್ತು ಉತ್ತಮವಾದ ಹವಿರ್ಭಾಗವನ್ನು ರುದ್ರನಿಗೆ ಅರ್ಪಿಸುವ ಸಂಕಲ್ಪಮಾಡಿದರು.

ಯುಧಿಷ್ಠಿರ! ಈ ಕಥೆಯನ್ನು ಸ್ಮರಿಸಿಕೊಂಡು ಯಾವನು ಈ ವೈತರಣೀನದಿಯಲ್ಲಿ ಸ್ನಾನಮಾಡುವನೋ–ಅವನು ತನ್ನ ಚರ್ಮಚಕ್ಷುಸ್ಸಿನಿಂದಲೇ ದೇವಲೋಕದ ಮಾರ್ಗವನ್ನು ನೋಡಲು ಸಮರ್ಥನಾಗುತ್ತಾನೆ."

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಲೋಮಶರು ಹೀಗೆ ಹೇಳಿದನಂತರ ಪಾಂಡುವಿನ ಮಕ್ಕಳೆಲ್ಲರೂ ದ್ರೌಪದಿಯಿಂದೊಡಗೂಡಿ ಕಥೆಯನ್ನು ಪುನಶ್ಚರಣೆಮಾಡುತ್ತಾ ವೈತರಣೀನದಿಯಲ್ಲಿ ಸ್ನಾನಮಾಡಿ ಪಿತೃದೇವತೆಗಳಿಗೆ ತರ್ಪಣವನ್ನಿತ್ತರು.

ಯುಧಿಷ್ಠಿರನು ವೈತರಣೀನದಿಯಲ್ಲಿ ಸ್ನಾನಮಾಡಿದನಂತರ ತನಗಾದ ಅನುಭವವನ್ನು ಲೋಮಶರೊಡನೆ ಹೇಳಿದನು :

"ಲೋಮಶರೇ! ನೀವು ಹೇಳಿದಂತೆ ವಿಧಿಪೂರ್ವಕವಾಗಿ ಈ ನದಿಯಲ್ಲಿ ಸ್ನಾನಮಾಡಿದ ಕಾರಣದಿಂದ ನನಗೆ–ನಾನು ಮನುಷ್ಯನೆಂಬ ಭಾವನೆಯೇ–ಉಂಟಾಗುತ್ತಿಲ್ಲ. (ನಾನು ದೇವತೆಯಾಗಿಬಿಟ್ಟಿರುವೆನೆಂದು ಭಾವಿಸುತ್ತಿದ್ದೇನೆ.) ನೀವು ಹೇಳಿದಂತೆ ನನ್ನ ಈ ಕಣ್ಣುಗಳಿಂದಲೇ ಊರ್ಧ್ವ ಲೋಕಗಳೆಲ್ಲವನ್ನೂ ಕಾಣುತ್ತಿದ್ದೇನೆ. ನಾವು ಕೇಳುತ್ತಿರುವ ಈ ಶಬ್ದವೂ ಕೂಡ ಜಪಮಾಡುತ್ತಿರುವ ವೈಖಾನಸರ ಶಬ್ದವೇ ಆಗಿರುತ್ತದೆ. ಮಹಾತ್ಮರಾದ ಅವರು ತದೇಕಚಿತ್ತರಾಗಿ ಕುಳಿತು ಜಪ-ತಪಾದಿಗಳನ್ನು ಮಾಡುತ್ತಿರುವುದನ್ನು ನಾನು ಕಾಣುತ್ತಿದ್ದೇನೆ." (ಯುಧಿಷ್ಠಿರನಿಗೆ ಅದಕ್ಕೆ ಮೊದಲು ಶಬ್ದವು ಮಾತ್ರವೇ ಕೇಳುತ್ತಿದ್ದಿತು. ವೈತರಣೀನದಿಯಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿದನಂತರ ಊರ್ಧ್ವಲೋಕದಲ್ಲಿ ತಪಶ್ಚರಣೆಮಾಡುತ್ತಿದ್ದ ವೈಖಾನಸರೂ ಧರ್ಮರಾಜನಿಗೆ ಕಾಣಿಸಿದರು.)

ಅದಕ್ಕೆ ಉತ್ತರವಾಗಿ ಲೋಮಶರು ಹೇಳಿದರು :

"ಯುಧಿಷ್ಠಿರ! ನಿನ್ನ ಕಿವಿಗಳಲ್ಲಿ ಮೊಳಗುತ್ತಿರುವ ಈ ಶಬ್ದವು

ಮುನ್ನೂರು ಸಾವಿರ ಯೋಜನಗಳ (ಮೂರು ಲಕ್ಷಯೋಜನಗಳ) ದೂರದಿಂದ ಬರುತ್ತಿದೆ. ಮೌನಿಯಾಗಿ ಸ್ವಲ್ಪಕಾಲ ಹಾಗೆಯೇ ಕುಳಿತುಕೋ. ಈಗ ನಿನ್ನ ಕಣ್ಣಿಗೆ ಗೋಚರವಾಗುತ್ತಿರುವುದು ಸಾಕ್ಷಾತ್ ಸ್ವಯಂಭುವಿನ ದಿವ್ಯವಾದ ವನವಾಗಿರುತ್ತದೆ. ಆ ವನದಲ್ಲಿಯೇ ಹಿಂದೆ ಮಹಾಪ್ರತಾಪಶಾಲಿಯಾದ ವಿಶ್ವಕರ್ತೃವಾದ ಬ್ರಹ್ಮನು ಯಜ್ಞವನ್ನು ಮಾಡಿದನು. ಆ ಮಹಾಯಜ್ಞದಲ್ಲಿಯೇ ಪರ್ವತಗಳಿಂದಲೂ–ನದಿಗಳಿಂದಲೂ ಕೂಡಿರುವ ಭೂಮಿಯು ಯಜ್ಞದ ಪುರೋಹಿತರಾದ ಕಶ್ಯಪಮಹರ್ಷಿಗಳಿಗೆ ಸ್ವಯಂಭು ಬ್ರಹ್ಮನಿಂದ ದಕ್ಷಿಣಾರೂಪವಾಗಿ ಕೊಡಲ್ಪಟ್ಟಿತು. ಪುರೋಹಿತರಿಗೆ ತನ್ನನ್ನು ದಕ್ಷಿಣಾರೂಪವಾಗಿ ಬ್ರಹ್ಮನು ಕೊಟ್ಟಿದ್ದರಿಂದ ಭೂದೇವಿಯು ಬಹುದುಃಖಿತಳಾದಳು. ಬಹುಖಿನ್ನಳಾದ ಮತ್ತು ಕೋಪಗೊಂಡ ಭೂದೇವಿಯು ಲೋಕೇಶ್ವರನಾದ ಮತ್ತು ಪ್ರಭುವಾದ ಬ್ರಹ್ಮನನ್ನು ಕುರಿತು ಹೀಗೆಂದು ಹೇಳಿದಳು : "ಪೂಜ್ಯನೇ! ನೀನು ನನ್ನನ್ನು ಯಾವನೋ ಒಬ್ಬ ಸಾಮಾನ್ಯ ಮನುಷ್ಯನಿಗೆ ದಕ್ಷಿಣಾರೂಪವಾಗಿ ಕೊಟ್ಟಿರುವುದು ಖಂಡಿತವಾಗಿಯೂ ಯೋಗ್ಯವಲ್ಲ. ನಿನ್ನ ಈ ದಾನವು ವ್ಯರ್ಥವಾಗುವಂತೆ ನಾನು ಮಾಡುತ್ತೇನೆ. ಹೇಗೆಂದರೆ : ನಾನೀಗಲೇ ಕಶ್ಯಪರ ವಶಳಾಗದೇ ಪಾತಾಳಕ್ಕೆ ಹೋಗಿ ಸೇರಿಕೊಂಡು ಬಿಡುತ್ತೇನೆ." ಭೂದೇವಿಯು ಹೀಗೆ ಹೇಳಿ ಪಾತಾಳಕ್ಕೆ ಹೊರಟೇ ಹೋದಳು. ಭೂದೇವಿಯು ಖಿನ್ನಳಾಗಿ ಹೊರಟುಹೋದುದನ್ನು ನೋಡಿ ಮಹರ್ಷಿಗಳಾದ ಕಶ್ಯಪರು ಅವಳ ಖೇದ-ಕೋಪಗಳ ಉಪಶಮನಾರ್ಥವಾಗಿ ಅವಳನ್ನು ಕುರಿತು ತಪಸ್ಸನ್ನು ಮಾಡಲು ಉಪಕ್ರಮಿಸಿದರು. ಕಶ್ಯಪರ ಅನೇಕ ವರ್ಷಗಳ ಘೋರತಪಸ್ಸಿನಿಂದ ಸುಪ್ರೀತಳಾದ ಭೂದೇವಿಯು ಸಮುದ್ರದ ಮೂಲಕವಾಗಿ ಮೇಲೆ ಬಂದು ಯಜ್ಞವೇದಿಯ ರೂಪದಲ್ಲಿ ಉಪಸ್ಥಿತಳಾದಳು. ಅಲ್ಲಿ ಕಾಣುತ್ತಿರುವ ಯಜ್ಞವೇದಿಯೇ ಭೂದೇವಿಯಾಗಿದ್ದಾಳೆ. ಅದನ್ನು ಆರೋಹಣಮಾಡಿ ಕುಳಿತಲ್ಲಿ ನೀನು ಮಹಾವೀರ್ಯವಂತನಾಗುವೆ. ಆ ಯಜ್ಞವೇದಿಯು ಸಮುದ್ರದ ಕೆಳಭಾಗದವರೆಗೂ ಹೋಗಿ ಕೆಳಭಾಗದಲ್ಲಿರುವ ಭೂಮಿಯ ಮೇಲೆ ಉಪಸ್ಥಿತವಾಗಿರುವುದು. ನಿನಗೆ ಮಂಗಳವಾಗಲಿ. ನೀನು ಆ ಯಜ್ಞವೇದಿಯನ್ನು ಆರೋಹಣಮಾಡಿ ಸಮುದ್ರವನ್ನು ದಾಟುವವನಾಗು. ನೀನು ಆ ವೇದಿಯನ್ನು ಆರೋಹಣಮಾಡುತ್ತಿರುವಾಗ ನಾನು ನಿನಗೆ ಸ್ವಸ್ತ್ಯಯನಮಾಡುತ್ತಿರು

ತ್ತೇನೆ. ಏಕೆಂದರೆ : ಮನುಷ್ಯರ ಸ್ಪರ್ಶವಾದೊಡನೆಯೇ ವೇದಿಯು ಸಮುದ್ರದ ತಳಭಾಗವನ್ನು ಸೇರಿಬಿಡುತ್ತದೆ. (ನಾನು ಸ್ವಸ್ತಿವಾಚನಮಾಡು ವುದರಿಂದ ಹಾಗಾಗಲು ಅವಕಾಶವಾಗುವುದಿಲ್ಲ.)

ಯುಧಿಷ್ಠಿರ! ಈ ಮಹಾಮಂತ್ರವನ್ನು ನಿನಗುಪದೇಶಿಸುತ್ತೇನೆ.

**ಓಂ ನಮೋ ವಿಶ್ವಗುಪ್ತಾಯ ನಮೋ ವಿಶ್ವಪರಾಯ ತೇ ।**
**ಸಾಂನಿಧ್ಯಂ ಕುರು ದೇವೇಶ ಸಾಗರೇ ಲವಣಾಮ್ಭಸಿ ॥೨೬॥**

"ಪ್ರಪಂಚವನ್ನು ತನ್ನಲ್ಲಿ ಅಡಗಿಸಿಕೊಂಡಿರುವ ದೇವನಿಗೆ ನಮಸ್ಕಾರವು. ಈ ವಿಶ್ವದ ಹೊರಗೂ ವ್ಯಾಪ್ತವಾಗಿರುವ ನಿನಗೆ ನಮಸ್ಕಾರವು. ದೇವೇಶನೇ! ಈ ಲವಣಸಮುದ್ರದಲ್ಲಿ ನಿನ್ನ ಸಾನ್ನಿಧ್ಯವುಂಟಾಗುವಂತೆ ಅನುಗ್ರಹಿಸು.

**ಅಗ್ನಿರ್ಮಿತ್ರೋ ಯೋನಿರಾಪೋಽಥ ದೇವ್ಯೋ**
**ವಿಷ್ಣೋ ರೇತಸ್ತ್ವಮಮೃತಸ್ಯ ನಾಭಿಃ ।**

ಸಮುದ್ರನೇ! ಅಗ್ನಿಯೂ, ಸೂರ್ಯನೂ ಮತ್ತು ಅಬ್ದೇವಿಯರೂ ನಿನಗೆ ಉತ್ಪತ್ತಿಸ್ಥಾನರಾಗಿದ್ದಾರೆ. ನೀನು ವಿಷ್ಣುವಿನ ರೇತೋರೂಪನಾಗಿರುವೆ. ನಿನ್ನ ನಾಭಿಯಲ್ಲಿ ಅಮೃತವಿದೆ (ನೀನು ಅಮೃತರೂಪವಾದ ನೀರಿಗೆ ಕೇಂದ್ರಸ್ಥಾನನು). ಅಂತಹ ನಿನಗೆ ನಮಸ್ಕಾರವು."

ಯುಧಿಷ್ಠಿರ! ನೀನು ಈ ಮಹಾಮಂತ್ರವನ್ನು ಉಚ್ಚಾರಣೆಮಾಡಿ ಕೊಂಡು ಸಮುದ್ರದಲ್ಲಿರುವ ವೇದಿಯನ್ನು ಈ ಕೂಡಲೇ ಆರೋಹಣ ಮಾಡುವವನಾಗು.

**ಅಗ್ನಿಶ್ಚ ತೇ ಯೋನಿರಿಡಾ ಚ ದೇಹೋ**
**ರೇತೋಧಾ ವಿಷ್ಣೋರಮೃತಸ್ಯ ನಾಭಿಃ ।**

"ಮಹಾಸಾಗರನೇ! ಅಗ್ನಿಯೇ ನಿನ್ನ ಯೋನಿಯು. ಇಡಾದೇವಿಯೇ ನಿನ್ನ ಶರೀರವು. ವಿಷ್ಣುವಿನ ರೇತಸ್ಸಿನಿಂದ ನೀನು ಹುಟ್ಟಿರುವೆ. ಅಮೃತ ಮಯವಾದ ನಾಭಿಕಮಲವನ್ನು ನೀನು ಹೊಂದಿರುವೆ. (ಅಮೃತದ ಉತ್ಪತ್ತಿ ಸ್ಥಾನನಾಗಿರುವೆ.)"

ಯುಧಿಷ್ಠಿರ! ಈ ಮಂತ್ರವನ್ನು ಜಪಮಾಡುತ್ತಾ ನೀನು ಸಮುದ್ರದಲ್ಲಿ ಸ್ನಾನಮಾಡಬೇಕು.

ಈ ಮಂತ್ರವನ್ನು ಜಪಮಾಡದೇ ದೇವಯೋನಿಯಾದ, ನದಿಗಳಿಗೆ ಒಡೆಯನಾದ ಮಹೋದಧಿಯನ್ನು ದರ್ಭೆಯ ತುದಿಯಿಂದಲೂ ಸ್ಪರ್ಶ ಮಾಡಬಾರದು. (ಈ ಮಂತ್ರವನ್ನು ಪುನಶ್ಚರಣೆಮಾಡದೇ ಸಮುದ್ರವನ್ನು ಮುಟ್ಟಬಾರದು.)"

ಜನಮೇಜಯ! ಸಮುದ್ರಾವಗಾಹನಕ್ಕೆ ಮೊದಲು ಲೋಮಶರು ಸಂಕಷ್ಟಾಪಹಾರಕವಾದ ಸ್ವಸ್ತಿವಾಚನವನ್ನು ಮಾಡಿದರು. ಅನಂತರದಲ್ಲಿ ಯುಧಿಷ್ಠಿರನು ಲೋಮಶರಿಂದ ಉಪದಿಷ್ಟವಾದ ಮಹಾಮಂತ್ರವನ್ನು ಪುನಶ್ಚರಣೆಮಾಡುತ್ತಾ ಸಮುದ್ರದಲ್ಲಿಳಿದು ಲೋಮಶರ ನಿರ್ದೇಶದಂತೆ ಸಕಲಕರ್ಮಗಳನ್ನೂ ಮುಗಿಸಿ ಮಹೇಂದ್ರಪರ್ವತಕ್ಕೆ ಹೋಗಿ ಆ ರಾತ್ರಿಯನ್ನು ಅಲ್ಲಿಯೇ ಕಳೆದನು."*

**ಓಂ ನಮೋ ವಿಶ್ವಗುಪ್ತಾಯ ನಮೋ ವಿಶ್ವಪರಾಯ ತೇ ।**
**ಸಾಂನಿಧ್ಯಂ ಕುರು ದೇವೇಶ ಸಾಗರೇ ಲವಣಾಮ್ಭಸಿ ॥**

**ಅಗ್ನಿರ್ಮಿತ್ರೋ ಯೋನಿರಾಪೋಽಥ ದೇವ್ಯೋ**
**ವಿಷ್ಣೋ ರೇತಸ್ತ್ವಮಮೃತಸ್ಯ ನಾಭಿಃ ।**
**ಅಗ್ನಿಶ್ಚ ತೇ ಯೋನಿರಿಡಾ ಚ ದೇಹೋ**
**ರೇತೋಧಾ ವಿಷ್ಣೋರಮೃತಸ್ಯ ನಾಭಿಃ ॥**

೧೧೪ನೆಯ ಅಧ್ಯಾಯವು ಮುಗಿಯಿತು.

---

* ಮಹಾಭಾರತದಲ್ಲಿ ಇಲ್ಲದ ತತ್ತ್ವಗಳಿಲ್ಲ. ಮಹಾಭಾರತದಲ್ಲಿಲ್ಲದ ಸ್ತೋತ್ರಗಳಿಲ್ಲ. ಒಂದೊಂದು ಪ್ರಕರಣದಲ್ಲಿಯೂ ಅತ್ಯಮೂಲ್ಯಗಳಾದ ಮಂತ್ರಗಳೂ ಸ್ತೋತ್ರಗಳೂ ಉಕ್ತವಾಗಿವೆ. ಆ ಮಹಾಮಂತ್ರಗಳನ್ನೂ ಸ್ತೋತ್ರಗಳನ್ನೂ ನಮ್ಮ ಪ್ರಿಯವಾಚಕರು ಪಠನಮಾಡಲೆಂದೇ ಯಥಾವತ್ತಾಗಿ ಕೊಡಲಾಗುತ್ತಿದೆ. ಸಮುದ್ರಸ್ನಾನವನ್ನು ಮಾಡುವಾಗ ಹೇಳಬೇಕಾದ ಈ ಮಂತ್ರವನ್ನೂ ವಾಚಕರು ಭಕ್ತಿಯಿಂದ ಪಠನಮಾಡಿ ಪುಣ್ಯವಂತರಾಗ ಬೇಕೆಂಬುದೇ ನಮ್ಮ ಆಶಯವಾಗಿದೆ.

೧೧೫ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಅಕೃತವ್ರಣನಿಂದ ಪರಶುರಾಮೋಪಾಖ್ಯಾನಕಥನ : ಗಾಧಿಕನ್ಯೆಯೊಡನೆ ಋಚೀಕನ ವಿವಾಹ : ಭೃಗುಮಹರ್ಷಿಯ ಅನುಗ್ರಹದಿಂದ ಜಮದಗ್ನಿಗಳ ಜನನ

ವೈಶಂಪಾಯನರು ಮಹಾಭಾರತದ ಪ್ರವಚನವನ್ನು ಮುಂದುವರಿಸುತ್ತಾ ಹೇಳುತ್ತಾರೆ :

"ಜನಮೇಜಯ! ಹಿಂದೆ ಹೇಳಿದಂತೆ ಯುಧಿಷ್ಠಿರನು ಮಹೇಂದ್ರ ಪರ್ವತದಲ್ಲಿ ರಾತ್ರಿಯನ್ನು ಕಳೆದು, ಬೆಳಗಾಗುತ್ತಲೇ ಸ್ನಾನ-ಸಂಧ್ಯಾವಂದನಾದಿಗಳನ್ನು ಮುಗಿಸಿಕೊಂಡು, ತನ್ನ ಅನುಜರೊಡನೆ ಆ ಪರ್ವತದಲ್ಲಿದ್ದ ಋಷಿ-ತಪಸ್ವಿಗಳೆಲ್ಲರನ್ನೂ ಸಂದರ್ಶಿಸಿ ಸತ್ಕರಿಸಿದನು. ಲೋಮಶರು ಪ್ರತಿಯೊಬ್ಬ ಮಹರ್ಷಿಗಳ ಸಮೀಪಕ್ಕೂ ಯುಧಿಷ್ಠಿರನನ್ನು ಕರೆದೊಯ್ದು ಅವನಿಗೆ ಅವರೆಲ್ಲರ ಪರಿಚಯವನ್ನೂ ಮಾಡಿಕೊಟ್ಟರು. ಈ ರೀತಿಯಾಗಿ ಭೃಗುವಂಶೀಯರನ್ನೂ, ಅಂಗೀರಸರನ್ನೂ, ವಸಿಷ್ಠವಂಶೀಯರನ್ನೂ, ಕಶ್ಯಪ ವಂಶೀಯರನ್ನೂ ಧರ್ಮಜನು ಸಂದರ್ಶಿಸಿ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಅವರಿಂದ ಆಶೀರ್ವಾದಗಳನ್ನು ಪಡೆದನು. ಬಳಿಕ ಪರಶು ರಾಮನ ಅನುಚರನಾದ ಅಕೃತವ್ರಣನೆಂಬ ಮಹಾತ್ಮನನ್ನು ಸಂದರ್ಶಿಸಿ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಬದ್ಧಾಂಜಲಿಯಾಗಿ ನಿಂತು ಯುಧಿಷ್ಠಿರನು ಹೇಳಿದನು :

"ಮಹರ್ಷಿಗಳೇ! ಭಗವಂತನಾದ ಪರಶುರಾಮನು ಯಾವಾಗ ಇಲ್ಲಿಗೆ ಬಂದು ಇಲ್ಲಿರುವ ಋಷಿ-ಮಹರ್ಷಿಗಳಿಗೆ ಸಂದರ್ಶನವನ್ನೀಯುತ್ತಾನೆ? ಅವನಿಲ್ಲಿಗೆ ಆಗಮಿಸಿದ ವೇಳೆಯಲ್ಲಿ ನಾನಿದ್ದು ಭೃಗುವಂಶೀಯನಾದ ಆ ಮಹಾತ್ಮನ ಸಂದರ್ಶನಪಡೆಯಬೇಕೆಂಬುದು ನನ್ನ ಅಭಿಲಾಷೆಯಾಗಿದೆ."

ಅದಕ್ಕುತ್ತರವಾಗಿ ಅಕೃತವ್ರಣನು ಧರ್ಮಜನಿಗೆ ಹೇಳಿದನು :

"ಧರ್ಮಜ! ನೀನು ಈ ಪವಿತ್ರಸ್ಥಳಕ್ಕೆ ಆಗಮಿಸಿರುವುದು ತ್ರಿಕಾಲ ಜ್ಞಾನಿಯಾದ ಪರಶುರಾಮನಿಗೆ ಈಗಾಗಲೇ ತಿಳಿದಿರುವುದು. ಮೇಲಾಗಿ

ಪರಶುರಾಮನು ನಿನ್ನ ವಿಷಯದಲ್ಲಿ ಸುಪ್ರೀತನೂ ಆಗಿರುವನು. ಆದುದರಿಂದ ಅವನು ಬಹುಕ್ಷಿಪ್ರದಲ್ಲಿಯೇ ನಿನಗೆ ದರ್ಶನವನ್ನೀಯಬಹುದು. ಇಲ್ಲಿರುವ ಋಷಿ-ಮಹರ್ಷಿಗಳು ಶುಕ್ಲಪಕ್ಷದ ಚತುರ್ದಶಿಯ ದಿನವೂ ಮತ್ತು ಅಷ್ಟಮಿಯ ದಿನವೂ ಪರಶುರಾಮನನ್ನು ಸಂದರ್ಶಿಸುತ್ತಾರೆ. ಈ ರಾತ್ರಿಯು ಕಳೆದ ನಂತರ ನಾಳೆಯೇ ಚತುರ್ದಶೀತಿಥಿಯಿರುತ್ತದೆ. ಆದುದರಿಂದ ನಾಳೆಯೇ ನೀನು ಜಟಾಧಾರಿಯಾದ, ಕೃಷ್ಣಾಜಿನವನ್ನು ಧರಿಸಿರುವ, ಮಹಾಮಹಿಮನಾದ ಪರಶುರಾಮನನ್ನು ಸಂದರ್ಶಿಸಬಹುದಾಗಿದೆ."

"ಮಹರ್ಷಿಗಳೇ! ನೀವು ಅನೇಕ ವರ್ಷಗಳಿಂದಲೂ ಮಹಾಮಹಿಮನಾದ ಪರಶುರಾಮನು ಮಾಡಿದ ಅದ್ಭುತಕಾರ್ಯಗಳೆಲ್ಲವನ್ನೂ ಪ್ರತ್ಯಕ್ಷವಾಗಿ ನೋಡಿಯೇ ಇರುವಿರಿ. ಬ್ರಾಹ್ಮಣವಂಶೀಯನಾದ ಪರಶುರಾಮನು ಕ್ಷತ್ರಿಯರನ್ನು ಯುದ್ಧದಲ್ಲಿ ಹೇಗೆ ಪರಾಜಯಗೊಳಿಸಿದನು? ಮತ್ತು ಕ್ಷತ್ರಿಯರ ಮೇಲಿನ ಅಂತಹ ದ್ವೇಷಕ್ಕೆ ಮೂಲಕಾರಣವಾವುದು?–ಎಂಬುದೆಲ್ಲವನ್ನೂ ವಿವರವಾಗಿ ನನಗೆ ತಿಳಿಸಬೇಕೆಂದು ಕೇಳಿಕೊಳ್ಳುತ್ತೇನೆ."

"ಯುಧಿಷ್ಠಿರ! ಭೃಗುವಂಶೀಯನಾದ ಪರಶುರಾಮನ ಅತ್ಯದ್ಭುತವಾದ ಮಹಾಖ್ಯಾನವನ್ನು ನಾನು ಬಹಳ ಸಂತೋಷದಿಂದಲೇ ನಿನಗೆ ಹೇಳುತ್ತೇನೆ. ದೇವಚರಿತಕ್ಕೆ ಸಮಾನವಾದ ಪರಶುರಾಮನ ಚರಿತ್ರೆಯನ್ನೂ, ಹೈಹಯರ ಅಧಿಪತಿಯಾದ ಕಾರ್ತವೀರ್ಯಾರ್ಜುನನ ಸಾಹಸವನ್ನೂ ಹೇಳುತ್ತೇನೆ. ಅರ್ಜುನನೆಂಬ ಹೆಸರಿನ ಆ ಹೈಹಯರಾಜನು ಪರಶುರಾಮನಿಂದ ಸಂಹರಿಸಲ್ಪಟ್ಟನು. ಆ ಕಾರ್ತವೀರ್ಯಾರ್ಜುನನಿಗೆ ಒಂದು ಸಾವಿರ ತೋಳುಗಳಿದ್ದುವು. ಭಗವಂತನಾದ ದತ್ತಾತ್ರೇಯನ ಅನುಗ್ರಹದಿಂದ ಸ್ವರ್ಣಮಯವಾದ ವಿಮಾನವನ್ನೂ ಅವನು ಪಡೆದಿದ್ದನು. ಅವನು ಪ್ರಪಂಚದಲ್ಲಿರುವ ಸಕಲಪ್ರಾಣಿಗಳ ಮತ್ತು ಸಕಲಭೂಭಾಗಗಳ ಪ್ರಭುತ್ವವನ್ನು ದತ್ತಾತ್ರೇಯನ ಅನುಗ್ರಹದಿಂದಲೇ ಪಡೆದಿದ್ದನು. ಅವನ ರಥಕ್ಕೆ ತಡೆಯೆಂಬುದೇ ಎಲ್ಲಿಯೂ ಇರಲಿಲ್ಲ. ಆ ರಥವು ಅರ್ಜುನನ ಇಚ್ಛೆಯಿದ್ದೆಡೆಗೆ ಕ್ಷಣಮಾತ್ರದಲ್ಲಿ ಅವ್ಯಾಹತವಾಗಿ ಪ್ರಯಾಣಮಾಡುತ್ತಿದ್ದಿತು. ಅಂತಹ ಪರಮಾದ್ಭುತವಾದ ರಥವಿದ್ದ ಕಾರಣದಿಂದಲೂ ಮತ್ತು ದತ್ತಾತ್ರೇಯನ

ದಿವ್ಯಾನುಗ್ರಹದಿಂದಲೂ ದರ್ಪಿತನಾದ ಕಾರ್ತವೀರ್ಯನು ರಥದಲ್ಲಿ ಕುಳಿತು ದೇವತೆಗಳನ್ನೂ, ಯಕ್ಷರನ್ನೂ, ಋಷಿ-ಮಹರ್ಷಿಗಳನ್ನೂ ಎಲ್ಲೆಡೆಗಳಲ್ಲಿಯೂ ಮರ್ದನಮಾಡತೊಡಗಿದನು. ಪ್ರಪಂಚದಲ್ಲಿ ಹುಟ್ಟಿದ ಸಕಲ ಪ್ರಾಣಿಗಳನ್ನೂ ಅವನು ಪೀಡಿಸತೊಡಗಿದನು. ಅವನು ಕೊಡುತ್ತಿದ್ದ ಹಿಂಸೆಯನ್ನು ತಾಳಲಾರದೇ ದೇವತೆಗಳು ಮಹಾತ್ಮರಾದ ಮಹರ್ಷಿಗಳಿಂದೊಡಗೂಡಿ ದೇವದೇವನಾದ, ದೇವಶತ್ರುಗಳ ಧ್ವಂಸಕನಾದ, ಸತ್ಯಪರಾಕ್ರಮನಾದ ವಿಷ್ಣುವನ್ನು ಕುರಿತು ಸ್ತೋತ್ರಮಾಡುತ್ತಾ ಹೇಳಿದರು :

**ಭಗವನ್ಭೂತರಕ್ಷಾರ್ಥಮರ್ಜುನಂ ಜಹಿ ವೈ ಪ್ರಭೋ ।**
**ವಿಮಾನೇನ ಚ ದಿವ್ಯೇನ ಹೈಹಯಾಧಿಪತಿಃ ಪ್ರಭುಃ ।**
**ಶಚೀಸಹಾಯಂ ಕ್ರೀಡನ್ತಂ ಧರ್ಷಯಾಮಾಸ ವಾಸವಮ್ ॥೧೬॥**

"ಮಹಾಮಹಿಮನೇ! ಪ್ರಪಂಚದಲ್ಲಿರುವ ಪ್ರಾಣಿಗಳ ರಕ್ಷಣಾರ್ಥವಾಗಿ ಕಾರ್ತವೀರ್ಯಾರ್ಜುನನನ್ನು ನಿಗ್ರಹಿಸುವವನಾಗು. ಶಚೀದೇವಿಯೊಡನೆ ವಿಹರಿಸುತ್ತಿದ್ದಾಗ ನಮ್ಮ ರಾಜನಾದ ದೇವೇಂದ್ರನನ್ನೇ ಆ ಹೈಹಯನು ತನ್ನ ದಿವ್ಯವಾದ ವಿಮಾನದಲ್ಲಿ ಆಗಮಿಸಿ ಆಕ್ರಮಣಮಾಡಿದನು. ಆದುದರಿಂದ ಅವನನ್ನು ಈ ಕೂಡಲೇ ಸಂಹಾರಮಾಡು, ಪ್ರಭೋ!"

ದೇವತೆಗಳ ಮಾತನ್ನು ಕೇಳಿ ಪರಮದಯಾಳುವಾದ ಮಹಾವಿಷ್ಣುವು ಇಂದ್ರನನ್ನು ಪ್ರತ್ಯೇಕವಾಗಿ ಕರೆದು ಅವನೊಡನೆ ಕಾರ್ತವೀರ್ಯನ ನಿಗ್ರಹದ ವಿಷಯವಾಗಿ ಸಮಾಲೋಚನೆಯನ್ನು ನಡೆಸಿದನು. ಪ್ರಪಂಚದ ಸಕಲಪ್ರಾಣಿಗಳಿಗೂ ಹಿತಕರವಾದ, ದೇವೇಂದ್ರನಿಂದ ಹೇಳಲ್ಪಟ್ಟ ಮಾತುಗಳನ್ನು ಭಗವಂತನಾದ, ಲೋಕಪೂಜಿತನಾದ ಮಹಾವಿಷ್ಣುವು ಕೇಳಿ ಅದರಂತೆ ನಡೆಸಿಕೊಡುವುದಾಗಿ ಭರವಸೆಯನ್ನಿತ್ತು, ರಮ್ಯವಾದ ತನ್ನ ಬದರಿಕಾಶ್ರಮಕ್ಕೆ ತಪಸ್ಸುಮಾಡುವ ಸಲುವಾಗಿ ಹೊರಟುಹೋದನು.

ಯುಧಿಷ್ಠಿರ! ಅದೇ ಸಮಯದಲ್ಲಿ ಕಾನ್ಯಕುಬ್ಜದೇಶದಲ್ಲಿ ಮಹಾಪರಾಕ್ರಮಿಯಾದ ರಾಜನೊಬ್ಬನಿದ್ದನು. ಅವನಿಗೆ ಅಪಾರವಾದ ಸೈನ್ಯಬಲವಿದ್ದಿತು. ಅವನು ಪ್ರಪಂಚದಲ್ಲಿ ಗಾಧಿಯೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಕೆಲವು ಕಾಲಾನಂತರದಲ್ಲಿ ಗಾಧಿರಾಜನು ಅರಣ್ಯದಲ್ಲಿ ವಾಸ

ಮಾಡಲಿಚ್ಛಿಸಿ ಕಾಡಿಗೆ ಹೊರಟುಹೋದನು. ಗಾಧಿರಾಜನು ಕಾಡಿನಲ್ಲಿ ವಾಸ ಮಾಡುತ್ತಿರುವಾಗ ಅವನಿಗೆ ದೇವಲೋಕದ ಅಪ್ಸರೆಗೆ ಸಮಾನವಾದ ರೂಪವುಳ್ಳ ಮಗಳೊಬ್ಬಳು ಹುಟ್ಟಿದಳು. ಅವಳು ಪ್ರಾಪ್ತವಯಸ್ಕಳಾಗಲಾಗಿ ಭೃಗುಋಷಿಯ ಮಗನಾದ ಋಚೀಕನು ಅವಳನ್ನು ಪಾಣಿಗ್ರಹಣಮಾಡಿ ಕೊಳ್ಳಲಿಚ್ಛಿಸಿ ತನ್ನ ಆಶಯವನ್ನು ಗಾಧಿರಾಜನಿಗೆ ತಿಳಿಸಿದನು. ವ್ರತಾನುಷ್ಠಾನ ಗಳಲ್ಲಿ ನಿರತನಾದ, ಬ್ರಾಹ್ಮಣನಾದ ಋಚೀಕನಿಗೆ ಗಾಧಿಯು ಹೇಳಿದನು :

"ಬ್ರಾಹ್ಮಣೋತ್ತಮನೇ! ನಮ್ಮಲ್ಲಿ ಹಿಂದಿನಿಂದ ನಡೆದುಬಂದಿರುವ ಒಂದು ಸಂಪ್ರದಾಯವಿದೆ. ಆ ಸಂಪ್ರದಾಯಾನುಸಾರವಾಗಿ ನನ್ನ ಮಗಳನ್ನು ಪಾಣಿಗ್ರಹಣಮಾಡಿಕೊಳ್ಳಲು ಒಂದು ಸಾವಿರ ಕುದುರೆಗಳನ್ನು ಕನ್ಯಾಶುಲ್ಕ ವನ್ನಾಗಿ ವರನು ಕೊಡಬೇಕು. ಆ ಕುದುರೆಗಳ ಒಂದು ಕಿವಿಯು ಶ್ಯಾಮಲ ವರ್ಣದ್ದಾಗಿರಬೇಕು. ಕುದುರೆಗಳ ಬಣ್ಣವು ಬಿಳುಪಾಗಿರಬೇಕು ಮತ್ತು ಅವು ಬಹುವೇಗವಾದ ಗತಿಯುಳ್ಳವುಗಳಾಗಿರಬೇಕು. ಇಂತಹ ಕುದುರೆಗಳನ್ನು ಕನ್ಯಾಶುಲ್ಕವನ್ನಾಗಿ ತೆಗೆದುಕೊಂಡು ಹೆಣ್ಣನ್ನು ಮದುವೆಮಾಡಿಕೊಡುವುದು ನಮ್ಮ ಕುಲಾಚಾರವಾಗಿದೆ. ಆದರೆ ತಪಸ್ವಿಯಾದ ನಿನ್ನಿಂದ ಈ ರೀತಿ ಶುಲ್ಕ ವನ್ನು ಕೇಳುವುದೂ ಯುಕ್ತವಲ್ಲ. ನನ್ನ ಮಗಳನ್ನು ಪಾಣಿಗ್ರಹಣಮಾಡಿ ಕೊಳ್ಳಲು ಇಚ್ಛಿಸಿರುವ ನಿನ್ನಂತಹ ಮಹಾತ್ಮನಿಗೆ ಮಗಳನ್ನು ಕೊಡಲಾರೆನೆಂದು ಹೇಳುವ ಸಾಧ್ಯತೆಯೂ ಇಲ್ಲ."

ಗಾಧಿರಾಜನ ಮಾತುಗಳನ್ನು ಕೇಳಿ ಋಚೀಕನು ಹೇಳಿದನು :

"ನೀನಪೇಕ್ಷಿಸಿರುವ ಕನ್ಯಾಶುಲ್ಕವನ್ನು ನಾನು ಕೊಡಲು ಸಿದ್ಧನಿದ್ದೇನೆ. ಕುಲಾಚಾರಕ್ಕೆ ವಿರುದ್ಧವಾಗಿ ನಡೆಯಬೇಕಾದ ಕಾರಣವಿಲ್ಲ. ನಾನು ಕನ್ಯಾ ಶುಲ್ಕವನ್ನು ಕೊಟ್ಟನಂತರವೇ ನೀನು ಮಗಳನ್ನು ಪಾಣಿಗ್ರಹಣಮಾಡಿಕೊಡ ಬಹುದಲ್ಲವೇ?"

ಗಾಧಿಯು ಋಚೀಕನ ಮಾತನ್ನು ಸಂತಸದಿಂದ ಅಂಗೀಕರಿಸಿದನು.

ತಪಸ್ವಿಗಳಿಗೆ ಅಸಾಧ್ಯವಾದ ಕಾರ್ಯವು ಯಾವುದು ತಾನೇ ಇರು ವುದು? ಯುಧಿಷ್ಠಿರ! ತಪೋವ್ರತನಿಷ್ಠನಾದ ಋಚೀಕನು ಒಡನೆಯೇ ವರುಣನ ಬಳಿಗೆ ಹೋಗಿ ಹೇಳಿದನು :

“ವರುಣದೇವನೇ! ನನಗೆ ಒಂದು ಸಾವಿರ ಬಿಳಿಯ ಬಣ್ಣದ ಕುದುರೆಗಳನ್ನು ದಯಪಾಲಿಸು. ಆ ಕುದುರೆಗಳ ಒಂದು ಕಿವಿಯು ಶ್ಯಾಮಲವರ್ಣದಿಂದ ಕೂಡಿರಬೇಕು. ಆ ಕುದುರೆಗಳನ್ನು ನಾನು ಕನ್ಯಾಶುಲ್ಕವನ್ನಾಗಿ ಕೊಡಲು ಅಪೇಕ್ಷಿಸಿದ್ದೇನೆ. ಅವುಗಳನ್ನು ಶುಲ್ಕರೂಪವಾಗಿ ಕೊಟ್ಟು ನಾನು ಒಬ್ಬ ಕನ್ಯೆಯನ್ನು ಮದುವೆಯಾಗಬೇಕಾಗಿದೆ.”

ಮಹರ್ಷಿಯಾದ, ಮಹಾಮಹಿಮನಾದ ಋಚೀಕನ ಮಾತುಗಳನ್ನು ಕೇಳಿದೊಡನೆಯೇ ವರುಣದೇವನು ಋಷಿಕುಮಾರನ ಅಪೇಕ್ಷೆಯಂತೆ ಅವನು ಹೇಳಿದ ಲಕ್ಷಣಗಳಿಂದಲೇ ಕೂಡಿದ್ದ ಉತ್ತಮಜಾತಿಯ ಒಂದು ಸಾವಿರ ಕುದುರೆಗಳನ್ನು ಋಚೀಕನಿಗೆ ಕೊಟ್ಟನು. ಆ ಕುದುರೆಗಳೆಲ್ಲವೂ ಗಂಗಾನದಿಯ ಮೂಲಕವಾಗಿ ಹೊರಬಂದುವು. ಆ ಕುದುರೆಗಳು ಹೊರಬಂದ ಸ್ಥಳವು ಈಗಲೂ ಅಶ್ವತೀರ್ಥವೆಂದೇ ಪ್ರಸಿದ್ಧವಾಗಿರುವುದು. ಯುಧಿಷ್ಠಿರ!

ಋಚೀಕನು ಒಂದು ಸಾವಿರ ಕುದುರೆಗಳ ಸಮೇತನಾಗಿ ಬಂದೊಡನೆಯೇ ಗಾಧಿಯು ಕಾನ್ಯಕುಬ್ಜದಲ್ಲಿಯೇ ವಿವಾಹಮಹೋತ್ಸವಕ್ಕೆ ಸಿದ್ಧತೆಯನ್ನು ಮಾಡಿದನು.

ವರನ ಕಡೆಯವರಾಗಿ ದೇವತೆಗಳೇ ಆಗಮಿಸಿದರು. ಶುಭ ಮುಹೂರ್ತದಲ್ಲಿ ಮಹಾತ್ಮನಾದ ಗಾಧಿರಾಜನು ತನ್ನ ಮಗಳಾದ ಸತ್ಯವತಿಯನ್ನು ಋಚೀಕನಿಗೆ ಪಾಣಿಗ್ರಹಣಮಾಡಿಕೊಟ್ಟನು. ಈ ರೀತಿಯಾಗಿ ಋಚೀಕನು ಸಾವಿರ ಕುದುರೆಗಳನ್ನು ಕನ್ಯಾಶುಲ್ಕವನ್ನಾಗಿ ಕೊಟ್ಟು ದೇವತೆಗಳ ಸಮ್ಮುಖದಲ್ಲಿ ಸತ್ಯವತಿಯನ್ನು ಮದುವೆಮಾಡಿಕೊಂಡು ಸುಮಧ್ಯಮೆಯಾದ ಅವಳೊಡನೆ ಯಥೇಚ್ಛವಾಗಿ, ಸಂತೋಷದಿಂದ ವಿಹರಿಸುತ್ತಿದ್ದನು.

ಕೆಲವು ದಿನಗಳಾದನಂತರ ಒಮ್ಮೆ ಋಚೀಕನ ತಂದೆಯಾದ ಭೃಗು ಮಹರ್ಷಿಗಳು ತಮ್ಮ ಮಗನನ್ನೂ ಮತ್ತು ಸೊಸೆಯನ್ನೂ ನೋಡಿಕೊಂಡು ಹೋಗಲು ಋಚೀಕನ ಆಶ್ರಮಕ್ಕೆ ಆಗಮಿಸಿದರು. ತಮ್ಮ ಮಗನು ಅನುರೂಪಳಾದ ಮತ್ತು ರೂಪವತಿಯಾದ ಭಾರ್ಯೆಯನ್ನು ಪಡೆದುದಕ್ಕಾಗಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ದೇವಪೂಜ್ಯರಾದ ಭೃಗುಋಷಿಗಳನ್ನು ಋಚೀಕ-ಸತ್ಯವತಿಯರಿಬ್ಬರೂ ಪೂಜಿಸಿ ಯಥಾಯೋಗ್ಯವಾಗಿ

ಸತ್ಕರಿಸಿದರು. ಮಗನಿಂದಲೂ–ಸೊಸೆಯಿಂದಲೂ ಸತ್ಕೃತರಾದನಂತರ ಸುಖಾಸನದಲ್ಲಿ ಕುಳಿತು ವಿಶ್ರಾಂತಿಸುಖವನ್ನನುಭವಿಸುತ್ತಿದ್ದ ಭೃಗುಮುನಿಗಳ ಪಕ್ಕದಲ್ಲಿ ಋಚೀಕ-ಸತ್ಯವತಿಯರಿಬ್ಬರೂ ನಿಂತು ಬದ್ಧಾಂಜಲಿಗಳಾಗಿ ಮಹರ್ಷಿಗಳ ಆಜ್ಞೆಯೇನೆಂಬುದನ್ನು ನಿರೀಕ್ಷಿಸುತ್ತಿದ್ದರು. ಮಗನ ಮತ್ತು ಸೊಸೆಯ ಸತ್ಕಾರದಿಂದ ಸುಪ್ರೀತರಾಗಿದ್ದ ಭೃಗುಮಹರ್ಷಿಗಳು ವಿನೀತಳಾಗಿ ನಿಂತಿದ್ದ ತಮ್ಮ ಸೊಸೆಯನ್ನುದ್ದೇಶಿಸಿ ಹೇಳಿದರು :



"ಮಗಳೇ! ನೀನಪೇಕ್ಷಿಸುವ ಯಾವುದಾದರೂ ವರವನ್ನು ಕೇಳು. ನೀನು ಕೇಳುವ ಯಾವುದೇ ವರವನ್ನಾದರೂ ನಾನು ಕೊಡಲು ಸಿದ್ಧನಾಗಿರುವೆನು."

ಮಾವನ ಆ ಮಾತುಗಳನ್ನು ಕೇಳಿ ಸಂತೋಷಭರಿತಳಾದ ಸತ್ಯವತಿಯು ಕೈಜೋಡಿಸಿಕೊಂಡು ಭೃಗುಋಷಿಗಳಿಗೆ ಹೇಳಿದಳು :

“ಪೂಜ್ಯರೇ! ನನ್ನ ವಿಷಯದಲ್ಲಿ ನೀವು ಸುಪ್ರೀತರಾಗಿರುವುದಾದರೆ ನನಗೂ ಮತ್ತು ನನ್ನ ತಾಯಿಗೂ ಪುತ್ರರತ್ನಗಳನ್ನು ಅನುಗ್ರಹಿಸುವವರಾಗಿರಿ.”

ಮಹಾತ್ಮರಾದ ಭೃಗುಮಹರ್ಷಿಗಳು ‘ತಥಾಸ್ತು’ ಎಂದು ಅನುಗ್ರಹ ವಾಕ್ಯವನ್ನು ಹೇಳಿ, ಸೊಸೆಯೂ ಮತ್ತು ಅವಳ ತಾಯಿಯೂ ಅನುಸರಿಸ ಬೇಕಾದ ಕೆಲವು ನಿಯಮಗಳನ್ನು ವಿವರಿಸಿ ಹೇಳತೊಡಗಿದರು :

“ಸತ್ಯವತಿ! ಪುತ್ರಕಾಮನೆಯಿರುವ ನೀನೂ ಮತ್ತು ನಿನ್ನ ತಾಯಿಯೂ ಋತುಸ್ನಾನಮಾಡಿದನಂತರ ಪ್ರತ್ಯೇಕ-ಪ್ರತ್ಯೇಕವಾಗಿ ನಿನ್ನ ತಾಯಿಯು ಅಶ್ವತ್ಥವೃಕ್ಷವನ್ನೂ ಮತ್ತು ನೀನು ಅತ್ತೀಮರವನ್ನೂ ಆಲಿಂಗಿಸಿಕೊಳ್ಳಬೇಕು.” ಹೀಗೆ ಹೇಳಿ, ಭೃಗುಮಹರ್ಷಿಗಳು ಎರಡು ಚರುವಿನ ಪಾತ್ರೆಗಳನ್ನು ಸೊಸೆಯ ಕೈಗೆ ಕೊಡುತ್ತಾ ಹೇಳಿದರು :

“ಭದ್ರೇ! ವಿರಾಟ್ಪುರುಷನ ಮಂತ್ರಜಪಾನುಸಂಧಾನದಿಂದ ನಾನೀ ಚರುವನ್ನು ಸಿದ್ಧಗೊಳಿಸಿರುವೆನು. ನಾನು ಹಿಂದೆ ಹೇಳಿದಂತೆ ನೀನು ಉದುಂಬರವೃಕ್ಷವನ್ನೂ ನಿನ್ನ ತಾಯಿಯು ಅಶ್ವತ್ಥವೃಕ್ಷವನ್ನೂ ಆಲಿಂಗನ ಮಾಡಿಕೊಂಡನಂತರದಲ್ಲಿ ಈ ಪಾತ್ರೆಯಲ್ಲಿರುವ ಚರುವನ್ನು ನೀನೂ–ಆ ಪಾತ್ರೆಯಲ್ಲಿರುವ ಚರುವನ್ನು ನಿನ್ನ ತಾಯಿಯೂ ಉಪಭುಂಜಿಸಬೇಕು.”

ಇಷ್ಟು ಹೇಳಿ ಭೃಗುಮಹರ್ಷಿಗಳು ಅಂತರ್ಧಾನಹೊಂದಿದರು. ಮಾತಾ-ಪುತ್ರಿಯರ ಋತುಸ್ನಾನವು ಕಳೆದನಂತರ ಭೃಗುಋಷಿಗಳು ಹೇಳಿದ್ದಂತೆಯೇ ತಾಯಿ-ಮಕ್ಕಳಿಬ್ಬರೂ ವೃಕ್ಷಗಳನ್ನು ಆಲಿಂಗನ ಮಾಡಿಕೊಂಡು ಚರುವನ್ನು ಉಪಭುಂಜಿಸಿದರು. ಆದರೆ ಭೃಗುಋಷಿಗಳು ಹೇಳಿದುದಕ್ಕೆ ವಿರುದ್ಧವಾಗಿ ಸತ್ಯವತಿಯು ಅಶ್ವತ್ಥವೃಕ್ಷವನ್ನು ಆಲಿಂಗಿಸಿದಳು. ಅವಳ ತಾಯಿಯು ಅತ್ತೀಮರವನ್ನು ಆಲಿಂಗಿಸಿದಳು. ಚರುಭಕ್ಷಣೆಯಲ್ಲಿಯೂ ಇದೇ ವಿಧವಾದ ವಿಪರ್ಯಾಸವುಂಟಾಯಿತು.

ಬಹುದಿನಗಳು ಕಳೆದನಂತರ ತ್ರಿಕಾಲಜ್ಞರಾದ ಭೃಗುಮಹರ್ಷಿಗಳು ಚರುವಿನ ಭಕ್ಷಣದಲ್ಲಿಯೂ, ಮರಗಳ ಆಲಿಂಗನದಲ್ಲಿಯೂ ವಿಪರ್ಯಾಸವು ನಡೆದಿರುವುದನ್ನು ತಮ್ಮ ಜ್ಞಾನದೃಷ್ಟಿಯಿಂದ ಕಂಡುಕೊಂಡವರಾಗಿ ಋಚೀಕನ ಆಶ್ರಮಕ್ಕೆ ಆಗಮಿಸಿದರು. ಮಹರ್ಷಿಗಳು ಆಗಮಿಸಿದೊಡನೆಯೇ ಆದರಪೂರ್ವಕವಾಗಿ ಉಪಚರಿಸಿದ ಸತ್ಯವತಿಗೆ ಭೃಗುಮಹರ್ಷಿಗಳು ಹೇಳಿದರು :

**ವಿಪರೀತೇನ ತೇ ಸುಭ್ರೂರ್ಮಾತ್ರಾ ಚೈವಾಸಿ ವಞ್ಚಿತಾ ।**
**ಬ್ರಾಹ್ಮಣಃ ಕ್ಷತ್ರವೃತ್ತಿರ್ವೈ ತವ ಪುತ್ರೋ ಭವಿಷ್ಯತಿ ॥೪೦॥**

**ಕ್ಷತ್ರಿಯೋ ಬ್ರಾಹ್ಮಣಾಚಾರೋ ಮಾತುಸ್ತವ ಸುತೋ ಮಹಾನ್ ।**
**ಭವಿಷ್ಯತಿ ಮಹಾವೀರ್ಯಃ ಸಾಧೂನಾಂ ಮಾರ್ಗಮಾಸ್ಥಿತಃ ॥೪೧॥**

"ಮಗಳೇ! ನಾನು ಹೇಳಿದಂತೆ ನೀನು ಚರುವನ್ನು ಭಕ್ಷಿಸಿ ವೃಕ್ಷವನ್ನು ಆಲಿಂಗಿಸಿದ್ದರೂ–ಅದರಲ್ಲಿ ವಿಪರ್ಯಾಸವಾಗಿದೆ. ನಿನ್ನ ತಾಯಿಯು ನಿನ್ನನ್ನು ವಿಮೋಹಗೊಳಿಸಿದ್ದೇ ಈ ವಿಪರ್ಯಾಸಕ್ಕೆ ಕಾರಣವಾಯಿತು. ನೀನು ಆಲಿಂಗಿಸಬೇಕಾಗಿದ್ದ ಅತ್ತಿಯಮರವನ್ನು ನಿನ್ನ ತಾಯಿಯು ಆಲಿಂಗಿಸಿದಳು. ನೀನು ಭುಂಜಿಸಬೇಕಾಗಿದ್ದ ಚರುವನ್ನೂ ನಿನ್ನ ತಾಯಿಯೇ ಭಕ್ಷಿಸಿದಳು. ಇದರಿಂದಾಗಿ ನಿಮ್ಮಿಬ್ಬರಲ್ಲಿಯೂ ಹುಟ್ಟುವ ಮಕ್ಕಳಲ್ಲಿಯೂ ವಿಪರ್ಯಾಸ ವುಂಟಾಗುತ್ತದೆ. ನಿನ್ನ ಹೊಟ್ಟೆಯಲ್ಲಿ ಹುಟ್ಟುವ ಮಗನು ಜನ್ಮತಃ ಬ್ರಾಹ್ಮಣನೇ ಆದರೂ ಕ್ಷತ್ರಿಯೋಚಿತವಾದ ಕಾರ್ಯಗಳನ್ನೇ ಮಾಡುತ್ತಾನೆ ಮತ್ತು ಕ್ಷತ್ರಿಯನ ಪರಾಕ್ರಮವೇ ಅವನಿಗೂ ಇರುತ್ತದೆ. ಅಂತಯೇ ನಿನ್ನ ತಾಯಿಯ ಹೊಟ್ಟೆಯಲ್ಲಿ ಹುಟ್ಟುವವನು ಜನ್ಮತಃ ಕ್ಷತ್ರಿಯನಾದರೂ ಬ್ರಾಹ್ಮಣನ ಸ್ವಭಾವ ವನ್ನು ಹೊಂದಿದವನಾಗಿರುತ್ತಾನೆ. ನಿನ್ನ ತಾಯಿಯ ಹೊಟ್ಟೆಯಲ್ಲಿ ಹುಟ್ಟುವ ಆ ಶಿಶುವಿನ ಪರಾಕ್ರಮವೂ ಅಸಾಧಾರಣವಾಗಿರುತ್ತದೆ. ಅವನು ಯಾವಾ ಗಲೂ ಸತ್ಪುರುಷರಿಂದ ಅನುಸೃತವಾದ ಸನ್ಮಾರ್ಗದಲ್ಲಿಯೇ ಇರುತ್ತಾನೆ."

ಹೀಗೆ ಹೇಳಿದ ಭೃಗುಮುನಿಗಳ ಮಾತುಗಳನ್ನು ಕೇಳಿ ಸತ್ಯವತಿಯು ಪರಮದುಃಖಿತೆಯಾದಳು. ಜನ್ಮತಃ ಬ್ರಾಹ್ಮಣನಾಗಿದ್ದು ಕ್ಷತ್ರಿಯೋಚಿತ ವಾದ ಕ್ರಿಯೆಯುಳ್ಳ ಮಗನು ಅವಳಿಗೆ ಬೇಕಾಗಿರಲಿಲ್ಲ. ವಿಧಿನಿಯಮವನ್ನು

ಮೀರಲು ಸಾಧ್ಯವಾಗದೆಂಬುದೂ ಅವಳಿಗೆ ತಿಳಿದಿತ್ತು. ಆದರೂ ತನ್ನ ಮಾವನನ್ನು ಸತ್ಯವತಿಯು ಅಂಗಲಾಚಿ ಬೇಡಿದಳು :

**ತತಃ ಪ್ರಸಾದಯಾಮಾಸ ಶ್ವಶುರಂ ಸಾ ಪುನಃ ಪುನಃ ।**
**ನ ಮೇ ಪುತ್ರೋ ಭವೇದೀದೃಕ್ಕಾಮಂ ಪೌತ್ರೋ ಭವೇದಿತಿ ॥೪೨॥**

"ಪೂಜ್ಯರೇ! ನನಗೆ ಅಂತಹ ಮಗನು ಖಂಡಿತವಾಗಿಯೂ ಬೇಡ. ಸ್ವಧರ್ಮೋಚಿತವಾದ ಕರ್ಮಗಳನ್ನು ಮಾಡುವ ಮಗನನ್ನೇ ನನಗೆ ಅನುಗ್ರಹಿಸಿರಿ. ಒಂದು ವೇಳೆ ಹೀಗೆ ಮಾಡುವುದು ಸಾಧ್ಯವೇ ಇಲ್ಲವೆನ್ನು ವುದಾದರೆ ನನ್ನ ಮೊಮ್ಮಗನು ನೀವು ಹೇಳಿದ ರೀತಿಯಲ್ಲಿ ಜನಿಸಲಿ. ಮಗನು ಮಾತ್ರ ಹಾಗೆ ಹುಟ್ಟುವುದು ಬೇಡ. ಇಷ್ಟನ್ನಾದರೂ ಅನುಗ್ರಹಿಸಿರಿ" ಎಂದು ಬಾರಿ-ಬಾರಿಗೂ ಬೇಡಿಕೊಂಡಳು.

ಧರ್ಮಜ! ಸತ್ಯವತಿಯ ಪ್ರಾರ್ಥನೆಯನ್ನು ಅಂಗೀಕರಿಸಿ ಭೃಗು ಮುನಿಗಳು ಹಾಗೆಯೇ ಆಗಲೆಂದು ಅನುಗ್ರಹಿಸಿದರು.

ಮುಂದೆ ಕೆಲವು ದಿನಗಳು ಕಳೆದನಂತರದಲ್ಲಿ ಸತ್ಯವತಿಯು ತೇಜಃ ಪುಂಜಯುಕ್ತವಾದ ಶಿಶುವನ್ನು ಪ್ರಸವಿಸಿದಳು. ಆ ಶಿಶುವಿಗೆ ಜಮದಗ್ನಿ ಯೆಂದು ನಾಮಕರಣಮಾಡಿದರು. ವರ್ಷಗಳು ಕಳೆದಂತೆಲ್ಲಾ ಆ ಬಾಲಕನು ಮಹಾತೇಜಸ್ವಿಯಾಗಿಯೂ–ವರ್ಚಸ್ವಿಯಾಗಿಯೂ ಪ್ರಕಾಶಿಸಿದನು. ವೇದಾ ಧ್ಯಯನದಲ್ಲಿ ನಿರತನಾಗಿದ್ದನು. ಆಶ್ರಮದಲ್ಲಿದ್ದ ಸಕಲಮಹರ್ಷಿಗಳನ್ನೂ ಕೆಲವು ವರ್ಷಗಳಲ್ಲಿಯೇ ವೈದಿಕವಿದ್ಯೆಯಲ್ಲಿ ಮೀರಿಸಿಬಿಟ್ಟನು. ವೈದಿಕವಿದ್ಯೆ ಯಲ್ಲಿ ಮಾತ್ರವೇ ಅಲ್ಲ; ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಅವನಿಗೆ ಯಾರೊಬ್ಬರ ಉಪದೇಶವೂ ಇಲ್ಲದೇ ಧನುರ್ವೇದವೂ ಹೃದ್ಗತವಾಯಿತು. ನಾಲ್ಕು ವಿಧವಾದ ಅಸ್ತ್ರಗಳೂ ಅವನಿಗೊಲಿದು ಬಂದುವು."

ಬಹಳನೆಯ ಅಧ್ಯಾಯವು ಮುಗಿಯಿತು.

## ತಂದೆಯ ಆಜ್ಞೆಯಂತೆ ಪರಶುರಾಮನಿಂದ ತಾಯಿಯ ಶಿರಚ್ಛೇದನ: ಜಮದಗ್ನಿಗಳ ವರದಾನದಿಂದ ತಾಯಿಗೆ ಪುನರ್ಜನ್ಮ: ಪರಶುರಾಮನಿಂದ ಕಾರ್ತವೀರ್ಯಾರ್ಜುನನ ವಧೆ : ಕಾರ್ತವೀರ್ಯನ ಪುತ್ರರಿಂದ ಜಮದಗ್ನಿಗಳ ವಧೆ

ಅಕೃತವ್ರಣನು ಯುಧಿಷ್ಠಿರನಿಗೆ ಪರಶುರಾಮೋಪಾಖ್ಯಾನವನ್ನು ಮುಂದುವರಿಸುತ್ತಾ ಹೇಳುತ್ತಾನೆ :

"ಯುಧಿಷ್ಠಿರ! ಮಹಾತಪಸ್ವಿಗಳಾದ ಜಮದಗ್ನಿಗಳು ಯಾವಾಗಲೂ ವೇದಾಧ್ಯಯನನಿರತರಾಗಿರುತ್ತಿದ್ದರು. ಅದಕ್ಕಾಗಿಯೇ ನಿಯಮಪೂರ್ವಕ ವಾಗಿ ತಪಸ್ಸನ್ನು ಮಾಡಿ ಸಕಲವೇದಗಳನ್ನೂ (ದೇವತೆಗಳನ್ನೂ) ತಮ್ಮ ವಶಮಾಡಿಕೊಂಡರು. ವಿದ್ಯಾಭ್ಯಾಸವು ಪೂರ್ಣವಾದನಂತರ ಪ್ರಸೇನಜಿತ ನೆಂಬ ರಾಜನ ಬಳಿಗೆ ಹೋಗಿ ಅವನ ಮಗಳಾದ ರೇಣುಕೆಯನ್ನು ಪಾಣಿಗ್ರಹಣಮಾಡಿಕೊಡುವಂತೆ ಪ್ರಾರ್ಥಿಸಿದರು. ರಾಜನು ಜಮದಗ್ನಿಗಳ ಪ್ರಾರ್ಥನೆಗೆ ಮನ್ನಣೆಯನ್ನಿತ್ತು ರಾಜಕುಮಾರಿಯಾದ ರೇಣುಕಾದೇವಿಯನ್ನು ವಿಧಿಪೂರ್ವಕವಾಗಿ ಜಮದಗ್ನಿಗಳಿಗೆ ವಿವಾಹಮಾಡಿಕೊಟ್ಟನು. ಭಾರ್ಗವ ನಂದನರಾದ ಜಮದಗ್ನಿಗಳು ರೇಣುಕೆಯನ್ನು ಪರಿಗ್ರಹಿಸಿ ಅವಳೊಡನೆ ತಮ್ಮ ಆಶ್ರಮವನ್ನು ಸೇರಿ ಅನೇಕಾನೇಕವ್ರತಾನುಷ್ಠಾನಗಳನ್ನು ಮಾಡಲು ಉಪಕ್ರಮಿಸಿದರು. ರೇಣುಕೆಯೂ ಪತಿಯ ಸಕಲಕರ್ಮಗಳಲ್ಲಿಯೂ ಅವರಿಗೆ ಅನುಕೂಲಳಾಗಿ ವರ್ತಿಸುತ್ತಿದ್ದಳು. ಅದೇ ರೀತಿಯಲ್ಲಿ ಅನೇಕ ವರ್ಷಗಳು ಕಳೆದುವು. ಜಮದಗ್ನಿಗಳಿಗೆ ರೇಣುಕೆಯಲ್ಲಿ ಐವರು ಮಕ್ಕಳು ಹುಟ್ಟಿದರು. ಐದನೆಯವನೇ ತ್ರಿಲೋಕಪ್ರಸಿದ್ಧನಾದ ಮತ್ತು ನೀನೀಗ ಸಂದರ್ಶಿಸಬೇಕೆಂದಿರುವ ಪರಶುರಾಮನು. ಅವನು ಜನ್ಮತಃ ಕಡೆಯವನಾಗಿದ್ದರೂ ಶಕ್ತಿಯಲ್ಲಿ, ಪರಾಕ್ರಮದಲ್ಲಿ ಮತ್ತು ತೇಜಸ್ಸಿನಲ್ಲಿ ತನ್ನ ಹಿರಿಯರಾದ ನಾಲ್ವರನ್ನೂ ಮೀರಿಸಿದ್ದನು.

ಯುಧಿಷ್ಠಿರ! ಹೀಗೆಯೇ ಇರುತ್ತಿರಲಾಗಿ ಒಂದಾನೊಂದು ಸಮಯದಲ್ಲಿ ಜಮದಗ್ನಿಗಳ ಐವರು ಮಕ್ಕಳೂ ಹಣ್ಣು-ಹಂಪಲುಗಳನ್ನೂ,

ಸಮಿದ್ದರ್ಭೆಗಳನ್ನು ತರುವ ಸಲುವಾಗಿ ಅರಣ್ಯದಲ್ಲಿ ಬಹುದೂರ ಹೋಗಿದ್ದರು. ಪವಿತ್ರಾತ್ಮಳಾದ, ಶುದ್ಧಚಾರಿತ್ರ್ಯದಿಂದ ಕೂಡಿದ್ದ ರೇಣುಕಾದೇವಿಯು ಸ್ನಾನಾರ್ಥವಾಗಿ ಆಶ್ರಮಕ್ಕೆ ಅನತಿದೂರದಲ್ಲಿದ್ದ ಸರೋವರಕ್ಕೆ ಹೋದಳು. ಸ್ನಾನವನ್ನು ಮುಗಿಸಿ ಆಶ್ರಮಕ್ಕೆ ಹಿಂದಿರುಗುತ್ತಿದ್ದ ಸಮಯದಲ್ಲಿ ಅವಳ ದೃಷ್ಟಿಪಥವು–ಅದೇ ಸರೋವರದಲ್ಲಿ ತನ್ನ ಪತ್ನಿಯರೊಡನೆ ಜಲಕ್ರೀಡೆಯಾಡುತ್ತಿದ್ದ, ಚಿತ್ರರಥನೆಂದು ಪ್ರಸಿದ್ಧನಾದ, ಮಾರ್ತಿಕಾವರ್ತದೇಶದ ರಾಜನ ಕಡೆಗೆ ಆಕಸ್ಮಿಕವಾಗಿ ಹೊರಳಿತು. ಆ ರಾಜನು ಸುಂದರವಾದ ಕಮಲದ ಮಾಲೆಯನ್ನು ಧರಿಸಿದ್ದನು. ಅವನ ಅನುಪಮವಾದ ಮನಮೋಹಕ ರೂಪವನ್ನು ಕಂಡು ರೇಣುಕೆಯ ಮನಸ್ಸಿನಲ್ಲಿ ವ್ಯಾಮೋಹವು ಅಂಕುರಿಸಿತು. ಅವನೊಡನೆ ತಾನೂ ವಿಹರಿಸಬೇಕೆಂದು ರೇಣುಕೆಯು ಆಶಿಸಿದಳು. ಹಾಗೆ ಮಾಡುವುದು ಅಧರ್ಮವೆಂದು ರೇಣುಕೆಗೆ ತಿಳಿದಿತ್ತಾದರೂ ಮನ್ಮಥನನ್ನು ಪರಾಭವಗೊಳಿಸುವ ಚೈತನ್ಯವು ಅವಳಿಗಿರಲಿಲ್ಲ. ನೀರಿನಲ್ಲಿಯೇ ನಿಂತು ಮನಸ್ಸಿನಲ್ಲಿಯೇ ಚಿತ್ರರಥನೊಡನೆ ಕ್ಷಣಕಾಲ ರಮಿಸುತ್ತಲಿದ್ದು, ಮಾನಸಿಕವಾದ ವ್ಯಭಿಚಾರವನ್ನೆಸಗಿ ಆಶ್ರಮದ ಕಡೆಗೆ ಧಾವಿಸಿದಳು. ಆಶ್ರಮದೊಳಕ್ಕೆ ಪ್ರವೇಶಿಸುತ್ತಿದ್ದಾಗಲೇ ಮಾನಸಿಕವ್ಯಭಿಚಾರದಿಂದ ಅಪವಿತ್ರಗೊಂಡಿದ್ದ ಅವಳ ಹೃದಯವು ನಡುಗತೊಡಗಿತು. ತಪಸ್ವಿಗಳಾದ ಜಮದಗ್ನಿಗಳು ಒಡನೆಯೇ ಅವಳ ಮನಸ್ಸಿನ ವ್ಯಾಕುಲವನ್ನು ತಿಳಿದುಕೊಂಡರು. ಚಿತ್ರರಥನೊಡನೆ ಅವಳು ಮಾಡಿದ ಮಾನಸಿಕವ್ಯಭಿಚಾರದಿಂದ ರೇಣುಕೆಯು ಅಪವಿತ್ರಳಾಗಿರುವುದನ್ನೂ ಮತ್ತು ಅದರಿಂದಲೇ ಅವಳ ಮನಸ್ಸು ಉದ್ವೇಗಗೊಂಡಿರುವುದೆಂಬುದನ್ನೂ ಜಮದಗ್ನಿಗಳು ಜ್ಞಾನದೃಷ್ಟಿಯಿಂದ ತಿಳಿದುಕೊಂಡವರಾಗಿ ಅವಳನ್ನು ಧಿಕ್ಕರಿಸಿದರು. ಹಿರಿಯ ಮಗನಾದ ರುಮಣ್ವಂತನಿಂದ ಪ್ರಾರಂಭಿಸಿ ಸುಷೇಣ-ವಸು-ವಿಶ್ವಾವಸುಗಳೆಂಬ ನಾಲ್ವರು ಪುತ್ರರನ್ನೂ ಪ್ರತ್ಯೇಕ-ಪ್ರತ್ಯೇಕವಾಗಿ ಕರೆದು ತಾಯಿಯಾದ ರೇಣುಕಾದೇವಿಯನ್ನು ಸಂಹರಿಸುವಂತೆ ಆಜ್ಞಾಪಿಸಿದರು. ತಂದೆಯ ಮಾತನ್ನು ಕೇಳಿ ಮಕ್ಕಳೆಲ್ಲರೂ ಭ್ರಾಂತರಾದರು. ಅವರ ಹೃದಯವು ಒಡೆದುಹೋಯಿತು. ತಂದೆಗೆ ಪ್ರತ್ಯುತ್ತರವಾಗಿ ಅವರು ಒಂದು ಮಾತನ್ನೂ ಆಡಲಿಲ್ಲ. ತಂದೆಯ ಆಜ್ಞೆಯನ್ನು ನಿರ್ವಹಿಸಲು ನಾಲ್ವರಲ್ಲಿ ಯಾರೊಬ್ಬರೂ ಮುಂದೆ ಬರಲಿಲ್ಲ.

ಅದರಿಂದಾಗಿ ಜಮದಗ್ನಿಗಳ ಕೋಪವು ಉಲ್ಬಣಿಸಿ ನಾಲ್ವರನ್ನೂ ಶಪಿಸಿ ಬಿಟ್ಟರು. ತಂದೆಯ ಶಾಪದ ಕಾರಣದಿಂದಾಗಿ ಆ ನಾಲ್ವರು ಋಷಿ ಕುಮಾರರೂ ಒಡನೆಯೇ ಬುದ್ಧಿಶೂನ್ಯರಾಗಿ ಅರಣ್ಯದಲ್ಲಿ ವಾಸಮಾಡುವ ಪಶು-ಪಕ್ಷಿಗಳಂತಾದರು.



ಜಮದಗ್ನಿಗಳ ನಾಲ್ವರು ಮಕ್ಕಳೂ ಶಾಪಗ್ರಸ್ತರಾದನಂತರ ಕಡೆಯವನಾದ ಪರಶುರಾಮನು ಆಶ್ರಮವನ್ನು ಪ್ರವೇಶಿಸಿದನು. ಅವನನ್ನು ಕಂಡ ಕೂಡಲೇ ಜಮದಗ್ನಿಗಳು ಹೇಳಿದರು :

“ಮಗು! ಪಾಪಿಷ್ಠೆಯಾದ ಈ ನಿನ್ನ ತಾಯಿಯನ್ನು ಕೂಡಲೇ

ಸಂಹರಿಸು. 'ತಾಯಿಯ ವಧೆಮಾಡಬೇಕಲ್ಲಾ!'–ಎಂದು ದುಃಖಿಸಬೇಡ. ನನ್ನ ಆಜ್ಞೆಯನ್ನು ಕೂಡಲೇ ಪರಿಪಾಲಿಸು."

ತಂದೆಯ ಘೋರವಾದ ಆ ಆಜ್ಞೆಯನ್ನು ಕೇಳಿದ ಕೂಡಲೇ ಪರಶುರಾಮನು ಹಿಂದು-ಮುಂದು ಯೋಚಿಸದೇ ತನ್ನ ಕೈಯಲ್ಲಿದ್ದ ಕೊಡಲಿಯಿಂದ ತಾಯಿಯ ತಲೆಯನ್ನು ಕಡಿದುಬಿಟ್ಟನು. ಪತ್ನಿಯ ಶಿರಸ್ಸು ಭೂಮಿಯಲ್ಲಿ ಪತನವಾಗುತ್ತಿದ್ದಂತೆಯೇ ಜಮದಗ್ನಿಗಳ ಕೋಪವೂ ಇಳಿಮುಖವಾಯಿತು. ತಮ್ಮ ಆಜ್ಞೆಯನ್ನು ಪರಿಪಾಲಿಸಿದ ಪರಶುರಾಮನ ವಿಷಯದಲ್ಲಿ ಬಹು ಸುಪ್ರೀತರಾದ ಜಮದಗ್ನಿಗಳು ಮಗನಿಗೆ ಹೇಳಿದರು :

"ಮಗು! ನನ್ನ ಆಜ್ಞೆಯನ್ನು ಪರಿಪಾಲಿಸುವ ಧ್ಯೇಯದಿಂದ ನೀನು ಇಂತಹ ದುಷ್ಕರವಾದ ಕಾರ್ಯವನ್ನೇ ಮಾಡಿರುವೆ. ಇದರಿಂದ ನಾನು ಸುಪ್ರೀತನಾಗಿರುವೆನು. ಧರ್ಮಜ್ಞನೇ! ನಿನಗೆ ಬೇಕಾದ ವರಗಳನ್ನು ಕೇಳು. ಕೊಡಲು ಸಿದ್ಧನಾಗಿರುವೆನು."

ಅದಕ್ಕುತ್ತರವಾಗಿ ಪರಶುರಾಮನು ಕೈಜೋಡಿಸಿ ತಂದೆಯ ಮುಂದೆ ನಿಂತು ಈ ವರಗಳನ್ನು ಕೇಳಿದನು :

"ತಂದೆಯೇ! ನೀವು ನನ್ನ ಕಾರ್ಯದಿಂದ ಸುಪ್ರೀತರಾಗಿರುವಿರಾದರೆ–ನನ್ನ ತಾಯಿಯು ಪುನಃ ಜೀವಂತಳಾಗುವಂತೆ ಅನುಗ್ರಹಿಸಿರಿ. ಮಾತೃವಧೆಯನ್ನು ಮಾಡಿದೆನೆಂಬ ಸ್ಮರಣೆಯು ನನಗಾಗಲೀ, ಮಗನು ತನ್ನನ್ನು ವಧೆಮಾಡಿದನೆಂಬ ಸ್ಮರಣೆಯು ನನ್ನ ತಾಯಿಗಾಗಲೀ–ಉಂಟಾಗದಂತೆ ಅನುಗ್ರಹಿಸಿರಿ. ನಿಮ್ಮ ಆಜ್ಞೆಯಿಂದ ಮಾಡಿದ ಈ ಮಾತೃವಧೆಯ ದೋಷವು ನನ್ನನ್ನು ಸ್ಪರ್ಶಿಸದಿರಲಿ. ನನ್ನ ಈ ನಾಲ್ವರು ಅಣ್ಣಂದಿರೂ ನೀವು ಕೊಟ್ಟ ಶಾಪದಿಂದ ವಿಮುಕ್ತರಾಗಿ ಪೂರ್ವದ ಸ್ಥಿತಿಯನ್ನು ಪಡೆಯಲಿ. ಕಟ್ಟಕಡೆಯದಾಗಿ ನನಗೆ ಚಿರಾಯುಷ್ಯವನ್ನೂ–ಯುದ್ಧದಲ್ಲಿ ಅಜೇಯತ್ವವನ್ನೂ ಅನುಗ್ರಹಿಸಿರಿ."

ಯುಧಿಷ್ಠಿರ! ಮಹಾತಪಸ್ವಿಗಳಾದ ಜಮದಗ್ನಿಗಳು ಪರಮಪ್ರೀತರಾಗಿ ಪರಶುರಾಮನು ಕೇಳಿದ ವರಗಳೆಲ್ಲವನ್ನೂ ದಯಪಾಲಿಸಿದರು.

ಕೆಲವು ಕಾಲ ಕಳೆದನಂತರ ಒಂದು ದಿನ ಜಮದಗ್ನಿಗಳ ಮಕ್ಕಳೆಲ್ಲರೂ

ಕಂದ-ಮೂಲ-ಫಲಗಳನ್ನೂ, ಸಮಿದ್ದರ್ಭೆಗಳನ್ನೂ ತರಲು ಕಾಡಿಗೆ ಹೋಗಿದ್ದರು. ಆ ಸಮಯದಲ್ಲಿ ಅನೂಪದೇಶದೊಡೆಯನಾದ, ಮಹಾಪರಾಕ್ರಮಿಯಾದ ಕಾರ್ತವೀರ್ಯಾರ್ಜುನನು ಜಮದಗ್ನಿಗಳ ಆಶ್ರಮವನ್ನು ಪ್ರವೇಶಿಸಿದನು. ಆಶ್ರಮಕ್ಕೆ ಆಗಮಿಸಿದ ರಾಜನನ್ನು ಋಷಿಪತ್ನಿಯು ಆದರದಿಂದ ಸ್ವಾಗತಿಸಿ ಅರ್ಚಿಸಿದಳು. ಆದರೆ ಬಹುದರ್ಪಿತನಾಗಿದ್ದ ಕಾರ್ತವೀರ್ಯನು ಅವಳ ಆದರಪೂರ್ವಕವಾದ ಸ್ವಾಗತಕ್ಕೆ ಸುಪ್ರೀತನಾಗಲಿಲ್ಲ. ಆಶ್ರಮವನ್ನು ಲೂಟಿಮಾಡುವುದೇ ಕಾರ್ತವೀರ್ಯನ ಉದ್ದೇಶವಾಗಿತ್ತು. ಆಶ್ರಮದ ಸಮೀಪದಲ್ಲಿದ್ದ ಹೋಮಧೇನುವಿನ ಕರುವನ್ನು ಸೆಳೆದುಕೊಂಡು ಹೊರಟನು. ಕರುವನ್ನು ಬಿಡಿಸಿಕೊಳ್ಳಬೇಕೆಂದು ಆಶ್ರಮವಾಸಿಗಳು ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾದುವು. ಕರುವಿಗಾಗಿ ಕೂಗಿಕೊಳ್ಳುತ್ತಿದ್ದ ಹೋಮಧೇನುವಿನ ಆರ್ತನಾದವೂ ಕಾರ್ತವೀರ್ಯನನ್ನು ದುಷ್ಟಕಾರ್ಯದಿಂದ ವಿಮುಖನನ್ನಾಗಿ ಮಾಡಲಿಲ್ಲ. ಉದ್ಧತನಾದ ಕಾರ್ತವೀರ್ಯನು ಆಶ್ರಮದ ಸುತ್ತಲೂ ಇದ್ದ ಮರ-ಗಿಡ-ಬಳ್ಳಿಗಳೆಲ್ಲವನ್ನೂ ಕತ್ತರಿಸಿಹಾಕಿದನು. ಅವನ ದೌರ್ಜನ್ಯವನ್ನು ತಡೆಯಲು ಜಮದಗ್ನಿಗಳಿಂದಲೂ ಸಾಧ್ಯವಾಗಲಿಲ್ಲ. ವೀರ್ಯಮದದಿಂದ ಅವನು ಮಾಡುತ್ತಿದ್ದ ವಿಧ್ವಂಸನಕಾರ್ಯಗಳನ್ನು ನೋಡುತ್ತಾ ಮಹರ್ಷಿಗಳು ಸ್ತಬ್ಧರಾಗಿ ನಿಂತಿದ್ದರು. ಅವರ ಸಮಕ್ಷದಲ್ಲಿಯೇ ಕಾರ್ತವೀರ್ಯನು ಆಶ್ರಮಭೂಮಿಯನ್ನು ಹಾಳುಮಾಡಿ ಹೋಮಧೇನುವಿನ ಕರುವನ್ನು ಸೆಳೆದುಕೊಂಡು ಹೊರಟುಹೋದನು. ಕಾರ್ತವೀರ್ಯನು ಅಂತಹ ದುಷ್ಕಾರ್ಯವನ್ನು ಮಾಡಿ ಹೊರಟುಹೋದ ಸ್ವಲ್ಪ ಹೊತ್ತಿನ ಮೇಲೆ ಪರಶುರಾಮನು ಆಶ್ರಮಕ್ಕೆ ಬಂದನು. ಆಗಿನ ಆಶ್ರಮದ ದೃಶ್ಯವನ್ನು ಕಂಡು ಅವನು ಭ್ರಾಂತನಾದನು. ಜಮದಗ್ನಿಗಳೇ ಮುಂದೆ ಬಂದು, ಅಂದು ನಡೆದ ವಿಷಯಗಳೆಲ್ಲವನ್ನೂ ಮಗನಿಗೆ ವಿವರಿಸಿ ಹೇಳಿದರು. ಕರುವಿಗಾಗಿ 'ಅಂಬಾ, ಅಂಬಾ' ಎಂದು ಕಿರುಚಿಕೊಳ್ಳುತ್ತಿದ್ದ ಹೋಮಧೇನುವಿನ ಆರ್ತನಾದವನ್ನು ಕೇಳಿದೊಡನೆಯೇ ಪರಶುರಾಮನ ಹೃದಯದಲ್ಲಡಗಿದ್ದ ಕೋಪವು ಉಲ್ಬಣಿಸಿತು. ಒಡನೆಯೇ ಪರಶುರಾಮನು ಧನುರ್ಬಾಣಗಳನ್ನು ತೆಗೆದುಕೊಂಡು ಕಾರ್ತವೀರ್ಯನು ಹೋಗುತ್ತಿದ್ದ ಹಾದಿಯನ್ನು ಹಿಡಿದುಹೋಗಿ, ಸ್ವಲ್ಪಹೊತ್ತಿನಲ್ಲಿಯೇ ಅವನಿಗೆ ಅಭಿಮುಖವಾಗಿ ನಿಂತು ಸಿಂಹನಾದವನ್ನು ಮಾಡಿದನು.

ಮೃತ್ಯುವಿನ ಮಡಿಲಿನಲ್ಲಿದ್ದ ಕಾರ್ತವೀರ್ಯನಿಗೂ–ಪರಶುರಾಮನಿಗೂ ಘೋರವಾದ ಸಮರವು ಪ್ರಾರಂಭವಾಯಿತು.

ಶತ್ರುನಿಬರ್ಹಣನಾದ, ಭೃಗುವಂಶಪ್ರದೀಪನಾದ ಪರಶುರಾಮನು ತನ್ನ ಸಂಪೂರ್ಣಬಲವನ್ನೂ ಯೋಜಿಸಿ ಕಾರ್ತವೀರ್ಯನ ಮೇಲೆ ಬಾಣ



ಪ್ರಯೋಗಮಾಡಲು ಉಪಕ್ರಮಿಸಿದನು. ಸ್ವಲ್ಪಹೊತ್ತಿನಲ್ಲಿಯೇ ತನ್ನ ಭಲ್ಲಾಯುಧಗಳಿಂದ ಪರಿಘಾಯುಧಗಳಿಗೆ ಸಮಾನವಾಗಿದ್ದ ಎದುರಾಳಿಯ ಸಹಸ್ರ ಬಾಹುಗಳನ್ನೂ ಕತ್ತರಿಸಿಹಾಕಿದನು. ಅಗುಳಿಯ ಮರದಂತಿದ್ದ ಕಾರ್ತವೀರ್ಯನ ಸಹಸ್ರಬಾಹುಗಳೂ ತೊಪ-ತೊಪನೆ ಕೆಳಗುರುಳಿದುವು. ಮಹಾ ಪರಾಕ್ರಮಿಯಾಗಿದ್ದ ಪರಶುರಾಮನ ಮುಂದೆ ಮೃತ್ಯುವಿನ ದವಡೆಯಲ್ಲಿದ್ದ

ಕಾರ್ತವೀರ್ಯನ ಸಾಮರ್ಥ್ಯವೇನೂ ನಡೆಯಲಿಲ್ಲ. ಕಾರ್ತವೀರ್ಯನ ಪರಾಕ್ರಮವು ಕ್ಷಣ-ಕ್ಷಣಕ್ಕೂ ಕುಂದುತ್ತಿದ್ದಿತು. ಕಡೆಯಲ್ಲಿ ಪರಶುರಾಮನ ನಿಶಿತಾಸ್ತ್ರಕ್ಕೆ ಕಾರ್ತವೀರ್ಯನು ಬಲಿಯಾಗಿ ಮರಣಹೊಂದಿದನು.

ಕಾರ್ತವೀರ್ಯನ ಮರಣದಿಂದ ಬಹುದುಃಖಿತರಾದ ಅವನ ಪುತ್ರ-ಬಾಂಧವರು ಪರಶುರಾಮನ ಮುಂದೆ ನಿಂತು ಯುದ್ಧಮಾಡಲು ಶಕ್ತರಾಗಲಿಲ್ಲ. ಆದರೂ ತಮ್ಮ ರಾಜನನ್ನು ಕೊಂದುದಕ್ಕೆ ಪ್ರತೀಕಾರ ಮಾಡಬೇಕೆಂದು ಅವರೆಲ್ಲರೂ ನಿಶ್ಚಯಿಸಿ, ರಾಮನಿಲ್ಲದ ಸಮಯವನ್ನು ನೋಡಿ ಜಮದಗ್ನಿಗಳ ಆಶ್ರಮಕ್ಕೆ ಮುತ್ತಿಗೆ ಹಾಕಿದರು. ಜಮದಗ್ನಿಗಳು ಪರಾಕ್ರಮಿಗಳಾಗಿದ್ದರೂ ಕಾರ್ತವೀರ್ಯನ ಮಕ್ಕಳು ಮುತ್ತಿಗೆ ಹಾಕಿದ ಕಾಲದಲ್ಲಿ ಅವರು ತಪಸ್ಸಿನಲ್ಲಿ ನಿರತರಾಗಿದ್ದುದರಿಂದ ಶತ್ರುಗಳನ್ನು ಎದುರಿಸಿ ನಿಲ್ಲಲಿಲ್ಲ. ನಿರಾಯುಧರಾಗಿದ್ದ, ತಪೋನಿಷ್ಠರಾಗಿದ್ದ ಜಮದಗ್ನಿಗಳನ್ನು ಅಧರ್ಮಾಭಿಭೂತರಾಗಿದ್ದ ಕಾರ್ತವೀರ್ಯನ ಮಕ್ಕಳು ದಯಾರಹಿತವಾಗಿ ದರ-ದರನೆ ಎಳೆದಾಡಿದರು.

"ರಾಮ! ಪರಶುರಾಮ! ಎಲ್ಲಿಗೆ ಹೋಗಿರುವೆ? ನನ್ನನ್ನು ರಕ್ಷಣೆ ಮಾಡಲಾರೆಯಾ? ಈ ದುಷ್ಟರು ನನ್ನನ್ನು, ಪಶುವನ್ನು ಸೆಳೆದಾಡುವಂತೆ ಎಳೆದಾಡುತ್ತಿದ್ದಾರೆ. ಅಯ್ಯೋ! ನನಗೆ ರಕ್ಷಕರೇ ಇಲ್ಲವೇ? ರಾಮ! ಓಡಿ ಬಾ ರಾಮ!"

ಇವೇ ಮುಂತಾಗಿ ಹೇಳುತ್ತಿದ್ದ ಮಹರ್ಷಿಗಳ ಆರ್ತನಾದವೂ ಕಾರ್ತವೀರ್ಯನ ದುಷ್ಟಪುತ್ರರನ್ನು ದುಷ್ಟಕಾರ್ಯದಿಂದ ವಿಮುಖರನ್ನಾಗಿ ಮಾಡಲಿಲ್ಲ. ಜಮದಗ್ನಿಗಳು ರೋದಿಸುತ್ತಿದ್ದಂತೆಯೇ ಕಾರ್ತವೀರ್ಯನ ಮಕ್ಕಳು ಅವರನ್ನು ನಿಶಿತಾಸ್ತ್ರಗಳಿಂದ ಕೊಂದುಹಾಕಿ ಹೊರಟುಹೋದರು. ಕಾರ್ತವೀರ್ಯನ ದಾಯಾದರೆಲ್ಲರೂ ಹೊರಟುಹೋದನಂತರ, ಜಮದಗ್ನಿಗಳೂ ಪ್ರಾಣಗಳನ್ನು ತೊರೆದನಂತರ, ಪರಶುರಾಮನು ಸಮಿದ್ದರ್ಭೆಗಳನ್ನು ತೆಗೆದುಕೊಂಡು ಆಶ್ರಮದೊಳಗೆ ಪ್ರವೇಶಿಸಿ, ಗತಪ್ರಾಣನಾಗಿ ಬಿದ್ದಿದ್ದ ತಂದೆಯನ್ನು ನೋಡಿದನು. ತಂದೆಯು ಯಾವ ಕಾರಣದಿಂದ

ಮತ್ತು ಯಾರಿಂದ ಮೃತ್ಯುಪರವಶನಾದನೆಂಬುದನ್ನು ಊಹಿಸಲು ಪರಶು ರಾಮನಿಗೆ ಕಷ್ಟವಾಗಲಿಲ್ಲ. ಕಾರ್ತವೀರ್ಯನ ಮಕ್ಕಳೇ ಈ ಅಕಾರ್ಯವನ್ನು



ಮಾಡಿರುವರೆಂದು ನಿಶ್ಚಯಿಸಿದನು. ತಂದೆಯು ಈ ರೀತಿಯಲ್ಲಿ ಮೃತ್ಯುವಶ ನಾಗಬಾರದಾಗಿತ್ತೆಂದು ರಾಮನು ಬಹುವಾಗಿ ವಿಲಪಿಸಿದನು. ಅವನ ಶೋಕಕ್ಕೆ ಮೇರೆಯೇ ಇಲ್ಲವಾಯಿತು.

೧೧೬ನೆಯ ಅಧ್ಯಾಯವು ಮುಗಿಯಿತು.

## ತಂದೆಯ ಮರಣಕ್ಕಾಗಿ ಪರಶುರಾಮನ ಶೋಕ : ಇಪ್ಪತ್ತೊಂದು ಬಾರಿ ಕ್ಷತ್ರಿಯರ ವಿಧ್ವಂಸನ : ಯುಧಿಷ್ಠಿರನು ಪರಶುರಾಮನನ್ನು ಪೂಜಿಸಿದುದು

ಧರ್ಮಜ! ಗತಪ್ರಾಣನಾಗಿದ್ದ ತಂದೆಯ ಪಕ್ಕದಲ್ಲಿ ಕುಳಿತು ರಾಮನು ರೋದಿಸತೊಡಗಿದನು :

**ಮಮಾಪರಾಧಾತ್ತೈಃ ಕ್ಷುದ್ರೈರ್ಹತಸ್ತ್ವಂ ತಾತ ಬಾಲಿಶೈಃ ।**
**ಕಾರ್ತವೀರ್ಯಸ್ಯ ದಾಯಾದೈರ್ವನೇ ಮೃಗ ಇವೇಶುಭಿಃ ॥೧॥**

**ಧರ್ಮಜ್ಞಸ್ಯ ಕಥಂ ತಾತ ವರ್ತಮಾನಸ್ಯ ಸತ್ಪಥೇ ।**
**ಮೃತ್ಯುರೇವಂವಿಧೋ ಯುಕ್ತಃ ಸರ್ವಭೂತೇಷ್ವನಾಗಸಃ ॥೨॥**

**ಕಿಂ ನು ತೈರ್ನ ಕೃತಂ ಪಾಪಂ ಯೈರ್ಭವಾಂಸ್ತಪಸಿ ಸ್ಥಿತಃ ।**
**ಅಯುಧ್ಯಮಾನೋ ವೃದ್ಧಃ ಸನ್ಹತಃ ಶರಶತೈಃ ಶಿತೈಃ ॥೩॥**

**ಕಿಂ ನು ತೇ ತತ್ರ ವಕ್ಷ್ಯನ್ತಿ ಸಚಿವೇಷು ಸುಹೃತ್ಸು ಚ ।**
**ಅಯುಧ್ಯಮಾನಂ ಧರ್ಮಜ್ಞಮೇಕಂ ಹತ್ವಾನಪತ್ರಪಾಃ ॥೪॥**

“ತಂದೆಯೇ! ನಿಮ್ಮ ಕೊಲೆಗೆ ನಾನೇ ಕಾರಣನು. ದೋಷವು ನನ್ನದೇ ಆಗಿರುವುದು. ನಾನೇ ನಿಮ್ಮ ಸಮೀಪದಲ್ಲಿದ್ದಿದ್ದರೆ ನೀವಿಂತಹ ದುರವಸ್ಥೆಯನ್ನು ಅನುಭವಿಸಬೇಕಾದ ಕಾರಣವಿರಲಿಲ್ಲ. ಅರಣ್ಯದಲ್ಲಿರುವ ಜಿಂಕೆಯನ್ನು ಬೇಟೆಯಾಡಿ ಕೊಲ್ಲುವಂತೆ–ಆ ಕ್ಷತ್ರಿಯಾಧಮರು ನಿರಾಯುಧರಾದ ನಿಮ್ಮನ್ನು ಕೊಂದುಹಾಕಿದ್ದಾರೆ. ತಂದೆಯೇ! ನೀವು ಯಾವಾಗಲೂ ಸನ್ಮಾರ್ಗ ಪ್ರವರ್ತಕರು. ಧರ್ಮಮಾರ್ಗವನ್ನು ಬಿಟ್ಟು ಯಾವಾಗಲೂ ವ್ಯವಹರಿಸಿದವರಲ್ಲ. ಪಾಪರಹಿತರು. ಇಂತಹ ಪರಮಧರ್ಮಿಷ್ಠರಾದ ನಿಮಗೆ ಈ ಪರಿಯಲ್ಲಿ ಮರಣವು ಹೇಗೆ ಉಂಟಾಯಿತು? ನಿರಾಯುಧರಾದ, ವೃದ್ಧರಾದ, ಕಾದಾಡಲಿಷ್ಟಪಡದ ನಿಮ್ಮ ಮೇಲೆ ನೂರಾರು ಬಾಣಗಳನ್ನು ಪ್ರಯೋಗಿಸಿ ನಿಮ್ಮನ್ನು ಕೊಂದುಹಾಕಿದ ಆ ದುಷ್ಟರಿಂದ ಮಹಾಪಾಪವು ಮಾಡಲ್ಪಡಲಿಲ್ಲವೇ? ನಿಶ್ಚಯವಾಗಿಯೂ ಅವರಿಂದು ಮಹಾಪಾಪಕಾರ್ಯವನ್ನೇ

ಮಾಡಿದ್ದಾರೆ. ನಿರಾಯುಧರಾದ, ಧರ್ಮಿಷ್ಠರಾದ, ಅಸಹಾಯಕರಾದ ಮತ್ತು ಪ್ರತಿರೋಧಮಾಡದ ನಿಮ್ಮನ್ನು ಕೊಂದ ವಿಷಯವನ್ನು ಕಾರ್ತವೀರ್ಯನ ಮಕ್ಕಳು ತಮ್ಮ ಸ್ನೇಹಿತರೊಡನೆ ಮತ್ತು ಮಂತ್ರಿಗಳೊಡನೆ ನಾಚಿಕೆಯಿಲ್ಲದೇ ಏನೆಂದು ಹೇಳಿಕೊಳ್ಳುವರು? ಮಹಾಪರಾಕ್ರಮಿಯಾದ ಕಾರ್ತವೀರ್ಯನ ಮಕ್ಕಳಾದ ಅವರಿಗೆ ನಿಮ್ಮನ್ನು ಕೊಲ್ಲಲು ನಾಚಿಕೆಯೂ ಉಂಟಾಗಲಿಲ್ಲವೇ?"

ಯುಧಿಷ್ಠಿರ! ಪರಶುರಾಮನು ಈ ರೀತಿಯಲ್ಲಿ ಹೇಳಿಕೊಳ್ಳುತ್ತಾ ಬಹುವಾಗಿ ರೋದನಮಾಡಿದನು. ತಂದೆಯ ದಹನಕ್ರಿಯೆಯನ್ನು ಯಥಾ ಶಾಸ್ತ್ರವಾಗಿ ನೆರವೇರಿಸಿದನು. ತಂದೆಯ ಮೃತಶರೀರವು ದಗ್ಧವಾದರೂ ರಾಮನ ಹೃದಯದಲ್ಲಡಗಿದ್ದ ಕೋಪವು ಶಾಂತವಾಗಲಿಲ್ಲ. ತಂದೆಯ ಮೃತ ಶರೀರವು ಧಗ-ಧಗನೆ ಉರಿಯುತ್ತಿದ್ದಂತೆ ಅವನ ಹೃದಯವನ್ನಾವರಿಸಿದ್ದ ಕೋಪಾಗ್ನಿಯೂ ಧಗ-ಧಗನೆ ಹತ್ತಿ ಉರಿಯಲಾರಂಭಿಸಿತು. ಆಗಲೇ ರಾಮನು–"ನಿರಾಯುಧರಾದ, ಧರ್ಮಿಷ್ಠರಾದ, ತಪೋನುಷ್ಠಾನಪರರಾದ, ವೃದ್ಧರಾದ ನಮ್ಮ ತಂದೆಯವರನ್ನು ಕೊಂದ ಪಾಪಿಷ್ಠರ ವಂಶವಾದ ಕ್ಷತ್ರಿಯ ಕುಲವನ್ನೇ ನಿರ್ಮೂಲಮಾಡಿಬಿಡುತ್ತೇನೆ"–ಎಂಬ ಘೋರವಾದ ಪ್ರತಿಜ್ಞೆ ಯನ್ನೂ ಮಾಡಿದನು.

ಯುಧಿಷ್ಠಿರ! ಪರಶುರಾಮನು ಮಹಾಪರಾಕ್ರಮಿಯು. ಯುದ್ಧದಲ್ಲಿ ಅಪ್ರತಿಹತನು. ವೀರೋಚಿತವಾದ ಮಹಾಶಕ್ತಿಯು ಅವನಲ್ಲಿದ್ದಿತು. ಅವನು ಸಾಕ್ಷಾತ್ ಯಮಧರ್ಮನಂತೆಯೇ ಕಾಣುತ್ತಿದ್ದನು. ಅಂತಹ ಪರಶುರಾಮನು ಕೃತಪ್ರತಿಜ್ಞನಾಗಿ ಕೊಡಲಿಯನ್ನು ಹೆಗಲಮೇಲೇರಿಸಿ ಕ್ಷತ್ರಿಯರ ವಿಧ್ವಂಸನಕ್ಕಾಗಿ ಹೊರಟೇಬಿಟ್ಟನು. ಮೊಟ್ಟಮೊದಲನೆಯದಾಗಿ ತನ್ನ ತಂದೆಯನ್ನು ಕೊಂದಿದ್ದ ಕಾರ್ತವೀರ್ಯನ ಮಕ್ಕಳ ಅನುಯಾಯಿಗಳಾಗಿದ್ದ ಅನೇಕ ಕ್ಷತ್ರಿಯರಾಜರನ್ನೂ ಯುದ್ಧದಲ್ಲಿ ಪರಾಜಯಗೊಳಿಸಿ ಸಂಹರಿಸಿದನು. ಇಪ್ಪತ್ತೊಂದು ಬಾರಿ ಭೂಮಿಯನ್ನು ಪ್ರದಕ್ಷಿಣೆಮಾಡಿ ಕ್ಷತ್ರಿಯಕುಲವನ್ನೇ ವಿನಾಶಗೊಳಿಸಿದನು.

ಈ ರೀತಿಯಲ್ಲಿ ಕ್ಷತ್ರಿಯಕುಲವನ್ನು ವಿನಾಶಮಾಡಿ ಅವರ ರಕ್ತದಿಂದ

ಸಮಂತಪಂಚಕವೆಂಬ ಪವಿತ್ರಸ್ಥಳದಲ್ಲಿ ಐದು ರಕ್ತಸರೋವರಗಳನ್ನೇ ನಿರ್ಮಾಣಮಾಡಿದನು. ಭೃಗುವಂಶಪ್ರದೀಪನಾದ ಪರಶುರಾಮನು ಆ ರಕ್ತದ ನೀರಿನಿಂದ ತನ್ನ ಪಿತೃದೇವತೆಗಳಿಗೆ ತರ್ಪಣವನ್ನಿತ್ತನು. ಆ ಸಮಯದಲ್ಲಿ ಪರಶುರಾಮನ ಪಿತಾಮಹನಾದ ಋಚೀಕನು ಸಶರೀರನಾಗಿ ಬಂದು ಮುಂದೆ ಘೋರಕರ್ಮವನ್ನು ಮಾಡದಂತೆ ಪರಶುರಾಮನನ್ನು ತಡೆದನು.



ಋಚೀಕಮಹರ್ಷಿಯ ಮಾತಿನಂತೆ ಮುಂದೆ ಪರಶುರಾಮನು ಕ್ಷತ್ರಿಯ ಕುಲದ ವಿಧ್ವಂಸನಕಾರ್ಯವನ್ನು ನಿಲ್ಲಿಸಿ, ಮಹಾಯಜ್ಞದಿಂದ ದೇವತೆಗಳಿ ಗೊಡೆಯನಾದ ಇಂದ್ರನನ್ನು ಸಂತರ್ಪಿಸಿ, ಕ್ಷತ್ರಿಯರನ್ನು ಧ್ವಂಸಮಾಡಿ ಸಂಪಾದಿಸಿದ್ದ ಅಖಂಡಭೂಮಂಡಲವನ್ನೂ ಋತ್ವಿಜರಿಗೆ ದಾನಮಾಡಿದನು.

ಮಹಾರಾಜ! ಪರಶುರಾಮನು ಆ ಮಹಾಯಜ್ಞಕ್ಕಾಗಿ ಇಪ್ಪತ್ತು ಗಜ (ಹತ್ತುಮಾರು) ಅಗಲವಾಗಿಯೂ, ಹದಿನೆಂಟು ಗಜ (ಒಂಭತ್ತುಮಾರು) ಎತ್ತರವಾಗಿಯೂ ಇದ್ದ ಸ್ವರ್ಣಮಯವಾದ ವೇದಿಯೊಂದನ್ನು ನಿರ್ಮಿಸಿದ್ದನು. ಆ ಸ್ವರ್ಣವೇದಿಯನ್ನು ಕಶ್ಯಪನೆಂಬ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟನು.

**ತಾಂ ಕಶ್ಯಪಸ್ಯಾನುಮತೇ ಬ್ರಾಹ್ಮಣಾಃ ಖಣ್ಡಶಸ್ತದಾ ।**
**ವ್ಯಭಜಂಸ್ತೇ ತದಾ ರಾಜನ್ಪ್ರಖ್ಯಾತಾಃ ಖಾಣ್ಡವಾಯನಾಃ ॥೧೩॥**

ಯಜ್ಞದಲ್ಲಿ ಭಾಗವಹಿಸಿದ್ದ ಋತ್ವಿಜರೆಲ್ಲರೂ ಕಶ್ಯಪನ ಅನುಮತಿ ಯನ್ನು ಪಡೆದು ಆ ಸ್ವರ್ಣವೇದಿಯನ್ನು ತುಂಡು-ತುಂಡುಮಾಡಿ ಹಂಚಿ ಕೊಂಡರು. ಹೀಗೆ ಮಾಡಿದ್ದರಿಂದ ಮುಂದೆ ಅವರಿಗೆ 'ಖಾಂಡವಾಯನರು' ಎಂದೇ ಹೆಸರಾಯಿತು.

ಕ್ಷತ್ರಿಯಕುಲವಿಧ್ವಂಸಕನಾದ, ಮಹಾಬಲಿಷ್ಠನಾದ ಪರಶುರಾಮನು ಕಶ್ಯಪನಿಗೆ ಈ ಪೃಥ್ವಿಯೆಲ್ಲವನ್ನೂ ದಾನವಾಗಿಕೊಟ್ಟು ತಾನೂ ಮಹಾಘೋರ ವಾದ ತಪಸ್ಸಿನಲ್ಲಿಯೇ ನಿರತನಾದನು.

ಯುಧಿಷ್ಠಿರ! ಅವನೀಗ ಪರ್ವತಗಳಿಗೆ ರಾಜನಂತಿರುವ ಈ ಮಹೇಂದ್ರಪರ್ವತದಲ್ಲಿ ವಾಸವಾಗಿದ್ದಾನೆ. ನಾನು ಹೇಳಿದ ರೀತಿಯಲ್ಲಿ ಕ್ಷತ್ರಿಯರಿಗೂ–ಪರಶುರಾಮನಿಗೂ ವೈಮನಸ್ಯವುಂಟಾಗಿ ರಾಮನು ತನ್ನ ಭುಜಬಲಪರಾಕ್ರಮಗಳಿಂದ ಕ್ಷತ್ರಿಯರೆಲ್ಲರನ್ನೂ ನಿಗ್ರಹಿಸಿ ಈ ಪೃಥ್ವಿಯನ್ನೇ ತನ್ನದನ್ನಾಗಿ ಮಾಡಿಕೊಂಡನು."

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಅಕೃತವ್ರಣನು ಯುಧಿಷ್ಠಿರನಿಗೆ ಪರಶುರಾಮನ ಸುಚರಿತವನ್ನು ಹೇಳಿದನು. ಅಕೃತವ್ರಣನು ಹೇಳಿದಂತೆಯೇ ಶುಕ್ಲಪಕ್ಷದ ಚತುರ್ದಶಿಯ ದಿವಸ ಪರಶುರಾಮನು ಮಹೇಂದ್ರಪರ್ವತದಲ್ಲಿದ್ದ ಬ್ರಾಹ್ಮಣ ರಿಗೂ, ಯುಧಿಷ್ಠಿರನಿಗೂ ಮತ್ತು ಅವನ ಸಹೋದರರಿಗೂ ದರ್ಶನವ ನ್ನಿತ್ತನು. ಪರಶುರಾಮನನ್ನು ಸಂದರ್ಶಿಸಿದೊಡನೆಯೇ ಮಹಾತ್ಮನಾದ ಯುಧಿಷ್ಠಿರನು ತನ್ನ ಅನುಜರಿಂದೊಡಗೂಡಿ ಪರಶುರಾಮನನ್ನು ಬಹುವಿಧ

ವಾಗಿ ಉಪಚರಿಸಿ ಸತ್ಕರಿಸಿದನು. ಪರಶುರಾಮನೊಡನಿದ್ದ ಬ್ರಾಹ್ಮಣರನ್ನೂ ಯಥೋಚಿತವಾಗಿ ಸತ್ಕರಿಸಿದನು. ಪರಶುರಾಮನು ಯುಧಿಷ್ಠಿರನನ್ನು ಅವನ ಧರ್ಮನಿಷ್ಠೆಗಾಗಿ ಪ್ರಶಂಸೆಮಾಡಿದುದಲ್ಲದೇ ಅವನನ್ನು ಅನುಗ್ರಹಿಸಿ, ಆ ರಾತ್ರಿಯಲ್ಲಿ ಮಹೇಂದ್ರಪರ್ವತದಲ್ಲಿಯೇ ತಂಗಬೇಕೆಂದೂ ನಿರ್ದೇಶಿಸಿದನು. ಯುಧಿಷ್ಠಿರನು ಪರಶುರಾಮನ ಮಾತಿನಂತೆ ಆ ರಾತ್ರಿ ಮಹೇಂದ್ರ ಪರ್ವತದಲ್ಲಿಯೇ ತಂಗಿದ್ದು ಮರುದಿನ ಬ್ರಾಹ್ಮಣರ ಅನುಮತಿಯನ್ನು ಪಡೆದು ತನ್ನ ಅನುಜರೊಡನೆ ದಕ್ಷಿಣಾಭಿಮುಖವಾಗಿ ಪ್ರಯಾಣಮಾಡಿದನು."

೧೧೭ನೆಯ ಅಧ್ಯಾಯವು ಮುಗಿಯಿತು.

೧೧೮ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಅನೇಕತೀರ್ಥಗಳ ಯಾತ್ರೆಯನ್ನು ಮುಗಿಸಿಕೊಂಡು ಪ್ರಭಾಸಕ್ಷೇತ್ರಕ್ಕೆ ಪ್ರಯಾಣಮಾಡಿದುದು : ಯಾದವರೊಡನೆ ಪಾಂಡವರ ಸಮಾಗಮ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಅನುಜರೊಡನೆಯೂ–ಪತ್ನಿಯೊಡನೆಯೂ ಮಹೇಂದ್ರಪರ್ವತದಿಂದ ಹೊರಟ ಯುಧಿಷ್ಠಿರನು ಸಮುದ್ರದ ತೀರಪ್ರದೇಶ ಗಳಲ್ಲಿ ಬಹುರಮ್ಯವಾಗಿಯೂ, ಪುಣ್ಯಪ್ರದವಾಗಿಯೂ, ಬ್ರಾಹ್ಮಣರಿಂದ ಸಂಸೇವ್ಯಮಾನವಾಗಿಯೂ ಇದ್ದ ಅನೇಕಾನೇಕ ತೀರ್ಥಗಳನ್ನು ಸಂದರ್ಶಿಸಿ, ಮುಂದೆ ಸಮುದ್ರಗಾಮಿನಿಯಾದ ಮಹಾನದಿಯ ತೀರಕ್ಕೆ ಪ್ರಯಾಣಮಾಡಿ ದನು. ಅಲ್ಲಿಯೂ ಸ್ನಾನಮಾಡಿ ಪಿತೃದೇವತೆಗಳಿಗೆ ತರ್ಪಣಾದಿಗಳನ್ನಿತ್ತು, ದೇವತೆಗಳನ್ನು ಅರ್ಚಿಸಿ, ಆ ಕ್ಷೇತ್ರಗಳಲ್ಲಿದ್ದ ಬ್ರಾಹ್ಮಣರಿಗೆ ದಾನ-ದಕ್ಷಿಣೆಗಳ ನ್ನಿತ್ತು, ಅಲ್ಲಿಂದ ಮುಂದೆ ಸಮುದ್ರಗಾಮಿನಿಯಾದ ಗೋದಾವರಿಯ ತೀರಕ್ಕೆ ಪ್ರಯಾಣಮಾಡಿದನು. ಪವಿತ್ರವಾದ ಆ ಗೋದಾವರೀನದಿಯಲ್ಲಿ ಯುಧಿ ಷ್ಠಿರನು ತನ್ನ ಪರಿವಾರದೊಡನೆ ಮಿಂದು ಸಕಲಪಾಪಗಳನ್ನೂ ಪರಿಹಾರ ಮಾಡಿಕೊಂಡು ದ್ರಾವಿಡಪ್ರದೇಶಕ್ಕೆ ಪ್ರಯಾಣಮಾಡಿದನು. ಆ ದೇಶದ ಸಮುದ್ರತೀರದಲ್ಲಿದ್ದ ಅಗಸ್ತ್ಯತೀರ್ಥವನ್ನೂ ಮತ್ತು ಐದು ನಾರೀತೀರ್ಥ

ಗಳನ್ನೂ ಸಂದರ್ಶಿಸಿದನು. ಆ ತೀರ್ಥಗಳಲ್ಲಿ ಸ್ನಾನಮಾಡಿದನಂತರ ಮುಂದೆ ಪ್ರಯಾಣಮಾಡಿ ಇನ್ನೂ ಅನೇಕತೀರ್ಥಗಳನ್ನೂ ಸಂದರ್ಶಿಸಿ ಸ್ನಾನ ಮಾಡಿದನು.

ಆ ಕ್ಷೇತ್ರಗಳ ಯಾತ್ರೆಯನ್ನು ಮಾಡುತ್ತಿದ್ದ ಕಾಲದಲ್ಲಿ ಅಲ್ಲಿದ್ದ ತಪಸ್ವಿಗಳ ಮುಖಾರವಿಂದದಿಂದ ಯುಧಿಷ್ಠಿರನು ತನ್ನ ಅನುಜನಾದ ಅರ್ಜುನನ ಅಮಾನುಷವಾದ ಕಾರ್ಯಗಳನ್ನು ಕೇಳುತ್ತಿದ್ದನು. ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನ ಅಗ್ರಜನಾದ ಯುಧಿಷ್ಠಿರನು ತಮ್ಮ ಕ್ಷೇತ್ರಕ್ಕೆ ಬಂದಿರುವುದನ್ನು ತಿಳಿದೊಡನೆಯೇ ಅಲ್ಲಿದ್ದ ಋಷಿ-ಮಹರ್ಷಿಗಳು ಯುಧಿಷ್ಠಿರನ ಪರಿವಾರವನ್ನು ಆದರದಿಂದ ಸ್ವಾಗತಿಸಿ ಅರ್ಜುನನನ್ನು ಬಹುವಾಗಿ ಶ್ಲಾಘಿಸುತ್ತಿದ್ದರು. ಅವರ ಮಾತುಗಳನ್ನು ಕೇಳಿ ಯುಧಿಷ್ಠಿರನಿಗೂ ಮಹಾನಂದವಾಗುತ್ತಿದ್ದಿತು. ಯುಧಿಷ್ಠಿರನು ಕೃಷ್ಣೆಯೊಡನೆಯೂ, ಅನುಜರೊಡನೆಯೂ ಅಲ್ಲಿನ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುತ್ತಾ–ಅರ್ಜುನನ ಗುಣಗಾನ ಮಾಡುತ್ತಾ ಬಹಳ ಸಂತೋಷದಿಂದ ಕಾಲಕಳೆಯುತ್ತಿದ್ದನು. ಸಮುದ್ರತೀರದಲ್ಲಿದ್ದ ಅನೇಕ ಪುಣ್ಯಕ್ಷೇತ್ರಗಳಲ್ಲಿ ಯುಧಿಷ್ಠಿರನು ಬ್ರಾಹ್ಮಣರಿಗೆ ಸಾವಿರಾರು ಗೋವುಗಳನ್ನು ದಾನವಾಗಿ ಕೊಡುತ್ತಿದ್ದನು ಮತ್ತು ಆ ಕ್ಷೇತ್ರಗಳಲ್ಲಿ ಹಿಂದೆ ಅರ್ಜುನನು ಬ್ರಾಹ್ಮಣರಿಗೆ ನೂರಾರು ಗೋವುಗಳನ್ನು ದಾನವಾಗಿ ಕೊಟ್ಟ ಪ್ರಕರಣವನ್ನೂ ಸ್ಮರಿಸಿಕೊಂಡು ಅದನ್ನು ತನ್ನ ಅನುಜರಿಗೆ ವಿಶದವಾಗಿ ಹೇಳುತ್ತಿದ್ದನು. ಯುಧಿಷ್ಠಿರನು ಸಮುದ್ರತೀರದಲ್ಲಿದ್ದ ಯಾವುದೊಂದು ಕ್ಷೇತ್ರವನ್ನೂ ಬಿಡದೇ ಪ್ರತಿಯೊಂದು ಕ್ಷೇತ್ರವನ್ನೂ ಸಂದರ್ಶಿಸುತ್ತಾ ಕಡೆಗೆ ಶೂರ್ಪಾರಕವೆಂಬ ಮಹಾಕ್ಷೇತ್ರವನ್ನು ಸೇರಿದನು. ಶೂರ್ಪಾರಕವೆಂಬ ಆ ಕ್ಷೇತ್ರದ ಸಮೀಪದಲ್ಲಿಯೇ ಸಮುದ್ರವನ್ನು ಸ್ವಲ್ಪದೂರ ದಾಟಿ ಲೋಕಪ್ರಸಿದ್ಧವಾದ ಅರಣ್ಯವನ್ನು ಪ್ರವೇಶಿಸಿದನು. ಸಮುದ್ರದ ಮಧ್ಯದಲ್ಲಿದ್ದ ಆ ಅರಣ್ಯದಲ್ಲಿ ಹಿಂದೆ ದೇವತೆಗಳೂ ತಪಸ್ಸನ್ನು ಮಾಡುತ್ತಿದ್ದರು. ಅದೇ ರೀತಿಯಲ್ಲಿ ಧಾರ್ಮಿಕರಾದ ರಾಜರೂ ಆ ದ್ವೀಪಕ್ಕೆ ಹೋಗಿ ಯಜ್ಞ-ಯಾಗಾದಿಗಳನ್ನೂ ಮಾಡುತ್ತಿದ್ದರು. ಆ ಪವಿತ್ರಸ್ಥಳದಲ್ಲಿಯೇ ದೀರ್ಘಬಾಹುವಾದ ಯುಧಿಷ್ಠಿರನು ಧನುರ್ಧಾರಿಗಳಲ್ಲಿ ಶ್ರೇಷ್ಠನೆನಿಸಿದ್ದ ಋಚೀಕನ ಮಗನು

ನಿರ್ಮಿಸಿದ್ದ ಯಜ್ಞವೇದಿಯನ್ನು ಸಂದರ್ಶಿಸಿದನು. ಆ ಯಜ್ಞವೇದಿಯು ಅನೇಕಾನೇಕ ತಪಸ್ವಿಗಳಿಂದ ವ್ಯಾಪ್ತವಾಗಿದ್ದು ಪುಣ್ಯಪುರುಷರ ಪೂಜೆಗೆ ಅರ್ಹವಾಗಿತ್ತು. ಆ ಪವಿತ್ರಕ್ಷೇತ್ರದಲ್ಲಿ ಯುಧಿಷ್ಠಿರನು ಬಹುಸುಂದರವಾದ ಅನೇಕ ದೇವಾಲಯಗಳನ್ನು ಸಂದರ್ಶಿಸಿದನು. ಆ ಕ್ಷೇತ್ರದಲ್ಲಿ ಅಷ್ಟವಸುಗಳ, ಸಪ್ತಮರುತ್ತುಗಳ ದೇವಾಲಯಗಳಿದ್ದುವು. ಅಶ್ವಿನೀದೇವತೆಗಳ, ವೈವಸ್ವತರ, ದ್ವಾದಶಾದಿತ್ಯರ ಮತ್ತು ಕುಬೇರನ ದೇವಾಲಯಗಳಿದ್ದುವು. ಇಂದ್ರನ, ವಿಷ್ಣುವಿನ, ಸವಿತೃವಿನ ಮತ್ತು ವಿಭುವಿನ ದೇವಾಲಯಗಳಿದ್ದುವು. ಈಶ್ವರನ, ಚಂದ್ರನ, ದಿವಾಕರನ, ವರುಣದೇವನ ಸುಂದರದೇವಾಲಯಗಳಿದ್ದುವು. ಸಾಧ್ಯರ, ಧಾತೃವಿನ ಮತ್ತು ಪಿತೃದೇವತೆಗಳ ಆಲಯಗಳಿದ್ದುವು. ಆ ಪವಿತ್ರ ಕ್ಷೇತ್ರದಲ್ಲಿ ಸಕಲಗುಣಗಳಿಂದ ಕೂಡಿದ ರುದ್ರನ ದೇವಾಲಯವೂ ಇದ್ದಿತು. ಸರಸ್ವತಿಯ, ಸಿದ್ಧಗಣಗಳ ಆಯತನಗಳಿದ್ದುವು. ಹೆಚ್ಚೇನು ಹೇಳಲಿ ; ಜನಮೇಜಯ! ಆ ಪವಿತ್ರಕ್ಷೇತ್ರದಲ್ಲಿ ಸಕಲದೇವತೆಗಳ ದೇವಾಲಯಗಳೂ ಪ್ರತ್ಯೇಕ-ಪ್ರತ್ಯೇಕವಾಗಿದ್ದುವು. ಯುಧಿಷ್ಠಿರನು ಆ ದೇವಾಲಯಗಳೆಲ್ಲವನ್ನೂ ಸಂದರ್ಶಿಸಿದುದು ಮಾತ್ರವಲ್ಲದೇ ಅಲ್ಲಿಯೇ ಒಂದೆರಡು ದಿನಗಳು ತಂಗಿದ್ದು, ಉಪವಾಸವ್ರತಾದಿಗಳನ್ನು ಆಚರಿಸಿ ಅಲ್ಲಿದ್ದ ಬ್ರಾಹ್ಮಣರಿಗೆ ಅನೇಕಾನೇಕ ರತ್ನಾಭರಣಗಳನ್ನು ದಾನವಾಗಿ ಕೊಟ್ಟನು. ಅಲ್ಲಿದ್ದ ಸಕಲತೀರ್ಥಗಳಲ್ಲಿಯೂ ಸ್ನಾನಮಾಡಿ ಪೂತಾತ್ಮನಾದ ಯುಧಿಷ್ಠಿರನು ಪುನಃ ಶೂರ್ಪಾರಕಕ್ಷೇತ್ರಕ್ಕೆ ಪರಿವಾರಸಮೇತನಾಗಿ ಹಿಂದಿರುಗಿದನು. ಆ ಕ್ಷೇತ್ರದಲ್ಲಿ ಸ್ನಾನವನ್ನು ಮುಗಿಸಿಕೊಂಡು ಮುಂದೆ ಸಮುದ್ರತೀರದಲ್ಲಿಯೇ ಪ್ರಯಾಣಮಾಡುತ್ತಾ ದ್ವಿಜಬೃಂದನಿಷೇವಿತವಾಗಿದ್ದ, ಭೂಮಿಯಲ್ಲಿ ಸುವಿಖ್ಯಾತವಾಗಿದ್ದ ಪ್ರಭಾಸಕ್ಷೇತ್ರಕ್ಕೆ ಪ್ರಯಾಣಮಾಡಿದನು.

ವಿಶಾಲಾಕ್ಷನಾದ ಯುಧಿಷ್ಠಿರನು ತನ್ನ ಅನುಜರೊಡನೆಯೂ, ಪತ್ನಿಯೊಡನೆಯೂ, ಬ್ರಾಹ್ಮಣರೊಡನೆಯೂ, ಲೋಮಶರೊಡನೆಯೂ ಪ್ರಭಾಸ ತೀರ್ಥದಲ್ಲಿ ಸ್ನಾನಮಾಡಿ ಪಿತೃದೇವತೆಗಳಿಗೆ ತರ್ಪಣವನ್ನೂ, ದೇವತೆಗಳಿಗೆ ಯಥಾಯೋಗ್ಯವಾದ ಅರ್ಚನೆಯನ್ನೂ ಮಾಡಿದನು. ಆ ಪುಣ್ಯಕ್ಷೇತ್ರದಲ್ಲಿ ಯುಧಿಷ್ಠಿರನು ಹನ್ನೆರಡು ದಿನಗಳ ಪರ್ಯಂತವಾಗಿ ಕೇವಲ ಜಲ-ವಾಯು ಭಕ್ಷಕನಾಗಿ, ಉಭಯಸಂಧ್ಯೆಗಳಲ್ಲಿಯೂ ಪುಣ್ಯತೀರ್ಥದಲ್ಲಿ ಸ್ನಾನಮಾಡುತ್ತಾ

ತನ್ನ ಸುತ್ತಲೂ ಅಗ್ನಿಯನ್ನು ಪ್ರತಿಷ್ಠಾಪಿಸಿ, ಪಂಚಾಗ್ನಿಗಳ ಮಧ್ಯದಲ್ಲಿ ತಪಶ್ಚರಣೆಮಾಡುತ್ತಿದ್ದನು. ಪ್ರಭಾಸಕ್ಷೇತ್ರಕ್ಕೆ ಸಮೀಪದಲ್ಲಿದ್ದ ದ್ವಾರಕೆಯಲ್ಲಿ ವಾಸವಾಗಿದ್ದ ಬಲರಾಮ-ಶ್ರೀಕೃಷ್ಣರು ಚತುರಂಗಬಲಸಮೇತರಾಗಿ ಯುಧಿಷ್ಠಿರನನ್ನು ಸಂದರ್ಶಿಸುವ ಸಲುವಾಗಿ ವೃಷ್ಣಿಕುಲದವರೊಡನೆ ಪ್ರಭಾಸ



ಕ್ಷೇತ್ರಕ್ಕೆ ಆಗಮಿಸಿದರು. ರಾಜಾಧಿರಾಜನಾದ, ಹಂಸತೂಲಿಕಾತಲ್ಪದಲ್ಲಿ ಮಲಗಲು ಯೋಗ್ಯನಾದ ಯುಧಿಷ್ಠಿರನು ತನ್ನ ತಮ್ಮಂದಿರೊಡನೆ ಭೂಶಯ್ಯೆಯಲ್ಲಿಯೇ ಮಲಗಬೇಕಾದ ಚಿಂತಾಜನಕವಾದ ಸ್ಥಿತಿಯನ್ನು ಕಂಡು ವೃಷ್ಣಿಕುಲದವರೆಲ್ಲರೂ ಸಂಕಟಪಟ್ಟರು. ದ್ರೌಪದಿಯ ಕಷ್ಟವನ್ನು ನೋಡಿ ಅವರ ದುಃಖವು ಇಮ್ಮಡಿಯಾಯಿತು. ಅವರಿಗೆ ತಮ್ಮ ದುಃಖವನ್ನು

ತಡೆದುಕೊಳ್ಳಲು ಸಾಧ್ಯವೇ ಆಗಲಿಲ್ಲ. ಎಂತಹ ಕಷ್ಟಪರಿಸ್ಥಿತಿಯಲ್ಲಿಯೂ ಅಧೀರನಾಗದಿದ್ದ ಯುಧಿಷ್ಠಿರನು ಮಾತ್ರ ಯಾವ ವಿಧವಾದ ಸಂಕಟವನ್ನೂ ತೋರ್ಪಡಿಸದೇ ತನ್ನ ಬಳಿಗೆ ಆಗಮಿಸಿದ ಬಲರಾಮ, ಕೃಷ್ಣ, ಕೃಷ್ಣನ ಮಗ ಪ್ರದ್ಯುಮ್ನ, ಸಾಂಬ, ಸಾತ್ಯಕಿ ಮತ್ತು ಇತರ ವೃಷ್ಣಿಕುಲದ ನಾಯಕರನ್ನು ಆದರದಿಂದ ಸ್ವಾಗತಿಸಿ ಸತ್ಕರಿಸಿದನು. ರಾಮ-ಕೃಷ್ಣರೂ ಯುಧಿಷ್ಠಿರನನ್ನೂ ಮತ್ತು ಅವನ ಪರಿವಾರದವರನ್ನೂ ಯಥಾಯೋಗ್ಯವಾಗಿ ಸತ್ಕರಿಸಿದರು. ಪರಸ್ಪರವಾಗಿ ಕುಶಲಪ್ರಶ್ನೆಗಳಾದನಂತರ–ದೇವೇಂದ್ರನನ್ನು ಸುತ್ತುವರಿದು ದೇವತೆಗಳು ಕುಳಿತುಕೊಳ್ಳುವಂತೆ–ಧರ್ಮರಾಜನನ್ನು ಸುತ್ತುವರಿದು ಅವನ ಅನುಜರೂ, ವೃಷ್ಣಿಪರಿವಾರಸಮೇತರಾದ ರಾಮ-ಕೃಷ್ಣರೂ ಉಪವಿಷ್ಟರಾದರು. ಯುಧಿಷ್ಠಿರನು ತನ್ನ ಆಗಿನ ಸ್ಥಿತಿಗೆ ಕಾರಣವನ್ನೂ, ಅದುವರೆಗೆ ತಾನು ಅರಣ್ಯದಲ್ಲಿ ಹೇಗೆ ದಿನಗಳನ್ನು ಕಳೆದೆನೆಂಬುದನ್ನೂ, ಅರ್ಜುನನು ಶಸ್ತ್ರಾಸ್ತ್ರಗಳ ರಹಸ್ಯವನ್ನು ತಿಳಿಯಲು ಇಂದ್ರನಲ್ಲಿಗೆ ಪ್ರಯಾಣಮಾಡಿರುವ ವಿಷಯವನ್ನೂ ಬಲರಾಮ-ಕೃಷ್ಣರಿಗೆ ವಿಶದವಾಗಿ ಹೇಳಿದನು. ಆ ವಿಷಯಗಳೆಲ್ಲವನ್ನೂ ಯಾದವರು ಬಹಳ ಆಸಕ್ತಿಯಿಂದ ಕೇಳಿ ತಿಳಿದುಕೊಂಡರು. ಆದರೆ ಪಾಂಡವರ ಕೃಶವಾಗಿದ್ದ ಶರೀರಗಳನ್ನು ಕಂಡೊಡನೆಯೇ ಅವರ ದುಃಖವು ಇಮ್ಮಡಿಯಾಗಿ ಮಹಾನುಭಾವರಾದ ಯಾದವರು ಗಳ-ಗಳನೆ ಅತ್ತುಬಿಟ್ಟರು.”

ಌ೧೮ನೆಯ ಅಧ್ಯಾಯವು ಮುಗಿಯಿತು.

೧೧೯ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಪ್ರಭಾಸಕ್ಷೇತ್ರದಲ್ಲಿ ಯುಧಿಷ್ಠಿರನಿಗೆ ಬಲರಾಮನ ಸಹಾನುಭೂತಿ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

“ಮಹರ್ಷಿಗಳೇ! ಯುಧಿಷ್ಠಿರನೇ ಮೊದಲಾದ ಪಾಂಡವರೂ, ಬಲಭದ್ರನೇ ಮೊದಲಾದ ವೃಷ್ಣಿಗಳೂ ಪ್ರಭಾಸಕ್ಷೇತ್ರವನ್ನು ಸೇರಿದನಂತರ ಯಾವ ವಿಷಯವಾಗಿ ಸಂಭಾಷಣೆಯನ್ನು ನಡೆಸಿದರು? ಅವರು ಪರಸ್ಪರ ನಡೆಸಿದ ಸಂಭಾಷಣೆಯು ಮಹತ್ತ್ವಪೂರಿತವಾದುದೇ ಆಗಿರಬೇಕಲ್ಲವೇ? ಏಕೆಂದರೆ : ಅವರೆಲ್ಲರೂ ಮಹಾತ್ಮರು ; ಸಕಲವಿದ್ಯೆಗಳಲ್ಲಿಯೂ ಪಾರಂಗ

ತರು ; ಎಲ್ಲಕ್ಕಿಂತಲೂ ಮಿಗಿಲಾಗಿ ಪಾಂಡವ-ವೃಷ್ಣಿಗಳು ಪರಸ್ಪರವಾಗಿ ಆಪ್ತಮಿತ್ರರು. ಒಬ್ಬರನ್ನು ಮತ್ತೊಬ್ಬರು ಬಹುಮೈತ್ರಿಯಿಂದ ಕಾಣುತ್ತಿದ್ದರು. ಈ ಕಾರಣಗಳಿಂದ ಅವರ ಸಂಭಾಷಣೆಯೂ ಮಹತ್ವಪೂರ್ಣವೇ ಆಗಿರ ಬೇಕೆಂದು ಭಾವಿಸುತ್ತೇನೆ. ಅವರ ಸಂಭಾಷಣೆಯನ್ನು ನನಗೆ ವಿವರವಾಗಿ ಹೇಳಿರಿ."

"ಜನಮೇಜಯ! ನೀನು ಭಾವಿಸಿರುವಂತೆಯೇ ಅವರ ಸಂಭಾಷಣೆಯು ಮಹತ್ವಪೂರ್ಣವಾದುದೇ ಆಗಿದ್ದಿತು. ಎಲ್ಲವನ್ನೂ ನಿನಗೆ ವಿವರಿಸಿ ಹೇಳುವೆನು ; ಸಾವಧಾನಚಿತ್ತನಾಗಿ ಕೇಳು. ನಾನು ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ವೃಷ್ಣಿಗಳು ಸಮುದ್ರತೀರದಲ್ಲಿದ್ದ ಪವಿತ್ರತಮವಾದ ಪ್ರಭಾಸಕ್ಷೇತ್ರವನ್ನು ತಲುಪಿ, ಪರಸ್ಪರಕುಶಲಪ್ರಶ್ನೆಗಳಾದನಂತರ ಧರ್ಮರಾಜನನ್ನು ಸುತ್ತುವರಿದು ಪಾಂಡವ-ವೃಷ್ಣಿಗಳು ಕುಳಿತುಕೊಂಡರು. ಹಸುವಿನ ಹಾಲಿನಂತೆ–ಕುಂದಪುಷ್ಪದಂತೆ-ಚಂದ್ರನಂತೆ-ಬೆಳ್ಳಿಯಂತೆ-ಅಥವಾ ಕಮಲದ ನಾಳದಂತೆ ಬಿಳುಪಾದ ಬಣ್ಣದಿಂದ ಕೂಡಿದ್ದ, ವನಸುಮಗಳ ಮಾಲೆಯನ್ನು ಧರಿಸಿದ್ದ, ನೇಗಿಲನ್ನೇ ಆಯುಧವನ್ನಾಗಿ ಹೆಗಲಮೇಲೆ ಧರಿಸಿಕೊಂಡಿದ್ದ ಬಲರಾಮನು ಧರ್ಮರಾಜನ ಸಮ್ಮುಖದಲ್ಲಿ ಪುಂಡರೀಕಾಕ್ಷ ನಾದ ಶ್ರೀಕೃಷ್ಣನೊಡನೆ ಹೇಳಿದನು :

**ನ ಕೃಷ್ಣ ಧರ್ಮಶ್ಚರಿತೋ ಭವಾಯ**
**ಜನ್ತೋರಧರ್ಮಶ್ಚ ಪರಾಭವಾಯ ।**
**ಯುಧಿಷ್ಠಿರೋ ಯತ್ರ ಜಟೀ ಮಹಾತ್ಮಾ**
**ವನಾಶ್ರಯಃ ಕ್ಲಿಶ್ಯತಿ ಚೀರವಾಸಾಃ ॥೩॥**

"ಕೃಷ್ಣ! ಧರ್ಮಮಾರ್ಗಾನುಸರಣೆಯು ಪ್ರಾಣಿಗಳಿಗೆ ಅಭ್ಯುದಯ ದಾಯಕವೆಂಬುದನ್ನೂ, ಅಧರ್ಮಾಚರಣೆಯು ಪ್ರಾಣಿಗಳಿಗೆ ಪರಾಭವ ದಾಯಕವೆಂಬುದನ್ನೂ ನಾನು ನಂಬುವುದಿಲ್ಲ. ಪ್ರತ್ಯಕ್ಷಪ್ರಮಾಣದಿಂದ ನಾನಿದನ್ನು ಸ್ಥಿರೀಕರಿಸಲು ಹೇಳುತ್ತಿದ್ದೇನೆ. ಯುಧಿಷ್ಠಿರನು ಸಾಕ್ಷಾತ್ 'ಧರ್ಮ ಮೂರ್ತಿ' ಎಂಬುದರಲ್ಲಿ ಸಂಶಯವೇ ಇಲ್ಲ. ಇವನು ಕನಸಿನಲ್ಲಿಯೂ ಅಧರ್ಮವನ್ನಾಚರಿಸುವುದಿಲ್ಲ. ಇಂತಹ ಪರಮಧರ್ಮಿಷ್ಠನಾದ ಯುಧಿಷ್ಠಿರನ

ಇಂದಿನ ಸ್ಥಿತಿಯನ್ನು ನಾವು ಕಣ್ಣಾರೆ ಕಾಣುತ್ತಿದ್ದೇವೆ. ಜಟಾಧಾರಿಯಾಗಿ ನಾರುಮಡಿಯನ್ನುಟ್ಟು, ಕಂದ-ಮೂಲಗಳನ್ನೇ ತಿನ್ನುತ್ತಾ ಅರಣ್ಯದಲ್ಲಿ ಜೀವಿಸುವುದು ಇವನ ಇಂದಿನ ದುಃಸ್ಥಿತಿಯಾಗಿದೆ.

**ದುರ್ಯೋಧನಶ್ಚಾಪಿ ಮಹೀಂ ಪ್ರಶಾಸ್ತಿ**
**ನ ಚಾಸ್ಯ ಭೂಮಿರ್ವಿವರಂ ದದಾತಿ ।**
**ಧರ್ಮಾದಧರ್ಮಶ್ಚರಿತೋ ವರೀಯಾ-**
**ನಿತೀವ ಮನ್ಯೇತ ನರೋಽಲ್ಪಬುದ್ಧಿಃ ॥೬॥**

ದುರ್ಯೋಧನನಾದರೋ ಮಹಾದುಷ್ಟನು. ಮಹಾಪಾಪಿಯು. ಅಂತಹವನಿಂದು ನಿಷ್ಕಂಟಕವಾದ ರಾಜ್ಯವನ್ನಾಳುತ್ತಿದ್ದಾನೆ. ಅಂತಹವನನ್ನೂ ಈ ಪೃಥ್ವಿಯು ನುಂಗಿಹಾಕದೇ ತಾಳ್ಮೆಯಿಂದ ಸುಮ್ಮನಿದ್ದಾಳೆ. ಇದು ನನಗೆ ಅತ್ಯಾಶ್ಚರ್ಯವೆನಿಸಿದೆ, ಕೃಷ್ಣ!

(ಈ ವಿಧವಾದ ಪ್ರತ್ಯಕ್ಷಪ್ರಮಾಣದಿಂದಲೇ ಸಾಮಾನ್ಯಮನುಷ್ಯನಿಗೆ ಅಧರ್ಮಮಾರ್ಗದಲ್ಲಿ ನಡೆಯುವುದು ಸೂಕ್ತವೇ? ಧರ್ಮಮಾರ್ಗದಲ್ಲಿ ನಡೆಯುವುದು ಸೂಕ್ತವೇ?–ಎಂದು ನಿಶ್ಚಯಿಸುವುದರಲ್ಲಿ ಅವನ ಮನಸ್ಸು ಡೋಲಾಯಮಾನವಾಗುತ್ತದೆ.) ಇದನ್ನು ನೋಡಿ ಅಲ್ಪಬುದ್ಧಿಯಾದ ಸಾಮಾನ್ಯಮನುಷ್ಯನು, ಧರ್ಮವನ್ನಾಚರಿಸಲು ಹೋಗಿ ಕಷ್ಟಪಡುವುದಕ್ಕಿಂತಲೂ ಅಧರ್ಮಮಾರ್ಗವನ್ನನುಸರಿಸಿಯಾದರೂ ಪ್ರಾಪಂಚಿಕಸುಖವನ್ನು ಅನುಭವಿಸುವುದೇ ಲೇಸೆಂದು ನಿಶ್ಚಯಿಸುವನು.

**ದುರ್ಯೋಧನೇ ಚಾಪಿ ವಿವರ್ಧಮಾನೇ**
**ಯುಧಿಷ್ಠಿರೇ ಚಾಸುಖಮಾತ್ತರಾಜ್ಯೇ ।**
**ಕಿಂ ತ್ವತ್ರ ಕರ್ತವ್ಯಮಿತಿ ಪ್ರಜಾಭಿಃ**
**ಶಙ್ಕಾ ಮಿಥಃ ಸಂಜನಿತಾ ನರಾಣಾಮ್ ॥೭॥**

ಪಾಪಾತ್ಮನಾದರೂ ದುರ್ಯೋಧನನಿಂದು ದಿನ-ದಿನಕ್ಕೂ ಅಭಿವೃದ್ಧಿಯನ್ನು ಹೊಂದುತ್ತಿದ್ದಾನೆ. ಧರ್ಮಾತ್ಮನಾದ ಯುಧಿಷ್ಠಿರನು ರಾಜ್ಯ-ಕೋಶಗಳೆಲ್ಲವನ್ನೂ ಕಳೆದುಕೊಂಡು ಪಡಬಾರದ ಕಷ್ಟಗಳನ್ನನುಭವಿಸುತ್ತಿದ್ದಾನೆ. ಇಂತಹ ನಿದರ್ಶನಗಳನ್ನು ಪ್ರತ್ಯಕ್ಷವಾಗಿ ನೋಡುತ್ತಿರುವ ಜನಸಾಮಾನ್ಯರು

ತಮ್ಮ ಕರ್ತವ್ಯದ ವಿಷಯದಲ್ಲಿ ವ್ಯಾಕುಲಚಿತ್ತರಾಗಿ ಧರ್ಮಾಧರ್ಮಗಳ ವಿವೇಚನೆಯಲ್ಲಿಯೇ ಸಂದೇಹಗೊಳ್ಳುತ್ತಾರೆ.

ಪೃಥಾದೇವಿಯ ಮಗನಾದ ಈ ಯುಧಿಷ್ಠಿರನಾದರೋ ಸಾಕ್ಷಾತ್ ಯಮಧರ್ಮನ ಪುತ್ರನು. ಧರ್ಮಮಾರ್ಗದಲ್ಲಿಯೇ ಇವನ ಮನಸ್ಸು ಯಾವಾಗಲೂ ಲೀನವಾಗಿರುತ್ತದೆ. ಇವನು ಸತ್ಯವಂತನು. ಮಹಾದಾನಿಯು. ಈ ಮಹಾನುಭಾವನು ರಾಜ್ಯವನ್ನಾದರೂ ತ್ಯಜಿಸಿಯಾನು ; ಸುಖೋಪಭೋಗಗಳನ್ನೂ ತ್ಯಜಿಸಿಯಾನು. ಆದರೆ ಧರ್ಮಮಾರ್ಗದಿಂದ ಮಾತ್ರ ಎಂತಹ ಕಷ್ಟದಲ್ಲಿಯೂ ಚ್ಯುತನಾಗಲಾರನು. ಅಧರ್ಮಮಾರ್ಗಾನು ಸರಣೆಯಿಂದ ಎಂತಹ ಮಹೈಶ್ವರ್ಯವೇ ಪ್ರಾಪ್ತವಾಗುವುದಾದರೂ ಆ ಐಶ್ವರ್ಯವು ಇವನಿಗೆ ಬೇಡ. ಧರ್ಮದ ಮುಂದೆ ಇಂತಹ ಮಹೈಶ್ವರ್ಯವೂ ಇವನಿಗೆ ತೃಣಪ್ರಾಯವಾದುದು.

ದುರ್ಯೋಧನನನ್ನು ಪರಮಪಾಪಿಷ್ಠನೆಂದೂ, ಅಧರ್ಮಪ್ರವೃತ್ತ ನೆಂದೂ ಅವನ ಕ್ರಿಯೆಗಳಿಂದಲೇ ನಾವು ತೀರ್ಮಾನಿಸಬಹುದಾಗಿದೆ. ಆದರೆ ಧರ್ಮಮಾರ್ಗಪ್ರವೃತ್ತರೆನಿಸಿರುವ ಭೀಷ್ಮ, ವಿಪ್ರಶ್ರೇಷ್ಠರಾದ ಕೃಪ-ದ್ರೋಣರು, ವೃದ್ಧನಾದ ಧೃತರಾಷ್ಟ್ರ–ಇವರೆಲ್ಲರೂ ಪಾಂಡವರನ್ನು ಕಾಡಿಗೆ ಕಳುಹಿಸಿ ತಾವು ಸುಖ-ಸಂತೋಷಗಳಿಂದ ಹಸ್ತಿನಾಪಟ್ಟಣದಲ್ಲಿಯೇ ಇರಲು ಹೇಗೆ ತಾನೇ ಸಾಧ್ಯವಾಗಿದೆ? ಅಧರ್ಮಪ್ರವೃತ್ತನಾದ ದುರ್ಯೋಧನನಿಗೆ ಭೀಷ್ಮಾದಿಗಳು ಬೆಂಬಲಿಗರಾಗಿ ಅವನ ಆಶ್ರಯದಲ್ಲಿಯೇ ಉಳಿದಿರುವುದ ರಿಂದ–ಅವರೂ ಅಧರ್ಮಪ್ರಚೋದಕರೆಂದೇ ನಾವು ನಿರ್ಧರಿಸಬೇಕಾಗಿದೆ. ಆದುದರಿಂದ ಪವಿತ್ರವಾದ ಭರತಕುಲದಲ್ಲಿ ಹುಟ್ಟಿರುವ ಆ ನಾಯಕ ರೆಲ್ಲರಿಗೂ ಧಿಕ್ಕಾರವಿರಲಿ! ನಾನು ಅವರೆಲ್ಲರನ್ನೂ ಧಿಕ್ಕರಿಸುತ್ತೇನೆ. ರಾಜ್ಯದ ಒಡೆಯನಾಗಿರುವ ಧೃತರಾಷ್ಟ್ರನು ಈಗೇನೋ ತನ್ನ ಮಕ್ಕಳು ರಾಜ್ಯವನ್ನಾಳು ತ್ತಿರುವರೆಂದು ಸಂತೋಷಿಸುತ್ತಿರಬಹುದು. ಆದರೆ ಅವನು ಅವಸಾನ ಹೊಂದಿ ಪರಲೋಕಕ್ಕೆ ಹೋದನಂತರ ಅಲ್ಲಿ ಸಂಧಿಸುವ ಪಿತೃದೇವತೆಗಳಿಗೆ ಏನೆಂದು ತಾನೇ ಉತ್ತರವಿತ್ತಾನು? ನಿರ್ದೋಷಿಗಳಾದ ತನ್ನ ಮಕ್ಕಳನ್ನು (ಯುಧಿಷ್ಠಿರಾದಿಗಳನ್ನು ) ಕಪಟರೀತಿಯಲ್ಲಿ ಸ್ಥಾನಭ್ರಷ್ಟರನ್ನಾಗಿ ಮಾಡಿದ ಅವನು ತನ್ನ ಮಕ್ಕಳಲ್ಲಿ ಎಲ್ಲರನ್ನೂ ಸರಿಸಮಾನತೆಯಿಂದ ಕಂಡುಕೊಂಡಿದ್ದೆ

ನೆಂದು ಉತ್ತರಹೇಳಿಯಾನೇ? ಹೇಳಲು ತಾನೇ ಸಾಧ್ಯವಿದೆಯೇ? ತನ್ನ ಹೊಟ್ಟೆಯಲ್ಲಿ ಹುಟ್ಟಿದ ದುರ್ಯೋಧನನು ಪಾಪಕರ್ಮಗಳನ್ನೆಸಗಿದರೂ ಅವನಿಗೆ ಉತ್ತೇಜನವಿತ್ತ ವಿಷಯವನ್ನು ಪಿತೃದೇವತೆಗಳಿಂದ ಮರೆಮಾಚಲು ಸಾಧ್ಯವೇ? ಪಾಂಡುಪುತ್ರರು ಅನುಭವಿಸುತ್ತಿದ್ದ ರಾಜ್ಯವನ್ನು ದ್ಯೂತದ ನೆಪಮಾಡಿ ಕಸಿದುಕೊಂಡು, ನಿರ್ದೋಷಿಗಳಾದ ಧರ್ಮಾತ್ಮರಾದ ಅವರನ್ನು ಕಾಡಿಗೆ ಕಳುಹಿಸಿದುದನ್ನೂ ಇಲ್ಲವೆಂದು ಹೇಳುವನೇ? ಕೃಷ್ಣ!

ನಾಸೌ ಧಿಯಾ ಸಮ್ಪ್ರತಿ ಪಶ್ಯತಿ ಸ್ಮ
ಕಿಂ ನಾಮ ಕೃತ್ವಾಹಮಚಕ್ಷುರೇವಮ್ ।
ಜಾತಃ ಪೃಥಿವ್ಯಾಮಿತಿ ಪಾರ್ಥಿವೇಷು
ಪ್ರವ್ರಾಜ್ಯ ಕೌನ್ತೇಯಮಿತಿ ಸ್ಮ ರಾಜ್ಯಾತ್ ॥೧೧॥

'ಈ ಪ್ರಪಂಚದಲ್ಲಿ ರಾಜರ ಮಧ್ಯದಲ್ಲಿ ಯಾವ ಪಾಪವನ್ನು ಮಾಡಿ ಕುರುಡನಾಗಿ ಹುಟ್ಟಿದೆನು?'–ಎಂಬುದಾಗಿ ಈ ಧೃತರಾಷ್ಟ್ರನು ಒಮ್ಮೆ ಯಾದರೂ ಬುದ್ಧಿಯಿಂದ ಯೋಚಿಸುತ್ತಲೇ ಇರಲಿಲ್ಲ. (ಅವನಿಗೆ ಪಾಪದ ಶಂಕೆಯೇ ಇರಲಿಲ್ಲ.) ಈಗ ರಾಜ್ಯದಿಂದ ಧರ್ಮರಾಜನನ್ನು ಕಳುಹಿಸಿದ ನಂತರವೂ ಅವನು ತಾನು ಕುರುಡನಾಗಿ ಹುಟ್ಟಿದುದರ ಕಾರಣವನ್ನು ಯೋಚಿಸುತ್ತಿಲ್ಲ. (ಯಾವುದೋ ಪಾಪಮಾಡಿ ಕುರುಡನಾಗಿ ಹುಟ್ಟಿದನು. ಪುನಃ ಪುನಃ ಈಗಲೂ ಪಾಪಮಾಡುತ್ತಲೇ ಇದ್ದಾನೆ.) ನಿರಪರಾಧಿಗಳಾದ ಕುಂತೀಪುತ್ರರನ್ನು ಕಾಡಿಗೆ ಕಳುಹಿಸಿದ್ದರಿಂದಲೇ ಇದು ಸ್ಪಷ್ಟವಾಗಿ ಹೋಗಿದೆ. ಧೃತರಾಷ್ಟ್ರನು ತನ್ನ ಮಕ್ಕಳೊಡನೆ ಸಮಾಲೋಚಿಸಿ ಕುಂತಿಯ ಮಕ್ಕಳನ್ನು ಕಾಡಿಗೆ ಕಳುಹಿಸಬೇಕೆಂಬ ದುಷ್ಟಯೋಜನೆಯನ್ನು ಸಿದ್ಧಗೊಳಿಸಿ ನೆರವೇರಿಸಿದುದು–ಶ್ಮಶಾನಭೂಮಿಯಲ್ಲಿ ಸ್ವರ್ಣಮಯವಾದ ಹೂಗಳಿಂದ ಕೂಡಿದ ವೃಕ್ಷಗಳನ್ನು (ಸ್ವಪ್ನದಲ್ಲಿ) ಕಂಡಂತೆಯೇ ಆಗಿದೆ. (ಈ ರೀತಿ ಸ್ವಪ್ನ ವಾಗುವುದು ಮರಣಸೂಚಕವೆಂದು ಹೇಳುತ್ತಾರೆ.) ಏಕೆಂದರೆ : ಧೃತರಾಷ್ಟ್ರನ ಸಮ್ಮತಿಯಿಲ್ಲದೇ ಯುಧಿಷ್ಠಿರನನ್ನು ಅರಣ್ಯಕ್ಕೆ ಕಳುಹಿಸಲಾಯಿತೆಂದು ಹೇಳುವ ಸಾಧ್ಯತೆಯಿಲ್ಲ. ಲೋಹಿತಾಕ್ಷರಾದ ತನ್ನ ಪುತ್ರರೊಡನೆ ಧೃತ ರಾಷ್ಟ್ರನು ಸಮಾಲೋಚನೆ ಮಾಡಿಯೇ ಇರಬೇಕು. ತಮ್ಮ ಕಡೆಯ ಮತ್ತು

ಶತ್ರುಪಕ್ಷದ ಬಲಾಬಲಗಳನ್ನು ವಿವೇಚಿಸಿಯೇ ಇರಬೇಕು. ಹಾಗಿಲ್ಲದಿದ್ದರೆ ಧನುರ್ಬಾಣಸಮೇತನಾದ ಯುಧಿಷ್ಠಿರನನ್ನಾಗಲೀ, ಇವನ ಅಜೇಯರಾದ ಅನುಜರನ್ನಾಗಲೀ ಅರಣ್ಯಕ್ಕೆ ನಿರ್ಭಯವಾಗಿ ಕಳುಹಿಸುವ ಸಾಧ್ಯತೆಯಿರಲಿಲ್ಲ. ಕೃಷ್ಣ! ತೋಳದ ಹೊಟ್ಟೆಗೆ ಸಮಾನವಾದ ಹೊಟ್ಟೆಯುಳ್ಳ (ವೃಕೋದರನಾದ) ಈ ಒಬ್ಬ ಭೀಮಸೇನನೇ ಸಾಕು. ಯಾವ ವಿಧವಾದ ಆಯುಧಗಳ ಬೆಂಬಲವೂ ಇಲ್ಲದೇ ಕೇವಲ ಬಾಹುಪಾಶಗಳಿಂದಲೇ ಸಾವಿರಾರು ಸೈನಿಕರನ್ನೂ ಧ್ವಂಸಮಾಡಿಬಿಡಬಲ್ಲನು. ಇವನ ಸಿಂಹನಾದವನ್ನು ಕೇಳಿದೊಡನೆಯೇ ಯುದ್ಧಸನ್ನದ್ಧರಾಗಿರುವ ಸೈನಿಕರು ನಿಂತಲ್ಲಿಯೇ ವಿಣ್ಮೂತ್ರೋತ್ಸರ್ಜನವನ್ನು ಮಾಡಿಬಿಡುತ್ತಾರೆ. ಅಂತಹ ಮಹಾಪರಾಕ್ರಮಿಯಾದ ಭೀಮನನ್ನಿಂದು ನೋಡಲು ಬಹುದುಃಖವಾಗುವುದು, ಕೃಷ್ಣ! ಹಸಿವು-ಬಾಯಾರಿಕೆಗಳಿಂದ ಬಳಲಿ-ಬೆಂಡಾಗಿ ನಿರಂತರವಾಗಿ ಸಂಚಾರಮಾಡುತ್ತಿರುವ ಭೀಮನು ಬಹುಕೃಶನಾಗಿ ಹೋಗಿದ್ದಾನೆ. ಆದರೆ ಇವನು ಯಾವಾಗ ಧನುರ್ಬಾಣಗಳನ್ನೂ, ಗದೆಯನ್ನೂ ಧರಿಸಿ ಶತ್ರುಗಳನ್ನು ಎದುರಿಸಿ ಯುದ್ಧಸನ್ನದ್ಧನಾಗಿ ನಿಲ್ಲುವನೋ ಆ ಸಮಯದಲ್ಲಿ ಪ್ರತಿಯೊಬ್ಬನನ್ನೂ ಸಿಗಿದುಬಿಡುತ್ತಾನೆ. ಇಂದಿನ ಕಷ್ಟಗಳೆಲ್ಲವೂ ಇವನ ಕಣ್ಮುಂದೆ ಸುಳಿದಾಡುತ್ತಿರುತ್ತವೆ. ಅದರಿಂದ ಇವನ ಶಕ್ತಿಯು ಇಮ್ಮಡಿಯಾಗಿ ಶತ್ರುಪಕ್ಷದ ನಿರ್ಮೂಲನವಾಗುತ್ತದೆ. ಇದು ನಿಜ. ಅಂತಹ ಸುದಿನವನ್ನು ನಾನೂ ನಿರೀಕ್ಷಿಸುತ್ತಿದ್ದೇನೆ. ಕೃಷ್ಣ! ಭೀಮನಿಗೆ ಸಮನಾದ ಬಲವು ತನಗೂ ಇರುವುದೆಂದು ಹೇಳಿಕೊಳ್ಳುವ ವ್ಯಕ್ತಿಯು ಈ ಪ್ರಪಂಚದಲ್ಲಿಯೇ ಇರುವುದಿಲ್ಲ. ಆದರೆ ಇಂದು ಮಾತ್ರ ಇವನ ಶರೀರವು ಬಿಸಿಲು-ಗಾಳಿಗಳಿಗೆ ಎಡೆಬಿಡದೇ ಸಿಕ್ಕಿ ಕೃಶವಾಗಿ ಹೋಗಿದೆ. ಹೀಗಿದ್ದರೂ ಇವನು ಯುದ್ಧಕ್ಕೆ ಸಿದ್ಧನಾಗಿ ನಿಂತರೆ ಶತ್ರುಪಕ್ಷದಲ್ಲಿ ಒಬ್ಬನೂ ಉಳಿಯದಂತೆ ಎಲ್ಲರನ್ನೂ ವಿನಾಶಮಾಡಿಬಿಡುತ್ತಾನೆ. ಹಿಂದೆ ಯುಧಿಷ್ಠಿರನು ರಾಜಸೂಯಯಾಗವನ್ನು ಮಾಡಿದ ಕಾಲದಲ್ಲಿ ಇವನು ಏಕಾಕಿಯಾಗಿ ಪೂರ್ವದಿಕ್ಕಿಗೆ ಪ್ರಯಾಣಮಾಡಿ ಆ ದಿಕ್ಕಿನಲ್ಲಿದ್ದ ರಾಜರನ್ನೂ ಮತ್ತು ಅವರ ಅನುಯಾಯಿಗಳನ್ನೂ ಪರಾಜಯಗೊಳಿಸಿ ಅವರನ್ನು ಯುಧಿಷ್ಠಿರನಿಗೆ ಆಶ್ರಿತರಾಜರನ್ನಾಗಿ ಮಾಡಿ, ಸ್ವಲ್ಪವಾದರೂ ಗಾಯಗೊಳ್ಳದೇ ಕ್ಷೇಮದಿಂದ ಹಿಂದಿರುಗಿದನು. ಅದೇ ಭೀಮನಿಂದು ನಾರುಮಡಿಯನ್ನುಟ್ಟು ಬಹುದುಸ್ತರ

ವಾದ ಜೀವನವನ್ನು ಕಾಡಿನಲ್ಲಿ ಕಳೆಯುತ್ತಿದ್ದಾನೆ. ನಿಶ್ಚಯವಾಗಿಯೂ ಇದು ನನಗೆ ಬಹುಖೇದವನ್ನುಂಟುಮಾಡಿದೆ, ಕೃಷ್ಣ! ಅದೇ ರಾಜಸೂಯಯಾಗದ ಕಾಲದಲ್ಲಿ ಸಹದೇವನು ಧನುರ್ಧರನಾಗಿ ದಕ್ಷಿಣದಿಕ್ಕಿಗೆ ಪ್ರಯಾಣಮಾಡಿ ಆ ದಿಕ್ಕಿನಲ್ಲಿದ್ದ ರಾಜರೆಲ್ಲರನ್ನೂ ಪರಾಜಯಗೊಳಿಸಿದನು. ಇವನು ಸಮುದ್ರ ತೀರದಲ್ಲಿದ್ದ ರಾಜರನ್ನೂ ಪರಾಭವಗೊಳಿಸಿ ಬಂದಿರುವನು. ಈ ನಕುಲ ನಾದರೋ ಏಕಾಕಿಯಾಗಿ ಪಶ್ಚಿಮದಿಕ್ಕಿನ ದೇಶಗಳನ್ನಾಳುತ್ತಿದ್ದ ಅರಸರನ್ನು ಎದುರಿಸಿ ಅವರೆಲ್ಲರನ್ನೂ ಪರಾಜಯಗೊಳಿಸಿ ಬಂದನು. ಅಂತಹವನಿಂದು ಈ ಅರಣ್ಯದಲ್ಲಿ ಅಲೆದಾಡುತ್ತಾ ಕಂದ-ಮೂಲ-ಫಲಗಳನ್ನು ತಿಂದುಕೊಂಡು, ಜಟೆಯನ್ನು ಧರಿಸಿ, ಧೂಳಿನಿಂದ ಧೂಸರಿತವಾದ ಶರೀರವುಳ್ಳವನಾಗಿದ್ದಾನೆ. ಈ ದ್ರೌಪದಿಯೇನು ಸಾಮಾನ್ಯಳೇ? ಕೃಷ್ಣ!

**ಸತ್ರೇ ಸಮೃದ್ಧೇಽತಿರಥಸ್ಯ ರಾಜ್ಞೋ**
**ವೇದೀತಲಾದುತ್ಪತಿತಾ ಸುತಾ ಯಾ ।**
**ಸೇಯಂ ವನೇ ವಾಸಮಿಮಂ ಸುದುಃಖಂ**
**ಕಥಂ ಸಹತ್ಯದ್ಯ ಸತೀ ಸುಖಾರ್ಹಾ ॥೨೦॥**

ಪಾಂಚಾಲಿಯು ಮಹಾರಥನಾದ ದ್ರುಪದರಾಜನ ಮಗಳು. ಅಯೋನಿಜೆಯು. ದ್ರುಪದನು ಯಜ್ಞಮಾಡಿದಾಗ ಯಜ್ಞಕುಂಡದಿಂದಲೇ ಪ್ರಾದುರ್ಭಾವಳಾದವಳು. ಇವಳು ಯಾವಾಗಲೂ ಸುಖದಲ್ಲಿಯೇ ಬೆಳೆದವಳು. ಅಂತಹವಳಿಂದು ಈ ಅರಣ್ಯದ ಕಷ್ಟವನ್ನು ಹೇಗೆತಾನೇ ಸಹಿಸಿಕೊಂಡಿರುವಳು? ಅರ್ಥ-ಕಾಮ-ಮೋಕ್ಷಗಳಿಗೆ ಮೂಲಭೂತವಾದುದೇ ಧರ್ಮ ; ಅಂತಹ ಧರ್ಮಕ್ಕೆ ಅಧಿದೇವತೆ ಯಮಧರ್ಮ ; ಮಹಾತ್ಮನಾದ ಯಮಧರ್ಮನ ಮಗ ಯುಧಿಷ್ಠಿರ. ಭೀಮನಾದರೋ ಸಕಲಜೀವಕೋಟಿಗಳಿಗೂ ಆಧಾರಭೂತನಾದ ವಾಯುವಿನ ಪುತ್ರ. ನಕುಲ-ಸಹದೇವರು ಸಾಕ್ಷಾತ್ ದೇವವೈದ್ಯರಾದ ಅಶ್ವಿನೀದೇವತೆಗಳ ಮಕ್ಕಳು. ಹೀಗಿರುವುದರಿಂದ ಇವರೆಲ್ಲರೂ ದೇವತೆಗಳ ಮಕ್ಕಳೇ ಆಗಿರುತ್ತಾರೆ. ಸಕಲರೂ ರಾಜಕುಮಾರರಾಗಿಯೇ ಜನಿಸಿರುವುದರಿಂದ ಸರ್ವದಾ ಸುಖದಲ್ಲಿಯೇ ಇರಲು ಅರ್ಹರು. ಇಂತಹವರಿಂದು ಯಾವ ವಿಧವಾದ ಸುಖವೂ ಇಲ್ಲದ ಈ ಅರಣ್ಯದಲ್ಲಿ ಹೇಗೆ ತಾನೇ ಕಾಲಯಾಪನೆ ಮಾಡುತ್ತಿದ್ದಾರೆ?

ಜಿತೇ ಹಿ ಧರ್ಮಸ್ಯ ಸುತೇ ಸಭಾರ್ಯೇ
ಸಭ್ರಾತೃಕೇ ಸಾನುಚರೇ ನಿರಸ್ತೇ ।
ದುರ್ಯೋಧನೇ ಚಾಪಿ ವಿವರ್ಧಮಾನೇ
ಕಥಂ ನ ಸೀದತ್ಯವನಿಃ ಸಶೈಲಾ ॥೨೨॥

ಧರ್ಮಪುತ್ರನಾದ ಯುಧಿಷ್ಠಿರನು ಪಗಡೆಯಾಟದಲ್ಲಿ ಎಂದು ಸೋತುಹೋದನೋ, ಎಂದು ಯುಧಿಷ್ಠಿರನನ್ನೇ ಅನುಸರಿಸಿ ಅವನ ಧರ್ಮಪತ್ನಿಯಾದ ದ್ರೌಪದಿಯೂ, ಅವನ ಅನುಜರೂ ಮತ್ತು ಸೇವಕರೂ ರಾಜ್ಯದಿಂದ ಹೊರಟುಬಂದರೋ–ಅಂದಿನಿಂದಲೇ ಅನೀತಿಪರಾಯಣ ನಾದ ದುರ್ಯೋಧನನ ಶುಭೋದಯವೂ ಪ್ರಾರಂಭವಾಯಿತು. ದುಷ್ಟ ನೊಬ್ಬನು ಇಷ್ಟು ಉಚ್ಛ್ರಾಯಸ್ಥಿತಿಗೆ ಬಂದಾಗಲೂ ಗಿರಿ-ಪರ್ವತಗಳಿಂದ ಕೂಡಿರುವ ಈ ಭೂಮಿಯೇಕೆ ಸೀಳಿಹೋಗಲಿಲ್ಲ?–ಈ ಸಂಶಯವು ನನ್ನನ್ನು ಬಹುವಾಗಿ ಪೀಡಿಸುತ್ತಿದೆ, ಕೃಷ್ಣ!"

೧೧೯ನೆಯ ಅಧ್ಯಾಯವು ಮುಗಿಯಿತು.

೧೨೦ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಸಾತ್ಯಕಿಯ ಶೌರ್ಯಪೂರ್ಣವಾದ ಉದ್ಗಾರ : ಶ್ರೀಕೃಷ್ಣನ ಮಾತಿಗೆ ಯುಧಿಷ್ಠಿರನ ಅನುಮೋದನೆ : ಪಯೋಷ್ಣೀನದಿಯ ತೀರದಲ್ಲಿ ಪಾಂಡವರ ನಿವಾಸ

ಬಲರಾಮನು ಹೀಗೆ ಹೇಳಿದನಂತರ ಸಾತ್ಯಕಿಯು ಮಾತನಾಡಲುಪ ಕ್ರಮಿಸಿ ರಾಮನನ್ನು ಕುರಿತು ಹೇಳಿದನು : "ಬಲಭದ್ರನೇ! ಇದು ವ್ಯಥೆ ಪಡುತ್ತಾ ಕುಳಿತುಕೊಳ್ಳುವ ಕಾಲವಲ್ಲ. ನಾವು ಮಾಡಬೇಕಾಗಿರುವ ಕಾರ್ಯದ ವಿಷಯವಾಗಿ ಯುಧಿಷ್ಠಿರನು ಯಾವುದೊಂದು ಮಾತನ್ನೂ ಹೇಳದಿದ್ದರೂ–ಈ ಸಮಯದಲ್ಲಿ ಬಂಧುಗಳಾದ ನಾವು ನಮ್ಮ ಕರ್ತವ್ಯವೇ ನೆಂಬುದನ್ನು ನಿರ್ಧರಿಸಿ ಕಾರ್ಯಮಾಡುವುದು ಸೂಕ್ತವಾಗಿದೆ.

ಯೇ ನಾಥವನ್ತೋಽದ್ಯ ಭವನ್ತಿ ಲೋಕೇ
ತೇ ನಾತ್ಮನಾ ಕರ್ಮ ಸಮಾರಭನ್ತೇ ।

ತೇಷಾಂ ತು ಕಾರ್ಯೇಷು ಭವನ್ತಿ ನಾಥಾಃ
ಶಿಬ್ಯಾದಯೋ ರಾಮ ಯಥಾ ಯಯಾತೇಃ ॥೨॥

ತಮ್ಮ ಹಿತರಕ್ಷಣೆಗೆ ಅನೇಕರಿರುವಾಗ ಅವರು (ಯುಧಿಷ್ಠಿರಾದಿಗಳು) ತಮ್ಮ ಸ್ವಹಿತರಕ್ಷಣೆಯಲ್ಲಿ ಔದಾಸೀನ್ಯದಿಂದಲೇ ಇರುವುದು ಸ್ವಾಭಾವಿಕ ವಾಗಿಯೇ ಇದೆ. ಯಯಾತಿಯ ಯೋಗ-ಕ್ಷೇಮಗಳನ್ನು ಶಿಬಿಯೇ ಮುಂತಾ ದವರು ನೋಡಿಕೊಳ್ಳುತ್ತಿದ್ದರೆಂಬುದನ್ನು ನಾವು ಕೇಳಿರುವೆವಲ್ಲವೇ? ಅಂತೆಯೇ ಇಂದು ಯುಧಿಷ್ಠಿರನು ತನ್ನ ಸಲುವಾಗಿ ಹೀಗೆಯೇ ಮಾಡ ಬೇಕೆಂದು ನಮಗೆ ನಿರ್ದೇಶಿಸದಿದ್ದರೂ–ಇವನಿಗೆ ಹಿತವಾಗುವ ಕಾರ್ಯವು ಯಾವುದೆಂಬುದನ್ನು ನಾವೇ ನಿರ್ಧರಿಸಿ ಕಾರ್ಯಪ್ರವೃತ್ತರಾಗುವುದು ಸೂಕ್ತ ವೆಂದು ನಾನು ಭಾವಿಸುತ್ತೇನೆ.

ನಾಥವಂತರು ಮತ್ತು ಅನಾಥರು ಎಂಬುದಾಗಿ ಪ್ರಪಂಚದಲ್ಲಿ ಎರಡು ವಿಧವಾದ ಮನುಷ್ಯರಿರುತ್ತಾರೆ. ಯಾರು ನಾಥವಂತರೋ ಅವರು ತಮ್ಮ ಯೋಗ-ಕ್ಷೇಮಗಳ ವಿಷಯದಲ್ಲಿ ಸ್ವಲ್ಪವೂ ಯೋಚಿಸುವುದಿಲ್ಲ. ಯಾರನ್ನು ಅವರು ನಾಥರೆಂದು ದೃಢವಾಗಿ ನಂಬಿರುತ್ತಾರೆಯೋ–ಆ ನಾಥರೇ ಅವರ ಸಕಲಕಾರ್ಯಗಳನ್ನೂ ಮಾಡಿಬಿಡುತ್ತಾರೆ. ಅನಾಥರಂತೆ ಅವರು ಕಷ್ಟಪಡ ಬೇಕಾಗಿಲ್ಲ.

ಬಲರಾಮ-ಶ್ರೀಕೃಷ್ಣರು, ಪ್ರದ್ಯುಮ್ನ-ಸಾಂಬರು ಮತ್ತು ನಾನೂ ಸೇರಿದರೆ ಮೂರುಲೋಕಗಳನ್ನೂ ರಕ್ಷಣೆಮಾಡಲು ಸಮರ್ಥರಾಗಿದ್ದೇವೆ. ಹೀಗಿರುವಾಗ ಸ್ವರಕ್ಷಣೆಯ ಭಾರವೆಲ್ಲವನ್ನೂ ಸಂಪೂರ್ಣವಾಗಿ ನಮ ಗೊಪ್ಪಿಸಿರುವ ಈ ಯುಧಿಷ್ಠಿರನು ಅನುಜರೊಡನೆ ಈ ಕಾಡಿನಲ್ಲೇಕಿರಬೇಕು? ನಾವುಗಳಿದ್ದೂ ಇವನು ವನವಾಸವನ್ನೇಕೆ ಅನುಭವಿಸುತ್ತಿದ್ದಾನೆ? ನಮ್ಮನ್ನು ನಾಥರನ್ನಾಗಿ (ರಕ್ಷಕರನ್ನಾಗಿ) ಮಾಡಿಕೊಂಡಿರುವ ಧರ್ಮಾತ್ಮನಾದ ಯುಧಿ ಷ್ಠಿರನು ಇಂತಹ ಕಷ್ಟಗಳನ್ನು ಖಂಡಿತವಾಗಿಯೂ ಅನುಭವಿಸಲಾಗದು. ಆದುದರಿಂದ ಈ ಕೂಡಲೇ ದಶಾರ್ಹಸೇನೆಯು (ಯಾದವಸೇನೆಯು) ದಿವ್ಯವಾದ ಕವಚಗಳನ್ನೂ, ದಿವ್ಯಾಯುಧಗಳನ್ನೂ ಧರಿಸಿ ಯುದ್ಧಸನ್ನದ್ಧವಾಗಿ

ಹೊರಡಲಿ. ನಮ್ಮ ವೃಷ್ಣಿಸೇನಾಬಲದಿಂದ ಪರಾಜಿತರಾದ ಧೃತರಾಷ್ಟ್ರನ ಮಕ್ಕಳು ಸಬಾಂಧವರಾಗಿ ಯಮಾಲಯವನ್ನು ಸೇರಲಿ. ದುರ್ಯೋಧನಾದಿಗಳನ್ನು ಯಮಾಲಯಕ್ಕೆ ಕಳುಹಿಸಲು ಶಾರ್ಙ್ಗಧನ್ವನಾದ ಈ ಶ್ರೀಕೃಷ್ಣನೂ ಬೇಕಾಗಿಲ್ಲ. ನೀನೊಬ್ಬನೇ ಸಾಕು. ಬಲರಾಮ! ನೀನು ಕೋಪೋದ್ಧತನಾಗಿ ಕೈಯಲ್ಲಿ ಹಲವನ್ನು ಹಿಡಿದು ಹೊರಟೆಯಾದರೆ ಈ ಪ್ರಪಂಚವೆಲ್ಲವನ್ನೂ ನಡುಗಿಸಲು ಸಮರ್ಥನಾಗುವೆ. ಆದುದರಿಂದ ನೀನೀಗಲೇ ಹಲಾಯುಧನಾಗಿ ಹೊರಟು–ಇಂದ್ರನು ಬಂಧು-ಬಾಂಧವರ ಸಮೇತನಾದ ವೃತ್ರಾಸುರನನ್ನು ಸಂಹಾರಮಾಡಿದಂತೆ–ಬಂಧು-ಮಿತ್ರಸಮೇತರಾದ ಧೃತರಾಷ್ಟ್ರನ ಮಕ್ಕಳನ್ನು ಸಂಹರಿಸು. ಕುಂತಿಯ ಮೂರನೆಯ ಮಗನಾದ ಅರ್ಜುನನು ನನಗೆ ಸೋದರಸಮಾನನು ; ನನ್ನ ನೆಚ್ಚಿನ ಗೆಳೆಯನು ಮತ್ತು ನನಗೆ ಸಾಕ್ಷಾತ್ ಆಚಾರ್ಯನೂ ಆಗಿದ್ದಾನೆ. ಅವನು ಶ್ರೀಕೃಷ್ಣನಿಗೆ ಆತ್ಮಸಮನಾಗಿದ್ದಾನೆ. ರಾಮ! ಶತ್ರುವನ್ನು ಪರಾಭವಗೊಳಿಸುವ ಕಾರಣದಿಂದ ಮಾನವರು ಎಂತಹ ಸುಪುತ್ರನನ್ನೂ, ಗುರುವು ಎಂತಹ ಸಚ್ಛಿಷ್ಯನನ್ನೂ ಅಪೇಕ್ಷಿಸುಡುವರೋ ಅಂತಹ ಸುಪುತ್ರನೂ, ಸುಶಿಷ್ಯನೂ ನಾನಾಗಿರುತ್ತೇನೆ. ಆದುದರಿಂದ ನಾನು ಈ ಸಮಯದಲ್ಲಿ ಯಾವುದು ಉತ್ತಮಕಾರ್ಯವೋ ಅದನ್ನೇ ಮಾಡಲಿಚ್ಛಿಸಿದ್ದೇನೆ. ಈ ಕಾರ್ಯವೇನೋ ಅತಿಕಷ್ಟಕರವಾಗಿರಬಹುದು. ಆದರೂ ಈ ಕಾರ್ಯದಲ್ಲಿ ಪ್ರವೃತ್ತನಾಗಲು ನಾನು ನಿರ್ಧರಿಸಿಬಿಟ್ಟಿದ್ದೇನೆ. ನಾನು ದುರ್ಯೋಧನನನ್ನೇ ಎದುರಿಸಿ ನಿಲ್ಲುತ್ತೇನೆ. ಅವನು ಅವ್ಯಾಹತವಾಗಿ ಪ್ರಯೋಗಮಾಡುವ ಬಾಣಗಳ ಸಾಲನ್ನು ಉತ್ತಮೋತ್ತಮವಾದ ನನ್ನ ಬಾಣಗಳಿಂದ ಕತ್ತರಿಸಿಬಿಡುತ್ತೇನೆ. ಸರ್ಪವಿಷಕ್ಕೆ ಸಮಾನವಾದ ಮತ್ತು ಅಗ್ನಿಕಲ್ಪವಾದ ನನ್ನ ತೀಕ್ಷ್ಣಬಾಣಗಳಿಂದ ಯುದ್ಧದಲ್ಲಿ ನನ್ನೆದುರಾಗಿ ಬರುವ ಯೋಧರ ತಲೆಗಳನ್ನು ಅವರ ಶರೀರಗಳಿಂದ ನಿಮಿಷಮಾತ್ರದಲ್ಲಿ ಪ್ರತ್ಯೇಕಿಸಿಬಿಡುತ್ತೇನೆ. ಥಳ-ಥಳಿಸುವ ನನ್ನ ಕತ್ತಿಯನ್ನು ಒರೆಯಿಂದ ತೆಗೆದು ಉಗ್ರರೂಪವನ್ನು ತಾಳಿ ಅವರ ಮೇಲೆ ಬಿದ್ದು ಆ ಯೋಧರ ತಲೆಗಳನ್ನು ಎವೆಯಿಕ್ಕುವುದರೊಳಗಾಗಿ ತುಂಡರಿಸಿಬಿಡುತ್ತೇನೆ. ಈ ರೀತಿಯಲ್ಲಿ ಅಲ್ಪಕಾಲದಲ್ಲಿಯೇ ದುರ್ಯೋಧನನ ಸೈನ್ಯವನ್ನು ನಾಶಮಾಡಿದ ಬಳಿಕ ದುರ್ಯೋಧನನನ್ನೂ ಮತ್ತು ಅವನ ಅನುಯಾಯಿಗಳನ್ನೂ ಸಂಹರಿಸುತ್ತೇನೆ. ಬಲದೇವ!

ಈ ಭೀಮನ ಅನುಯಾಯಿಗಳು ನಾನು ಯುದ್ಧದಲ್ಲಿ ತೋರಿಸುವ ಕೈಚಳಕವನ್ನು ನೋಡಿ ಹಿರಿಹಿಗ್ಗಲಿ. ನಾನು ತೀಕ್ಷ್ಣವಾದ ನನ್ನ ಕತ್ತಿಯನ್ನೂ ಮತ್ತು ಧನುರ್ಬಾಣಗಳನ್ನೂ ಹಿಡಿದು ಶತ್ರುಸೈನ್ಯದೊಳಗೆ ನುಗ್ಗಿ–ದೊಡ್ಡ ಹುಲ್ಲುಮೆದೆಯನ್ನು ಸಣ್ಣ ಬೆಂಕಿಯ ಕಿಡಿಯೊಂದು ಸುಟ್ಟು ಭಸ್ಮಮಾಡಿಬಿಡು ವಂತೆ–ಕೌರವಯೋಧರನ್ನು ತುಂಡರಿಸುವುದನ್ನು ನೋಡಿ ಸಂತೋಷಿಸಲಿ.

ಕೃಪರಾಗಲೀ, ದ್ರೋಣರಾಗಲೀ, ವಿಕರ್ಣನಾಗಲೀ, ಕರ್ಣನೇ ಆಗಲೀ ಈ ಪ್ರದ್ಯುಮ್ನನ ಅಮೋಘವಾದ ಧನುಸ್ಸಿನಿಂದ ಚ್ಯುತವಾಗುವ ಅವ್ಯಾಹತ ವಾದ ಬಾಣಗಳ ಘಾತವನ್ನು ಖಂಡಿತವಾಗಿಯೂ ಸಹಿಸಿಕೊಳ್ಳಲು ಸಮರ್ಥ ರಲ್ಲ. ಮೇಲಾಗಿ ಅರ್ಜುನನ ಮಗನಾದ ಅಭಿಮನ್ಯುವೇನು ಸಾಮಾನ್ಯನೇ? ಅವನ ಪರಾಕ್ರಮವೆಷ್ಟೆಂಬುದನ್ನು ನಾನು ತಿಳಿದಿರುತ್ತೇನೆ. ಅವನಾದರೋ ಶ್ರೀಕೃಷ್ಣನ ಮಗನಾದ ಪ್ರದ್ಯುಮ್ನನಂತೆಯೇ ರಣರಂಗದಲ್ಲಿ ಬಹಳ ಚತುರತೆ ಯಿಂದಲೂ, ಪರಾಕ್ರಮದಿಂದಲೂ ಯುದ್ಧಮಾಡುತ್ತಾನೆ. ಈ ಸಾಂಬನು ತನ್ನ ಭುಜಬಲ-ಪರಾಕ್ರಮಗಳಿಂದ ದುಃಶಾಸನನನ್ನು ಬೆನ್ನಟ್ಟಿಹೋಗಲಿ. ತನ್ನ ಪರಾಕ್ರಮದಿಂದ ದುಃಶಾಸನನ ಸೈನಿಕರನ್ನೂ ಅವನ ರಥ ಮತ್ತು ಸಾರಥಿಗಳನ್ನೂ ಧ್ವಂಸಮಾಡಲಿ. ಜಾಂಬವತಿಯ ಮಗನೇನಾದರೂ ಯುದ್ಧಕ್ಕಿಳಿದನೆಂದರೆ ನಿಶ್ಚಯವಾಗಿಯೂ ಇವನನ್ನೆದುರಿಸಲು ಶತ್ರುಪಕ್ಷದಿಂದ ಯಾರೂ ಮುಂದೆ ಬರಲಾರರು. ಇವನಿನ್ನೂ ಬಾಲಕನಾಗಿದ್ದಾಗಲೇ ಶಂಬರನೆಂಬ ರಾಕ್ಷಸನ ಸೈನ್ಯಗಳು ಇವನಿಂದ ಧ್ವಂಸಮಾಡಲ್ಪಟ್ಟುವು. ದುಂಡಾದ ಮತ್ತು ದಪ್ಪವಾದ ತೊಡೆಗಳಿಂದಲೂ, ಉದ್ದವಾದ ಕೈಗಳಿಂದಲೂ ಕೂಡಿದ್ದು ಮಹಾಪರಾಕ್ರಮದಿಂದ ಕಾದಾಡುತ್ತಿದ್ದ ಅಶ್ವಚಕ್ರನೆಂಬ ರಾಕ್ಷಸನನ್ನು ಜಾಂಬ ವತಿಯ ಮಗನು ಕ್ಷಣಮಾತ್ರದಲ್ಲಿ ಸಂಹರಿಸಿಬಿಟ್ಟನು. ರಥದಲ್ಲಿ ಕುಳಿತು ಧನುಷ್ಪಾಣಿಯಾಗಿ ಯುದ್ಧಕ್ಷೇತ್ರದಲ್ಲಿ ಮುನ್ನುಗ್ಗಿ ಹೋಗುವ ಈ ಸಾಂಬನನ್ನು ಎದುರಿಸಿ ನಿಲ್ಲುವ ಸಾಮರ್ಥ್ಯವುಳ್ಳವರು ಯಾರಿದ್ದಾರೆ? ಬಲಭದ್ರ! ಮೃತ್ಯುವಿನ ದವಡೆಗೆ ಸಿಕ್ಕಿದ ಮಾನವನು ಯಾವ ರೀತಿಯಲ್ಲಿ ಮರಣದಿಂದ ತಪ್ಪಿಸಿಕೊಳ್ಳುವ ಸಾಧ್ಯತೆಯಿಲ್ಲವೋ–ಅದೇ ರೀತಿಯಲ್ಲಿ ಈ ಸಾಂಬನಿಗೆದು ರಾಗಿ ಸಿಕ್ಕಿದ ಎದುರಾಳಿಯೊಬ್ಬನೂ ಪ್ರಾಣಸಹಿತವಾಗಿ ಇವನಿಂದ ತಪ್ಪಿಸಿ

ಕೊಂಡು ಹೋಗಲಾರನು. ಅಂತಹ ಅದ್ಭುತಪರಾಕ್ರಮವು ಇವನದಾಗಿರುತ್ತದೆ. ಶ್ರೀಕೃಷ್ಣನ ಪರಾಕ್ರಮದ ವಿಷಯವಾಗಿ ಹೇಳುವ ಅವಶ್ಯಕತೆಯೇ ಇಲ್ಲ. ಇವನು ತನ್ನ ತೀಕ್ಷ್ಣವಾದ ಬಾಣಗಳಿಂದ ಶತ್ರುಪಕ್ಷದ ಸೈನ್ಯಸಮೂಹವೆಲ್ಲವನ್ನೂ ಸುಟ್ಟುಬಿಡುವನಲ್ಲದೇ–ಮಹಾಪರಾಕ್ರಮಿಗಳೆನಿಸಿರುವ ಆ ಇಬ್ಬರು ಭೀಷ್ಮ-ದ್ರೋಣರನ್ನೂ, ಪುತ್ರರಿಂದ ಸುತ್ತುವರಿದು ನಿಲ್ಲುವ ಸೋಮದತ್ತನನ್ನೂ ಎದುರಿಸಿ ನಿಲ್ಲಲು ಸಮರ್ಥನಾಗಿದ್ದಾನೆ. ತ್ರಿಭುವನಗಳಲ್ಲಿ ಯಾರೇ ಎದುರಿಸಲು ಬಂದರೂ ಅವರನ್ನು ಸೋಲಿಸುವ ಸಾಮರ್ಥ್ಯವು ಶ್ರೀಕೃಷ್ಣನಿಗಿದೆ. ಕತ್ತಿ-ಗುರಾಣಿಗಳನ್ನೂ ಉತ್ತಮವಾದ ಧನುರ್ಬಾಣಗಳನ್ನೂ ಧರಿಸಿ, ಚಕ್ರಾಯುಧಪಾಣಿಯಾಗಿ ಉಜ್ವಲತೇಜಸ್ಸಿನಿಂದ ಬೆಳಗುತ್ತಾ ಯುದ್ಧಸನ್ನದ್ಧನಾಗಿ ನಿಲ್ಲುವ ಶ್ರೀಕೃಷ್ಣನನ್ನು ಎದುರಿಸಿ ನಿಲ್ಲುವವರು ಯಾರಾದರೂ ಇದ್ದಾರೆಯೇ? ಇವನು ಅಜೇಯನು. ಇವನು ದೇವತೆಗಳಿಂದಲೂ ಸೋಲಿಸಲ್ಪಡತಕ್ಕವನಲ್ಲ.

ಮಹಾಪರಾಕ್ರಮಿಯಾದ ಈ ಅನಿರುದ್ಧನೂ ಕತ್ತಿ-ಗುರಾಣಿಗಳನ್ನು ಧರಿಸಿದವನಾಗಿ–ಯಾಗಸಮಯದಲ್ಲಿ ವೇದಿಯನ್ನು ದರ್ಭೆಗಳಿಂದ ಅಲಂಕರಿಸುವಂತೆ–ತಲೆಯನ್ನು ಸವರಿದ ಧೃತರಾಷ್ಟ್ರನ ಮಕ್ಕಳ ಮುಂಡಗಳಿಂದ ರಣಾಂಗಣವನ್ನು ಅಲಂಕರಿಸಲಿ. ಗದ, ಉಲ್ಮುಕ, ಬಾಹುಕ, ಭಾನು, ನೀಥ, ಕುಮಾರನಾದ ನಿಶಠ, ರಣಪ್ರಚಂಡರಾದ ಸಾರಣ ಮತ್ತು ಚಾರುದೇಷ್ಣ–ಇವರೆಲ್ಲರೂ ತಮ್ಮ ವಂಶಯೋಗ್ಯವಾದ ಮತ್ತು ವೀರೋಚಿತವಾದ ಕಾರ್ಯದಲ್ಲಿ ಪ್ರವೃತ್ತರಾಗಲಿ. ವೃಷ್ಣಿ-ಭೋಜ-ಅಂಧಕರೇ ಮೊದಲಾದ ಯೋಧಮುಖ್ಯರು ಸಾತ್ವತಶೂರರನ್ನು ಸೇರಲಿ. ಇವರೆಲ್ಲರೂ ಒಟ್ಟಾಗಿ ಸೇರಿ ಸೈನ್ಯಸಮೇತರಾದ ಧೃತರಾಷ್ಟ್ರನ ಮಕ್ಕಳನ್ನು ಆಕ್ರಮಿಸಿ, ಪರಾಜಯಗೊಳಿಸಿ ಶಾಶ್ವತವಾದ ಸತ್ಕೀರ್ತಿಯನ್ನು ಈ ಲೋಕದಲ್ಲಿ ಪಡೆಯಲಿ.

ಬಲಭದ್ರನೇ! ಯುಧಿಷ್ಠಿರನು ತನ್ನಿಂದ ಪ್ರತಿಜ್ಞಾತವಾದ ವನವಾಸವನ್ನು ಮುಗಿಸಿ ಹಸ್ತಿನೆಗೆ ಬರುವವರೆಗೂ ಅರ್ಜುನನ ಮಗನಾದ ವೀರನಾದ ಅಭಿಮನ್ಯುವೇ ರಾಜ್ಯವನ್ನಾಳುತ್ತಿರಲಿ. ದ್ಯೂತದ ಸಮಯದಲ್ಲಿ ಹನ್ನೆರಡು

ವರ್ಷಗಳ ವನವಾಸವನ್ನೂ ಮತ್ತು ಒಂದುವರ್ಷ ಅಜ್ಞಾತವಾಸವನ್ನೂ ಮಾಡುವೆನೆಂಬ ಪ್ರತಿಜ್ಞೆಯನ್ನು ಧರ್ಮಾತ್ಮನಾದ, ಧರ್ಮನಿಷ್ಠನಾದ ಯುಧಿಷ್ಠಿರನು ಮಾಡಿದ್ದಾನೆ. ಈ ಪ್ರತಿಜ್ಞೆಯು ಮುಗಿದನಂತರದಲ್ಲಿ (ವನವಾಸವು ಕಳೆದನಂತರದಲ್ಲಿ) ಧರ್ಮರಾಜನು ಹಸ್ತಿನೆಗೆ ಆಗಮಿಸಿ ಸಿಂಹಾಸನಾರೂಢನಾಗಿ ನಮ್ಮಿಂದ ಅಬಾಧಿತವಾಗಿ ಮಾಡಲ್ಪಟ್ಟಿರುವ ಈ ಪೃಥ್ವಿಯನ್ನು ಆಳಲಿ. ಆ ವೇಳೆಗೆ ಹಸ್ತಿನೆಯಲ್ಲಿ ಧೃತರಾಷ್ಟ್ರನ ಮಕ್ಕಳಾಗಲೀ, ಕರ್ಣನಾಗಲೀ ಇರುವುದಿಲ್ಲ. ಈ ಮುಖ್ಯವಾದ ಕಾರ್ಯವನ್ನಿಂದು ನಾವು ಮಾಡಬೇಕಾಗಿದೆ. ಆ ಕಾರ್ಯವು ನಮಗೆ ನಿಶ್ಚಯವಾಗಿಯೂ ಕೀರ್ತಿದಾಯಕವಾಗುವುದು."

ಸಾತ್ಯಕಿಯ ಮಾತುಗಳನ್ನು ಕೇಳಿ ಶ್ರೀಕೃಷ್ಣನು ಹೇಳತೊಡಗಿದನು :

"ಮಧುವಂಶೋತ್ಪನ್ನನಾದ ಸಾತ್ಯಕಿಯೇ! ನೀನು ಹೇಳುವುದು ನಿಸ್ಸಂಶಯವಾಗಿಯೂ ನೂರಕ್ಕೆ ನೂರು ಭಾಗ ಸತ್ಯದಿಂದ ಕೂಡಿರುವುದು. ಅದೀನಸತ್ವನೇ! ನೀನು ಹೇಳಿದ ಮಾತುಗಳನ್ನು ನಾವೇನೋ ಪೂರ್ಣವಾಗಿ ಅಂಗೀಕರಿಸುತ್ತೇವೆ. ಆದರೆ ಕುರುವಂಶಪ್ರದೀಪನಾದ, ಧರ್ಮಾತ್ಮನಾದ ಯುಧಿಷ್ಠಿರನು ಮಾತ್ರ ಸ್ವಭುಜಬಲ-ಪರಾಕ್ರಮಗಳಿಂದ ಗಳಿಸದ ಅಥವಾ ಇತರರಿಂದ ಕೊಡಲ್ಪಡುವ ರಾಜ್ಯವನ್ನು ಖಂಡಿತವಾಗಿಯೂ ಸ್ವೀಕರಿಸಲಾರನು. ಇದು ಕ್ಷತ್ರಿಯೋಚಿತವಾದ ಧರ್ಮವಲ್ಲವೆಂದು ಇವನು ಭಾವಿಸುತ್ತಾನೆ. ಇಚ್ಛೆಯ ಪೂರಣಕ್ಕಾಗಲೀ, ಭಯದ ಕಾರಣದಿಂದಾಗಲೀ ಅಥವಾ ಲೋಭದ ಕಾರಣದಿಂದಾಗಲೀ–ಯುಧಿಷ್ಠಿರನು ಯಾವಾಗಲೂ ಅಧರ್ಮ ಮಾರ್ಗವನ್ನು ತುಳಿಯತಕ್ಕವನಲ್ಲ. ಭೀಮಾರ್ಜುನರೇ ಆಗಲೀ, ಅತಿರಥರಾದ ನಕುಲ-ಸಹದೇವರೇ ಆಗಲೀ, ದ್ರುಪದರಾಜನ ಮಗಳಾದ ದ್ರೌಪದಿಯೇ ಆಗಲೀ–ಕ್ಷತ್ರಿಯರಿಗೆ ಅನುಚಿತವಾದ ಮಾರ್ಗದಲ್ಲಿ ನಡೆಯಲು ಖಂಡಿತವಾಗಿಯೂ ಇಚ್ಛಿಪಡತಕ್ಕವರಲ್ಲ. ಯುದ್ಧದಲ್ಲಿ ಅಪ್ರತಿಮರಾದ ಭೀಮಾರ್ಜುನರಿಂದಲೂ, ನಕುಲ-ಸಹದೇವರಿಂದಲೂ ಪುರಸ್ಕೃತನಾದ ಈ ಯುಧಿಷ್ಠಿರನು ಅಖಂಡವಾದ ಈ ಭೂಮಂಡಲವನ್ನು ಶಾಸನಮಾಡದಿರಲು ಅಡಚಣೆ ಏನಿದೆ? (ಮಹಾಪರಾಕ್ರಮಿಗಳಾದ ಅನುಜರನ್ನು ಪಡೆದಿರುವ ಯುಧಿಷ್ಠಿರನು ಈ ಪೃಥ್ವಿಯನ್ನು ಸ್ವಭುಜಬಲ-ಪರಾಕ್ರಮಗಳಿಂದಲೇ ಜಯಿಸಿ ಆಳಿಯೇ ತೀರುವನು.) ಈ

ವಿಶ್ವಕ್ಕೆ ಇವನೇ ಸಾರ್ವಭೌಮನಾಗುವನು. ಈ ವಿಷಯದಲ್ಲಿ ಸ್ವಲ್ಪವಾದರೂ ಸಂಶಯಪಡುವ ಕಾರಣವಿಲ್ಲ.) ಯುದ್ಧವು ಸನ್ನಿಹಿತವಾದಾಗ ದ್ರುಪದರಾಜ, ಚೇದೀಪತಿ ಮತ್ತು ಕೇಕಯರಾಜರೊಡನೆ ನಾವೂ ಮತ್ತು ನಮ್ಮ ಸೈನಿಕರೂ ಸೇರಿ ಯುಧಿಷ್ಠಿರನ ಶತ್ರುಗಳನ್ನು ವಿನಾಶಗೊಳಿಸೋಣ. ಹೀಗೆ ಮಾಡುವುದು ನಮ್ಮ ಕರ್ತವ್ಯವೂ ಆಗಿರುವುದು. (ನಾವುಗಳೇ ಹೋಗಿ ಹಸ್ತಿನಾಪಟ್ಟಣಕ್ಕೆ ಮುತ್ತಿಗೆಹಾಕಿ, ಕೌರವರೊಡನೆ ಯುದ್ಧಮಾಡಿ ಅವರನ್ನು ಪರಾಜಯಗೊಳಿಸಿ ಯುಧಿಷ್ಠಿರನು ಅರಣ್ಯವಾಸವನ್ನು ಮುಗಿಸಿ ಹಿಂದಿರುಗಿ ಬರುವವರೆಗೂ ರಾಜ್ಯದ ಪಟ್ಟವನ್ನು ಅಭಿಮನ್ಯುವಿಗೆ ಕಟ್ಟುವುದು ಪ್ರಸಕ್ತ ಸಂದರ್ಭದಲ್ಲಿ ಸೂಕ್ತವಲ್ಲ. ಈ ಅಭಿಪ್ರಾಯಕ್ಕೆ ಧರ್ಮಾತ್ಮನಾದ ಯುಧಿಷ್ಠಿರನೂ ಒಪ್ಪುವುದಿಲ್ಲ.)"

ಕೃಷ್ಣನು ತನ್ನ ಖಚಿತವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದನಂತರ ಯುಧಿಷ್ಠಿರನು ಸಾತ್ಯಕಿಗೆ ಹೇಳಿದನು :

**ನೇದಂ ಚಿತ್ರಂ ಮಾಧವ ಯದ್ಬ್ರವೀಷಿ**
**ಸತ್ಯಂ ತು ಮೇ ರಕ್ಷ್ಯತಮಂ ನ ರಾಜ್ಯಮ್ ।**
**ಕೃಷ್ಣಸ್ತು ಮಾಂ ವೇದ ಯಥಾವದೇಕಃ**
**ಕೃಷ್ಣಂ ಚ ವೇದಾಹಮಥೋ ಯಥಾವತ್ ॥೨೭॥**

"ಮಾಧವ! (ಮಧುವಂಶೋತ್ಪನ್ನನಾದ ಸಾತ್ಯಕಿಯೇ!) ಮಹಾ ಪರಾಕ್ರಮಿಯಾಗಿರುವ ಮತ್ತು ನಮ್ಮ ವಿಷಯದಲ್ಲಿ ಹೆಚ್ಚು ಅಭಿಮಾನದಿಂದಿರುವ ನೀನು ಹೀಗೆ ಹೇಳುವುದರಲ್ಲಿ ಆಶ್ಚರ್ಯವೇನಿಲ್ಲ. ನೀನು ನಮ್ಮ ಮೇಲಿಟ್ಟಿರುವ ಅಭಿಮಾನವು ನಿಶ್ಚಯವಾಗಿಯೂ ಪ್ರಶಂಸಾರ್ಹವಾದುದು. ಆದರೆ ನನ್ನಿಂದ ಸರ್ವಪ್ರಕಾರದಿಂದಲೂ ಸತ್ಯವು ರಕ್ಷಿಸಲ್ಪಡಬೇಕೇ ಹೊರತು, ರಾಜ್ಯವಲ್ಲ. ಸತ್ಯಪರಿಪಾಲನೆಯೇ ನನ್ನ ಮೊದಲಿನ ಕರ್ತವ್ಯ. ಸತ್ಯಪರಿಪಾಲನೆಯ ಮೂಲಕವೇ ಪ್ರಾಪ್ತವಾಗುವ ರಾಜ್ಯದ ಪರಿಪಾಲನೆಯು ಎರಡನೆಯ ಕರ್ತವ್ಯವೆಂದು ನಾನು ಭಾವಿಸುತ್ತೇನೆ. ಈ ನನ್ನ ಮನೋಭಿಪ್ರಾಯವು ಪರಾತ್ಪರನಾದ ಶ್ರೀಕೃಷ್ಣನಿಗೆ ಮಾತ್ರ ತಿಳಿದಿರುವುದು. ಅಂತೆಯೇ

ಶ್ರೀಕೃಷ್ಣನು ಯಾರೆಂಬುದನ್ನೂ, ಅವನ ಆಂತರ್ಯವೇನೆಂಬುದನ್ನೂ ನಾನೂ ತಿಳಿದವನಾಗಿರುವೆನು. ಸಾತ್ಯಕಿಯೇ! ಪುರುಷಶ್ರೇಷ್ಠನಾದ ಶ್ರೀಕೃಷ್ಣನು ಯಾವ ಕಾಲದಲ್ಲಿ ಯುದ್ಧಮಾಡಬೇಕೆಂಬುದನ್ನು ಚೆನ್ನಾಗಿ ತಿಳಿದಿರುವನು. ಅವನು ನಿರ್ದೇಶಿಸಿದ ಕಾಲದಲ್ಲಿ ಶಿನಿಪ್ರವೀರನಾದ ನೀನೂ ಮತ್ತು ಕೇಶವನೂ ಸೇರಿ ಸುಯೋಧನನನ್ನು ಜಯಿಸುವುದು ಸಿದ್ಧವಾಗಿಯೇ ಇದೆ. (ಆದರೆ ಆ ಕಾಲವಿನ್ನೂ ಸನ್ನಿಹಿತವಾಗಿಲ್ಲ.) ಇಂದು ಇಲ್ಲಿಗೆ ಆಗಮಿಸಿರುವ ದಶಾರ್ಹವೀರರು ಹಿಂದಿರುಗಲಿ. ನನ್ನ ರಕ್ಷಕರೂ ಮತ್ತು ಈ ಪ್ರಪಂಚದ ರಕ್ಷಕರೂ (ನಾಥರೂ) ಆಗಿರುವ ನಿಮ್ಮನ್ನು ಇಲ್ಲಿ ನೋಡಿ ನಾನು ಹರ್ಷಿತನಾಗಿದ್ದೇನೆ. ನಾನು ಧರ್ಮಮಾರ್ಗದಿಂದ ಸ್ವಲ್ಪವಾದರೂ ಚ್ಯುತನಾಗುವುದಿಲ್ಲ. ನನ್ನ ಆಹ್ವಾನವನ್ನು ಅಂಗೀಕರಿಸಿ ಸಂತೋಷದಿಂದ ಪುನರಾಗಮಿಸುವ ನಿಮ್ಮೆಲ್ಲರನ್ನೂ ನೋಡುವೆನು. (ನೋಡುವ ದಿನವನ್ನು ನಿರೀಕ್ಷಿಸುತ್ತಿರುತ್ತೇನೆ.)"

ಜನಮೇಜಯ! ಧರ್ಮಾತ್ಮನಾದ ಯುಧಿಷ್ಠಿರನು ಹೀಗೆ ಹೇಳಿದ ಬಳಿಕ ಯಾದವರೆಲ್ಲರೂ ಅವನ ಮಾತನ್ನು ಸಮ್ಮತಿಸಿ ಹೊರಡಲು ಸಿದ್ಧರಾದರು. ಹೊರಡುವ ಮುನ್ನ ಅವರೆಲ್ಲರೂ ಯುಧಿಷ್ಠಿರನಿಗೆ ಸಾಷ್ಟಾಂಗಪ್ರಣಾಮಮಾಡಿ ಭೀಮ-ನಕುಲ-ಸಹದೇವರನ್ನು ಸ್ನೇಹದಿಂದ ಬಾಚಿ ತಬ್ಬಿಕೊಂಡರು. ಬಲರಾಮ-ಶ್ರೀಕೃಷ್ಣಪ್ರಮುಖರಾದ ಯಾದವರೆಲ್ಲರೂ ಯುಧಿಷ್ಠಿರಾದಿಗಳ ದರ್ಶನದಿಂದ ಸಂತುಷ್ಟರಾಗಿ ಅವರೆಲ್ಲರ ಅನುಮತಿಯನ್ನೂ ಪಡೆದು ದ್ವಾರಾವತಿಗೆ ಹಿಂದಿರುಗಿದರು. ಯಾದವರು ಹೊರಟುಹೋದನಂತರ ಪಾಂಡವರು ತಮ್ಮ ಯಾತ್ರೆಯನ್ನು ಮುಂದುವರಿಸಿದರು. ಧರ್ಮಾತ್ಮನಾದ ಯುಧಿಷ್ಠಿರನು ತನ್ನ ಅನುಜರೊಡನೆಯೂ, ಲೋಮಶರೊಡನೆಯೂ ಪುಣ್ಯನದಿಯಾದ, ವಿದರ್ಭರಾಜನಿಂದ ಪೂಜಿತವಾದ–ಯಜ್ಞದಲ್ಲಿನ ಸೋಮರಸದಂತೆ–ಅತಿರುಚಿಕರವಾದ ತೀರ್ಥದಿಂದ ಕೂಡಿದ್ದ ಪಯೋಷ್ಣೀ ನದಿಯ ತೀರಕ್ಕೆ ತೆರಳಿದನು. ಅವನು ಅನುಜರಿಂದೊಡಗೂಡಿ ಅಲ್ಲಿಗೆ ಬಂದೊಡನೆಯೇ ಅಲ್ಲಿದ್ದ ಬ್ರಾಹ್ಮಣರು ಧರ್ಮಾತ್ಮನಾದ ಯುಧಿಷ್ಠಿರನನ್ನು ನೋಡಿ ಆನಂದಭರಿತರಾಗಿ ಅವನಿಗೂ ಅವನ ಪರಿವಾರಕ್ಕೂ ಸ್ವಾಗತವನ್ನಿತ್ತು ಅವನ ಧರ್ಮನಿಷ್ಠೆಯನ್ನು ಬಹುವಾಗಿ ಕೊಂಡಾಡಿದರು."

೧೨೦ನೆಯ ಅಧ್ಯಾಯವು ಮುಗಿಯಿತು.

೧೨೧ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಲೋಮಶರಿಂದ ಗಯನ ಯಜ್ಞದ ಪ್ರಶಂಸೆ: ಪಯೋಷ್ಣೀನದೀ, ವೈಡೂರ್ಯಪರ್ವತ ಮತ್ತು ನರ್ಮದಾನದಿಗಳ ಮಾಹಾತ್ಮ್ಯೆಯ ಕಥನ : ಚ್ಯವನ-ಸುಕನ್ಯೆಯರ ಕಥಾಪ್ರಸಂಗ

ಲೋಮಶರು ಸ್ಥಳಮಾಹಾತ್ಮ್ಯವನ್ನು ಹೇಳಲುಪಕ್ರಮಿಸಿದರು :

"ಯುಧಿಷ್ಠಿರ! ಈ ಪಯೋಷ್ಣೀನದಿಯ ತೀರವು ಪರಮಪವಿತ್ರ ವಾದುದು. ಇಲ್ಲಿಯೇ ಹಿಂದೆ ನೃಗನೆಂಬ ಚಕ್ರವರ್ತಿಯು ಯಜ್ಞಮಾಡಿ ಸೋಮರಸದಿಂದ ಇಂದ್ರನನ್ನು ತೃಪ್ತಿಗೊಳಿಸಿದನು. ಈ ಸ್ಥಳದಲ್ಲಿಯೇ ದೇವತೆಗಳಿಂದಲೂ, ಇಂದ್ರನಿಂದಲೂ ಮತ್ತು ಪ್ರಜಾಪತಿಗಳಿಂದಲೂ ಅನೇಕಾನೇಕ ಯಜ್ಞಗಳು ಮಾಡಲ್ಪಟ್ಟು ಋತ್ವಿಜರಿಗೆ ಯಥೇಷ್ಟವಾದ ಭೂರಿದಕ್ಷಿಣೆಗಳು ಕೊಡಲ್ಪಟ್ಟಿವೆ. ಅಮೂರ್ತರಯಸ (ಗಯ) ನೆಂಬ ರಾಜಶ್ರೇಷ್ಠನು ಈ ಪವಿತ್ರಭೂಮಿಯಲ್ಲಿ ಏಳು ಅಶ್ವಮೇಧಯಾಗಗಳನ್ನು ಮಾಡಿ ವಜ್ರಪಾಣಿಯಾದ ಇಂದ್ರನನ್ನು ಸೋಮರಸದಿಂದ ತೃಪ್ತಿಗೊಳಿಸಿದ ನೆಂದು ನಾವು ಕೇಳಿರುತ್ತೇವೆ.

ಯುಧಿಷ್ಠಿರ! ಸಾಮಾನ್ಯವಾಗಿ ಯಜ್ಞಗಳಲ್ಲಿ ಮಣ್ಣಿನಿಂದ ಅಥವಾ ಮರದಿಂದ ಮಾಡಿದ ಪಾತ್ರೆಗಳನ್ನು ಉಪಯೋಗಿಸುತ್ತಾರೆ. ಆದರೆ ಅಮೂರ್ತರಯಸನು ಮಾಡಿದ ಆ ಏಳು ಅಶ್ವಮೇಧಯಾಗಗಳಲ್ಲಿಯೂ ಸ್ವರ್ಣಮಯವಾದ ಪಾತ್ರೆಗಳನ್ನೇ ಋತ್ವಿಜರು ಉಪಯೋಗಿಸುತ್ತಿದ್ದರು. ಆ ಏಳು ಅಶ್ವಮೇಧಗಳಲ್ಲಿಯೂ ಪ್ರತ್ಯೇಕ-ಪ್ರತ್ಯೇಕವಾಗಿ ಏಳು ಯೂಪಾಗ್ರದ ಬಳೆಗಳೂ, ಏಳು ಯೂಪಸ್ತಂಭಗಳೂ, ಏಳು ಸೋಮರಸಪಾತ್ರೆಗಳೂ, ಏಳು ಸ್ರುಕ್ಕುಗಳೂ ಮತ್ತು ಏಳು ಸ್ರುವಗಳೂ ಇದ್ದು, ಅವುಗಳೆಲ್ಲವೂ ಚಿನ್ನ ದಿಂದಲೇ ಮಾಡಲ್ಪಟ್ಟಿದ್ದುವು. ಅಶ್ವಮೇಧಯಜ್ಞಗಳ ಏಳು ಯೂಪಸ್ತಂಭ ಗಳ ಮೇಲೆಯೂ ಸುವರ್ಣಮಯವಾದ ಮತ್ತು ಪ್ರಕಾಶಮಾನವಾಗಿದ್ದ ಏಳು ಚಮಸಗಳಿದ್ದುವು. ಆ ಯಜ್ಞಸ್ತಂಭಗಳನ್ನು ದೇವತೆಗಳೊಡನೆ ಇಂದ್ರನೇ ಪ್ರತಿಷ್ಠಾಪನೆಮಾಡಿದನೆಂದು ನಾವು ಕೇಳಿದ್ದೇವೆ. ಗಯನು (ಅಮೂರ್ತ ರಯಸನು) ಮಾಡಿದ ಆ ಎಲ್ಲ ಯಜ್ಞಗಳಲ್ಲಿಯೂ ಇಂದ್ರನು ಸೋಮರಸ

ವನ್ನು ಪಾನಮಾಡಿ ಸಂತುಷ್ಟನಾದನು. ಅಂತೆಯೇ ಋತ್ವಿಜರೂ ಯಥೇಚ್ಛವಾಗಿ ದಕ್ಷಿಣೆಯನ್ನು ಪಡೆದು ಸಂತುಷ್ಟರಾದರು. ಗಯನು ಋತ್ವಿಜರಿಗಿತ್ತ ಸಂಭಾವನೆಯಂತೂ ಅಗಣ್ಯವಾಗಿದ್ದಿತು.

**ಸಿಕತಾ ವಾ ಯಥಾ ಲೋಕೇ ಯಥಾ ವಾ ದಿವಿ ತಾರಕಾಃ ।**
**ಯಥಾ ವಾ ವರ್ಷತೋ ಧಾರಾ ಅಸಂಖ್ಯೇಯಾಃ ಸ್ಮ ಕೇನಚಿತ್ ॥**

**ತಥೈವ ತದಸಂಖ್ಯೇಯಂ ಧನಂ ಯತ್ಪ್ರದದೌ ಗಯಃ ।**
**ಸದಸ್ಯೇಭ್ಯೋ ಮಹಾರಾಜ ತೇಷು ಯಜ್ಞೇಷು ಸಪ್ತಸು ॥೧೦॥**

ಮಹಾರಾಜ! ಭೂಮಿಯ ಮೇಲಿರುವ ಮಳಲಿನ ಕಣಗಳನ್ನು ಎಣಿಕೆಮಾಡಲು ಹೇಗೆ ಸಾಧ್ಯವಿಲ್ಲವೋ, ಆಕಾಶದಲ್ಲಿರುವ ನಕ್ಷತ್ರಗಳನ್ನು ಎಣಿಕೆಮಾಡಲು ಹೇಗೆ ಸಾಧ್ಯವಿಲ್ಲವೋ ಮತ್ತು ಮಳೆಯ ಧಾರೆಗಳನ್ನು ಎಣಿಕೆಮಾಡಲು ಹೇಗೆ ಸಾಧ್ಯವಿಲ್ಲವೋ–ಅಂತೆಯೇ ಗಯನು ಋತ್ವಿಜರಿಗಿತ್ತ ಅಪಾರವಾದ ಐಶ್ವರ್ಯವನ್ನು ಎಣಿಕೆಮಾಡಲು ಸಾಧ್ಯವಿರಲಿಲ್ಲ. ಆ ಐಶ್ವರ್ಯವು ಎಣಿಕೆಗೇ ಸಿಕ್ಕುವುದಾಗಿರಲಿಲ್ಲ.

ಯುಧಿಷ್ಠಿರ! ಗಯನು ವಿಶ್ವಕರ್ಮನಿಂದಲೇ ನಿರ್ಮಿತವಾದ ಅನೇಕಾನೇಕ ಸ್ವರ್ಣಮಯವಾದ ಧೇನುಗಳನ್ನು, ನಾನಾದೇಶಗಳಿಂದ ಯಜ್ಞಕ್ಕೆ ಆಗಮಿಸಿದ್ದ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟು ಅವರನ್ನು ತೃಪ್ತಿಪಡಿಸಿದನು. ಅವನು ಒಂದೊಂದು ಯಜ್ಞಮಾಡಿದಾಗಲೂ ಒಂದೊಂದು ಯಜ್ಞಸ್ತೂಪವನ್ನು ಸ್ಥಾಪಿಸುತ್ತಿದ್ದನು. ವಿಶ್ವದಲ್ಲಿ ಗಯನ ಯಜ್ಞಸ್ತಂಭವಿಲ್ಲದ ಸ್ಥಳವೇ ಇರಲಿಲ್ಲ. ವಿಶ್ವವೆಲ್ಲವೂ ಗಯನ ಯಜ್ಞಸ್ತಂಭಗಳಿಂದಲೇ ತುಂಬಿಹೋಗಿದ್ದಿತು. ಅಷ್ಟೊಂದು ಅಗಣಿತವಾದ ಯಜ್ಞಗಳನ್ನು ಅಮೂರ್ತರಯಸನು ಮಾಡಿದನು. ಅಷ್ಟೊಂದು ಯಾಗಗಳನ್ನು ಮಾಡಿ ದೇವತೆಗಳೊಡೆಯನಾದ ಇಂದ್ರನನ್ನು ಸೋಮರಸದಿಂದಲೂ–ಬ್ರಾಹ್ಮಣರನ್ನು ಅಗಣಿತವಾದ ದಕ್ಷಿಣೆಯಿಂದಲೂ ತೃಪ್ತಿಪಡಿಸಿದ್ದರಿಂದ ಅವನಿಗೆ ಇಂದ್ರಲೋಕವು ಪ್ರಾಪ್ತವಾಯಿತು.

**ಸ ಲೋಕಾನ್ಪ್ರಾಪ್ತವಾನೈನ್ದ್ರಾನ್ಕರ್ಮಣಾ ತೇನ ಭಾರತ ।**
**ಸಲೋಕತಾಂ ತಸ್ಯ ಗಚ್ಛೇತ್ಪಯೋಷ್ಣ್ಯಾಂ ಯ ಉಪಸ್ಪೃಶೇತ್ ॥**

ಗಯನು ಅಂದು ಯಜ್ಞಮಾಡಿದ ಈ ಸ್ಥಳದಲ್ಲಿ ಯಜ್ಞದ ಮಹತ್ತ್ವವು ಹಾಗೆಯೇ ಉಳಿದಿದೆ. ಈಗಲೂ ಈ ಪಯೋಷ್ಣೀನದಿಯಲ್ಲಿ ಸ್ನಾನಮಾಡಿದವರು ಗಯನಂತೆಯೇ ಇಂದ್ರಲೋಕವನ್ನು ಪಡೆಯುತ್ತಾರೆ. ಆದುದರಿಂದ, ಯುಧಿಷ್ಠಿರ! ನಿನ್ನ ಅನುಜರಿಂದೊಡಗೂಡಿ ನೀನು ಈ ಪುಣ್ಯನದಿಯಲ್ಲಿ ಸ್ನಾನಮಾಡು. ಈ ಮಹಾನದಿಯಲ್ಲಿ ಸ್ನಾನಮಾಡುವುದರಿಂದ ನಿಶ್ಚಯವಾಗಿಯೂ ಸಕಲಪಾಪಗಳಿಂದಲೂ ವಿಮುಕ್ತನಾಗುವೆ."

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

"ಮಹಾರಾಜ! ಲೋಮಶರು ಹೇಳಿದಂತೆ ಧರ್ಮಾತ್ಮನಾದ ಯುಧಿಷ್ಠಿರನು ತನ್ನ ಅನುಜರೊಡನೆ ಪಯೋಷ್ಣೀನದಿಯಲ್ಲಿ ಯಥಾವಿಧಿಯಾಗಿ ಸ್ನಾನಮಾಡಿದನು. ಅನಂತರದಲ್ಲಿ ತನ್ನ ಅನುಜರೊಡನೆಯೂ, ದ್ರೌಪದಿಯೊಡನೆಯೂ, ಲೋಮಶರೊಡನೆಯೂ ವೈಡೂರ್ಯಪರ್ವತಕ್ಕೂ ಮತ್ತು ನರ್ಮದಾನದಿಯ ತೀರಕ್ಕೂ ಪ್ರಯಾಣಮಾಡಿದನು. ಆ ಪವಿತ್ರಸ್ಥಳಗಳನ್ನು ಸೇರಿದನಂತರ ಲೋಮಶರು ಯುಧಿಷ್ಠಿರನಿಗೆ ಅಲ್ಲಿದ್ದ ರಮಣೀಯವಾದ ತೀರ್ಥಗಳನ್ನೂ ದೇವಸ್ಥಾನಗಳನ್ನೂ ತೋರಿಸಿ ಅವುಗಳ ಹಿಂದಿನ ಇತಿಹಾಸಗಳನ್ನೂ ವಿವರಿಸಿ ಹೇಳಿದರು. ಯುಧಿಷ್ಠಿರನು, ಲೋಮಶರು ಹೇಳಿದ ಎಲ್ಲ ಸ್ಥಳಗಳನ್ನೂ ತನ್ನ ಅನುಜರೊಡನೆ ಸಂದರ್ಶಿಸಿ ಸ್ನಾನ-ಪೂಜಾದಿಗಳನ್ನು ಯಥೋಚಿತವಾಗಿ ಮಾಡಿ ಮುಗಿಸಿದನು. ಆ ಪುಣ್ಯಸ್ಥಳಗಳಲ್ಲಿದ್ದ ಸಾವಿರಾರು ಬ್ರಾಹ್ಮಣರಿಗೆ ಯಥೋಚಿತವಾದ ದಕ್ಷಿಣೆಯನ್ನೂ ಕೊಟ್ಟನು.

ಅನಂತರದಲ್ಲಿ ಲೋಮಶರು ವೈಡೂರ್ಯಪರ್ವತದ ಮತ್ತು ನರ್ಮದಾನದಿಯ ಮಾಹಾತ್ಮ್ಯವನ್ನು ಹೇಳಲು ಉಪಕ್ರಮಿಸಿದರು.

**ದೇವಾನಾಮೇತಿ ಕೌನ್ತೇಯ ತಥಾ ರಾಜ್ಞಾಂ ಸಲೋಕತಾಮ್ ।**
**ವೈಡೂರ್ಯಪರ್ವತಂ ದೃಷ್ಟ್ವಾ ನರ್ಮದಾಮವತೀರ್ಯ ಚ ॥೧೯॥**
**ಸಂಧಿರೇಷ ನರಶ್ರೇಷ್ಠ ತ್ರೇತಾಯಾ ದ್ವಾಪರಸ್ಯ ಚ ।**
**ಏನಮಾಸಾದ್ಯ ಕೌನ್ತೇಯ ಸರ್ವಪಾಪೈಃ ಪ್ರಮುಚ್ಯತೇ ॥೨೦॥**

"ಕುಂತೀಪುತ್ರನೇ! ಯಾವ ಮನುಷ್ಯನು ಈ ವೈಡೂರ್ಯಪರ್ವತವನ್ನು ಸಂದರ್ಶಿಸಿ ಪುಣ್ಯತಮಳಾದ ಈ ನರ್ಮದೆಯಲ್ಲಿ ಸ್ನಾನಮಾಡುವವನೋ

ಅವನು ದೇವತೆಗಳೂ ಮತ್ತು ಧಾರ್ಮಿಕರಾದ ರಾಜರೂ ಪಡೆಯುವ ಉತ್ತಮಲೋಕಗಳನ್ನು ಪಡೆಯುತ್ತಾನೆ. ಈ ಸ್ಥಳವು ತ್ರೇತಾ ಮತ್ತು ದ್ವಾಪರಯುಗಗಳ ಸಮ್ಮಿಳನದ ಸ್ಥಾನವಾಗಿರುವುದು. ಮಾನವನು ತನ್ನ ಸತ್ಕಾರ್ಯಗಳಿಂದ ಪಾಪಗಳನ್ನು ಹೋಗಲಾಡಿಸಿಕೊಳ್ಳುವ ಪವಿತ್ರಸ್ಥಳವೂ ಇದಾಗಿರುವುದು. ಈ ಪವಿತ್ರಸ್ಥಳದಲ್ಲಿಯೇ ಶರ್ಯಾತಿಯು ಯಾಗಮಾಡಿದನು ಮತ್ತು ಇಂದ್ರನೇ ಪ್ರತ್ಯಕ್ಷನಾಗಿ ಬಂದು ಶರ್ಯಾತಿಯು ಮಾಡಿದ ಯಾಗದಲ್ಲಿ ಅಶ್ವಿನೀದೇವತೆಗಳೊಡನೆ ಸೋಮಪಾನಮಾಡಿದನು. ಭೃಗುವಿನ ಮಗನಾದ, ಮಹಾತಪಸ್ವಿಯಾದ ಚ್ಯವನಮಹರ್ಷಿಯು ಇಂದ್ರನ ಮೇಲೆ ಕೋಪಗೊಂಡು ಅವನ ಚಲನವಲನಗಳನ್ನೇ ಸ್ಥಗಿತಗೊಳಿಸಿಬಿಟ್ಟನು. ಆ ಮಹಾನುಭಾವನು ರಾಜಪುತ್ರಿಯಾದ ಸುಕನ್ಯೆಯನ್ನು ಪತ್ನಿಯನ್ನಾಗಿ ಪರಿಗ್ರಹಿಸಿದನು.”

ಲೋಮಶರ ಮಾತುಗಳನ್ನು ಕೇಳಿ ಆಶ್ಚರ್ಯಭರಿತನಾದ ಯುಧಿಷ್ಠಿರನು ಮಹರ್ಷಿಗಳನ್ನು ಪ್ರಶ್ನಿಸಿದನು :

“ಮಹರ್ಷಿಗಳೇ! ಷಡ್ಗುಣಪರಿಪೂರ್ಣನಾದ, ಪಾಕಶಾಸನನಾದ ಇಂದ್ರನು ಮಹಾತಪಸ್ವಿಯಾದ ಚ್ಯವನಮಹರ್ಷಿಯಿಂದ ನಿಸ್ತೇಜನಾಗಿ ಮಾಡಲ್ಪಟ್ಟಿದ್ದು ಹೇಗೆ? ಇದು ನನಗೆ ಬಹಳ ಆಶ್ಚರ್ಯವೆನಿಸಿದೆ. ಚ್ಯವನ ಮಹರ್ಷಿಯು ಇಂದ್ರನ ವಿಷಯದಲ್ಲಿ ಕೋಪಗೊಂಡ ಕಾರಣವಾದರೂ ಏನು? ಅಶ್ವಿನೀದೇವತೆಗಳಿಗೆ ಯಜ್ಞದಲ್ಲಿ ಸೋಮಪಾನಮಾಡುವ ಅಧಿಕಾರವಿರಲಿಲ್ಲವೆಂದು ಕೇಳಿದ್ದೆನು. ಅವರಿಗೆ ಇಂದ್ರನ ಜೊತೆಯಲ್ಲಿ ಕುಳಿತು ಸೋಮಪಾನಮಾಡುವ ಅಧಿಕಾರವನ್ನು ಚ್ಯವನಮಹರ್ಷಿಯು ಹೇಗೆ ಗಳಿಸಿಕೊಟ್ಟನು? ಈ ವಿಷಯಗಳೆಲ್ಲವನ್ನೂ ಸವಿಸ್ತರವಾಗಿ ತಿಳಿಸಲು ನೀವು ಸಮರ್ಥರಾಗಿರುವಿರಿ. ನಾನು ಈ ಸುಚರಿತೆಗಳನ್ನು ವಿಶದವಾಗಿ ಕೇಳಿ ತಿಳಿದುಕೊಳ್ಳಬೇಕೆಂಬ ಆಶಯದಿಂದಿರುವೆನು. ದಯಮಾಡಿ ಹೇಳಿರಿ.”

೧೨೧ನೇ ಅಧ್ಯಾಯವು ಮುಗಿಯಿತು.

೧೨೨ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಚ್ಯವನಮಹರ್ಷಿಯು ಸುಕನ್ಯೆಯನ್ನು ಪತ್ನಿಯನ್ನಾಗಿ ಪಡೆದುದು

ಲೋಮಶರು ಮುಂದುವರಿದು ಹೇಳುತ್ತಾರೆ :

"ಯುಧಿಷ್ಠಿರ! ಭೃಗುಮಹರ್ಷಿಗೆ ಚ್ಯವನನೆಂಬ ಮಗನಿದ್ದನು. ಮಹಾ ತೇಜಸ್ವಿಯಾದ ಚ್ಯವನನು ಈ ಸರಸ್ಸಿನ ತೀರದಲ್ಲಿಯೇ ಘೋರವಾದ ತಪಸ್ಸನ್ನು ಮಾಡಲು ಉಪಕ್ರಮಿಸಿದನು. ತೇಜಸ್ವಿಯಾದ ಆ ಋಷಿಪುತ್ರನು ಸ್ಥಾಣುವಿನಂತೆ ವೀರಾಸನದಲ್ಲಿ ಕುಳಿತು ತಪಶ್ಚರಣೆಮಾಡುತ್ತಿದ್ದನು. ಹಾಗೆ ತಪಸ್ಸುಮಾಡುತ್ತಾ ಅನೇಕ ವರ್ಷಗಳನ್ನು ಕಳೆದನು. ಕಾಲಕ್ರಮದಲ್ಲಿ ಅವನ ಸುತ್ತಲೂ ಹುತ್ತವು ಬೆಳೆದು ಆ ಹುತ್ತವು ಹುಲ್ಲಿನಿಂದಲೂ, ಬಳ್ಳಿ ಗಳಿಂದಲೂ ಮುಚ್ಚಿಹೋಗಿದ್ದಿತು. ಹುತ್ತದಿಂದ ಮುಚ್ಚಿಹೋಗಿದ್ದ ಚ್ಯವನನು ಒಂದು ಮಣ್ಣಿನ ಗುಡ್ಡೆಯಂತೆಯೇ ಕಾಣುತ್ತಿದ್ದನು. ಇಷ್ಟಾದರೂ ಅವನು ಸ್ಥಾಣುವಿನಂತೆಯೇ ವೀರಾಸನದಲ್ಲಿಯೇ ಕುಳಿತು ತಪಸ್ಸನ್ನು ಮಾಡುತ್ತಲೇ ಇದ್ದನು. ಹೀಗೆಯೇ ಅನೇಕ ವರ್ಷಗಳು ಕಳೆದುಹೋದುವು. ಒಮ್ಮೆ ಆ ದೇಶದ ರಾಜನಾದ ಶರ್ಯಾತಿಯು ರಮ್ಯವಾಗಿಯೂ-ಉತ್ತಮವಾಗಿಯೂ ಇದ್ದ ಇದೇ ಸರೋವರದ ತೀರಕ್ಕೆ ವಿಹಾರಾರ್ಥವಾಗಿ ತನ್ನ ಪರಿವಾರದೊಡನೆ ಆಗಮಿಸಿದನು. ಶರ್ಯಾತಿಯು ನಾಲ್ಕು ಸಾವಿರ ಸ್ತ್ರೀಯರನ್ನು ಪಾಣಿಗ್ರಹಣ ಮಾಡಿಕೊಂಡಿದ್ದನು. ಆದರೂ ಅವನಿಗೆ ಸುಲಕ್ಷಣವಾದ ಹುಬ್ಬುಗಳಿಂದ ಕೂಡಿದ್ದ, ಕಡುಚೆಲುವೆಯಾದ ಸುಕನ್ಯೆಯೆಂಬ ಒಬ್ಬಳೇ ಮಗಳಿದ್ದಳು. ತಂದೆಯೊಡನೆ ಸರೋವರದ ತೀರಕ್ಕೆ ವಿಹಾರಾರ್ಥವಾಗಿ ಆಗಮಿಸಿದ ಆ ಸುಕನ್ಯೆಯು ದೇವಯೋಗ್ಯವಾದ ಆಭರಣಗಳನ್ನು ಧರಿಸಿ ಗೆಳತಿಯರಿಂದೊಡ ಗೂಡಿ ಉದ್ಯಾನವನದಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತಿದ್ದಾಗ ಚ್ಯವನಮಹರ್ಷಿ ಯಿದ್ದ ಹುತ್ತದ ಸಮೀಪಕ್ಕೂ ಹೋದಳು. ಸಖಿಯರಿಂದ ಪರಿವೃತಳಾಗಿದ್ದ ಸುಕನ್ಯೆಯು ಉದ್ಯಾನವನದ ಸೊಬಗನ್ನು ನೋಡಿ ಯಾವುದಾದರೂ ಆಟ ವಾಡಲು ಇಚ್ಛಿಸಿದಳು. ರೂಪದಿಂದಲೂ, ವಯಸ್ಸಿನಿಂದಲೂ ಮದಿಸಿದ್ದ ಮತ್ತು ಮದನಪರವಶಳಾಗಿದ್ದ ಸುಕನ್ಯೆಯು ಸಖಿಯರೊಡನೆ ನಾನಾವಿಧವಾದ ಕ್ರೀಡೆಗಳನ್ನಾಡುತ್ತಿದ್ದಳು. ಪುಷ್ಪಭರಿತವಾದ ಮರದ ರೆಂಬೆಗಳನ್ನು ಮುರಿದು

ಹಾಕುತ್ತಿದ್ದಳು. ತನ್ನ ಸುತ್ತಲೂ ಮಿಂಚಿನಂತೆ ಅತ್ತಲಿತ್ತ ಓಡಾಡುತ್ತಿದ್ದ, ನಯನಮನೋಹರೆಯಾಗಿದ್ದ, ದೇವಯೋಗ್ಯವಾದ ಆಭರಣಗಳನ್ನು ಧರಿಸಿದ್ದ ರಾಜಪುತ್ರಿಯನ್ನು ಹುತ್ತದೊಳಗಿನಿಂದಲೇ ಚ್ಯವನನು ನೋಡಿದನು.



ಅನೇಕ ವರ್ಷಗಳಿಂದ ವೀರಾಸನದಲ್ಲಿ ಸ್ಥಾಣುವಿನಂತೆ ಕುಳಿತು ತಪಸ್ಸನ್ನು ಮಾಡುತ್ತಿದ್ದ ಮಹರ್ಷಿಯೂ ಸುಕನ್ಯೆಯ ಅನುಪಮಸೌಂದರ್ಯ ವನ್ನು ಕಂಡು ಕಾಮಪರವಶನಾದನು.

ತಪೋಬಲಯುಕ್ತನಾಗಿದ್ದ, ಬಹುಕೃಶನಾಗಿದ್ದ, ಕ್ಷೀಣವಾಗಿದ್ದ ಧ್ವನಿಯಿಂದ ಕೂಡಿದ್ದ, ಮಹಾಮಹಿಮನಾದ ವಿಪ್ರರ್ಷಿಯು ಸುಕನ್ಯೆಯನ್ನು

ಕರೆದನು. ಆದರೆ ಹುತ್ತದ ಹತ್ತಿರದಲ್ಲಿಯೇ ಇದ್ದರೂ ರಾಜಕುಮಾರಿಗೆ ಋಷಿಯು ಕರೆದುದು ಕೇಳಿಸಲಿಲ್ಲ. ಹುತ್ತದಲ್ಲಿ ಏನೋ ಶಬ್ದವಾದಂತಾಗಿ ಹುತ್ತದೊಳಗೆ ಇಣುಕಿ ನೋಡಿದಳು. ತೇಜಸ್ಸಿನಿಂದ ಮಿನುಗುತ್ತಿದ್ದ ಮಹರ್ಷಿಯ ಕಣ್ಣುಗಳನ್ನು ಮಾತ್ರ ಸುಕನ್ಯೆಯು ಹುತ್ತದಲ್ಲಿ ಕಂಡಳು. ಇದೇನಿರಬಹುದೆಂದು ಮನದಲ್ಲಿಯೇ ತರ್ಕಿಸುತ್ತಾ ಯೌವನಸಾಧಾರಣ ವಾದ ಕೌತೂಹಲದಿಂದ ಹತ್ತಿರವೇ ಇದ್ದ ಮುಳ್ಳನ್ನು ತೆಗೆದುಕೊಂಡು ಥಳ- ಥಳನೆ ಹೊಳೆಯುತ್ತಿದ್ದ ಮಹರ್ಷಿಯ ಕಣ್ಣುಗಳೆರಡನ್ನೂ ಸುಕನ್ಯೆಯು ಚುಚ್ಚಿ ಬಿಟ್ಟಳು. ಅದರಿಂದ ಚ್ಯವನನಿಗೆ ಬಹಳ ಯಾತನೆಯೂ ಆಯಿತು. ಉಗ್ರ ವಾದ ಕೋಪವೂ ಬಂದಿತು. ಕ್ರುದ್ಧನಾದ ಮಹರ್ಷಿಯು ಒಡನೆಯೇ ತನ್ನ ತಪಃಶಕ್ತಿಯಿಂದ ಶರ್ಯಾತಿಯ ಸೈನಿಕರ ಶಕೃನ್ಮೂತ್ರವಿಸರ್ಜನೆಗಳನ್ನು ನಿರ್ಬಂಧಿಸಿದನು.

ಅದರಿಂದಾಗಿ ಶರ್ಯಾತಿಯ ಸೈನಿಕರು ಬಹಳ ಸಂಕಟಕ್ಕೊಳಗಾದರು. ಔಷಧೋಪಚಾರಗಳಿಂದ ಯಾವ ಪ್ರಯೋಜನವೂ ಆಗಲಿಲ್ಲ. ದೊರೆಯ ಹತ್ತಿರ ಹೋಗಿ ವಿಷಯವನ್ನು ತಿಳಿಸಿದರು. ಮೇಧಾವಿಯಾದ ರಾಜನು ಒಡನೆಯೇ ಅದಕ್ಕೆ ಕಾರಣವನ್ನು ತರ್ಕಿಸತೊಡಗಿದನು. ಆ ವನದಲ್ಲಿ ಚ್ಯವನರ ಹುತ್ತವಿದ್ದುದು ಶರ್ಯಾತಿಗೂ ತಿಳಿದಿತ್ತು. ತನ್ನ ಸೈನಿಕರನ್ನು ಕರೆಸಿ ಕೇಳಿದನು :

"ವೃದ್ಧನಾಗಿಯೂ, ತಪೋನಿಷ್ಠನಾಗಿಯೂ, ಕೋಪಿಷ್ಠನಾಗಿಯೂ ಇರುವ ಈ ಚ್ಯವನಮಹರ್ಷಿಯ ವಿಷಯದಲ್ಲಿ ಯಾರಾದರೂ ಅಪರಾಧ ಮಾಡಿದ್ದಾರೆಯೇ? ನಿಮಗೆ ತಿಳಿದಿದ್ದರೆ ಕೂಡಲೇ ತಿಳಿಸಿರಿ. ವಿಣ್ಮೂತ್ರಗಳ ನಿರ್ಬಂಧವನ್ನು ಚ್ಯವನಮಹರ್ಷಿಯೇ ಮಾಡಿರಬೇಕು. ನಮ್ಮ ಪರಿವಾರ ದವರು ಅವರಿಗೆ ಅಪರಾಧವನ್ನೆಸಗಿರುವುದರಿಂದಲೇ ಮಹರ್ಷಿಯು ಕುಪಿತನಾಗಿ ಈ ಕಾರ್ಯವನ್ನು ಮಾಡಿರಬಹುದು. ಆದುದರಿಂದ ಮಹರ್ಷಿಗೆ ಅಪರಾಧಮಾಡಿದವರಾರೆಂಬುದನ್ನು ಕೂಡಲೇ ತಿಳಿಯಿರಿ."

"ಮಹಾರಾಜ! ಮಹರ್ಷಿಗೆ ಯಾರು ಅಪರಾಧವನ್ನು ಮಾಡಿರುವ ರೆಂಬ ವಿಷಯವು ನಮಗೆ ತಿಳಿಯದು. ನಮ್ಮಲ್ಲಂತೂ ಯಾರೂ ಮಹರ್ಷಿಯ

ಹುತ್ತದ ಬಳಿಗೂ ಹೋಗಿರುವುದಿಲ್ಲ. ಸರ್ವೋಪಾಯಗಳಿಂದಲೂ ಅಪರಾಧ ಮಾಡಿರುವವರು ಯಾರೆಂಬುದನ್ನು ತಿಳಿಯಲು ನೀನೇ ಸಮರ್ಥನಾಗಿರುವೆ."

ಅನಂತರದಲ್ಲಿ ರಾಜನು ತಾನೇ ತನ್ನ ಪರಿವಾರದಲ್ಲಿದ್ದ ಬಂಧು-ಮಿತ್ರರೆಲ್ಲರನ್ನೂ ಕರೆಯಿಸಿ ಸಾಮ-ದಾನ-ಭೇದ-ದಂಡೋಪಾಯಗಳ ಮೂಲಕ ವಿಚಾರಣೆಯನ್ನು ನಡೆಸಿದನು. ವಾಸ್ತವವಾಗಿ ಅವರಿಗೆ ಆ ವಿಷಯವಾಗಿ ಏನೂ ತಿಳಿದಿರಲಿಲ್ಲ. ಮಲ-ಮೂತ್ರಬಂಧನದಿಂದ ಸಂಕಟಪಡುತ್ತಿದ್ದ ಸೈನಿಕರನ್ನೂ ಮತ್ತು ಅದಕ್ಕೆ ಕಾರಣವನ್ನು ತಿಳಿಯದೇ ಬಹುದುಃಖಪಡುತ್ತಿದ್ದ ತಂದೆಯನ್ನೂ ನೋಡಿ ಸುಕನ್ಯೆಯೇ ತನ್ನ ತಂದೆಯ ಬಳಿಗೆ ಬಂದು ಆತನನ್ನು ಕುರಿತು ಹೇಳಿದಳು :

"ತಂದೆಯೇ! ನಾನು ಯಾವ ಮಹರ್ಷಿಗೂ ಯಾವ ಅಪರಾಧವನ್ನೂ ಮಾಡಿರುವುದಿಲ್ಲ. ಆದರೆ ನಾನೊಮ್ಮೆ ಸ್ವೇಚ್ಛೆಯಿಂದ ಈ ಉದ್ಯಾನವನದಲ್ಲಿ ಸಂಚರಿಸುತ್ತಿದ್ದಾಗ ಒಂದು ಹುತ್ತದ ಬಳಿಗೆ ಹೋದೆನು. ಆ ಹುತ್ತದೊಳಗೆ ಫಳ-ಫಳನೆ ಹೊಳೆಯುತ್ತಿದ್ದ ವಸ್ತುವೊಂದನ್ನು ಕಂಡೆನು. ಹೊಳೆಯುತ್ತಿದ್ದ ವಸ್ತುವನ್ನು ದೀಪದ ಹುಳುವೆಂದು ಭ್ರಮಿಸಿ ವಿನೋದಕ್ಕಾಗಿ ಅದನ್ನು ಮುಳ್ಳಿನಿಂದ ಚುಚ್ಚಿದೆನು. ಇಷ್ಟುಮಾತ್ರ ತಾನು ಮಾಡಿರುವುದು ನಿಶ್ಚಯ."

ಮಗಳ ಮಾತುಗಳನ್ನು ಕೇಳಿ ಒಡನೆಯೇ ಶರ್ಯಾತಿಯು ಹುತ್ತದ ಬಳಿಗೆ ಧಾವಿಸಿದನು. ಹುತ್ತವನ್ನು ಸ್ವಲ್ಪ ಅಗೆಯಿಸಿ ನೋಡಲಾಗಿ ವೃದ್ಧನೂ ಮಹಾತೇಜಸ್ವಿಯೂ ಆದ ಚ್ಯವನನು ವೀರಾಸನದಲ್ಲಿ ಕುಳಿತಿದ್ದುದು ಕಂಡುಬಂದಿತು. ರಾಜನು ಭಯದಿಂದ ಕೂಡಿದವನಾಗಿ ಎರಡು ಕೈಗಳನ್ನೂ ಜೋಡಿಸಿ ಮಹರ್ಷಿಯನ್ನು ಪ್ರಾರ್ಥಿಸಿದನು :

"ಮಹರ್ಷಿಗಳೇ! ಅಜ್ಞಾನದಿಂದಲೂ, ಬಾಲ್ಯಚಾಪಲ್ಯದಿಂದಲೂ ನನ್ನ ಮಗಳು ಮಾಡಿರುವ ಅಪರಾಧವನ್ನು ಕ್ಷಮಿಸುವ ಕೃಪೆಮಾಡಿರಿ."

ರಾಜನ ದೈನ್ಯಪೂರಿತವಾದ ಮಾತುಗಳನ್ನು ಕೇಳಿ ಭಗವಾನ್ ಚ್ಯವನನು ಹೇಳಿದನು :

"ಮಹಾರಾಜ! ಮಹಾಗರ್ವಿಷ್ಠೆಯಾಗಿರುವ ಈ ನಿನ್ನ ಮಗಳೇ ಅಗೌರವದಿಂದಲೂ, ಅನಾದರಣೆಯಿಂದಲೂ ನನ್ನ ಕಣ್ಣುಗಳನ್ನು ಮುಳ್ಳುಗಳಿಂದ

ಚುಚ್ಚಿರುವಳು. ಆದರೂ ರೂಪದಿಂದಲೂ, ಔದಾರ್ಯದಿಂದಲೂ ಕೂಡಿರುವ ನಿನ್ನ ಮಗಳನ್ನೇ ನಾನು ಮದುವೆಯಾಗಲು ಇಚ್ಛಿಸಿದ್ದೇನೆ. ಅವಳನ್ನು ನನಗೆ ಪಾಣಿಗ್ರಹಣಮಾಡಿಕೊಡುವೆಯಾದರೆ ಮಾತ್ರವೇ ನಾನು ಅವಳು ಮಾಡಿದ ಅಪರಾಧವನ್ನು ಕ್ಷಮಿಸುವೆನು."

ಮಹರ್ಷಿಯ ಮಾತುಗಳನ್ನು ಕೇಳಿದ ಶರ್ಯಾತಿಯು "ತನ್ನ ಏಕಮಾತ್ರ ಪ್ರಿಯಪುತ್ರಿಯನ್ನು ವೃದ್ಧನಾಗಿಯೂ, ನೇತ್ರಹೀನನಾಗಿಯೂ ಇರುವವನಿಗೆ ಕೊಡಬೇಕಾಯಿತಲ್ಲಾ!' ಎಂದು ಒಮ್ಮೆಯಾದರೂ ಯೋಚಿಸಲಿಲ್ಲ. ಮಹರ್ಷಿಯ ಆಶಯದಂತೆ ತನ್ನ ಮಗಳನ್ನು ಅವನಿಗೆ ಪಾಣಿಗ್ರಹಣ ಮಾಡಿಕೊಟ್ಟನು. ತಾನೊಪ್ಪಿದ ವಧುವಿನ ಕೈಹಿಡಿದ ಮಹರ್ಷಿಯು ರಾಜನ ವಿಷಯದಲ್ಲಿ ಪ್ರಸನ್ನನಾದನು. ಸೈನಿಕರ 'ರೋಗವು' ಕ್ಷಣಮಾತ್ರದಲ್ಲಿ ನಿವಾರಣೆಯಾಯಿತು. ಮಹರ್ಷಿಯ ಅನುಗ್ರಹವನ್ನು ಪಡೆದು ಶರ್ಯಾತಿಯು ಚತುರಂಗಬಲಸಮೇತನಾಗಿ ಪಟ್ಟಣಕ್ಕೆ ಹಿಂದಿರುಗಿದನು.

ನಿಷ್ಕಳಂಕಳಾದ ಸುಕನ್ಯೆಯೂ–'ರಾಜಕುಮಾರಿಯಾದ ತಾನು ವೃದ್ಧ ತಪಸ್ವಿಯ ಪತ್ನಿಯಾದೆನಲ್ಲಾ'–ಎಂದು ಚಿಂತಿಸಲಿಲ್ಲ. ಸತಿಯ ಧರ್ಮಾನುಸಾರವಾಗಿ ತಾನು ಕೈಹಿಡಿದ ಪತಿಯನ್ನು ಯಥಾಯೋಗ್ಯವಾಗಿ ಶುಶ್ರೂಷೆ ಮಾಡಲು ಉಪಕ್ರಮಿಸಿದಳು. ಪತಿಯೊಡನೆ ಅವಳೂ ತಪಶ್ಚರಣೆಮಾಡುತ್ತಾ ವ್ರತ-ನಿಯಮಾದ್ಯನುಷ್ಠಾನಪರಳಾಗಿ ಇರುತ್ತಿದ್ದಳು. ಅಗ್ನಿಪೂಜೆಯನ್ನೂ ಅತಿಥಿಗಳ ಪೂಜೆಯನ್ನೂ ಯಥಾಯೋಗ್ಯವಾಗಿ ಮಾಡುತ್ತಿದ್ದಳು. ಶುಭಾನನೆಯಾದ, ಅಸೂಯಾರಹಿತಳಾದ ಸುಕನ್ಯೆಯು ಈ ರೀತಿಯಲ್ಲಿ ಪತಿಯ ಮನೋಧರ್ಮವನ್ನನುಸರಿಸಿ ಪತಿಶುಶ್ರೂಷೆಮಾಡುತ್ತಾ, ಚ್ಯವನಮಹರ್ಷಿಗೆ ಅನುರೂಪಳಾದ ಸತಿಯೇ ಆದಳು."

೧೨೨ನೆಯ ಅಧ್ಯಾಯವು ಮುಗಿಯಿತು.

೧೨೩ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಅಶ್ವಿನೀದೇವತೆಗಳ ಅನುಗ್ರಹದಿಂದ ಚ್ಯವನನಿಗೆ ಸುಂದರರೂಪವೂ ಯೌವನವೂ ಪ್ರಾಪ್ತವಾದುದು

ಲೋಮಶರು ಕಥೆಯನ್ನು ಮುಂದುವರಿಸುತ್ತಾ ಹೇಳುತ್ತಾರೆ :

"ಯುಧಿಷ್ಠಿರ! ಚ್ಯವನ-ಸುಕನ್ಯೆಯರು ಪತಿ-ಪತ್ನಿಯರಾಗಿ ಅರಣ್ಯದಲ್ಲಿದ್ದ ಕಾಲದಲ್ಲಿ ಒಮ್ಮೆ ದೇವವೈದ್ಯರಾದ ಅಶ್ವಿನೀದೇವತೆಗಳು ಗಗನಮಾರ್ಗದಲ್ಲಿ ಸಂಚರಿಸುತ್ತಿದ್ದಾಗ-ಆಗತಾನೇ ನದಿಯಲ್ಲಿ ಮಿಂದು ಆವರಣ ವಸ್ತ್ರವಿಲ್ಲದಿದ್ದ ಸುಕನ್ಯೆಯನ್ನು ಕಂಡರು. ದರ್ಶನಯೋಗ್ಯಳಾದ, ದೇವರಾಜನ ಮಗಳಿಗೆ ಸಮಾನವಾದ ಶರೀರಕಾಂತಿಯಿಂದ ಕೂಡಿದ್ದ ಸುಕನ್ಯೆಯನ್ನು ಕಂಡೊಡನೆಯೇ ಅಶ್ವಿನೀದೇವತೆಗಳು ಸುಕನ್ಯೆಯ ಬಳಿಗೆ ಬಂದು ಅವಳನ್ನು ಕೇಳಿದರು :

"ವಾಮೋರುವೇ! ನೀನು ಯಾರು? ಯಾರ ಮಗಳು? ಈ ನಿರ್ಜನವಾದ ಕಾಡಿನಲ್ಲಿ ಏನು ಮಾಡುತ್ತಿರುವೆ? ಭದ್ರೇ! ಶೋಭನಾಂಗಿಯೇ! ನಾವು ನಿನ್ನ ವಿಷಯವನ್ನು ತಿಳಿಯಬೇಕೆಂಬ ಕುತೂಹಲದಿಂದಿರುವೆವು. ಎಲ್ಲ ವಿಷಯಗಳನ್ನೂ ಮರೆಮಾಚದೇ ಹೇಳು."

ಅಶ್ವಿನೀದೇವತೆಗಳ ಮಾತುಗಳನ್ನು ಕೇಳಿ ಸುಕನ್ಯೆಯು ನಾಚಿಕೆಯ ಮುಖಭಾವದಿಂದ ಕೂಡಿದವಳಾಗಿ ಹೇಳಿದಳು :

"ನಾಸತ್ಯರೇ! ನಾನು ಶರ್ಯಾತಿರಾಜನ ಮಗಳೂ ಮತ್ತು ಚ್ಯವನ ಮಹರ್ಷಿಯ ಪತ್ನಿಯೂ ಆಗಿರುವೆನು."

ಸುಕನ್ಯೆಯ ಮಾತನ್ನು ಕೇಳಿ ನಸುನಗುತ್ತಾ ಅಶ್ವಿನೀದೇವತೆಗಳು ಹೇಳಿದರು :

"ಕಲ್ಯಾಣಿಯೇ! ನಿನ್ನ ತಂದೆಯು ಅತ್ಯಂತವೃದ್ಧನಾಗಿರುವ ಈ ಚ್ಯವನಮಹರ್ಷಿಗೆ–ಅರಣ್ಯದಲ್ಲಿ ಸೌದಾಮಿನಿಯಂತೆ (ಮಿಂಚಿನಂತೆ) ವಿರಾಜಿಸುತ್ತಿರುವ ನಿನ್ನನ್ನು ಮದುವೆಮಾಡಿಕೊಟ್ಟ ಕಾರಣವಾದರೂ ಏನು? ನಿಶ್ಚಯವಾಗಿ ಹೇಳುವುದಾದರೆ ದೇವಲೋಕದಲ್ಲಿಯೂ ನಿನ್ನಂತಹ ರೂಪವತಿಯನ್ನು

ನಾವು ಇದುವರೆಗೂ ಕಂಡಿಲ್ಲ. ಆಭರಣಗಳನ್ನೂ ಧರಿಸದೇ, ಒಳ್ಳೆಯ ಉಡುಪನ್ನೂ ಉಡದೇ, ಯಾವ ವಿಧವಾದ ಅಲಂಕಾರವನ್ನೂ ಮಾಡಿಕೊಳ್ಳದೇ–ನೀನು ನಿನ್ನ ಅನುಪಮವಾದ ರೂಪ-ಲಾವಣ್ಯಗಳಿಂದ ಈ ಅರಣ್ಯವನ್ನೇ ಬೆಳಗುತ್ತಿರುವೆ. ಅರಣ್ಯದ ಧೂಳಿಯಿಂದ ಮುಚ್ಚಿರುವಾಗಲೇ ನಿನ್ನ ಶರೀರಸೌಂದರ್ಯವು ಹೀಗಿರುವಾಗ–ಸರ್ವಾಭರಣಗಳನ್ನೂ ಧರಿಸಿ, ಪೀತಾಂಬರವನ್ನೂ ಉಟ್ಟು ನೀನು ಅಲಂಕಾರವನ್ನು ಮಾಡಿಕೊಂಡೆಯಾದರೆ ನಿನ್ನ ಸೌಂದರ್ಯದ ಪರಮಾವಧಿಯು ಎಷ್ಟೆಂಬುದನ್ನು ಹೇಳಲು ಕೂಡ ಶಕ್ಯವಿಲ್ಲ. ಇಂತಹ ಅನುಪಮವಾದ ಸೌಂದರ್ಯದಿಂದ ಕೂಡಿರುವ ಮತ್ತು ಯೌವನದ ಹೊಸ್ತಿಲನ್ನು ಈಗ ತಾನೇ ಪ್ರವೇಶಿಸಿರುವ ನೀನು ಮುಪ್ಪಿನಿಂದ ಜರ್ಝರಿತನಾಗಿರುವ, ಕಾಮಭೋಗಗಳೇನೆಂಬುದನ್ನೇ ತಿಳಿಯದಿರುವ ಈ ತಪಸ್ವಿಯ ಸೇವೆಯನ್ನೇಕೆ ಮಾಡುತ್ತಿರುವೆ? ನಿನ್ನ ಪೋಷಣೆ ಮತ್ತು ರಕ್ಷಣೆಗಳನ್ನು ಮಾಡಲು ಕೂಡ ಅಸಮರ್ಥನಾಗಿರುವ ಈ ಚ್ಯವನನನ್ನು ಬಿಟ್ಟು ನಮ್ಮಿಬ್ಬರಲ್ಲಿ ಒಬ್ಬನನ್ನು ವರಿಸುವುದು ನಿನಗೆ ಯೋಗ್ಯವಾಗಿದೆ. ದೇವತೆಗೆ ಸಮಾನವಾದ ರೂಪ-ಕಾಂತಿಗಳುಳ್ಳ ನೀನು, ವೃದ್ಧನನ್ನು ಪಾಣಿಗ್ರಹಣ ಮಾಡಿಕೊಂಡ ಮಾತ್ರದಿಂದಲೇ ನಿನ್ನ ಯೌವನವನ್ನು ಹಾಳುಮಾಡಿಕೊಳ್ಳುವುದು ಖಂಡಿತವಾಗಿಯೂ ಉಚಿತವಲ್ಲ."

ಅಶ್ವಿನೀದೇವತೆಗಳು ಹೇಳಿದ ಆ ಮಾತಿಗೆ ಸತಿಯಾದ ಸುಕನ್ಯೆಯು ನಿರ್ದುಷ್ಟವಾದ ಉತ್ತರವನ್ನಿತ್ತಳು :

"ಯಮಳರೇ! ನಾನು ನನ್ನ ಪತಿಯಾದ ಚ್ಯವನಮಹರ್ಷಿಯಲ್ಲಿಯೇ ಗಾಢಾನುರಾಗವುಳ್ಳವಳಾಗಿರುವೆನು. ನನ್ನ ವಿಷಯದಲ್ಲಿ ಸ್ವಲ್ಪವಾದರೂ ಶಂಕೆ ಪಡಬೇಡಿರಿ."

"ಶುಭಾಂಗಿಯೇ! ನೀನು ನಿನ್ನ ಪತಿಯಲ್ಲಿ ಅಷ್ಟೊಂದು ಅನುರಾಗದಿಂದಿರುವೆಯಾದರೆ ದೇವವೈದ್ಯರಾಗಿರುವ ನಾವು ನಿನ್ನ ಪತಿಯನ್ನು ಸುಂದರನಾದ ಯುವಕನನ್ನಾಗಿ ಮಾಡಿಬಿಡುತ್ತೇವೆ. ಅನಂತರದಲ್ಲಿಯಾದರೂ ನೀನು ನಾವು ಮೂವರಲ್ಲಿ ಯಾರೊಬ್ಬನನ್ನಾದರೂ ಪತಿಯನ್ನಾಗಿ ವರಿಸಬೇಕು.

ಇದಕ್ಕಾದರೂ ಒಪ್ಪಿ ನಾವು ಹೇಳಿದಂತೆ ಮಾಡುವೆನೆಂದು ನೀನು ಮಾತು ಕೊಡುವೆಯಾದರೆ ನಿನ್ನ ಪತಿಯನ್ನು ಈಗಲೇ ಕರೆದುಕೊಂಡು ಬಾ."

ವೃದ್ಧನಾದ ಪತಿಯು ಯುವಕನಾಗುವುದು ಯಾವ ಯುವತಿಗೆ ತಾನೇ ಬೇಡವೆನಿಸುವುದು? ಆದರೂ ತನ್ನ ಪಾತಿವ್ರತ್ಯದ ಪರೀಕ್ಷಾಸಮಯವಿದೆಂದು ಸುಕನ್ಯೆಯು ತಿಳಿದುಕೊಂಡು, ಅಶ್ವಿನೀದೇವತೆಗಳು ಹೇಳಿದ ಮಾತಿಗೆ ಒಪ್ಪಿ, ತನ್ನ ಪತಿಯಾದ ಚ್ಯವನಮಹರ್ಷಿಯ ಬಳಿಗೆ ಹೋಗಿ ಅಶ್ವಿನೀದೇವತೆಗಳಿಗೂ–ತನಗೂ ನಡೆದ ಸಂಭಾಷಣೆಯನ್ನು ಯಥಾವತ್ತಾಗಿ ಪತಿಗೆ ವಿವರಿಸಿ ಹೇಳಿದಳು.

ಚ್ಯವನಮಹರ್ಷಿಯು ಸುಕನ್ಯೆಯು ಹೇಳಿದುದೆಲ್ಲವನ್ನೂ ಕೇಳಿ ಯೌವನವನ್ನು ಪಡೆಯಲು ದೇವತೆಗಳ ಚಿಕಿತ್ಸೆಗೊಳಪಡಲು ಒಪ್ಪಿದನು. ಪತಿಯ ಒಪ್ಪಿಗೆಯನ್ನು ಪಡೆದು ಒಡನೆಯೇ ಸುಕನ್ಯೆಯು ಅಶ್ವಿನೀದೇವತೆಗಳ ಬಳಿಗೆ ಬಂದು ತನ್ನ ಪತಿಯನ್ನು ಯುವಕನನ್ನಾಗಿ ಮಾಡಬಹುದೆಂದು ಹೇಳಿದಳು.

'ಹಾಗಾದರೆ ಕೂಡಲೇ, ನಿನ್ನ ಪತಿಯು ಈ ಜಲಾಶಯದೊಳಗೆ ಪ್ರವೇಶಮಾಡಲಿ'–ಎಂದು ಯಮಳರು ಹೇಳಿ ಸಮೀಪದಲ್ಲಿಯೇ ಇದ್ದ ಸರೋವರವನ್ನು ಸುಕನ್ಯೆಗೆ ತೋರಿಸಿದರು. ಯೌವನವನ್ನೂ, ಯೌವನದ ಸೌಕುಮಾರ್ಯವನ್ನೂ ಪಡೆಯಲಿಚ್ಛಿಸಿದ ಚ್ಯವನನು ಅಶ್ವಿನೀದೇವತೆಗಳು ಹೇಳಿದಂತೆ ಒಡನೆಯೇ ಸರೋವರದೊಳಗಿಳಿದನು. ಚ್ಯವನನೊಡನೆ ಅಶ್ವಿನೀದೇವತೆಗಳೂ ಸರೋವರದೊಳಗಿಳಿದರು. ಮೂವರೂ ಒಂದೇ ಬಾರಿ ನೀರೊಳಗೆ ಮುಳುಗಿ ಮರುಕ್ಷಣದಲ್ಲಿಯೇ ದಿವ್ಯಾಭರಣಗಳಿಂದ ಅಲಂಕೃತರಾಗಿ ಮನಮೋಹಕವಾದ ರೂಪಗಳನ್ನು ಧರಿಸಿ ಯುವಕರಾಗಿ ಸರೋವರದಿಂದ ಹೊರಕ್ಕೆ ಬಂದರು. ಯಾರೊಬ್ಬರಲ್ಲಿಯೂ ಯಾವ ವಿಧವಾದ ವ್ಯತ್ಯಾಸವನ್ನೂ ಕಾಣುವ ಸಾಧ್ಯತೆಯಿರಲಿಲ್ಲ. ಅವರ ಮುಖ, ಕೈ-ಕಾಲುಗಳು, ಅವರು ಧರಿಸಿದ್ದ ವಸ್ತ್ರಾಭರಣಗಳು–ಸಕಲವೂ ಒಂದೇ ಸಮನಾಗಿದ್ದುವು. ಏಕರೂಪವನ್ನು ಧರಿಸಿದ್ದ ಮೂವರೂ ಮೇಲೆ ಬಂದು ತವಕದಿಂದ ನೋಡುತ್ತಿದ್ದ ಸುಕನ್ಯೆಗೆ ಹೇಳಿದರು :

"ಸುಂದರಾಂಗಿಯೇ! ನಾವು ಮೂವರೂ ನಿನ್ನ ಪತಿಗಳಾಗಲು ಇಷ್ಟ ವುಳ್ಳವರಾಗಿದ್ದೇವೆ. ಆದರೆ ನೀನು ನಮ್ಮ ಮೂವರಲ್ಲಿ ಯಾರನ್ನು ಮೋಹಿಸು ವೆಯೋ ಅವರನ್ನು ವರಿಸಬಹುದು."



ಏಕರೂಪರಾಗಿರುವ ಆ ಮೂವರಲ್ಲಿ ತನ್ನ ಪತಿಯು ಯಾರೆಂಬುದನ್ನು ಹೇಗೆ ತಾನೇ ತಿಳಿಯುವುದು? ಸುಕನ್ಯೆಗದು ಸಮಸ್ಯೆಯೇ ಆಯಿತು. ಸ್ವಲ್ಪಹೊತ್ತು ಬಹುವಾಗಿ ತರ್ಕಿಸಿದಳು. ತನ್ನ ಪಾತಿವ್ರತ್ಯವನ್ನೇ ಪಣವನ್ನಾಗಿಟ್ಟು ಪತಿಯನ್ನು ಧ್ಯಾನಮಾಡಿ, ಆ ಮೂವರಲ್ಲಿ ತನ್ನ ಪತಿಯಾದ ಚ್ಯವನ ಮಹರ್ಷಿಯು ಯಾರೆಂಬುದನ್ನು ಸಾಧ್ವಿಯಾದ ಸುಕನ್ಯೆಯು ತಿಳಿದು ಕೊಂಡಳು. ಪತಿಯ ಮುಂದೆ ಧಾವಿಸಿ ಆತನ ಕೈಹಿಡಿದಳು. ಹೀಗೆ ಚ್ಯವನ ನನ್ನೇ ಪುನಃ ಸುಕನ್ಯೆಯು ವರಿಸಿದಳು.

ಚ್ಯವನಮಹರ್ಷಿಗೆ ಉಂಟಾದ ಆನಂದಕ್ಕಂತೂ ಪಾರವೇ ಇಲ್ಲವಾಯಿತು. ರೂಪವತಿಯಾದ ಭಾರ್ಯೆ, ಅಂತಹ ಭಾರ್ಯೆಯೊಡನೆ ರಮಿಸಲು ತಕ್ಕುದಾದ ಯೌವನ ಮತ್ತು ಅನುರೂಪವಾದ ಶರೀರಸೌಂದರ್ಯ–ಇವುಗಳನ್ನು ಪಡೆದ ಚ್ಯವನನು ಆನಂದಭರಿತನಾಗಿ ಅಶ್ವಿನೀದೇವತೆಗಳಿಗೆ ಹೇಳಿದನು :

"ಯಮಳರೇ! ನಿಮ್ಮ ಚಿಕಿತ್ಸೆಯಿಂದಾಗಿ ಮುದುಕನಾಗಿದ್ದ ನಾನು ಯುವಕನಾದೆನು. ನಾನು ಯೌವನವನ್ನೂ, ಸೌಂದರ್ಯವನ್ನೂ ಪಡೆದೆನಲ್ಲದೇ–ನನಗೆ ಅನುರೂಪಳಾದ ಭಾರ್ಯೆಯನ್ನೂ ನಿಮ್ಮ ಅನುಗ್ರಹದಿಂದ ಪಡೆದೆನು. ಇದರಿಂದಾಗಿ ನಾನು ನಿಮ್ಮ ವಿಷಯದಲ್ಲಿ ಸಂತುಷ್ಟನಾಗಿರುವೆನು. ನೀವು ಮಾಡಿದ ಉಪಕಾರಕ್ಕೆ ಪ್ರತಿಯಾಗಿ ನಾನು ನಿಮಗೆ, ದೇವತೆಗಳಿಗೆ ಅಧಿಪತಿಯಾದ ಇಂದ್ರನ ಸಮ್ಮುಖದಲ್ಲಿಯೇ ಸೋಮಪಾನವನ್ನು ಮಾಡಿಸುವೆನು. ಇದು ನನ್ನ ಸತ್ಯವಚನವಾಗಿದೆ."

ಚ್ಯವನಮಹರ್ಷಿಯ ಮಾತುಗಳನ್ನು ಕೇಳಿ ಅಶ್ವಿನೀದೇವತೆಗಳು ಆನಂದಭರಿತರಾಗಿ ಸ್ವರ್ಗಲೋಕಕ್ಕೆ ಪ್ರಯಾಣಮಾಡಿದರು.

ಇತ್ತಲಾಗಿ ಚ್ಯವನ-ಸುಕನ್ಯೆಯರೂ ದೇವತೆಗಳೋಪಾದಿಯಲ್ಲಿ ತಮ್ಮ ಕಾಲವನ್ನು ಸುಖವಾಗಿ ಕಳೆಯುತ್ತಿದ್ದರು.

೧೨೩ನೆಯ ಅಧ್ಯಾಯವು ಮುಗಿಯಿತು.

೧೨೪ನೆಯ ಅಧ್ಯಾಯ — ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಶರ್ಯಾತಿಯ ಯಜ್ಞಸಮಯದಲ್ಲಿ ಚ್ಯವನನು ಇಂದ್ರನ ವಿಷಯದಲ್ಲಿ ಕುಪಿತನಾಗಿ ವಜ್ರಾಯುಧವನ್ನೇ ಸ್ತಂಭನಗೊಳಿಸಿದುದು : ಇಂದ್ರನ ವಿನಾಶಕ್ಕಾಗಿ ಚ್ಯವನನಿಂದ ಮದಾಸುರನ ಉತ್ಪತ್ತಿ

ಯುಧಿಷ್ಠಿರ! ಚ್ಯವನಮಹರ್ಷಿಯು ಅಶ್ವಿನೀದೇವತೆಗಳ ಅನುಗ್ರಹದಿಂದ ನವಯೌವನವನ್ನು ಪಡೆದನೆಂಬ ವಾರ್ತೆಯು ಚ್ಯವನಮಹರ್ಷಿಯ ಮಾವನಾದ ಶರ್ಯಾತಿಗೂ ತಿಳಿಯಿತು. ಮಹಾರಾಜನು ಆನಂದಭರಿತನಾಗಿ ಚತುರಂಗಬಲಸಮೇತನಾಗಿಯೂ–ಪರಿವಾರದೊಡನೆಯೂ ಚ್ಯವನ

ಮಹರ್ಷಿಯ ಆಶ್ರಮಕ್ಕೆ ಆಗಮಿಸಿದನು. ದೇವಪುತ್ರರಿಗೆ ಸಮಾನವಾದ ರೂಪ-ಯೌವನಗಳನ್ನು ಪಡೆದು ಸುಖಾಸೀನರಾಗಿದ್ದ ಚ್ಯವನ-ಸುಕನ್ಯೆಯ ರನ್ನು ಕಂಡು ಶರ್ಯಾತಿಗೂ ಅವನ ಪತ್ನಿಗೂ ಉಂಟಾದ ಆನಂದಕ್ಕೆ ಪಾರವೇ ಇರಲಿಲ್ಲ. ಚಕ್ರವರ್ತಿಯೊಬ್ಬನು ಪ್ರಪಂಚದ ಸಕಲದೇಶಗಳನ್ನೂ ಗೆಲ್ಲುವುದ ರಿಂದ ಎಷ್ಟು ಆನಂದಪಡುವನೋ ಅದಕ್ಕಿಂತಲೂ ಹೆಚ್ಚಾದ ಆನಂದವನ್ನು ಶರ್ಯಾತಿಯು ಪಡೆದನು. ರಾಜಧಾನಿಯಿಂದ ಆಗಮಿಸಿದ ಶರ್ಯಾತಿ ಯನ್ನೂ ಮತ್ತು ಅವನ ಪರಿವಾರವನ್ನೂ ಚ್ಯವನಮಹರ್ಷಿಯು ಆದರದಿಂದ ಸ್ವಾಗತಿಸಿ ಸತ್ಕರಿಸಿದನು. ಅರ್ಘ್ಯ-ಪಾದ್ಯ-ಫಲಾಹಾರಾದಿಗಳು ಮುಗಿದ ನಂತರ ಶರ್ಯಾತಿಯು ಸುಖಾಸೀನನಾಗಿ ಕುಳಿತು ಚ್ಯವನಮಹರ್ಷಿಯೊಡನೆ ಮಂಗಳದಾಯಕವಾದ, ಮನೋಜ್ಞವಾದ ಕಥನಗಳಲ್ಲಿ ತಲ್ಲೀನನಾದನು. ಆ ಮಾತುಕತೆಗಳ ಮಧ್ಯದಲ್ಲಿ ಚ್ಯವನಮಹರ್ಷಿಯು ರಾಜ ನೊಡನೆ ಬಹುಸಂತೋಷದಾಯಕವಾದ ಒಂದು ಮಾತನ್ನು ಹೇಳಿದನು :

"ಮಹಾರಾಜ! ನಾನು ನಿನ್ನಿಂದ ಒಂದು ಮಹಾಯಜ್ಞವನ್ನು ಮಾಡಿಸುತ್ತೇನೆ. ಯಜ್ಞಕ್ಕೆ ಬೇಕಾಗುವ ಸಂಭಾರಗಳನ್ನು ಈ ಕೂಡಲೇ ಸಿದ್ಧಪಡಿಸು."

ಯುಧಿಷ್ಠಿರ! ಚ್ಯವನಮಹರ್ಷಿಯ ಆ ಮಾತಿನಿಂದಾಗಿ ಶರ್ಯಾತಿಗೆ ಮಹಾನಂದವಾಯಿತು. ಚ್ಯವನನ ಮಾತಿನಂತೆ ರಾಜನು ಯಜ್ಞಮಾಡ ಲೊಪ್ಪಿದನು. ಯಜ್ಞದ ಆರಂಭಕ್ಕೆ ಪ್ರಶಸ್ತವಾದ ಮುಹೂರ್ತವಿದ್ದ ದಿನದಂದು ಶರ್ಯಾತಿಯು ಸರ್ವಕಾಮಸಮೃದ್ಧಿಯಿಂದ ಕೂಡಿರುವ, ಉತ್ತಮೋತ್ತಮವಾದ ಯಜ್ಞಶಾಲೆಯನ್ನು ಕಟ್ಟಿಸಿದನು. ಶರ್ಯಾತಿಯು ಆರಂಭಿಸಿದ ಆ ಯಜ್ಞಕ್ಕೆ ಚ್ಯವನಮಹರ್ಷಿಯೇ ಪುರೋಹಿತನಾದನು.

ಯುಧಿಷ್ಠಿರ! ಆ ಯಾಗದಲ್ಲಿ ನಡೆದ ಅದ್ಭುತಘಟನೆಗಳನ್ನು ನಿನಗೆ ವಿವರಿಸಿ ಹೇಳುವೆನು ; ಕೇಳು :

ಯಜ್ಞಾಂಗವಾದ ಸಕಲಕರ್ಮಗಳೂ ಮುಗಿದನಂತರ ಚ್ಯವನ ಮಹರ್ಷಿಯು ದೇವವೈದ್ಯರಾದ ಅಶ್ವಿನೀದೇವತೆಗಳಿಗೆ ವಿಧಿಪೂರ್ವಕವಾಗಿ

ಸೋಮರಸವನ್ನು ಸಮರ್ಪಿಸಲು ಗ್ರಹವನ್ನು (ಸೋಮರಸವಿರುವ ಪಾತ್ರೆ ಯನ್ನು ) ಕೈಯಲ್ಲಿ ಹಿಡಿದು ಮಂತ್ರವನ್ನು ಪುನಶ್ಚರಣೆಮಾಡತೊಡಗಿದನು. ಆ ವೇಳೆಗೆ ಸರಿಯಾಗಿ ಇಂದ್ರನು ಆಗಮಿಸಿ ಚ್ಯವನಮಹರ್ಷಿಯನ್ನು ತಡೆಯುತ್ತಾ ಹೇಳಿದನು :

**ಉಭಾವೇತೌ ನ ಸೋಮಾರ್ಹೌ ನಾಸತ್ಯಾವಿತಿ ಮೇ ಮತಿಃ ।**
**ಭಿಷಜೌ ದಿವಿ ದೇವಾನಾಂ ಕರ್ಮಣಾ ತೇನ ನಾರ್ಹತಃ ॥೯॥**

"ಮಹರ್ಷಿಯೇ! ಈ ಅಶ್ವಿನೀದೇವತೆಗಳಿಬ್ಬರೂ ಸೋಮರಸವನ್ನು ಪಾನಮಾಡಲು ಅನರ್ಹರೆಂಬುದು ನನ್ನ ಅಭಿಪ್ರಾಯವಾಗಿದೆ. ಇವರು ದೇವತೆಗಳ ವೈದ್ಯರಾಗಿರುತ್ತಾರೆ. ಇವರ ಈ ವೈದ್ಯವೃತ್ತಿಯೇ ಇವರನ್ನು ಸೋಮರಸಪಾನಮಾಡಲು ಅನರ್ಹರನ್ನಾಗಿ ಮಾಡಿರುತ್ತದೆ. ಆದುದರಿಂದ ಮಂತ್ರಪೂತವಾದ ಸೋಮರಸವನ್ನು ಇವರಿಗೆ ಕೊಡುವುದು ಖಂಡಿತ ವಾಗಿಯೂ ಸರಿಯಲ್ಲ."

ಚ್ಯವನನು ಹೇಳುತ್ತಾನೆ :

**ಮಹೋತ್ಸಾಹೌ ಮಹಾತ್ಮಾನೌ ರೂಪದ್ರವಿಣವತ್ತರೌ ।**
**ಯೌ ಚಕ್ರತುರ್ಮಾಂ ಮಘವನ್ವೃನ್ದಾರಕಮಿವಾಜರಮ್ ॥೧೦॥**

**ಋತೇ ತ್ವಾಂ ವಿಬುಧಾಂಶ್ಚಾನ್ಯಾನ್ಕಥಂ ವೈ ನಾರ್ಹತಃ ಸವಮ್ ।**
**ಅಶ್ವಿನಾವಪಿ ದೇವೇನ್ದ್ರ ದೇವೌ ವಿದ್ಧಿ ಪುರಂದರ ॥೧೧॥**

"ಮಹೇಂದ್ರನೇ! ಹೀಗೇಕೆ ಹೇಳುವೆ? ಇವರು ಮಹೋತ್ಸಾಹಶಾಲಿ ಗಳಾದ ದೇವತೆಗಳು ; ಇವರು ಮಹಾತ್ಮರು ; ಅತ್ಯಮೋಘವಾದ ರೂಪ ಸಂಪತ್ತಿಯುಳ್ಳವರು ; ಮೇಲಾಗಿ ಇವರು ವೃದ್ಧನಾಗಿದ್ದ ನನ್ನನ್ನು ಸಾಕ್ಷಾತ್ ದೇವತೆಯಂತೆಯೇ ಯುವಕನನ್ನಾಗಿ ಮಾಡಿರುವರು. ಹೀಗಿರುವಾಗ ನಿನ್ನ ಮತ್ತು ಇತರ ದೇವತೆಗಳ ಹೊರತಾಗಿ ಯಜ್ಞದಲ್ಲಿ ಸೋಮಪಾನಮಾಡಲು ಈ ಅಶ್ವಿನೀದೇವತೆಗಳಿಗೆ ಅಧಿಕಾರವೇಕಿಲ್ಲ? ಇವರು ಯಾವ ಕಾರಣದಿಂದ ಅನರ್ಹರಾಗಿರುವರು? ಅಶ್ವಿನೀದೇವತೆಗಳನ್ನೂ ಇತರ ದೇವತೆಗಳಂತೆಯೇ ಪರಿಗಣಿಸುವುದು ನಿನಗೆ ಸಾಧುವಾಗಿದೆ."

ಇಂದ್ರನು ಹೇಳುತ್ತಾನೆ :

**ಚಿಕಿತ್ಸಕೌ ಕರ್ಮಕರೌ ಕಾಮರೂಪಸಮನ್ವಿತೌ ।**
**ಲೋಕೇ ಚರನ್ತೌ ಮರ್ತ್ಯಾನಾಂ ಕಥಂ ಸೋಮಮಿಹಾರ್ಹತಃ ॥೧೨॥**

"ಪೂಜ್ಯನೇ! ಇವರು ಚಿಕಿತ್ಸಕರು. ಆದುದರಿಂದಲೇ ಇವರು ಸರ್ವದಾ ಇತರರ ಸೇವೆಯನ್ನೇ ಮಾಡತಕ್ಕವರಾಗಿರುತ್ತಾರೆ. ತಮಗಿಷ್ಟವಾದ ರೂಪಗಳನ್ನು ಧರಿಸುತ್ತಿರುತ್ತಾರೆ. ಮೇಲಾಗಿ ಮಾನವಲೋಕದಲ್ಲಿ ಯಾವಾಗಲೂ ಸಂಚರಿಸುತ್ತಿರುತ್ತಾರೆ. ಇಂತಹವರು ಮಂತ್ರಪೂತವಾದ ಸೋಮರಸವನ್ನು ಕುಡಿಯಲು ಹೇಗೆ ಅರ್ಹರಾಗುತ್ತಾರೆ?"

ಚ್ಯವನಮಹರ್ಷಿಯು ಎಷ್ಟೇ ಸಮಾಧಾನವನ್ನು ಹೇಳಿದರೂ ಇಂದ್ರನು ಒಪ್ಪಲಿಲ್ಲ. ಅಶ್ವಿನೀದೇವತೆಗಳು ಸೋಮರಸವನ್ನು ಪಾನಮಾಡಲು ಅನರ್ಹರೆಂದೂ, ಅವರಿಗೆ ಮಂತ್ರಪೂತವಾದ ಸೋಮರಸವನ್ನು ಖಂಡಿತವಾಗಿಯೂ ಕೊಡಕೂಡದೆಂದೂ ಇಂದ್ರನು ಪದೇ-ಪದೇ ಹೇಳುತ್ತಲೇ ಇದ್ದನು.

ಅದನ್ನು ಕಂಡು ಬೇಸತ್ತ ಚ್ಯವನಮಹರ್ಷಿಯು ಇಂದ್ರನ ಮಾತನ್ನು ನಿರಾಕರಣೆಮಾಡಿ ತನ್ನ ಸಂಕಲ್ಪದಂತೆ ಅಶ್ವಿನೀದೇವತೆಗಳಿಗೆ ಸೋಮರಸವನ್ನು ಕೊಟ್ಟೇತೀರುವೆನೆಂದು ನಿಶ್ಚಯಿಸಿ ಅಶ್ವಿನೀದೇವತೆಗಳಿಗೆ ಅರ್ಪಿಸಲು ಸೋಮರಸದ ಉತ್ತಮಾಂಶವನ್ನು ತೆಗೆದುಕೊಳ್ಳುವುದರಲ್ಲಿದ್ದಾಗ ಬಲಹಂತಕನಾದ ಇಂದ್ರನು ಚ್ಯವನಮಹರ್ಷಿಗೆ ಪುನಃ ಹೇಳಿದನು :

**ಆಭ್ಯಾಮರ್ಥಾಯ ಸೋಮಂ ತ್ವಂ ಗ್ರಹೀಷ್ಯಸಿ ಯದಿ ಸ್ವಯಮ್ ।**
**ವಜ್ರಂ ತೇ ಪ್ರಹರಿಷ್ಯಾಮಿ ಘೋರರೂಪಮನುತ್ತಮಮ್ ॥೧೩॥**

"ಮಹರ್ಷಿಯೇ! ನೀನು ನನ್ನ ಮಾತನ್ನು ನಿರಾಕರಿಸಿ ಆ ಅಶ್ವಿನೀ ದೇವತೆಗಳಿಗೆ ಸೋಮರಸವನ್ನು ಕೊಡಲು ಸೋಮರಸವಿರುವ ಪಾತ್ರೆಯನ್ನು ಮೇಲೆತ್ತಿದೆಯಾದರೆ–ಒಡನೆಯೇ ನಾನು ಪ್ರಪಂಚದಲ್ಲಿರುವ ಸಕಲ ಶಸ್ತ್ರಗಳಲ್ಲಿಯೂ ಶ್ರೇಷ್ಠವಾದ ಈ ವಜ್ರಾಯುಧವನ್ನೇ ನಿನ್ನ ಮೇಲೆ ಪ್ರಯೋಗಿಸುವೆನು."

ಇಂದ್ರನ ಮಾತುಗಳನ್ನು ಕೇಳಿದ ಚ್ಯವನಮಹರ್ಷಿಯು ಇಂದ್ರನ ಕಡೆಗೊಮ್ಮೆ ತಿರುಗಿ ನಸುನಕ್ಕು ಸೋಮರಸವಿದ್ದ ಪಾತ್ರೆಯನ್ನು ಅಶ್ವಿನೀ

ದೇವತೆಗಳಿಗೆ ಅರ್ಪಿಸುವ ಸಲುವಾಗಿ ಕೈಯಲ್ಲಿ ತೆಗೆದುಕೊಂಡನು. ಅಂತೆಯೇ ಇಂದ್ರನು ಚ್ಯವನಮಹರ್ಷಿಯ ಮೇಲೆ ಪ್ರಯೋಗಿಸಲು ವಜ್ರಾಯುಧವನ್ನು ಕೈಯಲ್ಲಿ ಹಿಡಿದು ಪ್ರಯೋಗಿಸಲು ಸಿದ್ಧನಾಗಲಾಗಿ, ಚ್ಯವನಮಹರ್ಷಿಯು ತನ್ನ ಮಂತ್ರಶಕ್ತಿಯಿಂದ ವಜ್ರಾಯುಧವನ್ನು ಹಿಡಿದಿದ್ದ ಇಂದ್ರನ ಕೈಯನ್ನೇ ಸ್ತಂಭನಗೊಳಿಸಿಬಿಟ್ಟನು. ವಜ್ರಾಯುಧವನ್ನು ಪ್ರಯೋಗಿಸಲು ಮೇಲೆತ್ತಿದ್ದ



ಇಂದ್ರನ ಬಾಹುವು ಹಾಗೆಯೇ ನಿಂತುಹೋಯಿತು. ಚ್ಯವನಮಹರ್ಷಿಯು ಇಂದ್ರನ ಬಾಹುವನ್ನು ಅತ್ಯದ್ಭುತವಾಗಿ ಸ್ತಂಭನಗೊಳಿಸಿ ಮಂತ್ರ ಪುನಶ್ಚರಣೆಮಾಡಿ ಸೋಮರಸವನ್ನು ಅಗ್ನಿಯಲ್ಲಿ ಹೋಮಮಾಡಿದನು. ಕೃತಕೃತ್ಯನಾದ ಚ್ಯವನಮಹರ್ಷಿಯು ಅಷ್ಟರಿಂದಲೇ ತೃಪ್ತನಾಗದೇ

ಇಂದ್ರನಿಗೆ ಹಿಂಸೆಕೊಡಲು ನಿಶ್ಚಯಿಸಿದವನಾಗಿ ತನ್ನ ತಪೋಬಲದಿಂದ 'ಮದ' ಎಂಬ ಹೆಸರಿನ ರಾಕ್ಷಸನನ್ನು ಸೃಷ್ಟಿಸಿದನು. ಆ ಮದರಾಕ್ಷಸನು ಮಹಾಪರಾಕ್ರಮಿಯಾಗಿಯೂ, ಮಹಾಕಾಯನಾಗಿಯೂ ಇದ್ದನು. ಅವನ ಶರೀರದ ಪರಿಮಾಣವನ್ನಳೆಯಲು ಸುರಾಸುರರಿಗೂ ಶಕ್ಯವಿರಲಿಲ್ಲ. ಅವನ ಮುಖವು ಬಹುಘೋರವಾಗಿದ್ದಿತು. ಅವನ ಕೋರೆದಾಡೆಗಳು ಬಹಳ ಚೂಪಾಗಿದ್ದುವು. ಕೆಳಗಿನ ಗಲ್ಲವು ಭೂಮಿಯಲ್ಲಿಯೂ–ಮೇಲ್ಭಾಗವು ಅಂತರಿಕ್ಷದಲ್ಲಿಯೂ ಇದ್ದಿತು. (ಭೂಮ್ಯಾಕಾಶಪರ್ಯಂತವಾಗಿ ಆ ಭೂತವು ಬಾಯ್ದೆರೆದಿದ್ದಿತು.) ಆ ರಾಕ್ಷಸನಿಗೆ ನಾಲ್ಕು ಕೋರೆದಾಡೆಗಳಿದ್ದುವು. ಒಂದೊಂದು ಕೋರೆದಾಡೆಯೂ ನೂರು ಯೋಜನಗಳಷ್ಟು ಉದ್ದವಾಗಿದ್ದಿತು. ಅವನ ಉಳಿದ ಹಲ್ಲುಗಳು ಹತ್ತುಯೋಜನಗಳವರೆಗೆ ಪ್ರಸರಿಸಿದ್ದುವು. ಅವು ಅರಮನೆಗಳ ಮೇಲಿರುವ ಶಿಖರಗಳಂತೆಯೂ ಶೂಲಾಗ್ರಗಳಂತೆಯೂ ಕಾಣುತ್ತಿದ್ದುವು. ಅವನ ಎರಡು ತೋಳುಗಳೂ ಪರ್ವತೋಪಮಗಳಾಗಿದ್ದು ಹತ್ತು ಸಾವಿರ ಯೋಜನಗಳವರೆಗೆ ಪ್ರಸರಿಸಿದ್ದುವು. ಎರಡು ಕಣ್ಣುಗಳೂ ಸಾಕ್ಷಾತ್ ಸೂರ್ಯ-ಚಂದ್ರರಂತೆಯೇ ಮಹಾತೇಜಸ್ಸಿನಿಂದ ಪ್ರಕಾಶಿಸುತ್ತಿದ್ದುವು. ಅವನ ಮುಖವು ಪ್ರಳಯಕಾಲದಲ್ಲಿ ಉದ್ಭವಿಸುವ ಕಾಲಾಗ್ನಿಗೆ ಅನುರೂಪವಾಗಿದ್ದಿತು. ಆ ರಾಕ್ಷಸನು ಮಿಂಚಿನಂತಿದ್ದ ತನ್ನ ನಾಲಿಗೆಯಿಂದ ತನ್ನ ಮುಖವನ್ನು ಕ್ಷಣ-ಕ್ಷಣಕ್ಕೂ ನೆಕ್ಕಿಕೊಳ್ಳುತ್ತಿದ್ದನು. ಹಿಂದೆಯೇ ಹೇಳಿದಂತೆ ಅವನ ಬಾಯಿ ತೆರೆದಿದ್ದಿತು. ದೃಷ್ಟಿಯು ಬಹಳ ಕ್ರೂರವಾಗಿದ್ದಿತು. ಅದನ್ನು ನೋಡಿದರೆ ಈ ವಿಶ್ವವೆಲ್ಲವನ್ನೂ ಬಲಾತ್ಕಾರದಿಂದ ಒಂದೇ ಸಲ ಭಕ್ಷಣೆಮಾಡಲು ಸಿದ್ಧನಾಗಿರುವನೋ ಎಂಬಂತೆ ಕಾಣುತ್ತಿದ್ದನು. ಮದಾಸುರನು ಹುಟ್ಟಿದೊಡನೆಯೇ ಶತಕ್ರತುವನ್ನು ಹಿಂಬಾಲಿಸಿ ಹೊರಟನು. ಘೋರವಾದ ತನ್ನ ರೂಪಿನಿಂದಲೂ ಮತ್ತು ಗರ್ಜನೆಯಿಂದಲೂ ಆ ಮದರಾಕ್ಷಸನು ತ್ರಿಭುವನಗಳಲ್ಲಿಯೂ ತನ್ನ ಗರ್ಜನೆಯ ಪ್ರತಿಧ್ವನಿಯನ್ನುಂಟುಮಾಡುತ್ತಾ ಇಂದ್ರನ ಬಳಿಗೆ ಬಹುವೇಗ ವಾಗಿ ಧಾವಿಸಿದನು."

೧೨೪ನೆಯ ಅಧ್ಯಾಯವು ಮುಗಿಯಿತು.

## ಅಶ್ವಿನೀಕುಮಾರರು ಯಜ್ಞದ ಹವಿರ್ಭಾಗವನ್ನು ಪಡೆದುದು : ಇಂದ್ರನು ಮದರಾಕ್ಷಸನಿಂದ ಮುಕ್ತನಾದುದು : ಲೋಮಶರಿಂದ ಅನೇಕತೀರ್ಥಗಳ ಮಹತ್ತ್ವದ ಕಥನ

ಯುಧಿಷ್ಠಿರ! ಸಾಕ್ಷಾತ್ ಯಮಧರ್ಮನಂತೆ ಅಗಲವಾಗಿ ಬಾಯಿ ಬಿಟ್ಟುಕೊಂಡು ತನ್ನನ್ನು ನುಂಗಿಬಿಡಲು ಮುನ್ನುಗ್ಗಿ ಬರುತ್ತಿದ್ದ ಮದರಾಕ್ಷಸನನ್ನು ಇಂದ್ರನು ನೋಡಿದನು. ಇಂದ್ರನ ಬಾಹುವೂ ಚ್ಯವನಮಹರ್ಷಿಯಿಂದ ಮೊದಲೇ ಸ್ತಂಭಿತವಾಗಿದ್ದಿತು. ಬಹುಭೀತನಾದ ಇಂದ್ರನು ಮುಂದೇನು ಮಾಡಬೇಕೆಂದು ತಿಳಿಯದೇ ಕ್ಷಣ-ಕ್ಷಣಕ್ಕೂ ಕಟವಾಯಿಗಳನ್ನು ನಾಲಿಗೆಯಿಂದ ನೆಕ್ಕಿಕೊಳ್ಳುತ್ತಿದ್ದನು. ಭಯಪೀಡಿತನಾಗಿದ್ದ ಇಂದ್ರನು ಕಡೆಗೆ ಚ್ಯವನ ಮಹರ್ಷಿಯನ್ನೇ ಆಶ್ರಯಿಸಿ ವಿನಯಪೂರ್ವಕವಾಗಿ ಪ್ರಾರ್ಥಿಸಿದನು:

**ಸೋಮಾರ್ಹಾವಶ್ವಿನಾವೇತಾವದ್ಯಪ್ರಭೃತಿ ಭಾರ್ಗವ ।**
**ಭವಿಷ್ಯತಃ ಸತ್ಯಮೇತದ್ವಚೋ ವಿಪ್ರ ಪ್ರಸೀದ ಮೇ ॥೩॥**

**ನ ತೇ ಮಿಥ್ಯಾ ಸಮಾರಮ್ಭೋ ಭವತ್ವೇಷ ಪರೋ ವಿಧಿಃ ।**
**ಜಾನಾಮಿ ಚಾಹಂ ವಿಪ್ರರ್ಷೇ ನ ಮಿಥ್ಯಾ ತ್ವಂ ಕರಿಷ್ಯಸಿ ॥೪॥**

**ಸೋಮಾರ್ಹಾವಶ್ವಿನಾವೇತೌ ಯಥಾ ವಾದ್ಯ ಕೃತೌ ತ್ವಯಾ ।**
**ಭೂಯ ಏವ ತು ತೇ ವೀರ್ಯಂ ಪ್ರಕಾಶೇದಿತಿ ಭಾರ್ಗವ ॥೫॥**

**ಸುಕನ್ಯಾಯಾಃ ಪಿತುಶ್ಚಾಸ್ಯ ಲೋಕೇ ಕೀರ್ತಿಃ ಪ್ರಥೇದಿತಿ ।**
**ಅತೋ ಮಯೈತದ್ವಿಹಿತಂ ತವ ವೀರ್ಯಪ್ರಕಾಶನಮ್ ।**
**ತಸ್ಮಾತ್ಪ್ರಸಾದಂ ಕುರು ಮೇ ಭವತ್ವೇವಂ ಯಥೇಚ್ಛಸಿ ॥೬॥**

“ಭಾರ್ಗವಶ್ರೇಷ್ಠನೇ! ಇಂದು ಮೊದಲಾಗಿ ಈ ಅಶ್ವಿನೀದೇವತೆಗಳು ಸೋಮಪಾನಮಾಡಲು ಯೋಗ್ಯರಾಗುತ್ತಾರೆ. ಈ ಮಾತನ್ನು ನಾನು ಸತ್ಯವಾಗಿ ಹೇಳುತ್ತಿದ್ದೇನೆ. ವಿಪ್ರೋತ್ತಮನೇ! ಪ್ರಸನ್ನನಾಗು. ನೀನು ಹೇಳಿದ ಮಾತಾಗಲೀ, ಮಾಡಿದ ಸಂಕಲ್ಪವಾಗಲೀ–ಎಂದಿಗೂ ಸುಳ್ಳಾಗದು. ನೀನು

ಮಿಥ್ಯಾಸಂಕಲ್ಪವನ್ನೆಂದಿಗೂ ಮಾಡುವವನಲ್ಲವೆಂಬುದನ್ನು ನಾನು ಚೆನ್ನಾಗಿ ತಿಳಿದಿರುವೆನು. ನೀನು ಅಶ್ವಿನೀದೇವತೆಗಳನ್ನು ಸೋಮಪಾನಕ್ಕೆ ಯೋಗ್ಯರನ್ನಾಗಿ ಮಾಡಿರುವೆಯಾದುದರಿಂದ ಅವರು ಇನ್ನು ಮುಂದೆ ನನ್ನೊಡನೆ ಕುಳಿತು ಸೋಮಪಾನಮಾಡಲು ಅರ್ಹರಾಗಿರುತ್ತಾರೆ. ಮಹರ್ಷಿಯೇ! ನಾನು ನಿನ್ನ ಸಂಕಲ್ಪಕ್ಕೆ ಪ್ರತಿಬಂಧವನ್ನು ಮಾಡಿದುದಕ್ಕೆ ಕಾರಣವಿಲ್ಲದೇ ಇಲ್ಲ. ನಿನ್ನ ಕೀರ್ತಿಯನ್ನು ಹೆಚ್ಚಿಸುವ ಮತ್ತು ನಿನ್ನ ತಪೋಬಲವೆಷ್ಟೆಂಬುದನ್ನು ಪ್ರಪಂಚಕ್ಕೆ ತೋರಿಸುವ ಸಲುವಾಗಿಯೇ ನಾನು ಹೀಗೆ ಮಾಡಿದೆನು. ಅದೂ ಅಲ್ಲದೇ ನಿನ್ನಲ್ಲಿ ಸುಪ್ತವಾಗಿರುವ ಮಹಾಶಕ್ತಿಯನ್ನು ಪ್ರದರ್ಶಿಸಲು ನಿನಗೊಂದು ಅವಕಾಶವನ್ನಿತ್ತೆನು. ಸುಕನ್ಯೆಯ ತಂದೆಯಾದ ಶರ್ಯಾತಿಯ ಕೀರ್ತಿಯನ್ನು ಹರಡುವುದೂ ನನ್ನ ಮತ್ತೊಂದು ಆಶಯವಾಗಿದ್ದಿತು. ಈಗ ನನ್ನ ಮನಸ್ಸಿನ ಆಶಯಗಳೆಲ್ಲವೂ ಪೂರ್ಣವಾದುವು. ನನ್ನ ಸದಾಶಯವನ್ನು ನೀನು ಮನಸ್ಸಿಗೆ ತೆಗೆದುಕೊಂಡು ನನ್ನ ಮೇಲೆ ಕರುಣೆಯನ್ನು ತೋರಿಸು."

ಯುಧಿಷ್ಠಿರ! ಇಂದ್ರನು ಹೀಗೆ ಕೇಳಿಕೊಂಡೊಡನೆಯೇ ಮಹಾತ್ಮನಾದ ಚ್ಯವನಮಹರ್ಷಿಯು ಶಾಂತನಾದನು. ಮದರಾಕ್ಷಸನನ್ನು ಹಿಂದಕ್ಕೆ ಆಮಂತ್ರಿಸಿ, ಸ್ತಂಭನಗೊಳಿಸಿದ್ದ ಇಂದ್ರನ ಬಾಹುವನ್ನೂ ಚಲಿಸುವಂತೆ ಮಾಡಿ ಇಂದ್ರನನ್ನು ಬಿಡುಗಡೆಮಾಡಿದನು.

**ಮದಂ ಚ ವ್ಯಭಜದ್ರಾಜನ್ಪಾನೇ ಸ್ತ್ರೀಷು ಚ ವೀರ್ಯವಾನ್ ।**
**ಅಕ್ಷೇಷು ಮೃಗಯಾಯಾಂ ಚ ಪೂರ್ವಸೃಷ್ಟಂ ಪುನಃ ಪುನಃ ॥೮॥**

ಅನಂತರದಲ್ಲಿ ಚ್ಯವನನು ಮದರಾಕ್ಷಸನನ್ನು ರೂಪಾಂತರಗೊಳಿಸಿ ಸುರಾಪಾನದಲ್ಲಿಯೂ, ಸ್ತ್ರೀಯರಲ್ಲಿಯೂ, ಪಗಡೆಯಾಟದಲ್ಲಿಯೂ ಮತ್ತು ಬೇಟೆಯಲ್ಲಿಯೂ ಹಂಚಿಬಿಟ್ಟನು. ಈ ರೀತಿಯಾಗಿ ತಾನು ಸೃಷ್ಟಿಸಿದ ಮದನನ್ನು ರೂಪಾಂತರಗೊಳಿಸಿ ಹಂಚಿದನಂತರ ಚ್ಯವನಮಹರ್ಷಿಯು ಇಂದ್ರನನ್ನು ಸೋಮರಸದಿಂದ ಸಂತೃಪ್ತಿಗೊಳಿಸಿದನು. ಅಶ್ವಿನೀದೇವತೆಗಳೊಡನೆ ಸಕಲದೇವತೆಗಳನ್ನೂ ಸಂತೃಪ್ತಿಗೊಳಿಸಲು ಶರ್ಯಾತಿಯಿಂದ ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿಸಿ ತನ್ಮೂಲಕವಾಗಿ ಶರ್ಯಾತಿಯ ಕೀರ್ತಿಯು ದಿಗಂತದವರೆಗೂ ಹರಡುವಂತೆ ಮಾಡಿದನು. ಅನಂತರದಲ್ಲಿ

ಚ್ಯವನನು ಅನುಕೂಲೆಯಾದ ಸುಕನ್ಯೆಯೊಡನೆ ತನ್ನ ಮುಂದಿನ ದಿನಗಳನ್ನು ಅರಣ್ಯದಲ್ಲಿ ಸುಖವಾಗಿ ಕಳೆದನು. ಶೋಭಾಯಮಾನವಾಗಿರುವ, ಅನೇಕ ವಿಧವಾದ ಪಕ್ಷಿಗಳಿಂದ ನಿನಾದಿತವಾಗುತ್ತಿರುವ ಈ ಸರೋವರವು ಚ್ಯವನಸರೋವರವಾಗಿರುವುದು.

ಯುಧಿಷ್ಠಿರ! ಈ ಪುಣ್ಯತೀರ್ಥದಲ್ಲಿ ನೀನು ನಿನ್ನ ಅನುಜರೊಡನೆ ಮಿಂದು, ಪಿತೃದೇವತೆಗಳಿಗೆ ತರ್ಪಣಾದಿಗಳನ್ನಿತ್ತು, ದೇವತೆಗಳನ್ನು ಯಥಾ ವಿಧಿಯಾಗಿ ಅರ್ಚನೆಮಾಡು. ಈ ಸರೋವರದಲ್ಲಿ ಸ್ನಾನ-ತರ್ಪಣಾದಿಗಳನ್ನು ಮುಗಿಸಿಕೊಂಡು ಈ ಆಶ್ರಮಪ್ರದೇಶವನ್ನೂ ಸಂದರ್ಶಿಸಿದನಂತರ ಸಿಕತಾಕ್ಷವೆಂಬ ಪುಣ್ಯಕ್ಷೇತ್ರವನ್ನೂ ಸಂದರ್ಶಿಸಿ, ಅನಂತರ ಸೈಂಧವವನಕ್ಕೆ ಹೋಗಿ ಅಲ್ಲಿರುವ ಚಿಕ್ಕ-ಚಿಕ್ಕ ನದಿಗಳನ್ನು ಸಂದರ್ಶಿಸು. ಪುಷ್ಕರಗಳಲ್ಲಿ ಸ್ನಾನಮಾಡು.

**ಸ್ಥಾಣೋರ್ಮನ್ತ್ರಾಣಿ ಚ ಜಪನ್ಸಿದ್ಧಿಂ ಪ್ರಾಪ್ಸ್ಯಸಿ ಭಾರತ ।**
**ಸಂಧಿರ್ದ್ವಯೋರ್ನರಶ್ರೇಷ್ಠ ತ್ರೇತಾಯಾ ದ್ವಾಪರಸ್ಯ ಚ ।**
**ಅಯಂ ಹಿ ದೃಶ್ಯತೇ ಪಾರ್ಥ ಸರ್ವಪಾಪಪ್ರಣಾಶನಃ ॥೧೪॥**

ಈ ನದಿಗಳಲ್ಲಿ ಸ್ನಾನಮಾಡಿ ಸ್ಥಾಣುವಿನ ಮಹಾಮಂತ್ರವನ್ನು ಜಪಿಸುವುದರಿಂದ ಸಕಲೇಷ್ಟಾರ್ಥಗಳನ್ನೂ ಮತ್ತು ಸಿದ್ಧಿಯನ್ನೂ ಪಡೆಯುವೆ. ತ್ರೇತಾ ಮತ್ತು ದ್ವಾಪರಯುಗಗಳ ಸಂಧಿಪ್ರದೇಶವು ಇದಾಗಿರುವುದು. ಈ ಪುಣ್ಯಕ್ಷೇತ್ರದ ದರ್ಶನದಿಂದಲೇ ಸಕಲಪಾಪಗಳೂ ಪರಿಹಾರವಾಗುತ್ತವೆ. ಸೈಂಧವವನದಲ್ಲಿರುವ ತೀರ್ಥಗಳಲ್ಲಿ ನೀನು ಮಿಂದು ತರ್ಪಣಾದಿಗಳನ್ನು ಮಾಡಬೇಕು. ಅದರಿಂದ ವೈಯಕ್ತಿಕವಾದ ಸಕಲಪಾಪಗಳೂ ಪರಿಹಾರವಾಗುತ್ತವೆ. ಸೈಂಧವವನಪ್ರವಾಸಾನಂತರದಲ್ಲಿ ಅದರ ಸಮೀಪದಲ್ಲಿರುವ ಆರ್ಚೀಕಪರ್ವತದ ಸಂದರ್ಶನವನ್ನು ಮಾಡಬೇಕು. ಆ ಪರ್ವತದಲ್ಲಿ ಅನೇಕ ಮಹರ್ಷಿಗಳು ವಾಸಮಾಡಿಕೊಂಡಿರುವರು. ಬೇರೆಡೆಗಳಲ್ಲಿ ಆಯಾ ಋತುಗಳಲ್ಲಿ ಮಾತ್ರವೇ ಸಿಕ್ಕುವ ಫಲಗಳು ಆರ್ಚೀಕಪರ್ವತದಲ್ಲಿ ಎಲ್ಲ ಋತುಗಳಲ್ಲಿಯೂ ಲಭ್ಯವಾಗುವುವು ಮತ್ತು ಅಲ್ಲಿರುವ ನದಿಗಳೂ ವರ್ಷಪೂರ್ತಿಯಾಗಿ ಪೂರ್ಣಪ್ರವಾಹದಿಂದ ಹರಿಯುವುವು. ಅದು ದೇವತೆಗಳ ನಿವಾಸ

ಸ್ಥಾನವೂ ಆಗಿರುವುದು. ಅಲ್ಲಿ ದೇವತೆಗಳು ಅಧಿಷ್ಠಾನಮಾಡಿರುವ ಅನೇಕ ಚೈತ್ಯಗಳಿವೆ. ಅಲ್ಲಿರುವ ಚಂದ್ರಮಸತೀರ್ಥಪ್ರದೇಶದಲ್ಲಿ ಋಷಿ-ಮಹರ್ಷಿಗಳೂ ಆಶ್ರಯವನ್ನು ಪಡೆದಿರುತ್ತಾರೆ. ವೈಖಾನಸರು, ವಾಲಖಿಲ್ಯರು, ಪಾವಕರು, ವಾಯುಭಕ್ಷರು–ಇವರೆಲ್ಲರೂ ಆ ಸರೋವರದ ಸಮೀಪ ದಲ್ಲಿದ್ದು ವ್ರತೋಪಾಸನೆಗಳಲ್ಲಿ ನಿರತರಾಗಿದ್ದಾರೆ. ಆ ಸರೋವರದ ಸಮೀಪ ದಲ್ಲಿಯೇ ಮೂರು ಶೃಂಗಗಳೂ ಮತ್ತು ಮೂರು ಚಿಲುಮೆಗಳೂ ಇವೆ. ಅವುಗಳನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಪ್ರದಕ್ಷಿಣೆಮಾಡಿ ನಮಸ್ಕರಿಸಿ ಇಚ್ಛಾನು ಸಾರವಾಗಿ ಸ್ನಾನಮಾಡಬಹುದು.*

ಯುಧಿಷ್ಠಿರ! ಶಾಂತನು, ಶುನಕ ಮತ್ತು ನರ-ನಾರಾಯಣರೂ ಈ ಪುಣ್ಯಕ್ಷೇತ್ರದಲ್ಲಿ ತಪಸ್ಸುಮಾಡಿ ಸನಾತನವಾದ ಪುಣ್ಯಲೋಕಗಳನ್ನು ಪಡೆದರು. ಆರ್ಚೀಕಪರ್ವತದಲ್ಲಿ ಸಕಲದೇವತೆಗಳ ಸಾನ್ನಿಧ್ಯವೂ ಇರುವುದು. ಪಿತೃದೇವತೆಗಳೂ ಮತ್ತು ಋಷಿ-ಮಹರ್ಷಿಗಳೂ ಆ ಪರ್ವತದಲ್ಲಿ ಸರ್ವದಾ ತಪಸ್ಸನ್ನು ಮಾಡುತ್ತಿರುತ್ತಾರೆ. ಆ ಪರ್ವತದಲ್ಲಿ ನೀನೂ ಅವರನ್ನು ಆರಾಧಿಸು. ಆ ಪರ್ವತದಲ್ಲಿ ದೇವತೆಗಳೂ, ಪಿತೃದೇವತೆಗಳೂ ಮತ್ತು ಋಷಿಗಳೂ ಚರುವನ್ನು ಭಕ್ಷಣಮಾಡುತ್ತಾರೆ. ಅದರ ಸಮೀಪದಲ್ಲಿಯೇ ಜೀವನದಿಯಾದ ಯಮುನೆಯೂ ಪೂರ್ಣಪ್ರವಾಹದಿಂದ ಪ್ರವಹಿಸುತ್ತಿರುವುದು. ಅಲ್ಲಿ ಶ್ರೀಕೃಷ್ಣನು ಅನೇಕವರ್ಷಗಳ ಕಾಲ ತಪಸ್ಸಿನಲ್ಲಿ ನಿರತನಾಗಿದ್ದನು. ಶತ್ರುಧ್ವಂಸಕನಾದ ಯುಧಿಷ್ಠಿರನೇ! ಆ ಪವಿತ್ರಕ್ಷೇತ್ರಕ್ಕೆ ನಕುಲ- ಸಹದೇವರು, ಭೀಮಸೇನ, ದ್ರೌಪದಿ ಮತ್ತು ನಾವೆಲ್ಲರೂ ಹೋಗೋಣ."

---

* 'ಶೃಂಗಾಣಿ ತ್ರೀಣಿ ಪುಣ್ಯಾನಿ' ಎಂಬುದಕ್ಕೆ ವ್ಯಾಖ್ಯಾನಕಾರರು ತ್ರಿಕೋಣಾಕಾರವುಳ್ಳ ವಾರಾಣಸೀಕ್ಷೇತ್ರವೆಂದೂ, 'ತ್ರೀಣಿ ಪ್ರಸ್ರವಣಾನಿ ಚ' ಎಂಬುದಕ್ಕೆ ಗಂಗಾ-ಯಮುನಾ-ಸರಸ್ವತೀನದಿಗಳ ಸಂಗಮಸ್ಥಾನವಾದ ಪ್ರಯಾಗಕ್ಷೇತ್ರವೆಂದೂ ಅರ್ಥಮಾಡಿರುತ್ತಾರೆ. ಅವುಗಳನ್ನು ಪ್ರದಕ್ಷಿಣೆಮಾಡಿ 'ಯಥಾಕಾಮಮುಪಸ್ಪೃಶ್ಯ' ಎಂಬುದಕ್ಕೆ ವ್ಯಾಖ್ಯಾನಮಾಡುತ್ತಾ ಹೀಗೆ ಹೇಳಿದ್ದಾರೆ : ಕಾಶೀ-ಪ್ರಯಾಗಕ್ಷೇತ್ರಗಳ ಯಾತ್ರೆಮಾಡಿದವರು ಚಂದ್ರತೀರ್ಥದ ಸಂದರ್ಶನವನ್ನು ಮಾಡಿಯೇ ತೀರಬೇಕೆಂಬ ನಿಯಮವಿಲ್ಲ. ಇದು ಐಚ್ಛಿಕ. ಕಾಶೀ-ಪ್ರಯಾಗಗಳ ಸಂದರ್ಶನ ಮಾಡದವರು ಚಂದ್ರತೀರ್ಥವನ್ನು ಸಂದರ್ಶಿಸಲೇಬೇಕು.

ಲೋಮಶರು ಹೀಗೆ ಹೇಳಿ ಯುಧಿಷ್ಠಿರಾದಿಗಳೊಡನೆ ಸ್ವಲ್ಪದೂರ ಪ್ರಯಾಣಮಾಡಿದನಂತರ ಸರೋವರವೊಂದನ್ನು ತೋರಿಸುತ್ತಾ ಹೇಳಿದರು:

"ಯುಧಿಷ್ಠಿರ! ಇದು ಪುಣ್ಯಪ್ರದವಾದ ಇಂದ್ರಸರೋವರ. ಧಾತೃ, ವಿಧಾತೃ ಮತ್ತು ವರುಣರು ಮೊದಲು ಇಲ್ಲಿಗೆ ಆಗಮಿಸಿ ಈ ಪುಣ್ಯಕ್ಷೇತ್ರದಲ್ಲಿಯೇ ಪರಮಧಾರ್ಮಿಕರಾಗಿ, ಜಿತೇಂದ್ರಿಯರಾಗಿ ನಿಯಮ-ವ್ರತಾನುಷ್ಠಾನಗಳಿಂದಿದ್ದು ಊರ್ಧ್ವಲೋಕಗಳಿಗೆ ಹೋಗಿರುವರು. ಸುಹೃದರಿಗೂ, ಋಜುಮಾರ್ಗಾನುಯಾಯಿಗಳಿಗೂ ಈ ಸರೋವರದ ಸಮೀಪದಲ್ಲಿರುವ ಈ ಪರ್ವತವು ವಾಸಕ್ಕೆ ಯೋಗ್ಯವಾಗಿದೆ.

**ಏಷಾ ಸಾ ಯಮುನಾ ರಾಜನ್ಮಹರ್ಷಿಗಣಸೇವಿತಾ ।**
**ನಾನಾಯಜ್ಞಚಿತಾ ರಾಜನ್ಪುಣ್ಯಾ ಪಾಪಭಯಾಪಹಾ ॥೨೫॥**

ಅಲ್ಲಿ ಕಾಣುತ್ತಿರುವುದೇ ನಾನು ಹಿಂದೆ ಹೇಳಿದ ಮಹರ್ಷಿಗಣಸೇವಿತವಾದ, ನಾನಾವಿಧವಾದ ಯಜ್ಞಗಳ ಯೂಪಸ್ತಂಭಗಳಿಂದ ಕೂಡಿರುವ ತೀರಪ್ರದೇಶವುಳ್ಳ ಮಹಾಪುಣ್ಯವತಿಯಾದ, ಪಾಪದ ಭಯವನ್ನು ದೂರ ಮಾಡಲು ಸಮರ್ಥವಾದ ಯಮುನಾನದಿಯು. ಯಮುನಾನದಿಯ ಈ ತೀರದಲ್ಲಿ ಮಹಾಧನುಷ್ಮಂತನಾದ ಮಾಂಧಾತೃಚಕ್ರವರ್ತಿಯು ದೇವತೆಗಳ ಪ್ರೀತ್ಯರ್ಥವಾಗಿ ಮಹಾಯಾಗವನ್ನು ಮಾಡಿದನು. ಮಹಾದಾನಿಯೆಂದು ಪ್ರಸಿದ್ಧನಾದ ಸಹದೇವನ ಮಗನಾದ ಸೋಮಕನೂ ಇಲ್ಲಿ ಬಹುದಕ್ಷಿಣಾಕವಾದ ಯಜ್ಞವನ್ನು ಮಾಡಿದನು."

೧೨೫ನೆಯ ಅಧ್ಯಾಯವು ಮುಗಿಯಿತು.

೧೨೬ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಮಾಂಧಾತೃಚಕ್ರವರ್ತಿಯ ವಿಚಿತ್ರರೀತಿಯ ಜನನ : ಅವನ ಸಂಕ್ಷಿಪ್ತಚರಿತ್ರೆ

ಯುಧಿಷ್ಠಿರನು ಲೋಮಶರನ್ನು ಪ್ರಶ್ನಿಸುತ್ತಾನೆ :

"ಬ್ರಾಹ್ಮಣೋತ್ತಮರೇ! ಮೂರು ಲೋಕಗಳಲ್ಲಿಯೂ ಪ್ರಸಿದ್ಧಿ ಹೊಂದಿದ ಯುವನಾಶ್ವನ ಮಗನಾದ ಮಾಂಧಾತೃಚಕ್ರವರ್ತಿಯು ಹೇಗೆ ಹುಟ್ಟಿದನು? ಉತ್ತಮೋತ್ತಮವಾದ, ಇತರರಿಂದ ಪಡೆಯಲು ದುಸ್ಸಾಧ್ಯ ವಾದ, ಶಾಶ್ವತವಾದ ಅಂತಹ ಸ್ಥಾನವನ್ನು ಮಹಾತೇಜಸ್ವಿಯಾದ ಮಾಂಧಾತೃವು ಹೇಗೆ ಪಡೆದನು? ಮಹಾತ್ಮನಾದ, ಪರಂಧಾಮನಾದ, ಮಹಾವಿಷ್ಣುವಿನಂತೆಯೇ ಈ ಮೂರು ಲೋಕಗಳಿಗೂ ಅವನು ಒಡೆಯ ನಾಗಿದ್ದನೆಂದು ಕೇಳಿದ್ದೇನೆ. ಧೀಮಂತನಾದ ಮಾಂಧಾತೃಚಕ್ರವರ್ತಿಯ ಸುಚರಿತೆಯನ್ನು ನಿಮ್ಮಿಂದ ಕೇಳಬೇಕೆಂಬ ಆಶಯದಿಂದಿರುವೆನು. ಇಂದ್ರನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಆ ಚಕ್ರವರ್ತಿಗೆ 'ಮಾಂಧಾತಾ'– ಎಂಬ ಹೆಸರು ಹೇಗೆ ಬಂದಿತೆಂಬುದನ್ನೂ ದಯಮಾಡಿ ಹೇಳಿರಿ. ಮಹಾಪರಾಕ್ರಮಿಯಾದ ಮಾಂಧಾತೃವಿನ ಜನ್ಮವೃತ್ತಾಂತವನ್ನೂ ತಿಳಿಸಿರಿ. ವಿಪ್ರೋತ್ತಮರೇ! ಇಂತಹ ವಿಷಯಗಳ ಪ್ರವಚನಗಳಲ್ಲಿ ನೀವು ಬಹುಕುಶಲ ರಾಗಿರುವಿರಿ. ಆದುದರಿಂದ ದಯಮಾಡಿ ಹೇಳಿರಿ."

ಯುಧಿಷ್ಠಿರನ ಆ ಮಾತಿಗೆ ಲೋಮಶರು ಮಂದಹಾಸಪೂರ್ವಕವಾಗಿ ಸಮ್ಮತಿಯನ್ನಿತ್ತು ಮಾಂಧಾತೃಚಕ್ರವರ್ತಿಯ ಇತಿಹಾಸವನ್ನು ಹೇಳಲು ಉಪಕ್ರಮಿಸಿದರು :

"ಯುಧಿಷ್ಠಿರ! ಮಾಂಧಾತೃವೆಂಬ ಹೆಸರಿನಿಂದ ಪ್ರಖ್ಯಾತನಾದ, ಮಹಾತ್ಮನಾದ ಆ ಚಕ್ರವರ್ತಿಯ ಹೆಸರು ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಯನ್ನು ಹೇಗೆ ಪಡೆಯಿತೆಂಬುದನ್ನು ಹೇಳುವೆನು. ಏಕಾಗ್ರಚಿತ್ತನಾಗಿ ಕೇಳು. ಇಕ್ಷ್ವಾಕುವಂಶದಲ್ಲಿ ಯುವನಾಶ್ವನೆಂಬ ಮಹೀಪತಿಯು ಜನಿಸಿದನು. ಆ ಮಹೀಪಾಲನು ಬಹುದಕ್ಷಿಣೆಗಳಿಂದ ಸಾಧ್ಯವಾಗುವ ಅನೇಕ ಯಾಗ

ಗಳನ್ನು ಮಾಡಿದನು. ಧರ್ಮಾತ್ಮನಾದ ಅವನು ಒಂದು ಸಾವಿರ ಅಶ್ವಮೇಧ ಯಾಗಗಳನ್ನು ಮಾಡಿದನು. ಸಾವಿರ ಅಶ್ವಮೇಧಯಾಗಗಳೇ ಅಲ್ಲದೇ ಇನ್ನೂ ಅನೇಕ ಬಹುದಕ್ಷಿಣಾಕವಾದ ಕ್ರತುಗಳನ್ನೂ ಮಾಡಿ ಮುಗಿಸಿದನು. ಆದರೆ ಮಹಾತ್ಮನಾದ, ಮಹಾವ್ರತನಾದ ಯುವನಾಶ್ವನಿಗೆ ಮಕ್ಕಳಿರಲಿಲ್ಲ. ಮಕ್ಕಳನ್ನು ಪಡೆಯುವ ಅಭಿಲಾಷೆಯಿಂದ ಆ ರಾಜನು ರಾಜ್ಯದ ಆಡಳಿತ ವೆಲ್ಲವನ್ನೂ ಮಂತ್ರಿಗಳಿಗೆ ವಹಿಸಿಕೊಟ್ಟು ಹೆಚ್ಚುಕಾಲ ಕಾಡಿನಲ್ಲಿಯೇ ತಪಶ್ಚರಣೆಮಾಡುತ್ತಾ ಕಾಲಕಳೆಯುತ್ತಿದ್ದನು. ಶಾಸ್ತ್ರದೃಷ್ಟವಾದ ವಿಧಿನಿಯಮ ಗಳನ್ನು ಅನುಸರಿಸುತ್ತಾ ಅರಣ್ಯದಲ್ಲಿದ್ದ ರಾಜನು ಉಪವಾಸವ್ರತನಿಷ್ಠ ನಾದನು. ಆದರೆ ಆ ಉಪವಾಸದಿಂದ ಅವನ ಜಠರಾಗ್ನಿಯು ಬಹುವಾಗಿ ತ್ರಾಸಕೊಡಲುಪಕ್ರಮಿಸಿತು. ಬಾಯಾರಿಕೆಯಿಂದಲೂ ಬಳಲಿದವನಾಗಿ ಅತ್ತಲಿತ್ತ ಸುತ್ತಾಡುತ್ತಾ ಬಹಳ ದಣಿದು ಕಡೆಗೆ ಸಮೀಪದಲ್ಲಿಯೇ ಇದ್ದ ಭೃಗುಮಹರ್ಷಿಗಳ ಆಶ್ರಮವನ್ನು ಪ್ರವೇಶಿಸಿದನು. ಅವನ ಅದೃಷ್ಟವೇ ಅವನನ್ನು ಅಲ್ಲಿಗೆ ಕೊಂಡೊಯ್ದಿತು. ಯುಧಿಷ್ಠಿರ! ಅವನು ಪ್ರವೇಶಿಸಿದ್ದು ರಾತ್ರಿಯಲ್ಲಿ. ಅದೇ ರಾತ್ರಿಯಲ್ಲಿ ಭೃಗುಪುತ್ರನಾದ ಚ್ಯವನಮಹರ್ಷಿಯು ಸೌದ್ಯುಮ್ನಿಗೆ ( ಯುವನಾಶ್ವನಿಗೆ ) ಮಕ್ಕಳಾಗಬೇಕೆಂಬ ಕಾಮನೆಯಿಂದ ಒಂದು ಯಜ್ಞವನ್ನು ಮಾಡಿ ಮುಗಿಸಿದ್ದನು. ಯಜ್ಞವೇದಿಕೆಯ ಬಳಿಯಲ್ಲಿ ಮಂತ್ರಪೂತವಾದ ಒಂದು ಪೂರ್ಣಕುಂಭವು ಸ್ಥಾಪಿತವಾಗಿದ್ದಿತು. ಯುವ ನಾಶ್ವನ ಪತ್ನಿಯು ಆ ತೀರ್ಥವನ್ನು ಪ್ರಾಶನಮಾಡಿದರೆ ದೇವಸಮಾನನಾದ ಪುತ್ರನನ್ನು ಪಡೆಯುತ್ತಿದ್ದಳು. ಅಂತಹ ಮಹತ್ತ್ವಪೂರ್ಣವಾದ ತೀರ್ಥದ ಭಾಂಡವನ್ನು ಅಲ್ಲಿಟ್ಟಿದ್ದರು. ಆರ್ತ್ವಿಜ್ಯವನ್ನು ವಹಿಸಿದ್ದ ಮಹರ್ಷಿಗಳೆಲ್ಲರೂ ಯಜ್ಞವು ಮುಗಿದನಂತರದಲ್ಲಿ ಮಂತ್ರಪೂತವಾದ ಆ ಪೂರ್ಣಕುಂಭವನ್ನು ಯಜ್ಞವೇದಿಯಲ್ಲಿ ನಿಕ್ಷೇಪಿಸಿದ್ದರು. ರಾತ್ರಿಯಲ್ಲಿ ಬಹಳ ಹೊತ್ತು ಕಳೆದಿದ್ದ ರಿಂದಲೂ, ಕರ್ಮಗಳನ್ನು ಮಾಡಿ ಆಯಾಸಹೊಂದಿದ್ದರಿಂದಲೂ ಮಹರ್ಷಿ ಗಳೆಲ್ಲರೂ ಮಲಗಲು ಹೊರಟುಹೋದರು. ಅವರು ಹೋದನಂತರವೇ ಯುವನಾಶ್ವನು ಹಸಿವು-ಬಾಯಾರಿಕೆಗಳಿಂದ ಬಳಲಿದವನಾಗಿ ಆಶ್ರಮ ವನ್ನು ಪ್ರವೇಶಿಸಿದನು. ಸೌದ್ಯುಮ್ನಿಗೆ ನೀರಿನ ಆವಶ್ಯಕತೆಯು ಬಹಳವಾಗಿದ್ದಿತು. ನಾಲಿಗೆಯು ಒಣಗಿಹೋಗಿದ್ದಿತು. ಆಶ್ರಮವನ್ನು

ಪ್ರವೇಶಿಸಿದೊಡನೆಯೇ ಕುಡಿಯಲು ನೀರು ಕೇಳಿದನು. ರಾಜನ ಬಾಯಿ ಒಣಗಿಹೋಗಿದ್ದುದರಿಂದಲೂ, ಆಹಾರವಿಲ್ಲದೇ ಬಳಲಿಕೆಯಿಂದಲೂ ಅವನ ಧ್ವನಿಯೂ ಬಹಳವಾಗಿ ಕುಗ್ಗಿಹೋಗಿದ್ದಿತು. ಪಕ್ಷಿಯ ಧ್ವನಿಯಂತೆ ಕೀರಲು ಧ್ವನಿಯಿಂದ ಕೂಡಿದ್ದ ಅವನ ಪ್ರಾರ್ಥನೆಯು ಆಶ್ರಮದಲ್ಲಿ ಮಲಗಿದ್ದ



ಯಾರೊಬ್ಬರಿಗೂ ಕೇಳಿಸಲಿಲ್ಲ. ರಾಜನು ಹತಾಶನಾಗಿ ಆಶ್ರಮದೊಳಗೆ ಸುತ್ತಲೂ ನೋಡಿದನು. ಯಜ್ಞವೇದಿಯಲ್ಲಿ ಜಲಪೂರ್ಣವಾಗಿದ್ದ ಉದಕುಂಭವಿದ್ದುದು ಅವನಿಗೆ ಕಾಣಿಸಿತು. ಒಡನೆಯೇ ರಾಜನು ಉದಕುಂಭವಿದ್ದೆಡೆಗೆ ಧಾವಿಸಿದನು. ಅದರಲ್ಲಿದ್ದ ನೀರೆಲ್ಲವನ್ನೂ ಕುಡಿದು ಉದಕುಂಭ

ವನ್ನು ಕೆಳಗಿಟ್ಟನು. ಬಹಳ ಬಾಯಾರಿಕೆಯಿಂದ ಬಳಲಿದ್ದ ಮಹೀಪತಿಯು ಶೀತಲವಾಗಿದ್ದ ಆ ನೀರನ್ನು ಕುಡಿದು ಸಮಾಧಾನಹೊಂದಿದನು. ಬಾಯಾರಿಕೆಯ ದಣಿವಾರಿ, ರಾಜನಿಗೆ ಅಮಿತವಾದ ತೃಪ್ತಿಯೂ ಆಯಿತು. ಸ್ವಲ್ಪ ಹೊತ್ತು ಕಳೆದನಂತರದಲ್ಲಿ ತಪೋಧನರಾದ ಮಹರ್ಷಿಗಳೆಲ್ಲರೂ ನಿದ್ರೆಯಿಂದ ಎಚ್ಚೆತ್ತರು. ಜಲದಿಂದ ರಹಿತವಾಗಿದ್ದ ಕುಂಭವನ್ನು ಎಲ್ಲರೂ ನೋಡಿದರು. ಒಡನೆಯೇ ಅವರೆಲ್ಲರೂ ಒಂದೆಡೆಯಲ್ಲಿ ಕಲೆತು ಈ ಕೆಲಸವು ಯಾರಿಂದ ಆಗಿರಬಹುದೆಂದು ಸಮಾಲೋಚಿಸತೊಡಗಿದರು. ಅಲ್ಲಿಯೇ ಇದ್ದ ಯುವನಾಶ್ವನು–ಆ ಕಾರ್ಯವನ್ನು ತಾನೇ ಮಾಡಿದುದಾಗಿಯೂ, ಬಾಯಾರಿಕೆಯಿಂದ ಬಳಲಿದ್ದ ತಾನು ಉದಕುಂಭದಲ್ಲಿದ್ದ ನೀರೆಲ್ಲವನ್ನೂ ಕುಡಿದುದಾಗಿಯೂ–ಮಹರ್ಷಿಗಳೊಡನೆ ಹೇಳಿದನು. ಆ ಮಾತುಗಳನ್ನು ಕೇಳಿದ ಭೃಗುಪುತ್ರನು ಖಿನ್ನನಾಗಿ ರಾಜನೊಡನೆ ಹೇಳಿದನು :

"ಮಹಾರಾಜ! ನೀನು ಮಾಡಿದುದು ಸರಿಯಲ್ಲ. ನಿನಗೆ ಮಕ್ಕಳಾಗ ಬೇಕೆಂಬ ಅಭಿಲಾಷೆಯಿಂದಲೇ ಅದಕ್ಕೆ ಸಂಬಂಧಿಸಿದಂತೆ ಹೋಮ-ಹವನಾದಿಗಳನ್ನು ಮಾಡಿ ಮಂತ್ರಪೂತವಾದ ಉದಕವನ್ನು ಈ ಉದಕುಂಭ ದಲ್ಲಿಡಲಾಗಿತ್ತು. ನಾನು ಮಹಾಕ್ಲಿಷ್ಟವಾದ ತಪಸ್ಸನ್ನುಮಾಡಿ ನನ್ನ ತಪಃಫಲ ವನ್ನು ಬೀಜರೂಪವಾಗಿ ಈ ಭಾಂಡದಲ್ಲಿ ನಿಕ್ಷೇಪಿಸಿದ್ದೆನು. ರಾಜರ್ಷಿಯೇ! ಮಹಾಬಲಶಾಲಿಯಾಗಿಯೂ, ಮಹಾವೀರ್ಯವಂತನಾಗಿಯೂ, ಇಂದ್ರ ನನ್ನೂ ತನ್ನ ಪರಾಕ್ರಮದಿಂದ ಯಮಾಲಯಕ್ಕೆ ಕಳುಹಿಸುವಷ್ಟು ಸಾಮರ್ಥ್ಯ ವುಳ್ಳವನಾಗಿಯೂ ಇರುವ ಪುತ್ರನು ನಿನಗೆ ಹುಟ್ಟಬೇಕೆಂಬ ಅಭಿಲಾಷೆಯಿಂದ ನಾನು ಈ ಕರ್ಮಗಳೆಲ್ಲವನ್ನೂ ಮಾಡಿ ನನ್ನ ತಪಃಫಲವೆಲ್ಲವನ್ನೂ ಈ ಉದಕುಂಭದಲ್ಲಿ ನಿಕ್ಷೇಪಿಸಿದ್ದೆನು. (ಈ ತೀರ್ಥವನ್ನು ನಿನ್ನ ಪತ್ನಿಯು ಕುಡಿದು ಅವಳಲ್ಲಿ ಸರ್ವಶ್ರೇಷ್ಠನಾದ ಮಗನು ಹುಟ್ಟಬೇಕಾಗಿದ್ದಿತು.) ನೀನೀಗ ಈ ತೀರ್ಥವನ್ನು ಕುಡಿದು ಅಕಾರ್ಯವನ್ನೇ ಮಾಡಿಬಿಟ್ಟಿರುವೆ. ನೀನು ಇದನ್ನು ಕುಡಿಯಬಾರದಾಗಿತ್ತು. ಆದರೆ ನೀನೀಗ ಈ ತೀರ್ಥವನ್ನು ಕುಡಿದುಬಿಟ್ಟಿರು ವುದರಿಂದ ನಾವಾದರೂ ಏನನ್ನೂ ಮಾಡಲೂ ಅಸಮರ್ಥರಾಗಿದ್ದೇವೆ. ನೀನು ಹೀಗೆ ಮಾಡಿರುವುದು ಕೇವಲ ದೈವಚೋದಿತವೇ ಆಗಿರುವುದು. ನನ್ನ

ತಪಃಫಲವನ್ನು ಪಡೆದಿದ್ದ ಮಂತ್ರಪೂತವಾಗಿದ್ದ ತೀರ್ಥವನ್ನು ನೀನು ಬಾಯಾರಿಕೆಯಿಂದ ಕುಡಿದುಬಿಟ್ಟೆಯಾದಕಾರಣ ನಾನು ಮೇಲೆ ಹೇಳಿದಂತೆ ಸರ್ವಲಕ್ಷಣಸಂಪನ್ನನಾದ ಮತ್ತು ಮಹಾಪರಾಕ್ರಮಶಾಲಿಯಾದ ಮಗನನ್ನು ನೀನೇ ಹಡೆಯಬೇಕಾಗಿದೆ. ಬೇರೆ ಏನು ಮಾಡಲೂ ಸಾಧ್ಯವಿಲ್ಲ. ಇಂದ್ರನಿಗೆ ಸಮಾನನಾದ ಮಗನು ನಿನಗೆ ಲಭ್ಯವಾಗುವಂತೆ ನಿನ್ನ ಪರವಾಗಿ ನಾವೂ ಪರಮಾದ್ಭುತವಾದ ಒಂದು ಯಾಗವನ್ನು ಮಾಡುವೆವು. ಆ ಯಾಗದ ಫಲದಿಂದಾಗಿ ನಿನಗೆ ಗರ್ಭಧಾರಣೆಯ ಕ್ಲೇಶವೂ ಉಂಟಾಗುವುದಿಲ್ಲ." ಹೀಗೆ ಹೇಳಿ ಭೃಗುನಂದನನು ರಾಜನನ್ನು ಸಮಾಧಾನಗೊಳಿಸಿದನು.

ಯುಧಿಷ್ಠಿರ! ಮುಂದೆ ನೂರು ವರ್ಷಗಳು ಕಳೆದುವು. ಅನಂತರದಲ್ಲಿ ಯುವನಾಶ್ವನ ಹೊಟ್ಟೆಯ ಎಡಭಾಗವನ್ನು ಸೀಳಿಕೊಂಡು ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಶಿಶುವು ಹೊರಬಂದಿತು. ಆ ಶಿಶುವು ಹುಟ್ಟಿದಾಗಲೇ ಬಹಳ ಬಲಶಾಲಿಯಾಗಿದ್ದಿತು. ಯುವನಾಶ್ವನ ಹೊಟ್ಟೆಯನ್ನು ಸೀಳಿ ಮಗುವು ಹೊರಗೆ ಬಂದರೂ ಯುವನಾಶ್ವನು ಸಾಯಲೂ ಇಲ್ಲ; ಯಾತನೆಯನ್ನೂ ಅನುಭವಿಸಲಿಲ್ಲ. ಇದು ಪರಮಾದ್ಭುತವಲ್ಲವೇ? ಧರ್ಮಜ! ಭೃಗುನಂದನನ ತಪಃಪ್ರಭಾವದಿಂದಲೂ, ಅವನು ರಾಜನ ಸಲುವಾಗಿ ಮಾಡಿದ ಯಜ್ಞದ ಫಲದಿಂದಲೂ ಯುವನಾಶ್ವನಿಗೆ ಯಾವ ವಿಧವಾದ ತೊಂದರೆಯೂ ಆಗಲಿಲ್ಲ. ಅಂತಹ ಅದ್ಭುತವಾದ ಶಿಶುವೊಂದು ಭೂಲೋಕದಲ್ಲಿ ಹುಟ್ಟಿರುವುದನ್ನು ನೋಡಲು ಇಂದ್ರನೂ ದೇವತೆಗಳೊಡನೆ ಯುವನಾಶ್ವನ ಅರಮನೆಗೆ ಆಗಮಿಸಿದನು. ಮಗುವನ್ನು ನೋಡುತ್ತಲೇ ಮುಗ್ಧರಾದ ದೇವತೆಗಳು ಇಂದ್ರನನ್ನು ಕೇಳಿದರು :

"ಮಹೇಂದ್ರ! ಈ ಮಗುವು ಏನನ್ನು ಕುಡಿಯುತ್ತದೆ? ತಂದೆಯನ್ನೇ ತಾಯಿಯನ್ನಾಗಿ ಪಡೆದಿರುವ ಶಿಶುವಿಗೆ ಸ್ತನ್ಯಪಾನದ ಅದೃಷ್ಟವೆಲ್ಲಿಯದು?"

**ಪ್ರದೇಶಿನೀಂ ತತೋಽಸ್ಯಾಸ್ಯೇ ಶಕ್ರಃ ಸಮಭಿಸಂದಧೇ ।**
**ಮಾಮಯಂ ಧಾಸ್ಯತೀತ್ಯೇವಂ ಭಾಷಿತೇ ಚೈವ ವಜ್ರಿಣಾ ।**
**ಮಾನ್ಧಾತೇತಿ ಚ ನಾಮಾಸ್ಯ ಚಕ್ರುಃ ಸೇನ್ದ್ರಾ ದಿವೌಕಸಃ ॥೩೧॥**

ಇಂದ್ರನು ಕ್ಷಣಕಾಲ ಯೋಚಿಸಿ ತನ್ನ ತರ್ಜನಿಯನ್ನು (ಹೆಬ್ಬೆಟ್ಟಿನ

ಪಕ್ಕದ ತೋರುಬೆರಳನ್ನು) ಶಿಶುವಿಗೆ ಚೀಪಲು ಕೊಟ್ಟು 'ಅಯಂ ಮಾಂ ಧಾಸ್ಯತಿ' (ಧಾಸ್ಯತಿ = ಪಾಸ್ಯತಿ)–"ನನ್ನನ್ನೇ ಇವನು ಕುಡಿಯುತ್ತಾನೆ" ಎಂದು ದೇವತೆಗಳೊಡನೆ ಹೇಳಿದನು.



ಶಿಶುವಿಗೆ ಸ್ತನ್ಯದ ಪ್ರತ್ಯಾಮ್ನಾಯವಾಗಿ ತನ್ನ ತರ್ಜನಿಯನ್ನೇ ಕೊಟ್ಟು ಇಂದ್ರನು 'ಮಾಂ ಧಾಸ್ಯತಿ' ಎಂದು ಹೇಳಿದ್ದರಿಂದ ದೇವತೆಗಳು ಆ ಶಿಶುವಿಗೆ 'ಮಾಂಧಾತ' ಎಂದೇ ನಾಮಕರಣಮಾಡಿದರು.

ಪ್ರದೇಶಿನೀಂ ಶಕ್ರದತ್ತಾಮಾಸ್ವಾದ್ಯ ಸ ಶಿಶುಸ್ತದಾ ।
ಅವರ್ಧತ ಮಹಾತೇಜಾಃ ಕಿಷ್ಕೂನ್ರಾಜಂಸ್ತ್ರಯೋದಶ ॥೩೨॥

ಯುಧಿಷ್ಠಿರ! ಇಂದ್ರನಿಂದ ಕೊಡಲ್ಪಟ್ಟ ತೋರುಬೆರಳನ್ನೇ ಸ್ತನ್ಯದಂತೆ ಚೀಪಿದ ತೇಜಃಪುಂಜಪೂರ್ಣವಾದ ಆ ಶಿಶುವು ಮರುಕ್ಷಣದಲ್ಲಿಯೇ ಹದಿಮೂರು ಗೇಣುಗಳಷ್ಟು ಉದ್ದವಾಗಿ ಬೆಳೆಯಿತು. ಹೀಗೆ ಬೆಳೆದ ಆ ರಾಜಕುಮಾರನು ಧ್ಯಾನಾಸಕ್ತನಾದೊಡನೆಯೇ ಧನುರ್ವೇದಸಹಿತವಾದ ಸಕಲವೇದಗಳೂ ಮತ್ತು ಸಕಲದಿವ್ಯಾಸ್ತ್ರಗಳೂ ಅವನ ಸಮೀಪದಲ್ಲಿ ಉಪ ಸ್ಥಿತವಾದುವು. (ಅನ್ಯರ ಸಹಾಯವಿಲ್ಲದೆಯೇ ಅವನು ಸಕಲವಿದ್ಯೆಗಳನ್ನೂ ಕಲಿತನು.) ಅದೇ ಮುಹೂರ್ತದಲ್ಲಿಯೇ ಆ ರಾಜಕುಮಾರನಿದ್ದೆಡೆಗೆ 'ಆಜ ಗವ' ಎಂಬ ಹೆಸರಿನ ಸುಪ್ರಸಿದ್ಧವಾದ ಧನುಸ್ಸು, ಶೃಂಗಗಳಿಂದ ಮಾಡಿದ ಅನೇಕ ಬಾಣಗಳು ಮತ್ತು ಅಭೇದ್ಯವಾದ ಕವಚ–ಇವುಗಳೆಲ್ಲವೂ ಬಂದು ಅವನ ಆಶ್ರಯಪಡೆದುವು. ಯುಧಿಷ್ಠಿರ! ಈ ರೀತಿಯಲ್ಲಿ ಕೇವಲ ಧ್ಯಾನ ಮಾತ್ರದಿಂದಲೇ ಸಕಲವಿದ್ಯೆಗಳನ್ನೂ, ಕವಚ-ಧನುರ್ಬಾಣಗಳನ್ನೂ ಪಡೆದ ಮಹಾಪರಾಕ್ರಮಿಯಾದ ಮಾಂಧಾತೃವಿಗೆ ಇಂದ್ರನೇ ಸಾಮ್ರಾಜ್ಯಪಟ್ಟಾಭಿ ಷೇಕವನ್ನು ಮಾಡಿದನು. ಪಟ್ಟಾಭಿಷೇಕಾನಂತರದಲ್ಲಿ ಮಾಂಧಾತೃಚಕ್ರ ವರ್ತಿಯು ವಿಷ್ಣುವಿನೋಪಾದಿಯಲ್ಲಿ ಮೂರು ಲೋಕಗಳನ್ನೂ ಪರಾಕ್ರಮ ದಿಂದಲೂ, ಧರ್ಮದಿಂದಲೂ ಜಯಿಸಿದನು. ಅವನ ರಥದ ಚಕ್ರಗಳು ಮೂರು ಲೋಕಗಳಲ್ಲಿಯೂ ಅಪ್ರತಿಹತವಾಗಿ ಹೋಗುತ್ತಿದ್ದುವು. ಅವುಗಳಿಗೆ ಎಲ್ಲಿಯೂ ತಡೆಯೇ ಇರುತ್ತಿರಲಿಲ್ಲ. ಭೂಮಿಯಲ್ಲಿದ್ದ ನವರತ್ನಗಳು ಸ್ವೇಚ್ಛೆಯಿಂದಲೇ ಬಂದು ಮಾಂಧಾತೃಚಕ್ರವರ್ತಿಯ ಬೊಕ್ಕಸದಲ್ಲಿ ಉಪಸ್ಥಿತ ವಾಗುತ್ತಿದ್ದುವು. ಹೆಚ್ಚೇನು ಹೇಳಲಿ, ಧರ್ಮಜ! ಸಕಲೈಶ್ವರ್ಯಯುಕ್ತವಾದ ಈ ಅಖಂಡಭೂಮಂಡಲವೂ ಅವನದೇ ಆಗಿದ್ದಿತು. ಮಾಂಧಾತೃಚಕ್ರವರ್ತಿಯು ಅನೇಕಾನೇಕ ಬಹುದಕ್ಷಿಣಾಕವಾದ ಯಾಗಗಳನ್ನು ಮಾಡಿದನು. ಅನೇಕಧರ್ಮಕಾರ್ಯಗಳನ್ನೂ ಮಾಡಿ ಆ ಚಕ್ರವರ್ತಿಯು ಇಂದ್ರನ ಅರ್ಧಾ ಸನದಲ್ಲಿ ಇಂದ್ರನೊಡನೆ ಕುಳಿತುಕೊಳ್ಳುವ ಯೋಗ್ಯತೆಯನ್ನೂ ಸಂಪಾದಿಸಿ ದನು. ಧರ್ಮನಿತ್ಯನಾದ, ಧೀಮಂತನಾದ ಮಾಂಧಾತೃಚಕ್ರವರ್ತಿಯು ಅನೇಕಾನೇಕ ಪಟ್ಟಣಗಳಿಂದಲೂ, ಸಮುದ್ರಗಳಿಂದಲೂ ಪರಿವೃತವಾದ ಭೂಮಿಯನ್ನು ಶಾಸನಮಾತ್ರದಿಂದಲೇ ಒಂದೇ ದಿನದಲ್ಲಿ ಜಯಿಸಿದನು.

ಅವನ ಆಜ್ಞೆಗೆ ಪ್ರತಿರೋಧವೆಂಬುದೇ ಎಲ್ಲಿಯೂ ಇರಲಿಲ್ಲ. ಈ ಕಾರಣ ದಿಂದಲೇ ಅವನು ಮಾಡಿದ ಯಜ್ಞಗಳ ಯೂಪಸ್ತಂಭಗಳನ್ನು ವಿಶ್ವದ ಎಲ್ಲೆಡೆ ಗಳಲ್ಲಿಯೂ ಇಂದೂ ನಾವು ಕಾಣಬಹುದಾಗಿದೆ. ಪೃಥ್ವಿಯ ನಾಲ್ಕು ದಿಕ್ಕು ಗಳಲ್ಲಿಯೂ ಅವನು ಪ್ರತಿಷ್ಠಾಪಿಸಿದ ಯೂಪಸ್ತಂಭಗಳು ಈಗಲೂ ಇವೆ. ಧರ್ಮಜ! ಯಜ್ಞಗಳನ್ನು ಮಾಡಿದನಂತರದಲ್ಲಿ ಅವನು ಬ್ರಾಹ್ಮಣರಿಗೆ ಹತ್ತುಸಾವಿರ ಪದ್ಮಸಂಖ್ಯಾಕವಾದ ಗೋವುಗಳನ್ನು ದಕ್ಷಿಣಾರೂಪವಾಗಿ ಕೊಟ್ಟನೆಂದು ನಾವು ಕೇಳಿದ್ದೇವೆ. (೧೦೦ ಕೋಟಿ = ೧ ಪದ್ಮ) ಮಾಂಧಾತೃ ಚಕ್ರವರ್ತಿಯ ಪರಾಕ್ರಮವು ಇಂದ್ರನಿಗಿಂತಲೂ ಮಿಗಿಲಾಗಿದ್ದಿತು. ಯುಧಿಷ್ಠಿರ! ಅವನ ಆಳ್ವಿಕೆಯಲ್ಲಿ ಒಮ್ಮೆ ವೀರಕ್ಷಾಮವುಂಟಾಯಿತು. ಸುಮಾರು ಹನ್ನೆರಡು ವರ್ಷಗಳವರೆಗೆ ಮಳೆ-ಬೆಳೆಗಳೇ ಇಲ್ಲವಾಯಿತು. ಆ ಸಮಯದಲ್ಲಿ ಮಾಂಧಾತೃಚಕ್ರವರ್ತಿಯು ಇಂದ್ರನು ನೋಡುತ್ತಿರುವಂತೆಯೇ ಮೋಡಗಳಿಗೆ ಆಜ್ಞೆಮಾಡಿ ಸಸ್ಯಗಳ ಅಭಿವೃದ್ಧಿಗಾಗಿ ಮಳೆಯಾಗುವಂತೆ ಮಾಡಿದನು. ಇಂದ್ರನು ಅದನ್ನು ನೋಡುತ್ತಾ ಬೇರೆ ಮಾರ್ಗವಿಲ್ಲದೇ ಸುಮ್ಮನಿರಬೇಕಾಯಿತು. ಮಾಂಧಾತೃಚಕ್ರವರ್ತಿಯ ಪರಾಕ್ರಮವು ತನ್ನ ಪರಾಕ್ರಮಕ್ಕಿಂತಲೂ ಮಿಗಿಲಾದುದೆಂದು ಇಂದ್ರನೇ ಒಪ್ಪಿಕೊಳ್ಳಬೇಕಾಯಿತು. ಮಹಾಮೇಘದಂತೆ ಗರ್ಜನೆಮಾಡುತ್ತಿದ್ದ ಸೋಮವಂಶೋತ್ಪನ್ನನಾದ ಗಾಂಧಾರಾಧಿಪತಿಯನ್ನು ಬಾಣಗಳ ಪ್ರಯೋಗದಿಂದಲೇ ಮಾಂಧಾತೃ ಚಕ್ರವರ್ತಿಯು ಪರಾಜಯಗೊಳಿಸಿ ಸಂಹರಿಸಿದನು. ನಾಲ್ಕು ವರ್ಣಾಶ್ರಮ ಗಳನ್ನೂ ಅವನು ಧರ್ಮದಿಂದ ಪರಿಪಾಲನೆ ಮಾಡುತ್ತಿದ್ದನು. ಮಹಾತೇಜಸ್ವಿ ಯಾದ ಮಹಾತ್ಮನಾದ ಮಾಂಧಾತೃಚಕ್ರವರ್ತಿಯ ಪ್ರಭಾವದಿಂದ ಲೋಕಗಳೆ ಲ್ಲವೂ ಉಪದ್ರವರಹಿತವಾಗಿದ್ದುವು. ಸೂರ್ಯನಿಗೆ ಸಮವಾದ ತೇಜಸ್ಸಿನಿಂದ ಕೂಡಿದ್ದ ಆ ಚಕ್ರವರ್ತಿಯು ದೇವತೆಗಳ ಪ್ರೀತ್ಯರ್ಥವಾಗಿ ಯಾಗಮಾಡಿದ ಕ್ಷೇತ್ರಗಳಲ್ಲಿ ಇದೂ ಒಂದು ಕ್ಷೇತ್ರವಾಗಿರುತ್ತದೆ. ಇಲ್ಲಿಯೂ ಅವನು ದೇವತೆಗಳ ಪ್ರೀತ್ಯರ್ಥವಾಗಿ ಅನೇಕಾನೇಕ ಯಾಗಗಳನ್ನು ಮಾಡಿ ಬ್ರಾಹ್ಮಣ ರಿಗೆ ಯಥೇಚ್ಛವಾಗಿ ದಕ್ಷಿಣೆಗಳನ್ನು ಕೊಟ್ಟಿದ್ದನು. ಕುರುಕ್ಷೇತ್ರದ ಮಧ್ಯದಲ್ಲಿ ಇರುವ ಈ ಪ್ರದೇಶವು ಪುಣ್ಯತಮವಾದ ಮಾಂಧಾತೃಚಕ್ರವರ್ತಿಯ ಯಜ್ಞ ಭೂಮಿಯಾಗಿರುತ್ತದೆ.

ಧರ್ಮಜ! ನಿನ್ನ ಅಪೇಕ್ಷೆಯಂತೆ ನಿನಗೆ ಮಾಂಧಾತೃಚಕ್ರವರ್ತಿಯ ಜೀವನಚರಿತ್ರೆಯನ್ನೂ ಮತ್ತು ಅದ್ಭುತವಾದ ಅವನ ಜನ್ಮವೃತ್ತಾಂತವನ್ನೂ ಹೇಳಿರುತ್ತೇನೆ."

ಜನಮೇಜಯ! ಲೋಮಶರು ಮಾಂಧಾತೃಚಕ್ರವರ್ತಿಯ ಕಥೆಯನ್ನು ಹೃದಯಂಗಮವಾಗಿ ಹೇಳಿ ಮುಗಿಸಿದನಂತರ ಏಕಾಗ್ರಚಿತ್ತನಾಗಿ ಕೇಳುತ್ತಿದ್ದ ಯುಧಿಷ್ಠಿರನು ಸೋಮಕನ ಸಂಬಂಧವಾಗಿ ಪ್ರಶ್ನಿಸಿದನು."

೧೨೬ನೆಯ ಅಧ್ಯಾಯವು ಮುಗಿಯಿತು.

೧೨೭ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಸೋಮಕರಾಜನ ಮತ್ತು ಅವನ ಮಗ ಜಂತುವಿನ ವೃತ್ತಾಂತ

ಪಾರಿಕ್ಷಿತ! ಯುಧಿಷ್ಠಿರನು ಲೋಮಶರನ್ನು ಪ್ರಶ್ನಿಸುತ್ತಾನೆ :

"ಮಹರ್ಷಿಗಳೇ! ತಾವು ವಾಗ್ಮಿಗಳಲ್ಲಿ ಶ್ರೇಷ್ಠರಾಗಿರುವಿರಿ. ಸೋಮಕನು ಎಂತಹ ಪರಾಕ್ರಮಿಯೆಂಬುದನ್ನೂ ನನಗೆ ದಯಮಾಡಿ ಹೇಳಿರಿ. ಅವನು ಮಾಡಿದ ಮಹಾಕಾರ್ಯಗಳಾವುವು ಮತ್ತು ಅವನ ಪರಾಕ್ರಮದ ಮಿತಿ ಎಷ್ಟು?-ಇವೇ ಮುಂತಾದ ವಿಷಯಗಳನ್ನು ತಿಳಿಯಲಿಚ್ಛಿಸಿದ್ದೇನೆ. ದಯಮಾಡಿ ಹೇಳಿರಿ."

ಲೋಮಶರು ನಸುನಗುತ್ತಾ ಸೋಮಕನ ಕಥಾಪ್ರವಚನವನ್ನು ಪ್ರಾರಂಭಿಸಿದರು :

"ಯುಧಿಷ್ಠಿರ! ಮಹಾಧರ್ಮಿಷ್ಠನಾದ ಸೋಮಕನೆಂಬ ರಾಜನೊಬ್ಬ ನಿದ್ದನು. ಅವನಿಗೆ ಅನುರೂಪರಾದ, ಮಹಾರೂಪವತಿಯರಾದ ನೂರು ಮಂದಿ ಭಾರ್ಯೆಯರಿದ್ದರು. ಆದರೆ ಎಷ್ಟೇ ಪ್ರಯತ್ನಿಸಿದರೂ ನೂರು ಭಾರ್ಯೆಯರಲ್ಲಿ ಒಬ್ಬಳಲ್ಲಿಯಾದರೂ ಅವನಿಗೆ ಒಬ್ಬ ಪುತ್ರನನ್ನೂ ಪಡೆಯಲು ಸಾಧ್ಯವಾಗಲಿಲ್ಲ. ಅನೇಕವರ್ಷಗಳವರೆಗೆ ಅವನು ಅಪುತ್ರವಂತನಾಗಿಯೇ ಇದ್ದನು. ಸೋಮಕನಿಗೆ ವೃದ್ಧಾಪ್ಯವೂ ಪ್ರಾಪ್ತವಾಯಿತು. ಪುತ್ರಪ್ರಾಪ್ತಿಗಾಗಿ ಸೋಮಕನು ವ್ರತೋಪವಾಸಗಳು, ದಾನ, ಪುಣ್ಯಕ್ಷೇತ್ರ

ಗಳ ಯಾತ್ರೆ-ಮುಂತಾದ ಧರ್ಮಕಾರ್ಯಗಳನ್ನು ಮಾಡುತ್ತಲೇ ಇದ್ದನು. ಅಷ್ಟು ವರ್ಷಗಳೂ ಮಾಡಿದ ವ್ರತ-ನಿಯಮಾದಿಗಳ ಫಲವೋ ಎಂಬಂತೆ– ನೂರು ಮಂದಿ ಪತ್ನಿಯರಲ್ಲಿ ಒಬ್ಬ ಪತ್ನಿಗೆ ಮಾತ್ರ ಒಂದು ಗಂಡು ಮಗುವು ಜನಿಸಿತು. ಈ ಶಿಶುವಿಗೆ 'ಜಂತು' ಎಂದು ನಾಮಕರಣ ಮಾಡಿದರು. ಅಷ್ಟು ವರ್ಷಗಳವರೆಗೂ ಮಗುವನ್ನೇ ಕಾಣದಿದ್ದ ಸೋಮಕನ ಇತರ ಭಾರ್ಯೆಯರೂ ಹುಟ್ಟಿದ ಮಗುವನ್ನು ತಮ್ಮದೆಂದೇ ಭಾವಿಸಿ ಅದನ್ನು ಬಹಳ ಆದರದಿಂದ ಪೋಷಿಸುತ್ತಿದ್ದರು. ಮಗುವು ಕೇಳಿದುದೆಲ್ಲವನ್ನೂ ಕೊಟ್ಟು ಎತ್ತಿಕೊಂಡು ಅದು ಸರ್ವದಾ ನಗುತ್ತಲೇ ಇರುವಂತೆ ಎಲ್ಲರೂ ನೋಡಿಕೊಳ್ಳುತ್ತಿದ್ದರು. ಮಗುವು ನಗುತ್ತಿದ್ದರೆ ಅವರೂ ಆನಂದಪಡುವರು. ಹೀಗೆಯೇ ಇರುತ್ತಿರಲಾಗಿ ಒಂದಾನೊಂದು ದಿನ ಇರುವೆಯೊಂದು ಕಚ್ಚಿದ ಕಾರಣದಿಂದಾಗಿ ಮಗುವು ಕಿಟ್ಟನೆ ಕಿರುಚಿತು. ಇರುವೆಯ ಕಡಿತದಿಂದ ಮಗುವು ಚೀರಿದ್ದನ್ನು ಕಂಡು ರಾಜನ ನೂರು ಮಂದಿ ಮಡದಿಯರೂ ದುಃಖಗೊಂಡವರಾಗಿ ಮಗುವಿನ ಸುತ್ತಲೂ ಕುಳಿತು ಗೋಳಿಡುತ್ತಿದ್ದರು. ಮಗುವನ್ನು ಸಮಾಧಾನಪಡಿಸಲೂ ಹೋಗಲಿಲ್ಲ. ಎಂದೂ ಕಾಣದ ಮಗುವನ್ನು ಕಂಡ ಅವರಿಗೆ ಏನು ಮಾಡಬೇಕೆಂಬುದೇ ತೋರದೇ ಅದರೊಡನೆ ತಾವೂ ಗೋಳಿಡುತ್ತಿದ್ದರು. ನೂರು ಮಂದಿಯೂ ಮಗುವಿನೊಡನೆ ಸೇರಿ ಅಳಲು ಮೊದಲಿಟ್ಟರೆ ಆ ಗೋಳಾಟದ ಧ್ವನಿಯು ಬಹುದೂರದವರೆಗೂ ಕೇಳುವುದು ಸ್ವಾಭಾವಿಕವಲ್ಲವೇ? ಮಂತ್ರಿಗಳೊಡನೆಯೂ, ಪುರೋಹಿತರೊಡನೆಯೂ ಮಂತ್ರಾಲೋಚನೆಯನ್ನು ಮಾಡುತ್ತಾ ಸಿಂಹಾಸನದಲ್ಲಿ ಕುಳಿತಿದ್ದ ಸೋಮಕರಾಜನಿಗೂ ಆ ಗೋಳಾಟವು ಕೇಳಿಸಿತು. ಒಡನೆಯೇ ರಾಜನು ಅಂತಃಪುರದ ಕಡೆಯಿಂದ ಬರುತ್ತಿದ್ದ ಆರ್ತಾಲಾಪಕ್ಕೆ ಕಾರಣವನ್ನು ತಿಳಿದುಬರುವಂತೆ ಸೇವಕರನ್ನು ಕಳುಹಿಸಿದನು. ರಾಜಸೇವಕರು ಒಡನೆಯೇ ಅಂತಃಪುರಕ್ಕೆ ಹೋಗಿ ಎಲ್ಲ ವಿಷಯಗಳನ್ನೂ ಪ್ರತ್ಯಕ್ಷವಾಗಿ ನೋಡಿ ರಾಜನ ಬಳಿಗೆ ಬಂದು ಎಲ್ಲವನ್ನೂ ವಿಶದವಾಗಿ ಹೇಳಿದರು. ಒಡನೆಯೇ ರಾಜನು ಸಿಂಹಾಸನದಿಂದ ಮೇಲೆದ್ದು ಮಂತ್ರಿ-ಋತ್ವಿಜರೊಡನೆ ಅಂತಃಪುರಕ್ಕೆ ಹೋಗಿ ಅಳುತ್ತಿದ್ದ ತನ್ನ ಮಗನನ್ನು ಪ್ರಿಯೋಕ್ತಿಗಳಿಂದ ಸಮಾಧಾನಗೊಳಿಸಿದನು. ತನ್ನ ಪತ್ನಿಯರಿಗೂ ಸಮಾಧಾನ ಹೇಳಿ, ನಿಟ್ಟುಸಿರು

ಬಿಡುತ್ತಾ ಸೋಮಕನು ಪುರೋಹಿತಾಮಾತ್ಯರೊಡನೆ ಪುನಃ ಆಸ್ಥಾನಕ್ಕೆ ಬಂದು ಸಿಂಹಾಸನದಲ್ಲಿ ಕುಳಿತನು.

ಬಹಳ ಚಿಂತೆಗೊಳಗಾದವನಂತೆ ಕಾಣುತ್ತಿದ್ದ ಸೋಮಕನು ಅಮಾತ್ಯರನ್ನೂ, ಮುಖ್ಯವಾಗಿ ಪುರೋಹಿತರನ್ನೂ ಕುರಿತು ಹೀಗೆಂದು ಹೇಳಿದನು :

**ಧಿಗಸ್ತ್ವಿಹೈಕಪುತ್ರತ್ವಮಪುತ್ರತ್ವಂ ವರಂ ಭವೇತ್ ।**
**ನಿತ್ಯಾತುರತ್ವಾದ್ಭೂತಾನಾಂ ಶೋಕ ಏವೈಕಪುತ್ರತಾ ॥೧೨॥**

“ನನ್ನ ಏಕಪುತ್ರತ್ವಕ್ಕೆ (ಒಬ್ಬನೇ ಪುತ್ರನನ್ನು ಹೊಂದಿರುವಿಕೆಗೆ) ಧಿಕ್ಕಾರವಿರಲಿ! ನನ್ನ ಈಗಿನ ಅನುಭವದಲ್ಲಿ ಒಬ್ಬ ಮಗನಿರುವುದಕ್ಕಿಂತಲೂ ಮಕ್ಕಳಿಲ್ಲದಿರುವುದೇ ಲೇಸೆನಿಸಿಬಿಟ್ಟಿರುವುದು. ಪ್ರಪಂಚದಲ್ಲಿ ಹುಟ್ಟಿದ ಪ್ರಾಣಿಗಳಿಗೆ ರೋಗ-ರುಜಿನಗಳು ನಿತ್ಯವಾದುದರಿಂದ ಒಬ್ಬನೇ ಮಗನನ್ನು ಪಡೆಯುವುದು ಶೋಕಕ್ಕೆ ಕಾರಣವಾಗುತ್ತದೆಯೇ ಹೊರತು ಸುಖಕ್ಕೆ ಕಾರಣವಾಗುವುದಿಲ್ಲ. ಬ್ರಾಹ್ಮಣೋತ್ತಮರೇ! ಹೆಚ್ಚು ಮಕ್ಕಳನ್ನು ಪಡೆಯಬೇಕೆಂಬ ಆಶಯದಿಂದಲೇ ನಾನು ನೂರು ಮಂದಿ ಕನ್ಯೆಯರನ್ನು ಮದುವೆಯಾದೆನು. ಅವರ ಶರೀರಾರೋಗ್ಯ ಮತ್ತು ಅವರ ವಂಶ-ಇತ್ಯಾದಿಗಳನ್ನು ಸಂಪೂರ್ಣವಾಗಿ ಪರೀಕ್ಷಿಸಿದ ನಂತರವೇ ಅವರು ನನಗೆ ಅನುರೂಪರಾದ ಕನ್ಯೆಯರೆಂದು ಮನದಲ್ಲಿ ನಿಶ್ಚಯಿಸಿ ಮದುವೆಯಾದೆನು. ಆದರೆ ನನ್ನ ಪರೀಕ್ಷೆ ಮತ್ತು ಪ್ರಯತ್ನಗಳೆಲ್ಲವೂ ವ್ಯರ್ಥವಾಗಿಹೋದುವು. ಆ ನೂರು ಮಂದಿಯಲ್ಲಿ ಯಾರೊಬ್ಬರಿಗೂ ಅನೇಕವರ್ಷಗಳವರೆಗೆ ಮಕ್ಕಳೇ ಆಗಲಿಲ್ಲ. ನಾನು ವೃದ್ಧನಾದನಂತರ ಎಲ್ಲರೂ ಸೇರಿ ಅನೇಕಾನೇಕ ವ್ರತೋಪವಾಸಾದಿಗಳನ್ನು ಮಾಡಿದ ಫಲವಾಗಿ ಈ ಒಬ್ಬ ಜಂತುವನ್ನು ಪಡೆದಿರುತ್ತೇವೆ. ನಮ್ಮೆಲ್ಲರ ಪ್ರಾಣವೂ ಈ ಒಂದು ಮಗುವನ್ನೇ ಅವಲಂಬಿಸಿ ನಿಂತಿದೆ. ಈ ಶಿಶುವಿಗೆ ಸ್ವಲ್ಪ ತೊಂದರೆಯಾದರೂ, ಈಗ ನೀವೆಲ್ಲರೂ ನೋಡಿದಂತೆಯೇ ಅರಮನೆಯೇ ಅಲ್ಲೋಲ-ಕಲ್ಲೋಲವಾಗಿಬಿಡುತ್ತದೆ. ಬ್ರಾಹ್ಮಣೋತ್ತಮರೇ! ನಾನು ಈಗಾಗಲೇ ವೃದ್ಧನಾಗಿದ್ದೇನೆ. ನನ್ನ ಪತ್ನಿಯರೂ ವೃದ್ಧೆಯರಾಗುತ್ತಿದ್ದಾರೆ. ಈ ವೃದ್ಧಾಪ್ಯದಲ್ಲಿ ಹುಟ್ಟಿರುವ ಈ ಒಂದು ಶಿಶುವು ನಮ್ಮ ಉಸಿರು

ನಂತಿದೆ. ವಿಪ್ರೋತ್ತಮರೇ! ನಿಮಗೆ ತಿಳಿದಿರುವಂತೆ ಈಗಲೂ ನೂರು ಮಕ್ಕಳನ್ನು ಪಡೆಯಲು ಸಾಧಕವಾಗುವ ಯಾವುದಾದರೂ ಕರ್ಮವಿರು ವುದೇ? ಹಾಗೇನಾದರೂ ಇರುವುದಾದರೆ ಒಡನೆಯೇ ಹೇಳಿರಿ. ಕರ್ಮವು ಚಿಕ್ಕದು ಅಥವಾ ದೊಡ್ಡದು ; ಮಾಡಲು ಸಾಧ್ಯ ಅಥವಾ ಅಸಾಧ್ಯ ಎಂಬು ದನ್ನು ನೀವು ಖಂಡಿತವಾಗಿಯೂ ಯೋಚಿಸಬೇಡಿರಿ."

ರಾಜನ ಆ ಮಾತನ್ನು ಕೇಳಿ ಪುರೋಹಿತರು ಕ್ಷಣಕಾಲ ಯೋಚಿಸಿ ಹೇಳಿದರು :

**ಅಸ್ತಿ ಚೈತಾದೃಶಂ ಕರ್ಮ ಯೇನ ಪುತ್ರಶತಂ ಭವೇತ್ ।**
**ಯದಿ ಶಕ್ನೋಷಿ ತತ್ಕರ್ತುಮಥ ವಕ್ಷ್ಯಾಮಿ ಸೋಮಕ ॥೧೭॥**

"ಸೋಮಕರಾಜನೇ! ಒಂದು ಕರ್ಮವೇನೋ ಇದೆ. ಆ ಕರ್ಮವನ್ನು ಮಾಡುವುದರಿಂದ ನೂರು ಮಂದಿ ಮಕ್ಕಳನ್ನು ಪಡೆಯುವ ಸಾಧ್ಯತೆಯೂ ಇದೆ. ಆದರೆ ನಿನಗೆ ಆ ಕರ್ಮವನ್ನು ಮಾಡಲು ಸಾಧ್ಯವಾಗುವುದೇ?– ಎಂಬುದೊಂದೇ ನನ್ನ ಸಂದೇಹ. ಎಂತಹ ಕ್ಲಿಷ್ಟವಾದರೂ, ಎಂತಹ ದಾರುಣ ಕರ್ಮವಾದರೂ ಮಾಡಿಯೇ ತೀರುವೆನೆಂದು ನೀನು ಹೇಳುವೆಯಾದರೆ ಕರ್ಮಾಂಗಗಳನ್ನು ವಿವರಿಸಿ ಹೇಳುವೆನು."

**ಕಾರ್ಯಂ ವಾ ಯದಿ ವಾಕಾರ್ಯಂ ಯೇನ ಪುತ್ರಶತಂ ಭವೇತ್ ।**
**ಕೃತಮೇವೇತಿ ತದ್ವಿದ್ಧಿ ಭಗವಾನ್ಪ್ರಬ್ರವೀತು ಮೇ ॥೧೮॥**

"ಬ್ರಾಹ್ಮಣೋತ್ತಮರೇ! ನೀವು ಹೇಳಿರುವ ಕರ್ಮವು ಸುಕಾರ್ಯ ವಾಗಲಿ–ಅಕಾರ್ಯವಾಗಲಿ, ಸುಲಭವಾಗಿರಲಿ–ಕಠಿನವಾಗಿರಲಿ ಆ ಕರ್ಮ ದಿಂದ ನೂರು ಮಕ್ಕಳು ಹುಟ್ಟುವರೆಂಬ ನಿಶ್ಚಯವಿರುವುದಾದರೆ ಖಂಡಿತ ವಾಗಿಯೂ ಮಾಡಿಯೇ ತೀರುವೆನು. ನಾನು ಆ ಕರ್ಮವನ್ನು ಮಾಡಿ ಪೂರೈಸಿದನೆಂದೇ ತಾವು ಭಾವಿಸಬಹುದು. ಈಗಲಾದರೂ ಆ ಕರ್ಮವನ್ನೂ ಅದಕ್ಕೆ ಬೇಕಾಗುವ ಉಪಕರಣಗಳನ್ನೂ ದಯಮಾಡಿ ಹೇಳಿರಿ."

**ಯಜಸ್ವ ಜನ್ತುನಾ ರಾಜಂಸ್ತ್ವಂ ಮಯಾ ವಿತತೇ ಕ್ರತೌ ।**
**ತತಃ ಪುತ್ರಶತಂ ಶ್ರೀಮದ್ಭವಿಷ್ಯತ್ಯಚಿರೇಣ ತೇ ॥೧೯॥**

**ವಪಾಯಾಂ ಹೂಯಮಾನಾಯಾಂ ಧೂಮಮಾಘ್ರಾಯ ಮಾತರಃ ।**
**ತತಸ್ತಾಃ ಸುಮಹಾವೀರ್ಯಾಞ್ಜನಯಿಷ್ಯನ್ತಿ ತೇ ಸುತಾನ್ ॥೨೦॥**

**ತಸ್ಯಾಮೇವ ತು ತೇ ಜನ್ತುರ್ಭವಿತಾ ಪುನರಾತ್ಮಜಃ ।**
**ಉತ್ತರೇ ಚಾಸ್ಯ ಸೌವರ್ಣಂ ಲಕ್ಷ್ಮ ಪಾರ್ಶ್ವೇ ಭವಿಷ್ಯತಿ ॥೨೧॥**

"ಮಹಾರಾಜ! ನಾನೇ ಪುರೋಹಿತನಾಗಿ ಮಾಡಿಸುವ ಯಜ್ಞದಲ್ಲಿ ನೀನು ಯಾಜಮಾನ್ಯವನ್ನು ವಹಿಸಿ ಈಗ ನಿನಗೆ ಹುಟ್ಟಿರುವ ಜಂತುವನ್ನೇ ಪಶುವನ್ನಾಗಿ ಮಾಡಿಕೊಂಡು ಯಾಗಮಾಡು. ಆ ಯಾಗವು ಮುಗಿದ ಸ್ವಲ್ಪ ಕಾಲದಲ್ಲಿಯೇ ನಿನಗೆ ನೂರು ಮಂದಿ ಮಕ್ಕಳು ಹುಟ್ಟುವರು. ಜಂತುವಿನ ವಪೆಯನ್ನು ತೆಗೆದು ಹೋಮಮಾಡುವಾಗ ಉದ್ಭೂತವಾಗುವ ಧೂಮವನ್ನು ಆಘ್ರಾಣಿಸುವುದರಿಂದ ನಿನ್ನ ನೂರು ಪತ್ನಿಯರೂ ಮಹಾವೀರ್ಯವಂತರಾದ ನೂರು ಮಕ್ಕಳನ್ನು ಅತ್ಯಲ್ಪಕಾಲದಲ್ಲಿಯೇ ಪಡೆಯುತ್ತಾರೆ. ಜಂತುವೂ ಈಗಿನ ತನ್ನ ತಾಯಿಯನ್ನೇ ಪುನಃ ತಾಯಿಯನ್ನಾಗಿ ಪಡೆದು ನಿನ್ನ ಮಗನಾಗಿಯೇ ಜನ್ಮತಾಳುತ್ತಾನೆ. ಪುನರ್ಜನ್ಮದಲ್ಲಿ ಇವನ ಎಡಪಕ್ಕೆಯಲ್ಲಿ ಒಂದು ಸುವರ್ಣದ ರೇಖೆಯಿರುವುದು."

೧೨೭ನೆಯ ಅಧ್ಯಾಯವು ಮುಗಿಯಿತು.

೧೨೮ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಸೋಮಕನಿಗೆ ನೂರು ಮಂದಿ ಮಕ್ಕಳ ಪ್ರಾಪ್ತಿ : ಸೋಮಕನಿಗೂ ಯಜ್ಞಮಾಡಿಸಿದ ಪುರೋಹಿತನಿಗೂ ಸಮಾನರೂಪವಾದ ನರಕವಾಸ : ಅನಂತರದಲ್ಲಿ ಪುಣ್ಯಲೋಕಗಳ ಉಪಭೋಗ

ಯುಧಿಷ್ಠಿರ! ಪುರೋಹಿತರು ಹೇಳಿದ ಮಾತುಗಳಿಗೆ ಉತ್ತರವಾಗಿ ಸೋಮಕನು ಹೇಳಿದನು :

"ಬ್ರಾಹ್ಮಣೋತ್ತಮರೇ! ಯಾವ ಕರ್ಮವನ್ನು ಯಾವ ರೀತಿಯಲ್ಲಿ ಸ್ವಲ್ಪವಾದರೂ ಲೋಪ-ದೋಷಗಳಿಲ್ಲದೇ ನೆರವೇರಿಸಬೇಕೋ ಆ ರೀತಿ ಯಲ್ಲಿಯೇ ನೆರವೇರಿಸಿರಿ. ನಾನು ಬಹುಪುತ್ರರನ್ನು ಪಡೆಯುವ ಆಶೆಯುಳ್ಳವ ನಾಗಿರುವುದರಿಂದ ನೀವು ಹೇಳಿದಂತೆಯೇ ಎಲ್ಲವನ್ನೂ ಮಾಡುವೆನು."

ಸೋಮಕನು ತನ್ನ ಮಗನಾದ ಜಂತುವನ್ನು ಪಶುವಿನ ಸ್ಥಾನದಲ್ಲಿಟ್ಟು ಕೊಂಡು ಯಾಗವನ್ನು ಪ್ರಾರಂಭಿಸಿದನು. ಆದರೆ ತಾಯಂದಿರಿಗೆ ಮಾತ್ರ ಆ ದೃಶ್ಯವನ್ನು ನೋಡಲಾಗಲಿಲ್ಲ. ಎಷ್ಟೇ ಆದರೂ ಹೆಂಗರುಳಲ್ಲವೇ? ಪಶು ಸ್ಥಾನದಲ್ಲಿದ್ದ ಮಗುವನ್ನು ಎತ್ತಿಕೊಂಡು ಗಟ್ಟಿಯಾಗಿ ಅವರು ಅಳತೊಡ ಗಿದರು. 'ಅಯ್ಯೋ! ನಾವು ಹಾಳಾಗಿಹೋದೆವಲ್ಲಾ! ಇದ್ದ ಒಬ್ಬ ಮಗನನ್ನೂ ಬಲಿಗೊಡುತ್ತಿರುವೆವಲ್ಲಾ!'–ಎಂದು ಆರ್ತನಾದಮಾಡುತ್ತಾ ಜಂತುವಿನ ಬಲರಟ್ಟೆಯನ್ನು ಹಿಡಿದುಕೊಂಡು ತಮ್ಮ ಧಾರಾಕಾರವಾದ ಕಣ್ಣೀರಿ ನಿಂದಲೇ ಅವನಿಗೆ ಸ್ನಾನಮಾಡಿಸಿಬಿಟ್ಟರು.

ಪಶುಸ್ಥಾನದಿಂದ ಮಗುವನ್ನು ರಾಜಮಹಿಷಿಯರು ಸೆಳೆದುಕೊಂಡು ಹೋದ ಕಾರಣಕ್ಕಾಗಿ ಪುರೋಹಿತರು ಆರಂಭಿಸಿದ ಕರ್ಮವನ್ನು ನಿಲ್ಲಿಸು ವಂತಿರಲಿಲ್ಲ. ಮೇಲಾಗಿ ಪುರೋಹಿತರಿಗೇ ತಾವು ಮಾಡುತ್ತಿರುವ ಕರ್ಮದ ಫಲವೇನೆಂಬುದು ಚೆನ್ನಾಗಿ ತಿಳಿದಿತ್ತು. ಒಡನೆಯೇ ಪುರೋಹಿತರು ಮಗು ವಿದ್ದಲ್ಲಿಗೆ ಹೋಗಿ ತಮ್ಮ ಬಲಗೈಯಿಂದ ಮಗುವನ್ನು ಹಿಡಿದು ಬಲಾತ್ಕಾರ ವಾಗಿ ಯಜ್ಞಮಂಟಪಕ್ಕೆ ಸೆಳೆದು ತಂದರು. ರಾಜಪತ್ನಿಯರು ಬಹುಸಂಕಟ ದಿಂದ ಹೆಣ್ಣುಕುರರಿಗಳಂತೆ ಅಥವಾ ನೀರು ಹಕ್ಕಿಗಳಂತೆ ಗಟ್ಟಿಯಾಗಿ ಕಿರುಚಿ ಕೊಂಡರು. ಪುರೋಹಿತರು ಯಾವುದಕ್ಕೂ ಕಿವಿಗೊಡದೇ ಜಂತುವನ್ನು ಸೆಳೆದು ತಂದು ಪಶುಸ್ಥಾನದಲ್ಲಿಟ್ಟು ಮಹಾಮಂತ್ರಗಳಿಂದ ಅಭಿಮಂತ್ರಿಸಿ ವಧೆಮಾಡಿ ವಪೆಯನ್ನು ತೆಗೆದು ಯಜ್ಞೇಶ್ವರನಲ್ಲಿ ಯಥಾವಿಧಿಯಾಗಿ ಹೋಮಮಾಡಿದಾಗ ಅಲ್ಲಿಯೇ ಇದ್ದು ಸಂಕಟಪಡುತ್ತಿದ್ದ ರಾಜಮಹಿಷಿ ಯರು ವಪೆಯ ಧೂಮವನ್ನು ಆಘ್ರಾಣಿಸಿ ಒಡನೆಯೇ ಜ್ಞಾನಶೂನ್ಯರಾಗಿ ಕೆಳಗೆ ಬಿದ್ದರು. ಶೈತ್ಯೋಪಚಾರವಾದನಂತರ ಅವರೆಲ್ಲರಿಗೂ ಪ್ರಜ್ಞೆಯುಂಟಾಯಿತು. ಪುರೋಹಿತರು ಹೇಳಿದ ರೀತಿಯಲ್ಲಿಯೇ ಜಂತುವಿನ ವಪಾ ಹೋಮದಿಂದ ಉದ್ಭೂತವಾದ ಧೂಮದ ಆಘ್ರಾಣದಿಂದಲೇ ಅವರೆಲ್ಲರೂ ಗರ್ಭವತಿಯರಾದರು.

ಯುಧಿಷ್ಠಿರ! ಹತ್ತನೆಯ ತಿಂಗಳಿನಲ್ಲಿ ನೂರು ಮಂದಿ ರಾಜಭಾರ್ಯೆ ಯರೂ ತೇಜಃಪುಂಜಯುಕ್ತರಾದ ನೂರು ಗಂಡುಮಕ್ಕಳನ್ನು ಪ್ರಸವಿಸಿದರು. ಪುರೋಹಿತರು ಹೇಳಿದ್ದಂತೆಯೇ ಜಂತುವು ಜ್ಯೇಷ್ಠಪುತ್ರನಾಗಿ ತನ್ನ

ಹಿಂದಿನ ತಾಯಿಯ ಗರ್ಭಾಂಬುಧಿಯಲ್ಲಿಯೇ ಪುನಃ ಜನಿಸಿದನು ಮತ್ತು ಪುರೋಹಿತರು ಹೇಳಿದ್ದ ರೀತಿಯಲ್ಲಿಯೇ ಅವನ ಎಡಭಾಗದಲ್ಲಿ ಸುವರ್ಣದ ರೇಖೆಯೂ ಇದ್ದಿತು. ರಾಜಪತ್ನಿಯರೆಲ್ಲರೂ ಆ ಶಿಶುವನ್ನು ತಮ್ಮ ಸ್ವಂತ ಮಕ್ಕಳಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದರು. ತೇಜಸ್ಸಿನಲ್ಲಿಯೂ ಚಟುವಟಿಕೆಯಲ್ಲಿಯೂ ಜಂತುವು ಉಳಿದ ಎಲ್ಲ ಮಕ್ಕಳಿಗಿಂತಲೂ ಮಿಗಿಲಾಗಿದ್ದನು.

ಧರ್ಮಜ! ಪುರೋಹಿತನು ತನ್ನ ಕರ್ಮದ ಸಾಧನೆಯಿಂದ ಸೋಮಕನಿಗೆ ನೂರು ಮಕ್ಕಳು ಹುಟ್ಟುವಂತೆ ಮಾಡಿದುದೇನೋ ನಿಶ್ಚಯ. ಆದರೆ ಕಾಲಾಂತರದಲ್ಲಿ ಅವನಿಗಾದ ದುರವಸ್ಥೆಯನ್ನು ಹೇಳುವೆನು ಕೇಳು :

ರಾಜಕುಮಾರರು ಹುಟ್ಟಿದ ಕೆಲವು ಕಾಲಾನಂತರದಲ್ಲಿ ಪುರೋಹಿತನು ಮರಣಹೊಂದಿದನು. ಅವನು ಮರಣಹೊಂದಿದ ಸ್ವಲ್ಪಕಾಲದಲ್ಲಿಯೇ ಸೋಮಕನೂ ಇಹಲೋಕವನ್ನು ತ್ಯಜಿಸಿದನು. ಸೋಮಕನು ಪರಲೋಕದಲ್ಲಿ ತನಗೆ ನೂರು ಮಕ್ಕಳಾಗುವಂತೆ ಕರ್ಮಮಾಡಿಸಿದ ತನ್ನ ಪುರೋಹಿತನು ಅತಿಘೋರವಾದ ನರಕದಲ್ಲಿ ಬಿದ್ದು ದಾರುಣವಾದ ಸಂಕಟವನ್ನು ಅನುಭವಿಸುತ್ತಿದ್ದುದನ್ನು ಕಂಡನು. ಸೋಮಕನಿಗೆ ಮರುಕವುಂಟಾಗಿ ಶೋಕಿಸುತ್ತಿದ್ದ ಬ್ರಾಹ್ಮಣನನ್ನು ಕೇಳಿದನು : "ಬ್ರಾಹ್ಮಣೋತ್ತಮರೇ! ನೀವು ಯಾವ ಕಾರಣದಿಂದಾಗಿ ಇಂತಹ ಘೋರವಾದ ನರಕದಲ್ಲಿ ಬಿದ್ದು ಅತಿದಾರುಣವಾದ ಈ ಯಾತನೆಯನ್ನು ಅನುಭವಿಸುತ್ತಿರುವಿರಿ?"

ಆ ಬ್ರಾಹ್ಮಣನಿಗೆ ಉತ್ತರಕೊಡುವ ಚೈತನ್ಯವೂ ಇರಲಿಲ್ಲ. ಅವನ ಶರೀರವು ಅಗ್ನಿಯಲ್ಲಿ ದಹಿಸಲ್ಪಡುತ್ತಿದ್ದಿತು. ದಾರುಣವಾದ ಯಾತನೆಯನ್ನ-ನುಭವಿಸುತ್ತಾ ಬಹುಸಂಕಟದಿಂದ ರಾಜನಿಗೆ ಹೇಳಿದನು :

**ತ್ವಂ ಮಯಾ ಯಾಜಿತೋ ರಾಜಂಸ್ತಸ್ಯೇದಂ ಕರ್ಮಣಃ ಫಲಮ್ ॥**

"ಸೋಮಕ! ಮಕ್ಕಳ ಪ್ರಾಪ್ತಿಗಾಗಿ ನಿನಗೆ ಯಜ್ಞಮಾಡಿಸಿದುದರ ಫಲವಿದು. ಅದನ್ನು ನಾನಿಂದು ಈ ರೀತಿಯಲ್ಲಿ ಅನುಭವಿಸುತ್ತಿದ್ದೇನೆ."

ಬ್ರಾಹ್ಮಣನ ಮಾತುಗಳನ್ನು ಕೇಳಿ ರಾಜನಿಗೂ ಬಹಳ ದುಃಖವಾಯಿತು. ಒಡನೆಯೇ ಸೋಮಕನು ಯಮಧರ್ಮನ ಬಳಿಗೆ ಹೋಗಿ ಕೇಳಿದನು :

**ಅಹಮತ್ರ ಪ್ರವೇಕ್ಷ್ಯಾಮಿ ಮುಚ್ಯತಾಂ ಮಮ ಯಾಜಕಃ ।**
**ಮತ್ಕೃತೇ ಹಿ ಮಹಾಭಾಗಃ ಪಚ್ಯತೇ ನರಕಾಗ್ನಿನಾ ॥೧೩॥**

"ಯಮಧರ್ಮನೇ! ನನ್ನ ಕಾಮನೆಯನ್ನು ಪೂರೈಸಲು ಕರ್ಮ ಮಾಡಿಸಿದ ಗುರುಗಳಾದ ಪುರೋಹಿತರನ್ನು ಈ ಕೂಡಲೇ ಬಿಡುಗಡೆ ಮಾಡು. ಅವರ ಸ್ಥಾನದಲ್ಲಿ ನಾನು ನಿಲ್ಲುತ್ತೇನೆ. ನನ್ನ ಕಾಮನೆಯನ್ನು ಪೂರ್ಣಗೊಳಿಸುವ ಸಲುವಾಗಿ ಯಜ್ಞಮಾಡಿಸಿದ ಮಹಾಭಾಗರಿಂದು ನರಕದ ಅಗ್ನಿಯಲ್ಲಿ ಬೆಂದುಹೋಗುತ್ತಿದ್ದಾರೆ. (ಇದರಿಂದ ನಾನು ಅತಿದುಃಖಿತನಾಗಿದ್ದೇನೆ.)"

**ನಾನ್ಯಃ ಕರ್ತುಃ ಫಲಂ ರಾಜನ್ನುಪಭುಙ್ಕ್ತೇ ಕದಾಚನ ।**
**ಇಮಾನಿ ತವ ದೃಶ್ಯನ್ತೇ ಫಲಾನಿ ವದತಾಂ ವರ ॥೧೪॥**

"ವಾಕ್ಚತುರನೇ! ಒಬ್ಬನು ಮಾಡಿದ ಕರ್ಮದ ಫಲವನ್ನು ಮತ್ತೊಬ್ಬ ನೆಂದಿಗೂ ಅನುಭವಿಸಲಾರನು. ನೀನು ಮಾಡಿದ ಕರ್ಮಕ್ಕೆ ಫಲವಾಗಿ ನಿನಗೆ ಅಲ್ಲಿ ಕಾಣುತ್ತಿರುವ ಉತ್ತಮಲೋಕಗಳೂ ಲಭ್ಯವಾಗಿವೆ. ನೀನಲ್ಲಿಗೆ ತೆರಳಬಹುದು."

(ಪುರೋಹಿತನು ನರಕಕ್ಕೆ ಬೀಳಲು ಕಾರಣವನ್ನು ಹೀಗೆ ನಿರೂಪಿಸ ಬಹುದಾಗಿದೆ : ಪುರೋಹಿತನು ಯಾಜಕನಾಗಿ ಸೋಮಕನಿಗೆ ಪುತ್ರಯಜ್ಞ ವನ್ನು ಮಾಡಿಸಿದನು. ಅದರಿಂದ ಸೋಮಕನಿಗೆ ಪುತ್ರರ ಪ್ರಾಪ್ತಿಯಾಯಿತು. ಯಾಜಕನಿಗೆ ಸೋಮಕನು ಯಥೇಚ್ಛವಾಗಿ ದಕ್ಷಿಣೆಯನ್ನು ಕೊಟ್ಟನು. ಯಾಜಕನು ಯಜ್ಞಕ್ಕೆ ಪ್ರೇರಕನು. ಮೇಲಾಗಿ ಅದು ಕಾಮ್ಯಯಜ್ಞ. ಯಾಜಕನು ಸೋಮಕನಿಂದ ದಕ್ಷಿಣೆಯನ್ನು ಪಡೆದು ಸಂತುಷ್ಟನಾದನು. ದಕ್ಷಿಣೆಯ ಮೂಲಕವಾಗಿ ಸೋಮಕನು ತನ್ನ ಪಾಪಗಳೆಲ್ಲವನ್ನೂ ಪುರೋಹಿತನಿಗೆ ಧಾರೆಯೆರೆದುಕೊಟ್ಟನು. ಅದಕ್ಕೆ ಪ್ರತಿಯಾಗಿ ಪುರೋಹಿತನು ಯಾವ ವಿಧವಾದ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳದೇ ಇದ್ದುದರಿಂದ ಶಿಶುಹನನ ಕಾರ್ಯಕ್ಕೆ ಪ್ರಚೋದಕನಾದ ಕಾರಣದಿಂದ ನರಕವಾಸವನ್ನು ಅನುಭವಿಸಬೇಕಾಯಿತು.)

ಯಮಧರ್ಮನ ಆ ಮಾತಿಗೆ ಉತ್ತರವಾಗಿ ಸೋಮಕನು ಹೇಳಿದನು:

**ಪುಣ್ಯಾನ್ನ ಕಾಮಯೇ ಲೋಕಾನೃತೇಽಹಂ ಬ್ರಹ್ಮವಾದಿನಮ್ ।**
**ಇಚ್ಛಾಮ್ಯಹಮನೇನೈವ ಸಹ ವಸ್ತುಂ ಸುರಾಲಯೇ ॥೧೫॥**

**ನರಕೇ ವಾ ಧರ್ಮರಾಜ ಕರ್ಮಣಾಸ್ಯ ಸಮೋ ಹ್ಯಹಮ್ ।**
**ಪುಣ್ಯಾಪುಣ್ಯಫಲಂ ದೇವ ಸಮಮಸ್ತ್ವಾವಯೋರಿದಮ್ ॥೧೬॥**

"ಯಮಧರ್ಮ! ಈ ಬ್ರಹ್ಮವಾದಿಗಳನ್ನು ನರಕದಲ್ಲಿಯೇ ಬಿಟ್ಟು ನಾನು ಮಾತ್ರ ಉತ್ತಮಲೋಕಕ್ಕೆ ಖಂಡಿತವಾಗಿಯೂ ಹೋಗಲಾರೆನು. ಸ್ವರ್ಗದಲ್ಲಾಗಲೀ, ನರಕದಲ್ಲಾಗಲೀ ಈ ಬ್ರಾಹ್ಮಣನೊಡನೆ ವಾಸಮಾಡಬೇಕೆಂಬುದೇ ನನ್ನ ಅಭಿಲಾಷೆಯಾಗಿರುವುದು. ಕಾರಣವೇನೆಂದರೆ ಕರ್ಮ ಮಾಡಿಸಿದವರು ಇವರಾಗಿದ್ದರೆ ಕರ್ಮಮಾಡಿದವನು ಅಥವಾ ಕರ್ಮಮಾಡಿಸಲು ಪ್ರೇರಿಸಿದವನು ನಾನೇ ಆಗಿರುತ್ತೇನೆ. ಇವರಿಗೆ ದಕ್ಷಿಣಾರೂಪವಾದ ಫಲವು ಸಿಕ್ಕಿದೆ. ನನಗೆ ಮಕ್ಕಳ ರೂಪವಾದ ಫಲವು ಸಿಕ್ಕಿದೆ. ಆದುದರಿಂದ ನರಹತ್ಯೆಯಿಂದ ಪ್ರಾಪ್ತವಾಗಬಹುದಾದ ದುಷ್ಫಲವನ್ನು ನಾನೂ ಮತ್ತು ಈ ಬ್ರಾಹ್ಮಣರೂ ಸಮವಾಗಿ ಅನುಭವಿಸುವುದು ಸಾಧುವಾಗಿದೆ."

**ಯದ್ಯೇವಮೀಪ್ಸಿತಂ ರಾಜನ್ಭುಙ್ಕ್ಷ್ವಾಸ್ಯ ಸಹಿತಃ ಫಲಮ್ ।**
**ತುಲ್ಯಕಾಲಂ ಸಹಾನೇನ ಪಶ್ಚಾತ್ಪ್ರಾಪ್ಸ್ಯಸಿ ಸದ್ಗತಿಮ್ ॥೧೭॥**

"ಸೋಮಕ! ಇವನೊಡನೆ ನರಕವಾಸವನ್ನು ಅನುಭವಿಸುವುದೇ ನಿನ್ನ ಅಭಿಲಾಷೆಯಾಗಿದ್ದರೆ–ಇವನೊಡನಿದ್ದು ಇವನು ಮಾಡಿದ ದುಷ್ಕಾರ್ಯದ ಫಲವನ್ನು ನೀನೂ ಅನುಭವಿಸಬಹುದು. ಇವನು ಇಲ್ಲಿರುವ ಪರ್ಯಂತವೂ ಇವನೊಡನಿದ್ದು ಅನಂತರದಲ್ಲಿ ಉತ್ತಮಲೋಕಗಳಿಗೆ ತೆರಳಬಹುದು"–ಎಂದು ಯಮಧರ್ಮನು ಹೇಳಲಾಗಿ ಸೋಮಕನು ಸ್ವೇಚ್ಛೆಯಿಂದ ನರಕವನ್ನು ಪ್ರವೇಶಿಸಿದನು. ರಾಜನೂ ಪುರೋಹಿತನೊಡನಿದ್ದು ನರಕಯಾತನೆಯನ್ನು ಅನುಭವಿಸುತ್ತಿದ್ದುದರಿಂದ ಪುರೋಹಿತನ ಪಾಪವು ಬಹುಬೇಗ ನಿವಾರಣೆಯಾಗಲು ಸಾಧ್ಯವಾಯಿತು. ರಾಜ-ಪುರೋಹಿತರಿಬ್ಬರೂ ನರಕದಿಂದ ಬಿಡುಗಡೆಯನ್ನು ಹೊಂದಿದರು.

ಯುಧಿಷ್ಠಿರ! ಈ ರೀತಿಯಲ್ಲಿ, ಸೋಮಕರಾಜನು ಗುರುವಿನಿಂದ ತನ್ನ

ಅಭಿಲಾಷೆಗಳೆಲ್ಲವನ್ನೂ, ಪೂರ್ಣಮಾಡಿಕೊಂಡನಲ್ಲದೇ–ಗುರುಪ್ರಿಯನಾದ ಅವನು ತನ್ನ ಪುಣ್ಯಗಳೆಲ್ಲವನ್ನೂ ಪುರೋಹಿತನಿಗೆ ಸಮವಾಗಿ ಹಂಚಿಕೊಟ್ಟು ಅವನೊಡನೆ ಅನೇಕವರ್ಷಗಳವರೆಗೆ ಉತ್ತಮಲೋಕಗಳ ಸುಖವನ್ನು ಅನುಭವಿಸುತ್ತಿದ್ದನು.

ಇಲ್ಲಿ ನಯನಾನಂದಕರವಾಗಿ ಕಾಣುತ್ತಿರುವ ಆಶ್ರಮವೇ ಸೋಮಕನ ಆಶ್ರಮವಾಗಿದ್ದಿತು. ಈ ಸ್ಥಳದಲ್ಲಿ ನಿಯತವ್ರತಾನುಷ್ಠಾನದಿಂದ ಆರು ರಾತ್ರಿಗಳನ್ನು ಕಳೆಯುವವನು ಉತ್ತಮವಾದ ಲೋಕಗಳನ್ನು ಪಡೆಯುತ್ತಾನೆ. ಆದುದರಿಂದ ನಾವೂ ಈ ಪುಣ್ಯಕ್ಷೇತ್ರದಲ್ಲಿ ಆರು ರಾತ್ರಿಗಳು ತಂಗಿದ್ದು ವ್ರತಾನುಷ್ಠಾನಗಳನ್ನು ಮಾಡೋಣ.”

೧೨೮ನೆಯ ಅಧ್ಯಾಯವು ಮುಗಿಯಿತು.

೧೨೯ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಕುರುಕ್ಷೇತ್ರಕ್ಕೆ ದ್ವಾರಭೂತವಾದ ಪ್ಲಕ್ಷ ಪ್ರಸ್ರವಣವೆಂಬ ಯಮುನಾತೀರ್ಥ ಮತ್ತು ಸರಸ್ವತೀತೀರ್ಥಗಳ ಮಹಿಮೆ

ಲೋಮಶರು ಆ ಕ್ಷೇತ್ರದ ಮಹಿಮೆಯನ್ನು ಹೇಳಲು ಉಪಕ್ರಮಿಸಿದರು:

“ಯುಧಿಷ್ಠಿರ! ಈ ಪುಣ್ಯಕ್ಷೇತ್ರದಲ್ಲಿ ಪ್ರಜಾಪತಿಬ್ರಹ್ಮನೇ ಇಷ್ಟೀಕೃತವೆಂಬ ಹೆಸರಿನ ಸತ್ರಯಾಗವನ್ನು ಒಂದು ಸಾವಿರ ವರ್ಷಗಳವರೆಗೆ ಮಾಡಿದನು. ನಾಭಾಗನ ಮಗನಾದ ಅಂಬರೀಷನು ಯಮುನಾನದಿಯ ತೀರದಲ್ಲಿ ಮಹಾಯಾಗವೊಂದನ್ನು ಮಾಡಿದನು. ಅಂಬರೀಷನು ಹತ್ತು ಪದ್ಮಸಂಖ್ಯಾಕವಾದ ಸುವರ್ಣನಾಣ್ಯಗಳನ್ನು ಯಜ್ಞದ ದಕ್ಷಿಣಾರೂಪವಾಗಿ ಋತ್ವಿಜರಿಗೆ ಕೊಟ್ಟನು. ಅವನು ತಾನು ಮಾಡಿದ ಆ ಯಜ್ಞದಿಂದಲೂ ಮತ್ತು ತಪಸ್ಸಿನಿಂದಲೂ ಸಿದ್ಧಿಯನ್ನು ಪಡೆದನು.

ಯುಧಿಷ್ಠಿರ! ಈ ದೇಶವು ಮಹಾಯಾಗಗಳನ್ನು ಮಾಡಿದ, ಸಾರ್ವಭೌಮನಾದ, ಮಹಾತೇಜಸ್ವಿಯಾದ, ನಹುಷನ ಮಗನಾದ ಯಯಾತಿಯದು. ಶತಕ್ರತುವಿನೊಡನೆ ಸ್ಪರ್ಧಿಸಿ ಯಾಗಮಾಡುತ್ತಿದ್ದ ಯಯಾತಿಯ ಯಜ್ಞ ಭೂಮಿಯು ಇದೇ ಆಗಿರುತ್ತದೆ. ಧರ್ಮಜ! ಈ ಭೂಮಿಯಲ್ಲಿ

ನಿರ್ಮಿಸಿರು ನಾನಾವಿಧವಾದ ಆಕೃತಿಗಳುಳ್ಳ ಯಜ್ಞಕುಂಡಗಳಿಂದ ಈ ಭೂಮಿಯೇ ತುಂಬಿಹೋಗಿದೆಯೋ ಎಂಬಂತೆ ಕಾಣುತ್ತದೆ. (ಯಜ್ಞಕುಂಡಗಳಲ್ಲಿದ್ದ ಉಪಕರಣಗಳನ್ನು ಯುಧಿಷ್ಠಿರನಿಗೆ ತೋರಿಸುತ್ತಾ ಲೋಮಶರು ಹೇಳುತ್ತಾರೆ.) ಮೊಸರಿನ ( ಆಮಿಕ್ಷಾ ) ಉತ್ಪಾದನಾರ್ಥವಾಗಿ ತರಲ್ಪಟ್ಟಿದ್ದ, ಏಕಪತ್ರಯುಕ್ತವಾಗಿದ್ದ ಈ ಶಮೀದಂಡದ ಅಗ್ರಭಾಗವು ಹೋಮಮಾಡುವ ಕಾಲದಲ್ಲಿ ಯಜ್ಞೇಶ್ವರನ ಜ್ವಾಲೆಗೆ ಸಿಕ್ಕಿ ಉಪವೇಷರೂಪವಾಗಿದೆ. ಇತ್ತಲಾಗಿ ಕಾಣುತ್ತಿರುವುದು ಸುರಾಗ್ರಹಣಪಾತ್ರವಾಗಿದೆ. ಯುಧಿಷ್ಠಿರ! ಇಲ್ಲಿಯೇ ಇರುವ ಪರಶುರಾಮಹ್ರದಗಳನ್ನು ನೋಡು. ನಾರಾಯಣಾಶ್ರಮವೂ ಸಹ ಇಲ್ಲಿಯೇ ಇರುವುದು. ಇದು ಋಚೀಕಪುತ್ರನ ಸಂಚಾರಭೂಮಿಯೂ ಆಗಿದ್ದಿತು. ಮಹಾತೇಜಸ್ವಿಯಾದ ಆ ಮಹರ್ಷಿಯು ರೌಪ್ಯಾನದಿಯ ತೀರದಲ್ಲಿ ಅನೇಕ ವರ್ಷಗಳವರೆಗೆ ಯೋಗಾಭ್ಯಾಸವನ್ನು ಮಾಡುತ್ತಾ ತನ್ನ ಯೋಗಬಲದಿಂದಲೇ ಪ್ರಪಂಚವೆಲ್ಲವನ್ನೂ ಸುತ್ತುತ್ತಿದ್ದನು. ಈ ತೀರ್ಥದ ವಿಷಯದಲ್ಲಿ ಪರಂಪರಾಪ್ರಾಪ್ತವಾದ ಕಥೆಯೊಂದನ್ನು ಸೂಚಿಸುವ ಶ್ಲೋಕರೂಪವಾದ ಗಾದೆಯೊಂದಿದೆ. ಅದನ್ನು ನಿನಗೂ ಹೇಳುವೆನು ; ಕೇಳು. ಧರ್ಮಜ! ಒರಳಿನಂತೆ ಆಕಾರವುಳ್ಳ ಕರ್ಣಾಭರಣಗಳನ್ನು ಧರಿಸಿರುವ ಒಂದು ಹೆಣ್ಣು ಪಿಶಾಚಿಯು ಈ ತೀರ್ಥಕ್ಕೆ ಬಂದ ಬ್ರಾಹ್ಮಣಿಯೊಬ್ಬಳನ್ನು ಕುರಿತು ಹೀಗೆ ಹೇಳುತ್ತದೆ :

**ಯುಗನ್ಧರೇ ದಧಿ ಪ್ರಾಶ್ಯ ಉಷಿತ್ವಾ ಚಾಚ್ಯುತಸ್ಥಲೇ ।**
**ತದ್ವದ್ಭೂತಲಯೇ ಸ್ನಾತ್ವಾ ಸಪುತ್ರಾ ವಸ್ತುಮರ್ಹಸಿ ॥೯॥**

'ಯುಗಂಧರಕ್ಷೇತ್ರದಲ್ಲಿ ಮೊಸರನ್ನು ಕುಡಿದು, ಅಚ್ಯುತಸ್ಥಲದಲ್ಲಿ ತಂಗಿ, ಅನಂತರದಲ್ಲಿ ಭೂತಲಯಕ್ಷೇತ್ರದಲ್ಲಿ ಸ್ನಾನಮಾಡಿರುವ ನೀನು ನಿನ್ನ ಮಕ್ಕಳೊಡನೆ ಇಲ್ಲಿರಲು ಹೇಗೆ ಅರ್ಹಳಾಗುವೆ?'

(ಇದು ಸ್ವಾಭಾವಿಕವಾದ ಅರ್ಥವಾಗಿದೆ. ವ್ಯಾಖ್ಯಾನಕಾರರು ಇದಕ್ಕೆ ಬೇರೆಯ ರೀತಿಯಲ್ಲಿ ಅರ್ಥವನ್ನು ಮಾಡಿರುತ್ತಾರೆ. ಕೆಲವು ಕಾರಣಗಳಿಂದ ವ್ಯಾಖ್ಯಾನಕಾರರ ಅಭಿಪ್ರಾಯವೇ ಸಮಂಜಸವಾಗಿದೆಯೆಂದು ಹೇಳಬಹುದಾಗಿದೆ. ಯುಗಂಧರಕ್ಷೇತ್ರದಲ್ಲಿ ಮೊಸರನ್ನು ಕುಡಿಯಬೇಕು ಅಥವಾ ಕುಡಿದರೆ

ಪುಣ್ಯಕರವೆಂಬ ವಿಷಯವು ನಮಗೆ ಇದುವರೆಗೂ ಈ ಪ್ರವಚನದಲ್ಲಿ ಬಂದಿರುವುದಿಲ್ಲ. ಅದಕ್ಕಾಗಿ ಇಲ್ಲಿ ವ್ಯಾಖ್ಯಾನಕಾರರು ಈ ಶ್ಲೋಕಕ್ಕೆ ಅರ್ಥ ಸಮನ್ವಯವನ್ನು ಹೀಗೆ ಮಾಡಿದ್ದಾರೆ : "ಮಕ್ಕಳಿಂದ ಕೂಡಿದ ಬ್ರಾಹ್ಮಣಿಯೊಬ್ಬಳು ಆ ಕ್ಷೇತ್ರಕ್ಕೆ ಸ್ನಾನಾರ್ಥವಾಗಿ ಆಗಮಿಸಿದಳು. ಅವಳು ಯುಗಂಧರ ಕ್ಷೇತ್ರದಲ್ಲಿ ಮೊಸರನ್ನು ಕುಡಿದು, ಅಚ್ಯುತಸ್ಥಲದಲ್ಲಿ ತಂಗಿ, ಅಂತೆಯೇ ಭೂತಲಯಕ್ಷೇತ್ರದಲ್ಲಿ ಸ್ನಾನಮಾಡಿ ಮಹಾಪಾಪಭೂಯಿಷ್ಠೆಯಾಗಿದ್ದಳು. ಯುಗಂಧರ ಕ್ಷೇತ್ರದಲ್ಲಿ ಮೊಸರನ್ನು ಕುಡಿದುದಕ್ಕೆ ಪಾಪವು ಹೇಗೆ ಉಂಟಾಯಿತೆಂಬುದನ್ನು ಸಮರ್ಥನೆಮಾಡುತ್ತಾ–'ಆ ಕ್ಷೇತ್ರದಲ್ಲಿ ಹಸುವಿನ ಹಾಲು ಮತ್ತು ಮೊಸರು ಸಿಕ್ಕುವುದಿಲ್ಲವೆಂದೂ, ಒಂಟೆಗಳ ಮತ್ತು ಕತ್ತೆಗಳ ಹಾಲಿನಿಂದ ಮೊಸರು ಮಾಡುವರೆಂದೂ, "**ಔಷ್ಟ್ರಮೇಕಶಫಂ ಕ್ಷೀರಂ ಸುರಾತುಲ್ಯಂ**" ಎಂಬ ಸ್ಮೃತ್ಯುಕ್ತಿಯಂತೆ ಆ ಮೊಸರನ್ನು ಕುಡಿಯುವುದು ಸುರಾಪಾನತುಲ್ಯವೆಂದೂ'–ಹೇಳಿದ್ದಾರೆ. ಅಂತೆಯೇ ಅಚ್ಯುತಸ್ಥಲವೆಂಬುದಕ್ಕೆ ಸಂಕರಜಾತಿಯವರ ಗ್ರಾಮವೆಂದೂ ಆ ಗ್ರಾಮದಲ್ಲಿ ಆ ಬ್ರಾಹ್ಮಣಿಯು ತಂಗಿದ್ದರಿಂದ "**ಸಂಸೃಜ್ಯ ಸಂಕರೈಃ ಸಾರ್ಧಂ ಪ್ರಾಜಾಪತ್ಯಂ ವ್ರತಂ ಚರೇತ್**" ಎಂಬ ಸ್ಮೃತ್ಯುಕ್ತಿಯಂತೆ ಬ್ರಾಹ್ಮಣಿಯು ಪ್ರಾಜಾಪತ್ಯವ್ರತಮಾಡಿ ದೋಷವನ್ನು ನಿವಾರಣೆಮಾಡಿಕೊಳ್ಳಬೇಕಾಗಿತ್ತೆಂದೂ ಹೇಳಿದ್ದಾರೆ. ಭೂತಲಯವೆಂಬುದಕ್ಕೆ ಭೂತಲಯವೆಂಬ ದಸ್ಯುಗಳ ಗ್ರಾಮದಲ್ಲಿರುವ ನದಿಯಲ್ಲಿ–ಶವಗಳನ್ನು ಹಾಕುವ ಸ್ಥಳದಲ್ಲಿ–ಸ್ನಾನಮಾಡಿ ದೋಷಯುಕ್ತಳಾಗಿರುವೆ. "**ಪ್ರೋಷ್ಯ ಭೂತಲಯೇ ವಿಪ್ರಃ ಪ್ರಾಜಾಪತ್ಯಂ ವ್ರತಂ ಚರೇತ್**"–ಎಂದು ಧರ್ಮಶಾಸ್ತ್ರವಚನವಿದೆ. ಈ ಮೂರು ದೋಷಗಳನ್ನೂ ಹೊಂದಿರುವ ನೀನು ಈ ಪುಣ್ಯಕ್ಷೇತ್ರದಲ್ಲಿ ವಾಸಮಾಡಲು ಹೇಗೆ ಅರ್ಹಳಾಗುವೆ?)

ಪಿಶಾಚಿಯು ಹೀಗೆ ಹೇಳಿದರೂ ಬ್ರಾಹ್ಮಣಿಯು ಲಕ್ಷ್ಯಮಾಡದೇ ಪುಣ್ಯತೀರ್ಥದಲ್ಲಿ ಸ್ನಾನಮಾಡಿದಳು. ಪಿಶಾಚಿಯು ಒಡನೆಯೇ ಬ್ರಾಹ್ಮಣಿಯ ಘಟ-ಪಿಠರಾದಿಗಳನ್ನು ನಾಶಮಾಡಿ ಬ್ರಾಹ್ಮಣಿಗೆ ಪುನಃ ಹೇಳಿತು :

**ಏಕರಾತ್ರಮುಷಿತ್ವೇಹ ದ್ವಿತೀಯಂ ಯದಿ ವತ್ಸ್ಯಸಿ ।**
**ಏತದ್ವೈ ತೇ ದಿವಾವೃತ್ತಂ ರಾತ್ರೌ ವೃತ್ತಮತೋಽನ್ಯಥಾ ॥೧೦॥**

"ಹಗಲೇ ನಿನ್ನ ಪರಿಣಾಮವು ಹೀಗಾಯಿತು. ರಾತ್ರಿಯೂ ಇಲ್ಲಿಯೇ

ಉಳಿದುಕೊಂಡರೆ ಮತ್ತೊಂದು ಭಯಂಕರ ಪರಿಣಾಮವಾಗುತ್ತದೆ. ನಿನ್ನ ಮಕ್ಕಳು ಉಳಿಯುವುದಿಲ್ಲ. ಅದನ್ನೂ ಲಕ್ಷಿಸದೆ ಎರಡನೆಯ ದಿನವೂ ನೀನು ಇಲ್ಲಿಯೇ ಉಳಿಯುವುದಾದರೆ ನೀನೇ ಉಳಿಯಲಾರೆ. ನೀನು ನನ್ನಂತೆಯೇ ಪಿಶಾಚಿಯಾಗುವೆ." (ಹೀಗೆಂದು ಹೇಳುತ್ತದೆ.)

ಧರ್ಮಜ! ಈ ಕಾರಣದಿಂದ ಇಲ್ಲಿ ಒಂದು ರಾತ್ರಿಗಿಂತಲೂ ಹೆಚ್ಚು ಕಾಲ ಯಾರೂ ತಂಗುವುದಿಲ್ಲ. ನಾವು ಈ ರಾತ್ರಿಯಲ್ಲಿ ಇಲ್ಲಿಯೇ ತಂಗೋಣ. ಈ ಮಹಾಕ್ಷೇತ್ರವು ಕುರುಕ್ಷೇತ್ರದ ಹೆಬ್ಬಾಗಿಲಾಗಿರುವುದು. ನಾನು ಹೇಳಿದಂತೆ ಈ ಪವಿತ್ರಕ್ಷೇತ್ರದಲ್ಲಿಯೇ ಯಯಾತಿಯು ಅನೇಕಯಾಗಗಳನ್ನು ಮಾಡಿರುವನು. ಕೋಟ್ಯನುಕೋಟಿ ರತ್ನಗಳನ್ನೂ ದಾನಮಾಡಿರುವನು. ಅವನು ಮಾಡಿದ ಯಜ್ಞಗಳಿಂದ ಇಂದ್ರನೂ ಸುಪ್ರೀತನಾದನು.

ಯುಧಿಷ್ಠಿರ! ಇಲ್ಲಿ ಕಾಣುತ್ತಿರುವ ಯಮುನಾನದಿಯ ಸ್ನಾನಘಟ್ಟಕ್ಕೆ ಪ್ಲಕ್ಷಾವತರಣವೆಂದು ಕರೆಯುತ್ತಾರೆ. ಇದನ್ನೇ ಮನೀಷಿಗಳು ಸ್ವರ್ಗದ ದ್ವಾರವೆಂದೂ ಹೇಳುತ್ತಾರೆ. ಇಲ್ಲಿ ಸ್ನಾನಮಾಡುವುದರಿಂದ ಸ್ವರ್ಗದ ಪ್ರಾಪ್ತಿ ಯಾಗುತ್ತದೆ. ಇಲ್ಲಿ ಅನೇಕಮಹರ್ಷಿಗಳು ಪಶುಗಳಿಂದಲೂ ಪುರೋಡಾಶ ಗಳಿಂದಲೂ ಸಾರಸ್ವತಯಜ್ಞಗಳನ್ನು ಮಾಡಿ ಅವಭೃಥಸ್ನಾನವನ್ನು ಮಾಡಿರು ತ್ತಾರೆ. ಇಲ್ಲಿಯೇ ಭರತಚಕ್ರವರ್ತಿಯು ಅನೇಕ ಕ್ರತುಗಳನ್ನು ಮಾಡಿದನು. ಭರತನು ಅಶ್ವಮೇಧಯಜ್ಞವನ್ನು ಮಾಡಲೋಸುಗ ಮೇಧಾಶ್ವವನ್ನು ಇಲ್ಲಿಂದಲೇ ಭೂಪ್ರದಕ್ಷಿಣಾರ್ಥವಾಗಿ ಕಳುಹಿಸಿಕೊಟ್ಟಿದ್ದನು. ಅಶ್ವಮೇಧ ಯಾಗಗಳನ್ನು ಹಲವಾರು ಬಾರಿ ಮಾಡಲು ಕೃಷ್ಣವರ್ಣದ ಜಿಂಕೆಯಂತೆ ಕಪ್ಪಾದ ಕಿವಿಗಳಿಂದ ಕೂಡಿದ್ದ ಸರ್ವಲಕ್ಷಣಸಂಪನ್ನವಾದ ಕುದುರೆಗಳನ್ನು ಭೂಪ್ರದಕ್ಷಿಣಾರ್ಥವಾಗಿ ಭರತನು ಕಳುಹಿಸಿಕೊಡುತ್ತಿದ್ದುದಲ್ಲದೇ ಧರ್ಮಕ್ಕೆ ಸ್ವಲ್ಪವಾದರೂ ಲೋಪವಿಲ್ಲದ ರೀತಿಯಲ್ಲಿ ಈ ಪೃಥ್ವಿಯನ್ನೂ ಆಳುತ್ತಿದ್ದನು. ಈ ಪುಣ್ಯಸ್ಥಳದಲ್ಲಿಯೇ ಮರುತ್ತನು ಋಷಿಶ್ರೇಷ್ಠನಾದ ಸಂವರ್ತ ಮಹರ್ಷಿಯ ಆಶ್ರಯವನ್ನು ಪಡೆದು ಅಮೋಘವಾದ ಯಜ್ಞವನ್ನು ಮಾಡಿದನು. ಇಲ್ಲಿಯ ತೀರ್ಥದಲ್ಲಿ ಸ್ನಾನಮಾಡುವವನು ಎಲ್ಲ ಲೋಕಗಳನ್ನೂ ಸಂದರ್ಶಿಸಲು ಸಮರ್ಥನಾಗುತ್ತಾನೆ ಮತ್ತು ಸಕಲಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಆದುದರಿಂದ ನೀನೂ ಇಲ್ಲಿ ಸ್ನಾನಮಾಡು, ಯುಧಿಷ್ಠಿರ!"

ಜನಮೇಜಯ! ಲೋಮಶರು ಹೀಗೆಂದು ಹೇಳಿದನಂತರ ಯುಧಿಷ್ಠಿರನು ತನ್ನ ಅನುಜರೊಡನೆಯೂ ಪತ್ನಿಯೊಡನೆಯೂ ಕೂಡಿದವನಾಗಿ ಆ ಪುಣ್ಯತೀರ್ಥದಲ್ಲಿ ಸ್ನಾನಮಾಡಿದನು. ಅಲ್ಲಿ ವಾಸವಾಗಿದ್ದ ಋಷಿ-ಮಹರ್ಷಿಗಳೆಲ್ಲರೂ ಯುಧಿಷ್ಠಿರನನ್ನು ನಾನಾವಿಧವಾಗಿ ಶ್ಲಾಘನೆಮಾಡುತ್ತಿದ್ದರು. ಸ್ನಾನ ಮತ್ತು ಸಂಧ್ಯಾವಂದನಾದಿಗಳು ಮುಗಿದನಂತರ ಯುಧಿಷ್ಠಿರನು ಲೋಮಶರೊಡನೆ ಹೇಳಿದನು :

"ಸತ್ಯವಿಕ್ರಮರೇ! ನೀವು ಹೇಳಿದಂತೆಯೇ ನಾನೀಗ ಇಲ್ಲಿಂದಲೇ ಸಕಲಲೋಕಗಳನ್ನೂ ಕಾಣುತ್ತಿದ್ದೇನೆ. ಸ್ವರ್ಗಲೋಕದಲ್ಲಿ ಇಂದ್ರನೊಡನಿರುವ, ಪಾಂಡುವಿನ ಪ್ರಿಯಸುತನಾದ, ಶ್ವೇತವಾಹನನಾದ ಅರ್ಜುನನನ್ನೂ ನಾನು ಪ್ಲಕ್ಷಾವತರಣತೀರ್ಥದಿಂದಲೇ ನೋಡುತ್ತಿದ್ದೇನೆ."

ಲೋಮಶರು ಹೇಳುತ್ತಾರೆ :

"ಯುಧಿಷ್ಠಿರ! ಸ್ವರ್ಗಲೋಕವೂ ಕಾಣುವುದು ನಿಶ್ಚಯ. ಶ್ರೇಷ್ಠರಾದ ಮಹರ್ಷಿಗಳೂ ನಿನ್ನಂತೆಯೇ ಈ ಪ್ಲಕ್ಷತೀರ್ಥದಲ್ಲಿ ಸ್ನಾನಮಾಡಿ ಎಲ್ಲ ಲೋಕಗಳನ್ನೂ ಕಾಣುತ್ತಾರೆ. ಧರ್ಮಜ! ಇತ್ತಲಾಗಿ ಪುಣ್ಯವತಿಯಾದ ಈ ಸರಸ್ವತಿಯನ್ನೇ ಆಶ್ರಯಳನ್ನಾಗಿ ಮಾಡಿಕೊಂಡು ತಪಸ್ಸುಮಾಡುತ್ತಿರುತ್ತಾರೆ. ಈ ಪುಣ್ಯನದಿಯಲ್ಲಿ ಸ್ನಾನಮಾಡುವುದರಿಂದ ನೀನೂ ಸಕಲಪಾಪಗಳನ್ನೂ ಕಳೆದುಕೊಳ್ಳುವೆ. ಸರಸ್ವತೀನದಿಯ ಈ ತೀರದಲ್ಲಿ ದೇವರ್ಷಿಗಳೂ, ಮಹರ್ಷಿಗಳೂ, ರಾಜರ್ಷಿಗಳೂ ಅನೇಕವಿಧವಾದ ಸಾರಸ್ವತಯಜ್ಞಗಳನ್ನು ಮಾಡಿರುತ್ತಾರೆ. ಇಲ್ಲಿ ಕಾಣುತ್ತಿರುವ ಯಜ್ಞವೇದಿಯು ಪ್ರಜಾಪತಿಬ್ರಹ್ಮನದು. ಈ ವೇದಿಯು ಐದು ಯೋಜನ ವಿಸ್ತೀರ್ಣವುಳ್ಳದ್ದಾಗಿದೆ. ಮಹಾತ್ಮನಾದ, ಯಜ್ಞಶೀಲನಾದ ಕುರುವಿನ ಕ್ಷೇತ್ರವೂ ಇದೇ ಆಗಿರುವುದು."

೧೨೯ನೆಯ ಅಧ್ಯಾಯವು ಮುಗಿಯಿತು.

೧೩೦ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ವಿಭಿನ್ನತೀರ್ಥಗಳ ಮಹಿಮೆ : ಉಶೀನರರ ಕಥಾರಂಭ

ಲೋಮಶರು ಸರಸ್ವತೀನದಿಯ ಮಾಹಾತ್ಮ್ಯವನ್ನು ಮುಂದುವರಿಸುತ್ತಾ ಹೇಳುತ್ತಾರೆ :

"ಭರತಕುಲಾವತಂಸನೇ! ಈ ಪವಿತ್ರಸ್ಥಳದಲ್ಲಿ ಮರಣಹೊಂದುವವರು ಖಂಡಿತವಾಗಿಯೂ ಸ್ವರ್ಗಕ್ಕೆ ಹೋಗುತ್ತಾರೆ. ಸಹಸ್ರಸಂಖ್ಯೆಯಲ್ಲಿ ಯಾತ್ರಿಕರು ಈ ಪವಿತ್ರಸ್ಥಳಕ್ಕೆ ಸಾಯಲೆಂದೇ ಬರುತ್ತಾರೆ. (ಆತ್ಮಹತ್ಯೆಯಲ್ಲ; ಆಮರಣಾಂತವಾಗಿ ಈ ಕ್ಷೇತ್ರದಲ್ಲಿಯೇ ಇರುವುದು.) ದಕ್ಷನು ಈ ಪವಿತ್ರ ಕ್ಷೇತ್ರದಲ್ಲಿ ಯಾಗಮಾಡುತ್ತಿದ್ದಾಗ ಈ ಕ್ಷೇತ್ರಕ್ಕೆ ವರವೊಂದನ್ನು ದಯಪಾಲಿಸಿರುವನು.

**ಇಹ ಯೇ ವೈ ಮರಿಷ್ಯನ್ತಿ ತೇ ವೈ ಸ್ವರ್ಗಜಿತೋ ನರಾಃ ॥೨॥**

"ಇಲ್ಲಿ ಯಾರು ಸಾಯುತ್ತಾರೆಯೋ ಅವರು ಸ್ವರ್ಗಲೋಕವನ್ನು ಜಯಿಸಿದವರಾಗುತ್ತಾರೆ." (ಸ್ವರ್ಗಲೋಕವು ಅವರಿಗೆ ಲಭಿಸಿಯೇ ತೀರುವುದು.) ಪರಮಪವಿತ್ರಳಾದ, ನಯನಾನಂದಕರಳಾದ, ಪೂರ್ಣಜಲಳಾದ ಸರಸ್ವತಿಯು ಇಲ್ಲಿ ಹರಿಯುತ್ತಿರುವಳು. ಇತ್ತಲಾಗಿ ಸರಸ್ವತೀನದಿಯು ಅದೃಶ್ಯಳಾಗುವ ವಿನಶನವೆಂಬ ಪವಿತ್ರಕ್ಷೇತ್ರವೂ ಇರುವುದು. ಈ ವಿನಶನ ಕ್ಷೇತ್ರವೇ ನಿಷಾದದೇಶಕ್ಕೆ ಹೆಬ್ಬಾಗಿಲಿನಂತಿರುವುದು. ನಿಷಾದದೇಶದ ಜನರು ಮಾಡಿದ ಪಾಪದಿಂದಾಗಿ ಸರಸ್ವತೀನದಿಯು ಈ ಕ್ಷೇತ್ರದಲ್ಲಿ ಅದೃಶ್ಯಳಾಗುತ್ತಾಳೆ. ಪಾಪಕರ್ಮಮಾಡಿದ ನಿಷಾದದೇಶದ ಜನರು ತನ್ನನ್ನು ಸ್ಪರ್ಶ ಮಾಡಕೂಡದೆಂಬುದೇ ಈ ಕ್ಷೇತ್ರದಲ್ಲಿ ಸರಸ್ವತಿಯು ಅದೃಶ್ಯಳಾಗಲು ಮುಖ್ಯಕಾರಣ. ಯುಧಿಷ್ಠಿರ! ನಿಷಾದದೇಶವು ಕಳೆದನಂತರ ಇರುವ ಚಮಸೋದ್ಭೇದವೆಂಬ ಪವಿತ್ರಕ್ಷೇತ್ರದಲ್ಲಿ ಸರಸ್ವತಿಯು ಪುನಃ ಕಾಣಿಸಿಕೊಳ್ಳುವಳು. ಆ ಸ್ಥಳದಲ್ಲಿಯೇ ಇತರ ನದಿಗಳೂ ಸಮುದ್ರಗಾಮಿನಿಯಾದ ಸರಸ್ವತಿಯೊಡನೆ ಸಂಗಮವಾಗುವುವು.

ಅರಿಂದಮನೇ! ಇಲ್ಲಿಯೇ ಸಿಂಧುವಿನ ಪರಮಪವಿತ್ರವಾದ ಪುಣ್ಯ ತೀರ್ಥವಿರುವುದು. ಹಿಂದೆ ಈ ಪವಿತ್ರಸ್ಥಳದಲ್ಲಿಯೇ ಲೋಪಾಮುದ್ರೆಯು ಅಗಸ್ತ್ಯನನ್ನು ತನ್ನ ಪತಿಯನ್ನಾಗಿ ವರಿಸಿದಳು.

ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಪ್ರಕಾಶಿಸುವ ಯುಧಿಷ್ಠಿರನೇ! ಈ ಪ್ರದೇಶದಲ್ಲಿಯೇ ಅತ್ಯಂತಪ್ರಕಾಶಮಾನವಾದ ಪ್ರಭಾಸತೀರ್ಥವಿರುವುದು. ಈ ತೀರ್ಥದಲ್ಲಿ ಸ್ನಾನಮಾಡುವುದರಿಂದ ಸಕಲಪಾಪಗಳೂ ಪರಿಹಾರವಾಗುವುವು. ಉತ್ತಮೋತ್ತಮವಾದ ತೀರ್ಥವೆನಿಸಿರುವ ವಿಷ್ಣುಪದವೆಂಬ ತೀರ್ಥವೂ ಇಲ್ಲಿಯೇ ಇರುವುದು. 'ವಿಪಾಶಾ' ಎಂಬ ಹೆಸರಿನ ಪರಮಪಾವನೆಯಾದ, ರಮ್ಯವಾದ ನದಿಯೂ ಈ ಕ್ಷೇತ್ರದಲ್ಲಿಯೇ ಇರುವುದು.

**ಅತ್ರ ವೈ ಪುತ್ರಶೋಕೇನ ವಸಿಷ್ಠೋ ಭಗವಾನೃಷಿಃ ।**
**ಬದ್ಧ್ವಾತ್ಮಾನಂ ನಿಪತಿತೋ ವಿಪಾಶಃ ಪುನರುತ್ಥಿತಃ ॥೯॥**

ವಿಶ್ವಾಮಿತ್ರರ ಶಾಪಕ್ಕೆ ಬಲಿಯಾಗಿ ವಸಿಷ್ಠರ ಮಕ್ಕಳೆಲ್ಲರೂ ಹತರಾಗಲಾಗಿ, ಪುತ್ರಮರಣದ ಮಹಾದುಃಖವನ್ನು ಸಹಿಸಲಾರದೇ ಬ್ರಹ್ಮರ್ಷಿಗಳಾದ ವಸಿಷ್ಠರು ತಮ್ಮ ಅಂಗಾಂಗಗಳನ್ನೆಲ್ಲಾ ಹಗ್ಗದಿಂದ ಬಿಗಿದುಕೊಂಡು ಅಸುವನ್ನು ನೀಗಿಕೊಳ್ಳುವ ಆಶಯದಿಂದ ಈ ನದಿಯಲ್ಲಿ ಬಿದ್ದುಬಿಟ್ಟರು. ಆದರೆ ನದಿಯಲ್ಲಿ ಬಿದ್ದೊಡನೆಯೇ ಅವರ ಸ್ವಯಂಕೃತ ಬಂಧನಗಳೆಲ್ಲವೂ ಬಿಚ್ಚಿಹೋಗಿ ಅವರು ಪುನಃ ನದಿಯಿಂದ ಹೊರಗೆ ಬರಬೇಕಾಯಿತು. ಅಂದಿನಿಂದ ಈ ನದಿಗೆ 'ವಿಪಾಶಾ' ಎಂದೇ ಹೆಸರಾಯಿತು.

ಯುಧಿಷ್ಠಿರ! ನೀನು ಸಂದರ್ಶಿಸಬೇಕಾದ ಇನ್ನೂ ಅನೇಕ ಪವಿತ್ರ ಕ್ಷೇತ್ರಗಳಿವೆ. ಮಹರ್ಷಿಗಳಿಂದ ಸಂಸೇವ್ಯಮಾನವಾದ ಕಾಶ್ಮೀರಮಂಡಲವನ್ನು ನಿನ್ನ ಅನುಜರೊಡನೆ ಸಂದರ್ಶಿಸು. ಕಾಶ್ಮೀರಮಂಡಲದಲ್ಲಿ ಹಿಂದೆ ಅಗ್ನಿಗೂ, ಕಾಶ್ಯಪರಿಗೂ, ನಹುಷನ ಮಗನಿಗೂ ಮತ್ತು ಉತ್ತರದೇಶದ ಋಷಿಗಳಿಗೂ ವಾಗ್ವಾದವು ನಡೆಯಿತು. ಕಾಶ್ಮೀರಮಂಡಲವೇ ಮಾನಸ ಸರೋವರಕ್ಕೂ ಹೆಬ್ಬಾಗಿಲಾಗಿರುವುದು. (ಅದರ ಮೂಲಕವೇ ಮಾನಸ ಸರೋವರಕ್ಕೆ ಪ್ರಯಾಣಮಾಡಬೇಕು.) ಅಲ್ಲಿ ಕಾಣುತ್ತಿರುವ ಪರ್ವತಗಳ

ಮಧ್ಯದಲ್ಲಿ ಪರಶುರಾಮನು ನಿವಾಸಮಾಡಿಕೊಂಡಿದ್ದನು. ಸತ್ಯವಿಕ್ರಮನಾದ ವಾತಿಕಷಂಡನ ಕ್ಷೇತ್ರವೂ ಇಲ್ಲಿಯೇ ಇರುವುದು. ಇದು ವಿದೇಹಕ್ಕೆ ಸೇರಿಕೊಂಡಂತೆಯೇ ಇದ್ದು ವಿದೇಹದ ಉತ್ತರದಿಕ್ಕಿನಲ್ಲಿರುವುದು. ಈ ದೇಶದಲ್ಲಿ ಅತ್ಯಾಶ್ಚರ್ಯಕರವಾದ ಒಂದು ಸಂಗತಿಯಿರುವುದು, ಯುಧಿಷ್ಠಿರ! ಒಂದೊಂದು ಯುಗದ ಅಂತ್ಯದಲ್ಲಿಯೂ ಕಾಮರೂಪಿಯಾದ ಪರಶಿವನ, ಉಮಾದೇವಿಯ ಮತ್ತು ಶಿವಗಣಗಳ ದರ್ಶನವು ಈ ಪುಣ್ಯಕ್ಷೇತ್ರದಲ್ಲಿ ಲಭಿಸುವುದು. ಇಲ್ಲಿರುವ ಸರಸ್ಸಿನ ತೀರದಲ್ಲಿ ಶುಭಾರ್ಥಿಗಳಾದ ಯಾಜಕರು ಚೈತ್ರಮಾಸದಲ್ಲಿ ಪರಮೇಶ್ವರನ ಪ್ರೀತ್ಯರ್ಥವಾಗಿ ಅನೇಕಯಾಗಗಳನ್ನು ಮಾಡುತ್ತಾರೆ. ಜಿತೇಂದ್ರಿಯರಾದವರು ಈ ಸರಸ್ಸಿನಲ್ಲಿ ಸ್ನಾನಮಾಡಿ ದೇವ-ಪಿತೃಗಳನ್ನು ಅರ್ಚಿಸಿದ್ದೇ ಆದರೆ ಸಕಲಪಾಪಗಳಿಂದಲೂ ವಿಮುಕ್ತರಾಗುವುದರಲ್ಲಿ ಸಂಶಯವೇ ಇಲ್ಲ.

ಈ ಕ್ಷೇತ್ರದಲ್ಲಿಯೇ ಉಜ್ಜಾನಕವೆಂಬ ಪುಣ್ಯಕ್ಷೇತ್ರವಿರುವುದು. ಈ ಪವಿತ್ರಕ್ಷೇತ್ರದಲ್ಲಿ ತಪಸ್ಸುಮಾಡಿ ಭಗವಾನ್ ಸ್ಕಂದನೂ ಮತ್ತು ಅರುಂಧತೀಸಹಿತರಾದ ವಸಿಷ್ಠರೂ ಮನಶ್ಶಾಂತಿಯನ್ನು ಪಡೆದರು.

ಈ ಕ್ಷೇತ್ರದಲ್ಲಿರುವ ಸರೋವರಕ್ಕೆ 'ಕುಶವಾನ್' ಎಂದು ಹೆಸರು. ಸರೋವರದಲ್ಲಿರುವ ಪದ್ಮಕ್ಕೆ 'ಕುಶೇಶಯ' ಎಂದು ಹೆಸರು. ಈ ಸರೋವರದ ಸಮೀಪದಲ್ಲಿಯೇ ರುಕ್ಮಿಣಿಯ ಆಶ್ರಮವಿರುವುದು. ಹಿಂದೆ ರುಕ್ಮಿಣಿಯು ಈ ಪವಿತ್ರಸ್ಥಳದಲ್ಲಿ ತಪಸ್ಸುಮಾಡಿ ತನ್ನಲ್ಲಿದ್ದ ಕೋಪವನ್ನು ಉಪಶಮನಗೊಳಿಸಿದಳು. ಭೃಗುತುಂಗಕ್ಷೇತ್ರವನ್ನು ಸಂದರ್ಶಿಸಿದ್ದೇ ಆದರೆ ಸಮಾಧಿಯು ಲಭಿಸುತ್ತದೆಯೆಂಬ ವಿಷಯವನ್ನು ನೀನು ಕೇಳಿರಬಹುದು. ಅಂತಹ ಪರಮಪವಿತ್ರವಾದ ಭೃಗುತುಂಗಕ್ಷೇತ್ರವನ್ನು ನೀನಿಲ್ಲಿ ಕಾಣಬಹುದು. ಅಲ್ಲಿ ಕಾಣುತ್ತಿರುವುದೇ ಭೃಗುತುಂಗಪರ್ವತದ ನೀಳವಾದ ಶಿಖರ.

ಯುಧಿಷ್ಠಿರ! ಇದೇ ಕ್ಷೇತ್ರದಲ್ಲಿಯೇ ಶೀತಳವಾದ ಮತ್ತು ನಿರ್ಮಲವಾದ ನೀರಿನಿಂದ ಕೂಡಿರುವ ಪರಮಪವಿತ್ರವಾದ ವಿತಸ್ತಾನದಿಯಿರುವುದು. ಅದರಲ್ಲಿ ಸ್ನಾನಮಾಡುವುದರಿಂದ ಸಕಲಪಾಪಗಳೂ ಪರಿಹಾರವಾಗುವುವು.

ಆ ನದಿಯಲ್ಲಿ ಸ್ನಾನಮಾಡಲು ಅನೇಕ ಋಷಿ-ಮಹರ್ಷಿಗಳು ಬರುತ್ತಲೇ ಇರುತ್ತಾರೆ. ಅತ್ತಲಾಗಿ ಯಮುನಾನದಿಯ ಎರಡು ಪಾರ್ಶ್ವಗಳಲ್ಲಿಯೂ ಜಲಾ-ಉಪಜಲಾ ಎಂಬ ಎರಡು ಪವಿತ್ರವಾದ ನದಿಗಳಿರುವುವು. ಯುಧಿಷ್ಠಿರ! ಆ ನದಿಗಳ ತೀರದಲ್ಲಿ ಉಶೀನರರನು ಯಾಗಮಾಡಿ ಇಂದ್ರನಿಗಿಂತಲೂ ಶ್ರೇಷ್ಠನಾದವನೆಂಬ ಕೀರ್ತಿಯನ್ನು ಪಡೆದನು. ಉಶೀನರನ ಸತ್ತ್ವವನ್ನು ಪರೀಕ್ಷಿಸಲೋಸುಗವಾಗಿಯೂ ಮತ್ತು ಅವನಿಗೆ ವರಕೊಡುವ ಸಲು ವಾಗಿಯೂ ಇಂದ್ರಾಗ್ನಿಗಳಿಬ್ಬರೂ ಉಶೀನರನ ಯಾಗಭೂಮಿಯ ಸಮೀಪಕ್ಕೆ ಬಂದರು. ಇಂದ್ರನು ಗಿಡಗಹಕ್ಕಿಯ ರೂಪವನ್ನೂ ಅಗ್ನಿಯು ಪಾರಿವಾಳ ಹಕ್ಕಿಯ ರೂಪವನ್ನೂ ಧರಿಸಿದ್ದರು.

ಪಾರಿವಾಳವು ಗಿಡಗಕ್ಕೆ ಭಯಗೊಂಡಂತೆ ಓಡಿಯೋಡಿ ಬಂದು ಯಜ್ಞಮಂಟಪದಲ್ಲಿದ್ದ ಮಹಾತ್ಮನಾದ ಉಶೀನರನ ತೊಡೆಯಲ್ಲಿ ಅಡಗಿಕೊಂಡಿತು.

೧೩೦ನೆಯ ಅಧ್ಯಾಯವು ಮುಗಿಯಿತು.

೧೩೧ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಪಾರಿವಾಳವನ್ನು ರಕ್ಷಿಸುವ ಸಲುವಾಗಿ ಉಶೀನರನು ಗಿಡಗಹಕ್ಕಿಗೆ ತನ್ನ ಮಾಂಸವನ್ನೇ ಕತ್ತರಿಸಿ ಕೊಟ್ಟುದು

ಧರ್ಮಜ! ಪಾರಿವಾಳವನ್ನು ಹಿಂಬಾಲಿಸಿ ಬಂದ ಗಿಡಗವು ರಾಜನಿಗೆ ಸ್ವಲ್ಪದೂರದಲ್ಲಿ ನಿಂತು ಹೇಳಿತು :

**ಧರ್ಮಾತ್ಮಾನಂ ತ್ವಾಹುರೇಕಂ ಸರ್ವೇ ರಾಜನ್ಮಹೀಕ್ಷಿತಃ ।**
**ಸರ್ವಧರ್ಮವಿರುದ್ಧಂ ತ್ವಂ ಕಸ್ಮಾತ್ಕರ್ಮ ಚಿಕೀರ್ಷಸಿ ॥೧॥**

**ವಿಹಿತಂ ಭಕ್ಷಣಂ ರಾಜನ್ಪೀಡ್ಯಮಾನಸ್ಯ ಮೇ ಕ್ಷುಧಾ ।**
**ಮಾ ರಕ್ಷೀರ್ಧರ್ಮಲೋಭೇನ ಧರ್ಮಮುತ್ಸೃಷ್ಟವಾನಸಿ ॥೨॥**

"ಮಹಾರಾಜ! ಪ್ರಪಂಚದಲ್ಲಿರುವ ರಾಜರೆಲ್ಲರೂ ನಿನ್ನೊಬ್ಬನನ್ನೇ ಅತ್ಯಂತಧರ್ಮಿಷ್ಠನಾದ ರಾಜನೆಂದು ಹೇಳುತ್ತಾರೆ. ಆದುದರಿಂದ ಸರ್ವ ಧರ್ಮಕ್ಕೂ ವಿರುದ್ಧವಾದ ಕರ್ಮವನ್ನು ಮಾಡಲು ಈಗ ನೀನೇಕೆ ಯತ್ನಿ

ಸುತ್ತಿರುವೆ? ನಾನು ಬಹಳವಾಗಿ ಹಸಿದಿರುವೆನು. ಪಾರಿವಾಳಗಳು ನನ್ನ ಆಹಾರವೆಂದು ಬ್ರಹ್ಮನಿಂದಲೇ ನಿಶ್ಚಿತವಾಗಿದೆ. ನಾವು ಪುರಾತನಕಾಲ ದಿಂದಲೂ ಪಾರಿವಾಳಹಕ್ಕಿಗಳನ್ನೇ ತಿಂದು ಜೀವಿಸುತ್ತಿದ್ದೇವೆ. ನಾನು ನನ್ನ ಆಹಾರಕ್ಕೆಂದು ಅಟ್ಟಿಸಿಕೊಂಡು ಬಂದ ಪಾರಿವಾಳವನ್ನು 'ಆಶ್ರಿತರಕ್ಷಣೆ' ಎಂಬ ಧರ್ಮದ ಸೋಗುಹಾಕಿ ನಿನ್ನ ವಶದಲ್ಲಿಟ್ಟುಕೊಂಡಿರುವೆ. ಹೀಗೆ ಮಾಡಿದುದರಿಂದ ನನ್ನ ಆಹಾರವನ್ನು ಕಸಿದುಕೊಂಡು ಅಧರ್ಮಾಚರಣೆ ಯನ್ನು ಮಾಡುತ್ತಿರುವೆಯೆಂಬುದರ ಅರಿವೂ ನಿನಗುಂಟಾಗಿರುವುದಿಲ್ಲ. ಆಶ್ರಿತರನ್ನು ರಕ್ಷಣೆಮಾಡುವುದು ಪರಮಧರ್ಮವೆಂದು ಭಾವಿಸಿರುವೆ. ಆದರೆ ಪ್ರಸಕ್ತಸಂದರ್ಭದಲ್ಲಿ ನನ್ನ ಆಹಾರವನ್ನು ಬಚ್ಚಿಟ್ಟು ಅಧರ್ಮಕಾರ್ಯವನ್ನೇ ಮಾಡುತ್ತಿರುವೆ, ಮಹಾರಾಜ!"

ಗಿಡಗದ ಮಾತಿಗೆ ಉತ್ತರವಾಗಿ ಉಶೀನರನು ಹೇಳಿದನು :

"ಪಕ್ಷಿಶ್ರೇಷ್ಠನೇ! ನಿನ್ನ ಬೆನ್ನಟ್ಟುವಿಕೆಯಿಂದ ಭಯಪಟ್ಟ ಪಕ್ಷಿಯು ನಿನ್ನಿಂದ ಬಿಡುಗಡೆಹೊಂದಲು ಅಥವಾ ಪ್ರಾಣವುಳಿಸಿಕೊಳ್ಳಲು ಓಡಿಯೋಡಿ ಬಂದು ನನ್ನ ತೊಡೆಯ ಮೇಲೆ ಬಿದ್ದು ಪ್ರಾಣಭಿಕ್ಷೆಯನ್ನು ಬೇಡಿತು. ಪ್ರಾಣಾಪಾಯದ ಸಂದರ್ಭದಲ್ಲಿ ರಕ್ಷಣೆಯನ್ನು ಕೇಳಿದ ಈ ಪಕ್ಷಿಗೆ ರಕ್ಷಣೆಯಿತ್ತ ನನ್ನ ಈ ಕಾರ್ಯವನ್ನು ನೀನು ಪರಮಧಾರ್ಮಿಕವೆಂದೇಕೆ ಭಾವಿಸುವುದಿಲ್ಲ? ನಿನಗೀಪಕ್ಷಿಯನ್ನು ಬಿಟ್ಟುಕೊಡದ ಮಾತ್ರಕ್ಕೆ ನಾನು ಅಧರ್ಮ ವನ್ನೆಸಗಿದಂತಾಗುವುದೇ? ಈ ಪಕ್ಷಿಯಾದರೋ ಭಯದಿಂದ ನಡುಗುತ್ತಿದೆ. ಉದ್ವೇಗಗೊಂಡು ಪ್ರಾಣವುಳಿಸುವಂತೆ ನನ್ನನ್ನು ಬೇಡಿಕೊಳ್ಳುತ್ತಿದೆ. ಇಂತಹ ಸಂದರ್ಭದಲ್ಲಿ ಈ ಪಕ್ಷಿಯನ್ನು ನಿನ್ನ ಆಹಾರದ ಸಲುವಾಗಿ ಬಿಟ್ಟುಕೊಡುವುದು ನಿಶ್ಚಯವಾಗಿಯೂ ಗರ್ಹಣೀಯವಾದುದು.

**ಯೋ ಹಿ ಕಶ್ಚಿದ್ದ್ವಿಜಾನ್ಹನ್ಯಾದ್ಗಾಂ ವಾ ಲೋಕಸ್ಯ ಮಾತರಮ್ ।**
**ಶರಣಾಗತಂ ಚ ತ್ಯಜತೇ ತುಲ್ಯಂ ತೇಷಾಂ ಹಿ ಪಾತಕಮ್ ॥೬॥**

ಬ್ರಾಹ್ಮಣನನ್ನು ವಧೆಮಾಡಿದವನಿಗೆ, ಲೋಕಮಾತೆಯಾದ ಹಸುವನ್ನು ಕೊಂದವನಿಗೆ ಮತ್ತು ಶರಣಾಗತನಾದವನನ್ನು ತ್ಯಜಿಸಿದವನಿಗೆ ಬರುವ ಪಾಪವು ಸಮಾನರೂಪವಾದುದು. ಬ್ರಹ್ಮಹತ್ಯೆಯಿಂದ ಅಥವಾ ಗೋಹತ್ಯೆ

ಯಿಂದ ಉಂಟಾಗಬಹುದಾದ ಮಹಾಪಾತಕವು ಶರಣಾಗತನಾದವನನ್ನು ಪರಿತ್ಯಜಿಸುವುದರಿಂದಲೂ ಉಂಟಾಗುತ್ತದೆ.”

ರಾಜನ ಆ ಮಾತಿಗೆ ಉತ್ತರವಾಗಿ ಗಿಡಗವು ಹೇಳಿತು :

“ಮಹಾರಾಜ! ನಿನಗೆ ಅನ್ನದ ಅಥವಾ ಆಹಾರದ ಮಹತ್ತ್ವವೇನೆಂಬುದು ತಿಳಿಯದೇ?

**ಆಹಾರಾತ್ಸರ್ವಭೂತಾನಿ ಸಮ್ಭವನ್ತಿ ಮಹೀಪತೇ ।**
**ಆಹಾರೇಣ ವಿವರ್ಧನ್ತೇ ತೇನ ಜೀವನ್ತಿ ಜನ್ತವಃ ॥೭॥**

**ಶಕ್ಯತೇ ದುಸ್ತ್ಯಜೇಽಪ್ಯರ್ಥೇ ಚಿರರಾತ್ರಾಯ ಜೀವಿತುಮ್ ।**
**ನ ತು ಭೋಜನಮುತ್ಸೃಜ್ಯ ಶಕ್ಯಂ ವರ್ತಯಿತುಂ ಚಿರಮ್ ॥೮॥**

ಆಹಾರದಿಂದಲೇ ಸರ್ವಭೂತಗಳೂ (ಪ್ರಾಣಿಗಳೂ) ಉತ್ಪನ್ನವಾಗುವುವು ; ಆಹಾರದಿಂದಲೇ ವರ್ಧಿಸುವುವು ಮತ್ತು ಆಹಾರದಿಂದಲೇ ಜೀವಿಸುವುವು. ಪ್ರಪಂಚದಲ್ಲಿ ತ್ಯಾಗಮಾಡಲು ದುಸ್ಸಾಧ್ಯವಾದ ವಸ್ತುವನ್ನಾದರೂ ತ್ಯಜಿಸಿ ಬಹುಕಾಲ ಜೀವಿಸಿರಬಹುದು. ಆದರೆ ಆಹಾರವನ್ನು ಬಿಟ್ಟು ದೀರ್ಘಕಾಲ ಜೀವಿಸಿರುವ ಸಾಧ್ಯತೆಯಿಲ್ಲ.

**ಭಕ್ಷ್ಯಾದ್ವಿಯೋಜಿತಸ್ಯಾದ್ಯ ಮಮ ಪ್ರಾಣಾ ವಿಶಾಮ್ಪತೇ ।**
**ವಿಸೃಜ್ಯ ಕಾಯಮೇಷ್ಯನ್ತಿ ಪನ್ಥಾನಮಕುತೋಭಯಮ್ ॥೯॥**

**ಪ್ರಮೃತೇ ಮಯಿ ಧರ್ಮಾತ್ಮನ್ಪುತ್ರದಾರಾದಿ ನಂಕ್ಷ್ಯತಿ ।**
**ರಕ್ಷಮಾಣಃ ಕಪೋತಂ ತ್ವಂ ಬಹೂನ್ಪ್ರಾಣಾನ್ನ ರಕ್ಷಸಿ ॥೧೦॥**

ಬ್ರಹ್ಮನಿಂದ ನನಗಾಗಿಯೇ ನಿಯತವಾಗಿರುವ ಆಹಾರದಿಂದ ವಂಚಿತವಾದ ನನ್ನ ಪ್ರಾಣಗಳು ಶರೀರವನ್ನು ಬಿಟ್ಟು ಯಾವ ಹೆದರಿಕೆಯೂ ಇಲ್ಲದ ಮಾರ್ಗವನ್ನು (ಮೃತ್ಯುಪಥವನ್ನು ) ಕುರಿತು ಹೋಗುತ್ತವೆ. ಆದರೆ ನನ್ನೊಬ್ಬನ ಮರಣದಿಂದಲೇ ಈ ಸಮಸ್ಯೆಯು ಪರಿಹಾರವಾಗಲಾರದು. ನನ್ನನ್ನೇ ಅವಲಂಬಿಸಿ ನನ್ನ ಪತ್ನೀ-ಪುತ್ರ-ಪುತ್ರಿಯರೂ ಇದ್ದಾರೆ. ನಾನು ಪ್ರಾಣತ್ಯಾಗಮಾಡಿದೆನೆಂದರೆ ಅವರೆಲ್ಲರೂ ಆಶ್ರಯರಹಿತರಾಗಿ ಪ್ರಾಣತ್ಯಾಗ ಮಾಡುವುದೂ ನಿಶ್ಚಯ. ಮಹಾರಾಜ! ಆದುದರಿಂದ ಈ ಪಕ್ಷಿಯೊಂದರ

ರಕ್ಷಣೆಯ ನಿಮಿತ್ತವಾಗಿ ಅನೇಕಪ್ರಾಣಿಗಳ ಅರಕ್ಷಣೆಗೆ ಅಥವಾ ಹತ್ಯೆಗೆ ನೀನು ಕಾರಣನಾಗುವೆ.

**ಧರ್ಮಂ ಯೋ ಬಾಧತೇ ಧರ್ಮೋ ನ ಸ ಧರ್ಮಃ ಕುಧರ್ಮ ತತ್ ।**
**ಅವಿರೋಧಾತ್ತು ಯೋ ಧರ್ಮಃ ಸ ಧರ್ಮಃ ಸತ್ಯವಿಕ್ರಮ ॥೧೧॥**

ಸತ್ಯವಿಕ್ರಮನೇ! ಒಂದು ಧರ್ಮವು ಮತ್ತೊಂದು ಧರ್ಮಕ್ಕೆ ಬಾಧೆಯನ್ನುಂಟುಮಾಡುವುದಾದರೆ–ಅದು ಧರ್ಮವೆನಿಸಿಕೊಳ್ಳುವುದಿಲ್ಲ. ಅಂತಹ ಧರ್ಮಾನುಸರಣೆಯು ದುರ್ಮಾರ್ಗಪ್ರವರ್ತನೆಯೆನಿಸುತ್ತದೆ. ಯಾವಾಗ ಒಂದು ಧರ್ಮವು ಮತ್ತೊಂದು ಧರ್ಮಕ್ಕೆ ಅವಿರೋಧವಾಗಿರುವುದೋ–ಅಂತಹ ಧರ್ಮವೇ ಸದ್ಧರ್ಮವೆನಿಸಿಕೊಳ್ಳುತ್ತದೆ.

(ಆಶ್ರಿತರಕ್ಷಣೆ–ಎಂಬುದು ಧರ್ಮ. ಆದರೆ ಆ ಧರ್ಮವನ್ನೇ ಅನುಸರಿಸಿದರೆ ಗಿಡಗಹಕ್ಕಿಯ ಕುಟುಂಬದವರೆಲ್ಲರೂ ನಿರಾಶ್ರಿತರಾಗುತ್ತಾರೆ. ಒಂದು ಪಕ್ಷಿಗೋಸ್ಕರ ರಾಜನು ಆಶ್ರಿತರಕ್ಷಣಾಧರ್ಮವನ್ನು ಪರಿಪಾಲಿಸಲು ಹೋಗಿ ಹತ್ತಾರು ಹಕ್ಕಿಗಳು ಆಶ್ರಯಹೀನರಾಗಲು ಕಾರಣನಾಗುತ್ತಾನೆ. ಆದುದರಿಂದ ಇಲ್ಲಿ ಒಂದು ಧರ್ಮವು ಮತ್ತೊಂದು ಧರ್ಮಕ್ಕೆ ವಿರೋಧಿಯಾಯಿತು. ಇಂತಹ ಧರ್ಮಾಚರಣೆಯು ದುರ್ಮಾರ್ಗಾನುಸರಣೆಗೆ ಸಮಾನವಾದುದು–ಎಂಬುದು ಶ್ಯೇನಪಕ್ಷಿಯ ಅಭಿಪ್ರಾಯವಾಗಿರುತ್ತದೆ.)

**ವಿರೋಧಿಷು ಮಹೀಪಾಲ ನಿಶ್ಚಿತ್ಯ ಗುರುಲಾಘವಮ್ ।**
**ನ ಬಾಧಾ ವಿದ್ಯತೇ ಯತ್ರ ತಂ ಧರ್ಮಂ ಸಮುಪಾಚರೇತ್ ॥೧೨॥**

**ಗುರುಲಾಘವಮಾದಾಯ ಧರ್ಮಾಧರ್ಮವಿನಿಶ್ಚಯೇ ।**
**ಯತೋ ಭೂಯಾಂಸ್ತತೋ ರಾಜನ್ಕುರುಷ್ವ ಧರ್ಮನಿಶ್ಚಯಮ್ ॥**

ಒಂದು ಧರ್ಮಕ್ಕೂ–ಮತ್ತೊಂದು ಧರ್ಮಕ್ಕೂ ವಿರೋಧವು ಸಂಭವಿಸಿದಾಗ (ಎರಡು ಧರ್ಮಗಳನ್ನೂ ಏಕಕಾಲದಲ್ಲಿ ಪರಿಪಾಲಿಸಲಾಗದಿದ್ದಾಗ) ಯಾವುದು ಪ್ರಧಾನವಾದ ಧರ್ಮ ಮತ್ತು ಯಾವುದು ಅಪ್ರಧಾನವಾದ ಧರ್ಮ–ಎಂಬುದನ್ನು ವಿವೇಚಿಸಿ ಕಾರ್ಯಮಾಡಬೇಕು. ಯಾವ ಧರ್ಮವನ್ನು ಆಚರಿಸುವುದರಿಂದ ಹೆಚ್ಚು ಬಾಧೆಯುಂಟಾಗುವುದಿಲ್ಲವೋ (ಮತ್ತೊಬ್ಬರಿಗೆ

ಹೆಚ್ಚು ತೊಂದರೆಯಾಗುವುದಿಲ್ಲವೋ)-ಅಂತಹ ಧರ್ಮವನ್ನೇ ಆಚರಿಸ ಬೇಕು. ಧರ್ಮಾಧರ್ಮಗಳನ್ನು ವಿವೇಚಿಸಲು ಹೋದಾಗ ಯಾವುದು ಪ್ರಧಾನವಾದುದು ಮತ್ತು ಯಾವುದು ಅಪ್ರಧಾನವಾದುದು–ಎಂಬುದನ್ನೂ ನಿಶ್ಚಯಿಸಿ ಯಾವ ಕಾರ್ಯಮಾಡುವುದರಿಂದ ಹೆಚ್ಚಿನ ಶ್ರೇಯಸ್ಸುಂಟಾಗು ತ್ತದೆಯೋ–ಅದನ್ನೇ ಧರ್ಮ ಅಥವಾ ಪ್ರಧಾನಭೂತವಾದ ಧರ್ಮ ಎಂದು ನಿಶ್ಚಯಿಸಿ ಕಾರ್ಯಮಾಡು."

ರಾಜನು ಹೇಳುತ್ತಾನೆ :

"ವಿಹಗೋತ್ತಮನೇ! ನೀನು ಬಹುಮಂಗಳಕರವಾದ ಮಾತುಗಳ ನ್ನಾಡುತ್ತಿರುವೆ. ನಿನ್ನ ಮಾತುಗಳಲ್ಲಿ ದೋಷವೆಂಬುದೇ ಇರುವುದಿಲ್ಲ. ಇಂತಹ ಪರಮಧರ್ಮಗಳನ್ನು ತಿಳಿದಿರುವ ನೀನು ಸುವರ್ಣದ ರೆಕ್ಕೆಗಳುಳ್ಳ ಪಕ್ಷಿರಾಜನಾದ ಗರುಡನೇ ಇರಬಹುದೆಂದು ನಾನು ಸಂಶಯಪಡುತ್ತೇನೆ. ಧರ್ಮಯುಕ್ತವಾದ, ವಿಚಿತ್ರತರವಾದ ಮಾತುಗಳನ್ನೂ ನೀನು ಆಡುತ್ತಿರುವೆ. ನಿನಗೆ ತಿಳಿಯದ ವಿಷಯವೇ ಇಲ್ಲವೆಂದೂ, ನೀನು ಧರ್ಮಾಧರ್ಮಗಳೆಲ್ಲ ವನ್ನೂ ಸಂಪೂರ್ಣವಾಗಿ ತಿಳಿದಿರುವೆಯೆಂದೂ ನಾನು ಭಾವಿಸುತ್ತೇನೆ. ಆದರೆ:

**ಶರಣೈಷಿಪರಿತ್ಯಾಗಂ ಕಥಂ ಸಾಧ್ವಿತಿ ಮನ್ಯಸೇ ।**
**ಆಹಾರಾರ್ಥಂ ಸಮಾರಮ್ಭಸ್ತವ ಚಾಯಂ ವಿಹಂಗಮ ॥೧೬॥**

**ಶಕ್ಯಶ್ಚಾಪ್ಯನ್ಯಥಾ ಕರ್ತುಮಾಹಾರೋಽಪ್ಯಧಿಕಸ್ತ್ವಯಾ ।**
**ಗೋವೃಷೋ ವಾ ವರಾಹೋ ವಾ ಮೃಗೋ ವಾ ಮಹಿಷೋಽಪಿ ವಾ ।**
**ತ್ವದರ್ಥಮದ್ಯ ಕ್ರಿಯತಾಂ ಯಚ್ಚಾನ್ಯದಿಹ ಕಾಂಕ್ಷಸಿ ॥೧೭॥**

'ಶರಣಾಗತರ ಪರಿತ್ಯಾಗವು ಸಾಧುವಾದುದು' ಎಂದು ಹೇಗೆ ಭಾವಿ ಸುವೆ? ಆಹಾರದ ವಿಷಯವಾಗಿ ನೀನು ಹೇಳಿದುದೆಲ್ಲವನ್ನೂ ನಾನು ಒಪ್ಪು ತ್ತೇನೆ. ನೀನು ಆಹಾರವನ್ನರಸಿ ಬಂದಿರುವುದೇನೋ ಸರಿ. ಆದರೆ ಪ್ರಾಣ ರಕ್ಷಣೆಗಾಗಿ ನನ್ನ ಬಳಿಗೆ ಬಂದಿರುವ ಈ ಪಾರಿವಾಳವೊಂದೇ ನಿನ್ನ ಆಹಾರ ವಲ್ಲ ; ಬೇರೆಯ ಆಹಾರದಿಂದಲೂ ನಿನ್ನ ಹಸಿವನ್ನು ನೀನು ಪರಿಹರಿಸಿಕೊಳ್ಳ ಬಹುದು. ಆದುದರಿಂದ ಇಂದೇ ಈ ಪಾರಿವಾಳವನ್ನು ಬಿಟ್ಟು ಬೇರಾವು ದಾದರೂ ಆಹಾರವನ್ನು ತೆಗೆದುಕೊ. ನಿನಗೆ ಅರಣ್ಯದಲ್ಲಿರುವ ಯಾವ

ಮೃಗವು ಆಹಾರಕ್ಕಾಗಿ ಬೇಕಾಗಿರುವುದು ಹೇಳು. ಈ ಪಕ್ಷಿಯೊಂದನ್ನು ಬಿಟ್ಟು ನಿನಗೆ ಎಂತಹ ಆಹಾರವನ್ನಾದರೂ ಒದಗಿಸಿಕೊಡಲು ನಾನು ಸಿದ್ಧನಾಗಿರುವೆನು. ಗೂಳಿಯನ್ನಾಗಲೀ, ಕಾಡುಹಂದಿಯನ್ನಾಗಲೀ, ಜಿಂಕೆಯನ್ನಾಗಲೀ, ಕೋಣವನ್ನಾಗಲೀ, ನೀನು ಬಯಸುವ ಬೇರೆ ಯಾವುದನ್ನೇ ಆಗಲೀ–ಈ ಕೂಡಲೇ ತರಿಸಿಕೊಡುವೆನು."

ಗಿಡಗವು ಹೇಳುತ್ತದೆ :

"ಮಹಾರಾಜ! ನನಗೆ ಗೂಳಿಯನ್ನಾಗಲೀ, ಹಂದಿಯನ್ನಾಗಲೀ ಅಥವಾ ಅರಣ್ಯದಲ್ಲಿರುವ ಬಗೆಬಗೆಯ ಪ್ರಾಣಿಗಳನ್ನೇ ಆಗಲೀ ತಿನ್ನುವ ಇಚ್ಛೆಯಿಲ್ಲ. ನನಗೆ ಬೇಡವಾದ ಆಹಾರವನ್ನು ಕಟ್ಟಿಕೊಂಡು ನಾನೇನು ಮಾಡಲಿ?

**ಯಸ್ತು ಮೇ ದೇವವಿಹಿತೋ ಭಕ್ಷಃ ಕ್ಷತ್ರಿಯಪುಙ್ಗವ ।**
**ತಮುತ್ಸೃಜ ಮಹೀಪಾಲ ಕಪೋತಮಿಮಮೇವ ಮೇ ॥೧೯॥**

**ಶ್ಯೇನಃ ಕಪೋತಾನತ್ತೀತಿ ಸ್ಥಿತಿರೇಷಾ ಸನಾತನೀ ।**
**ಮಾ ರಾಜನ್ಸಾರಮಜ್ಞಾತ್ವಾ ಕದಲೀಸ್ಕನ್ಧಮಾಶ್ರಯ ॥೨೦॥**

ಕ್ಷತ್ರಿಯಶಿರೋಮಣಿಯೇ! ಇಂದಿನ ಆಹಾರಕ್ಕೆ ಈ ಪಕ್ಷಿಯನ್ನೇ ದೈವವು ನನಗೆ ಒದಗಿಸಿಕೊಟ್ಟಿದೆಯೆಂದು ನಾನು ಭಾವಿಸಿದ್ದೇನೆ. ಆದುದರಿಂದ ಕ್ಷತ್ರಿಯಕುಲಾವತಂಸನೇ! ಈ ಪಾರಿವಾಳವನ್ನು ಬಿಟ್ಟುಬಿಡು. ಮೇಲಾಗಿ ಶ್ಯೇನಪಕ್ಷಿಗಳು ಪಾರಿವಾಳಗಳನ್ನು ತಿನ್ನುತ್ತವೆಯೆಂಬುದು ಅಥವಾ ಶ್ಯೇನಪಕ್ಷಿಗಳಿಗೆ ಪಾರಿವಾಳಗಳೇ ಆಹಾರವೆಂಬುದು ಹಿಂದಿನಿಂದಲೂ ನಡೆದುಬಂದಿರುವುದೇ ಅಲ್ಲವೇ? ಆದುದರಿಂದ ಧರ್ಮದ ಸಾರಭೂತವಾದ ತತ್ತ್ವವನ್ನು ವಿವೇಚಿಸದೇ ಕದಲೀಸ್ಕಂಧದಂತಿರುವ (ಬಾಳೆಯಗಿಡದ ಕಾಂಡದಂತಿರುವ) ಸಾರಹೀನವಾದ ಧರ್ಮವನ್ನು ಆಶ್ರಯಿಸಬೇಡ."

ಅದಕ್ಕುತ್ತರವಾಗಿ ರಾಜನು ಹೇಳಿದನು :

**ರಾಷ್ಟ್ರಂ ಶಿಬೀನಾಮೃದ್ಧಂ ವೈ ದದಾನಿ ತವ ಖೇಚರ ।**
**ಯಂ ವಾ ಕಾಮಯಸೇ ಕಾಮಂ ಶ್ಯೇನ ಸರ್ವಂ ದದಾನಿ ತೇ ।**
**ವಿನೇಮಂ ಪಕ್ಷಿಣಂ ಶ್ಯೇನ ಶರಣಾರ್ಥಿನಮಾಗತಮ್ ॥೨೧॥**

**ಯೇನೇಮಂ ವರ್ಜಯೇಥಾಸ್ತ್ವಂ ಕರ್ಮಣಾ ಪಕ್ಷಿಸತ್ತಮ ।**
**ತದಾಚಕ್ಷ್ವ ಕರಿಷ್ಯಾಮಿ ನ ಹಿ ದಾಸ್ಯೇ ಕಪೋತಕಮ್ ॥೨೨॥**

"ಖಗೋತ್ತಮನೇ! ಶಿಬಿವಂಶೀಯರಾದ ರಾಜರ ಸರ್ವಸಂಪತ್ಸಮೃದ್ಧವಾಗಿರುವ, ಈ ರಾಷ್ಟ್ರವನ್ನೇ ನಿನಗರ್ಪಿಸಿಬಿಡುವೆನು ಅಥವಾ ಈ ರಾಷ್ಟ್ರದಲ್ಲಿರುವ, ನಿನಗೆ ಅಪೇಕ್ಷಣೀಯವಾದ ಯಾವ ವಸ್ತುವನ್ನಾದರೂ ತಂದು ಕೊಡುವೆನು. ನಿನಗೆ ಕೊಡದಿರುವ ಅಥವಾ ಕೊಡಲಾಗದ ಒಂದೇ ಒಂದು ವಸ್ತುವೆಂದರೆ ನನ್ನನ್ನೇ ಆಶ್ರಯಿಸಿ ಬಂದಿರುವ ಈ ಪಕ್ಷಿಯೊಂದು ಮಾತ್ರ. ಇದೊಂದನ್ನು ಬಿಟ್ಟು ನಿನಗೆ ಪ್ರಿಯವಾದ ಯಾವ ವಸ್ತುವನ್ನು ಕೊಟ್ಟರೆ ಅಥವಾ ಏನು ಮಾಡಿದರೆ ನೀನು ಈ ಪಕ್ಷಿಯನ್ನು ಬಿಟ್ಟುಹೋಗುವೆಯೆಂಬುದನ್ನು ಹೇಳು. ನಿಸ್ಸಂಕೋಚವಾಗಿ ನಿರ್ಭಯವಾಗಿ ಕೇಳು. ಕೊಟ್ಟುಬಿಡುವೆನು. ಆದರೆ ಈ ಪಕ್ಷಿಯನ್ನು ಮಾತ್ರ ನೀನೇನೇ ಹೇಳಿದರೂ ನಿನಗೆ ಬಿಟ್ಟು ಕೊಡುವುದಿಲ್ಲ. ಇದು ನಿಶ್ಚಯ."

ಗಿಡಗವು ಹೇಳುತ್ತದೆ :

**ಉಶೀನರ ಕಪೋತೇ ತೇ ಯದಿ ಸ್ನೇಹೋ ನರಾಧಿಪ ।**
**ಆತ್ಮನೋ ಮಾಂಸಮುತ್ಕೃತ್ಯ ಕಪೋತತುಲಯಾ ಧೃತಮ್ ॥೨೩॥**

**ಯದಾ ಸಮಂ ಕಪೋತೇನ ತವ ಮಾಂಸಂ ನೃಪೋತ್ತಮ ।**
**ತದಾ ದೇಯಂ ತು ತನ್ಮಹ್ಯಂ ಸಾ ಮೇ ತುಷ್ಟಿರ್ಭವಿಷ್ಯತಿ ॥೨೪॥**

"ಮಹಾರಾಜ! ನಿನಗೆ ಈ ಪಕ್ಷಿಯ ಮೇಲೆಯೇ ಹೆಚ್ಚಿನ ಮಮತೆಯಿರುವುದಾದರೆ ಒಂದು ಕೆಲಸ ಮಾಡು. ನೀನು ಈ ಪಕ್ಷಿಯನ್ನು ಬಿಟ್ಟುಕೊಡಬೇಕಾಗಿಲ್ಲ ; ಆಶ್ರಿತರಕ್ಷಣಾಧರ್ಮವನ್ನೂ ಬಿಡಬೇಕಾಗಿಲ್ಲ. ಈ ಪಕ್ಷಿಯ ತೂಕಕ್ಕೆ ಸರಿತೂಕದ ಮಾಂಸವನ್ನು ಕೊಟ್ಟರೂ ಆಗಬಹುದು. ಆ ಮಾಂಸವು ಬೇರೆ ಯಾವ ಪ್ರಾಣಿಯದೂ ಆಗಿರಕೂಡದು. ನಿನ್ನ ಶರೀರದಿಂದಲೇ ಮಾಂಸವನ್ನು ಕತ್ತರಿಸಿ ತೂಕಮಾಡಿ ಕೊಡಬೇಕು. ಈ ಪಕ್ಷಿಗೆ ಪ್ರತ್ಯಾಮ್ನಾಯವೆಂದರೆ ಈ ಪ್ರಪಂಚದಲ್ಲಿ ಇದರ ತೂಕದ ನಿನ್ನ ಮಾಂಸವೊಂದೇ ಆಗಿರುತ್ತದೆ. ಉಶೀನರನೇ! ನೀನು ಈ ಪಕ್ಷಿಯನ್ನು ತಕ್ಕಡಿಯ ಒಂದು ತಟ್ಟೆಯಲ್ಲಿಟ್ಟು, ತಕ್ಕಡಿಯ ಮತ್ತೊಂದು ತಟ್ಟೆಯಲ್ಲಿ ನಿನ್ನ ಮಾಂಸ

ವನ್ನು ಹಾಕಿ ಪಕ್ಷಿಯ ತೂಕಕ್ಕೆ ಸರಿಯಾಗಿ ತೂಕಮಾಡಿಕೊಡುವೆಯಾದರೆ ನಾನು ಸಂತುಷ್ಟನಾಗುವೆನು.”



ರಾಜನು ಹೇಳುತ್ತಾನೆ :

**ಅನುಗ್ರಹಮಿಮಂ ಮನ್ಯೇ ಶ್ಯೇನ ಯನ್ಮಾಭಿಯಾಚಸೇ ।**
**ತಸ್ಮಾತ್ತೇಽದ್ಯ ಪ್ರದಾಸ್ಯಾಮಿ ಸ್ವಮಾಂಸಂ ತುಲಯಾ ಧೃತಮ್ ॥**

“ಪಕ್ಷಿಶ್ರೇಷ್ಠನೇ! ನೀನು ಈ ವಿನಿಮಯವನ್ನು ಪಡೆಯಲು ಒಪ್ಪಿ ನನ್ನನ್ನು ಅನುಗ್ರಹಿಸಿರುವೆಯೆಂದೇ ಭಾವಿಸುತ್ತೇನೆ. ನಾನು ಈ ಕ್ಷಣದಲ್ಲಿಯೇ ತಕ್ಕಡಿಯನ್ನು ತರಿಸಿ ಈ ಪಕ್ಷಿಯ ತೂಕಕ್ಕೆ ಸಮವಾದ ನನ್ನ ಶರೀರದ ಮಾಂಸವನ್ನು ಕತ್ತರಿಸಿ ಕೊಡುತ್ತೇನೆ.”

ಯುಧಿಷ್ಠಿರ! ಧರ್ಮಾತ್ಮನಾದ ಉಶೀನರನು ಶ್ಯೇನಪಕ್ಷಿಯನ್ನು ಕುರಿತು ಹೀಗೆ ಹೇಳಿ ಒಡನೆಯೇ ಸೇವಕರಿಂದ ತಕ್ಕಡಿಯನ್ನು ತರಿಸಿ ತೂಗುಹಾಕಿ, ಒಂದು ತಟ್ಟೆಯಲ್ಲಿ ಪಾರಿವಾಳವನ್ನಿಟ್ಟು ತನ್ನ ಶರೀರದ ಒಂದು ಭಾಗದಿಂದ ಮಾಂಸವನ್ನು ಕತ್ತರಿಸಿ ಮತ್ತೊಂದು ತಟ್ಟೆಯಲ್ಲಿಟ್ಟನು. ಆದರೆ ಆ ಮಾಂಸದ ತುಂಡು ಪಾರಿವಾಳದ ತೂಕಕ್ಕೆ ಸಮವಾಗಲಿಲ್ಲ. ಶರೀರದ ಮತ್ತೊಂದು ಭಾಗದಿಂದ ಮಾಂಸವನ್ನು ಕತ್ತರಿಸಿ ತಟ್ಟೆಯೊಳಗಿಟ್ಟನು. ಅದೂ ಸಾಕಾಗಲಿಲ್ಲ. ಶರೀರಾದ್ಯಂತವಾಗಿ ಇರುವ ಮಾಂಸವನ್ನು ಕತ್ತರಿಸಿ ತಟ್ಟೆಯೊಳಗಿಟ್ಟರೂ ಪಾರಿವಾಳವು ಕುಳಿತಿದ್ದ ತಟ್ಟೆಯು ಕೆಳಭಾಗದಲ್ಲಿಯೇ ಇದ್ದಿತು. ಮುಂದೆ ಕತ್ತರಿಸಲು ಶರೀರದಲ್ಲಿ ಯಾವ ಭಾಗವೂ ಉಳಿಯಲಿಲ್ಲ. ಹೆಚ್ಚು ಯೋಚಿಸಹೋಗದೇ ಉಶೀನರನು ತಟ್ಟೆಯೊಳಗೆ ತಾನೇ ಹತ್ತಿ ಕುಳಿತುಬಿಟ್ಟನು.

ಇಂದ್ರನ ಪರೀಕ್ಷೆಯು ಮುಗಿಯಿತು. ಉಶೀನರನು ಇಂದ್ರನು ಮಾಡಿದ ಪರೀಕ್ಷೆಯಲ್ಲಿ ಉತ್ತೀರ್ಣನಾದನು.

ಗಿಡಗನ ರೂಪದಲ್ಲಿದ್ದ ಇಂದ್ರನು ರಾಜನಿಗೆ ಹೇಳಿದನು :

**ಇನ್ದ್ರೋಽಹಮಸ್ಮಿ ಧರ್ಮಜ್ಞ ಕಪೋತೋ ಹವ್ಯವಾಡಯಮ್ ।**
**ಜಿಜ್ಞಾಸಮಾನೌ ಧರ್ಮಂ ತ್ವಾಂ ಯಜ್ಞವಾಟಮುಪಾಗತೌ ॥೨೯॥**

**ಯತ್ತೇ ಮಾಂಸಾನಿ ಗಾತ್ರೇಭ್ಯ ಉತ್ಕೃತ್ತಾನಿ ವಿಶಾಮ್ಪತೇ ।**
**ಏಷಾ ತೇ ಭಾಸ್ವತೀ ಕೀರ್ತಿರ್ಲೋಕಾನಭಿಭವಿಷ್ಯತಿ ॥೩೦॥**

**ಯಾವಲ್ಲೋಕೇ ಮನುಷ್ಯಾಸ್ತ್ವಾಂ ಕಥಯಿಷ್ಯನ್ತಿ ಪಾರ್ಥಿವ ।**
**ತಾವತ್ಕೀರ್ತಿಶ್ಚ ಲೋಕಾಶ್ಚ ಸ್ಥಾಸ್ಯನ್ತಿ ತವ ಶಾಶ್ವತಾಃ ॥೩೧॥**

"ಧರ್ಮಾತ್ಮನಾದ ರಾಜನೇ! ಉಶೀನರ! ನಾನೇ ಇಂದ್ರನು. ತಕ್ಕಡಿಯೊಳಗೆ ಪಾರಿವಾಳದ ರೂಪದಲ್ಲಿರುವವನೇ ಹವ್ಯವಾಹನನಾದ ಅಗ್ನಿದೇವನು. ನಿನ್ನ ಧರ್ಮನಿಷ್ಠೆಯನ್ನು ಪರೀಕ್ಷಿಸುವ ಸಲುವಾಗಿಯೇ ನಾವಿಬ್ಬರೂ ಗಿಡಗ-ಕಪೋತಗಳ ವೇಷಧರಿಸಿ ನಿನ್ನ ಯಜ್ಞಶಾಲೆಗೆ ಆಗಮಿಸಿದೆವು. ನೀನು ನಿನ್ನ ಧರ್ಮವನ್ನುಳಿಸಿಕೊಳ್ಳುವ ಸಲುವಾಗಿ ಪ್ರಾಣಾಪಾಯದ ವಿವೇಚನೆಯನ್ನೂ ಮಾಡದೇ, ದೇಹಾಭಿಮಾನವನ್ನೂ ತೊರೆದು ನಿನ್ನ ಶರೀರದಿಂದ

ಮಾಂಸವನ್ನು ಕತ್ತರಿಸಿ ಕಡೆಯಲ್ಲಿ ಆತ್ಮಬಲಿಗೂ ಸಿದ್ಧನಾದೆ. ಧರ್ಮರಕ್ಷಣೆಗಾಗಿ ಪ್ರಾಣತ್ಯಾಗಮಾಡಲೂ ಸಿದ್ಧನಾದ ನಿನ್ನ ಕೀರ್ತಿಯು ಸಕಲಲೋಕಗಳಲ್ಲಿಯೂ ಬೆಳಗುವುದು ಮತ್ತು ಇದುವರೆಗೆ ಇತರರು ಸಂಪಾದಿಸಿರುವ ಕೀರ್ತಿಯನ್ನು ಈ ನಿನ್ನ ಕೀರ್ತಿಯು ಮಸುಕುಗೊಳಿಸುವುದು. ಎಂದಿನವರೆಗೆ ಈ ಲೋಕದಲ್ಲಿ ಮಾನವರು ನಿನ್ನ ಸುಚರಿತೆಯನ್ನು ಹೇಳುತ್ತಿರುವರೋ ಅಂದಿನವರೆಗೂ ನಿನ್ನ ಕೀರ್ತಿಯು ಉಳಿಯುವುದು ಮತ್ತು ಅಂದಿನವರೆಗೂ ನೀನು ಶಾಶ್ವತವಾದ ಪುಣ್ಯಲೋಕದಲ್ಲಿರುವೆ. (ನಿನ್ನ ಸುಚರಿತೆಯನ್ನು ಭೂಮಿಯ ಜನಗಳು ಎಂದೆಂದಿಗೂ ಹೇಳುತ್ತಲೇ ಇರುತ್ತಾರೆ. ನಿನ್ನ ಕೀರ್ತಿಯು ಆಚಂದ್ರಾರ್ಕವಾಗಿ ಉಳಿಯುವುದು ಮತ್ತು ನಿನಗೆ ಶಾಶ್ವತವಾದ ಪರಮಪದವು ಲಭಿಸುವುದು.)" ಹೀಗೆ ಹೇಳಿ ಇಂದ್ರಾಗ್ನಿಗಳು ತಮ್ಮ ಪೂರ್ವರೂಪಗಳನ್ನು ಧರಿಸಿ ಸ್ವರ್ಗಕ್ಕೆ ತೆರಳಿದರು.

ಈ ರೀತಿಯಲ್ಲಿ ಧರ್ಮಾತ್ಮನಾದ ಉಶೀನರನು ತನ್ನ ಧರ್ಮದಿಂದಲೂ ಕೀರ್ತಿಯಿಂದಲೂ ದಶದಿಕ್ಕುಗಳನ್ನೂ ತುಂಬಿ ಕಾಲಾಂತರದಲ್ಲಿ ದೇದೀಪ್ಯಮಾನವಾದ ಶರೀರವನ್ನು ಧರಿಸಿದವನಾಗಿ ಸ್ವರ್ಗಾರೋಹಣ ಮಾಡಿದನು.

ಇಲ್ಲಿ ನೋಡು, ಯುಧಿಷ್ಠಿರ! ಈ ಆಶ್ರಮದಲ್ಲಿಯೇ ಉಶೀನರನು ವಾಸವಾಗಿದ್ದನು. ಈ ಪವಿತ್ರಾಶ್ರಮದಲ್ಲಿ ಇಂದಿಗೂ ದೇವತೆಗಳೂ ಮತ್ತು ಋಷಿ-ಮಹರ್ಷಿಗಳೂ ಪುಣ್ಯವಂತರಾದ ಮತ್ತು ಮಹಾತ್ಮರಾದ ಬ್ರಾಹ್ಮಣರಿಗೆ ಕಾಣಿಸಿಕೊಳ್ಳುತ್ತಾರೆ."

೧೩೧ನೆಯ ಅಧ್ಯಾಯವು ಮುಗಿಯಿತು.

೧೩೨ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಅಷ್ಟಾವಕ್ರನ ಜನ್ಮವೃತ್ತಾಂತ : ಅಷ್ಟಾವಕ್ರನು ಜನಕನ ಸಭೆಗೆ ಹೋದುದು

ಲೋಮಶರು ತೀರ್ಥಕ್ಷೇತ್ರಗಳ ಇತಿಹಾಸವನ್ನು ಮುಂದುವರಿಸಿ ಹೇಳುತ್ತಾರೆ :

"ಇತ್ತ ನೋಡು, ಯುಧಿಷ್ಠಿರ! ಇದು ಉದ್ದಾಲಕನ ಪುತ್ರನಾದ

ಶ್ವೇತಕೇತುಮಹರ್ಷಿಯ ದಿವ್ಯಾಶ್ರಮ. ಆ ಮಹರ್ಷಿಯು ಅನೇಕ ಮಹಾ ಮಂತ್ರಗಳ ದ್ರಷ್ಟಾರನೆಂದು ಪ್ರಪಂಚದಲ್ಲಿ ಪ್ರಸಿದ್ಧಿಹೊಂದಿರುತ್ತಾನೆ. ಅವನ ಆಶ್ರಮಭೂಮಿಯು ಸರ್ವದಾ ಫಲಭರಿತವಾದ ವೃಕ್ಷಗಳಿಂದ ತುಂಬಿರು ವುದು. ಈ ಪವಿತ್ರಾಶ್ರಮದಲ್ಲಿಯೇ ಶ್ವೇತಕೇತುವು ಮಾನುಷರೂಪವನ್ನು ಧರಿಸಿದ್ದ ಸರಸ್ವತೀದೇವಿಯನ್ನು ಸಾಕ್ಷಾತ್ತಾಗಿ ಸಂದರ್ಶಿಸಿ–'ದೇವಿ! ನನ್ನನ್ನು ವಾಗ್ಮಿಯಾಗುವಂತೆ ಅನುಗ್ರಹಿಸು. ನಾನು ನಿನ್ನ ಅನುಗ್ರಹದಿಂದ ದಿವ್ಯವಾಣಿ ಯನ್ನು ತಿಳಿಯುತ್ತೇನೆ'–ಎಂದು ಪ್ರಾರ್ಥಿಸಿದನು.

ಸರಸ್ವತಿಯು 'ತಥಾಸ್ತು' ಎಂದಳು.

ಉದ್ದಾಲಕನ ಮಗನಾದ ಶ್ವೇತಕೇತುವೂ, ಕಹೋಡಮಹರ್ಷಿಯ ಮಗನಾದ ಅಷ್ಟಾವಕ್ರನೂ ಪರಸ್ಪರ ಸಂಬಂಧಿಗಳಾಗಿದ್ದರು. ಶ್ವೇತಕೇತುವು ಅಷ್ಟಾವಕ್ರನ ಸೋದರಮಾವನು. ಅವರಿಬ್ಬರೂ ಬ್ರಹ್ಮನಿಷ್ಠರೂ, ಬ್ರಹ್ಮ ವಿದ್ಯೆಯಲ್ಲಿ ನಿಷ್ಣಾತರೂ ಆಗಿದ್ದರು. ಇಬ್ಬರೂ ಸಕಲಶಾಸ್ತ್ರಪಾರಂಗತ ರಾಗಿದ್ದರು. ಒಂದಾನೊಂದು ಸಮಯದಲ್ಲಿ ಮಹಾಪ್ರಭಾವಶಾಲಿಗಳಾದ ಸೋದರಳಿಯ-ಸೋದರಮಾವಂದಿರಿಬ್ಬರೂ ಜನಕರಾಜನ ಯಜ್ಞಮಂಟಪಕ್ಕೆ ಹೋಗಿ ಅಲ್ಲಿ ಮಹಾವಿದ್ವಾಂಸನೆನಿಸಿದ್ದ ವಂದಿಯನ್ನು ವಾದದಲ್ಲಿ ಸೋಲಿಸಿದರು.

ಅಷ್ಟಾವಕ್ರನ ಮಾತಾಮಹನಾದ ಉದ್ದಾಲಕನ ಪುಣ್ಯತಮವಾದ ಆಶ್ರಮವನ್ನು ಪ್ರವೇಶಿಸಿ ನಿನ್ನ ಅನುಜರೊಡನೆ ಭಗವಚ್ಚಿಂತನೆಯನ್ನು ಮಾಡು, ಯುಧಿಷ್ಠಿರ! ಅಷ್ಟಾವಕ್ರನು ಮಹಾಪ್ರತಿಭಾವಂತನು. ಇನ್ನೂ ಚಿಕ್ಕವನಾಗಿದ್ದಾಗಲೇ ಜನಕನ ಸಭೆಗೆ ಹೋಗಿ ಅತಿಗರ್ವಿಷ್ಟನಾಗಿದ್ದ ವಂದಿ ಯನ್ನು ವಾದದಲ್ಲಿ ಸೋಲಿಸಿ ಪೂರ್ವಕೃತನಿರ್ಣಯದಂತೆ ವಂದಿಯನ್ನು ನದಿಗೆ ತಳ್ಳಿಸಿಬಿಟ್ಟನು."

ಯುಧಿಷ್ಠಿರನು ಪ್ರಶ್ನಿಸುತ್ತಾನೆ :

"ಲೋಮಶರೇ! ನನಗೆ ಮಹಾಮಹಿಮನಾದ ಅಷ್ಟಾವಕ್ರನ ಸುಚರಿತೆ ಯನ್ನು ಸ್ವಲ್ಪ ವಿಸ್ತರಿಸಿ ಹೇಳಿರಿ. ಅಷ್ಟಾವಕ್ರನಿಗಿದ್ದ ಮೇಧಾಶಕ್ತಿಯೆಷ್ಟು? ಅವನಿಗೆ ವಂದಿಯನ್ನು ವಾದದಲ್ಲಿ ಸೋಲಿಸಲು ಹೇಗೆ ಸಾಧ್ಯವಾಯಿತು?

ಅವನು ಅಷ್ಟಾವಕ್ರನಾಗಿ (ಎಂಟು ಭಾಗಗಳಲ್ಲಿ ವಕ್ರತೆಯುಳ್ಳವನಾಗಿ) ಏಕೆ ಹುಟ್ಟಿದನು? ಎಲ್ಲವನ್ನೂ ವಿಶದವಾಗಿ ಹೇಳಿರಿ."

"ಯುಧಿಷ್ಠಿರ! ಉದ್ದಾಲಕಮಹರ್ಷಿಗೆ ಕಹೋಡನೆಂಬ ಶಿಷ್ಯನಿದ್ದನು. ಅವನು ಜಿತೇಂದ್ರಿಯನಾಗಿದ್ದನು ಮತ್ತು ಸರ್ವದಾ ಗುರುಶುಶ್ರೂಷೆಯಲ್ಲಿಯೇ ನಿರತನಾಗಿದ್ದನು. ಅವನು ಬಹುಕಾಲದವರೆಗೂ ವಿದ್ಯಾಭ್ಯಾಸ ಮಾಡುತ್ತಲೇ ಇದ್ದನು. ಶಿಷ್ಯನ ಅನವರತವಾದ ಮತ್ತು ಬಹುಕಾಲದ ಸೇವೆಯನ್ನು ಮನಗಂಡು ಆಚಾರ್ಯನಾದ ಉದ್ದಾಲಕನು ತನ್ನ ಮಗಳಾದ ಸುಜಾತೆಯನ್ನು ಕಹೋಡನಿಗೆ ಮದುವೆಮಾಡಿಕೊಟ್ಟು ಅವನಿಗೆ ಸಕಲಶಾಸ್ತ್ರಗಳನ್ನೂ ಉಪದೇಶಿಸಿದನು. ಕಾಲಾನುಕ್ರಮದಲ್ಲಿ ಸುಜಾತೆಯು ಗರ್ಭಿಣಿಯಾದಳು. ಸುಜಾತೆಯ ಅಗ್ನಿಸದೃಶವಾದ ಗರ್ಭವು (ಗರ್ಭದಲ್ಲಿದ್ದ ಶಿಶುವು) ಒಂದಾನೊಂದು ದಿನ ತನ್ನ ತಂದೆಯಾದ ಕಹೋಡಮುನಿಗೆ ಹೇಳಿತು :

ಸರ್ವಾಂ ರಾತ್ರಿಮಧ್ಯಯನಂ ಕರೋಷಿ
ನೇದಂ ಪಿತಃ ಸಮ್ಯಗಿವೋಪವರ್ತತೇ ॥೧೦॥

"ತಂದೆಯೇ! ನೀನು ಇಡೀ ರಾತ್ರಿ ವೇದಾಧ್ಯಯನವನ್ನು ಮಾಡುತ್ತಿರುವೆ. ಆದರೆ ನೀನು ಮಾಡುತ್ತಿರುವ ಅಧ್ಯಯನಕ್ರಮವು ಸರಿಯಾಗಿರುವುದೆಂದು ನನಗನ್ನಿಸುತ್ತಿಲ್ಲ. (ರಾತ್ರಿಯೆಲ್ಲಾ ಅಧ್ಯಯನಮಾಡುವುದು ಸರಿಯಲ್ಲ.) ನಾನಿನ್ನೂ ಭ್ರೂಣದ ಅವಸ್ಥೆಯಲ್ಲಿರುವಾಗಲೇ ನಿನ್ನ ಅನುಗ್ರಹದಿಂದಾಗಿ ವೇದ-ವೇದಾಂಗಗಳನ್ನೂ, ಸಕಲಶಾಸ್ತ್ರಗಳನ್ನೂ ತಿಳಿದವನಾಗಿರುವೆನು. ನಿನ್ನ ಮುಖಾರವಿಂದದಿಂದ ಹೊರಬರುತ್ತಿರುವ ವಾಣಿಯು ಶುದ್ಧವಾಗಿರುವುದಿಲ್ಲ."

ಅನೇಕಶಿಷ್ಯರ ಮಧ್ಯದಲ್ಲಿ ಕುಳಿತಿದ್ದ ಕಹೋಡನನ್ನು ಗರ್ಭದಲ್ಲಿದ್ದ ಶಿಶುವು ಮೇಲೆ ಹೇಳಿದ ರೀತಿಯಲ್ಲಿ ನಿಂದಿಸಲಾಗಿ ಕಹೋಡನಿಗೆ ಕೋಪ ಬಂದು ಅವನು ತಾಯಿಯ ಹೊಟ್ಟೆಯಲ್ಲಿದ್ದ ಶಿಶುವನ್ನು ಶಪಿಸಿದನು :

ಯಸ್ಮಾತ್ಕುಕ್ಷೌ ವರ್ತಮಾನೋ ಬ್ರವೀಷಿ
ತಸ್ಮಾದ್ವಕ್ರೋ ಭವಿತಾಸ್ಯಷ್ಟಕೃತ್ವಃ ॥೧೧॥

"ನೀನಿನ್ನೂ ಹೊಟ್ಟೆಯಲ್ಲಿರುವಾಗಲೇ ಇತರರ ದೋಷವನ್ನೆತ್ತಿ

ಹೇಳಿದೆಯಾದುದರಿಂದ ನಿನ್ನ ದೇಹವು ಎಂಟು ಕಡೆಗಳಲ್ಲಿ ವಕ್ರತೆಯನ್ನು ಹೊಂದಲಿ." (ಎಂಟು ಕಡೆ ವಕ್ರತೆಯಿಂದ ಕೂಡಿದ ಶರೀರವನ್ನು ಧರಿಸಿ ಜನಿಸು.)

ಕಹೋಡನಿತ್ತ ಶಾಪದಂತೆಯೇ ಜನಿಸಿದ ಶಿಶುವಿನ ದೇಹದ ಎಂಟು ಕಡೆಗಳಲ್ಲಿ ವಕ್ರತೆಯಿದ್ದಿತು. ಆದುದರಿಂದ ಆ ಶಿಶುವಿಗೆ ಅಷ್ಟಾವಕ್ರನೆಂದೇ ನಾಮಕರಣವಾಯಿತು.

ಯುಧಿಷ್ಠಿರ! ನಾನು ಹಿಂದೆಯೇ ಹೇಳಿದಂತೆ ಉದ್ದಾಲಕನಿಗೆ ಶ್ವೇತಕೇತುವೆಂಬ ಮಗನಿದ್ದನು. ಸೋದರಮಾವನಾದ ಶ್ವೇತಕೇತುವು ಅಷ್ಟಾವಕ್ರನ ಸಮವಯಸ್ಕನಾಗಿದ್ದನು.

ಅಷ್ಟಾವಕ್ರನು ಹುಟ್ಟುವ ಮೊದಲು ನಡೆದ ಒಂದು ದಾರುಣ ವೃತ್ತಾಂತವನ್ನು ಹೇಳುವೆನು ; ಕೇಳು :

ಅಷ್ಟಾವಕ್ರನಿನ್ನೂ ಹುಟ್ಟಿರಲಿಲ್ಲ. ಸುಜಾತೆಯು ಸುಮಾರು ಒಂಬತ್ತು ತಿಂಗಳ ಗರ್ಭಿಣಿಯಾಗಿದ್ದಳು. ಕಹೋಡನು ಅನವರತವೂ ಅಧ್ಯಯನ-ಅಧ್ಯಾಪನಗಳಲ್ಲಿಯೇ ಇದ್ದುಬಿಟ್ಟನೇ ಹೊರತು ಐಶ್ವರ್ಯಸಂಪಾದನೆಗಾಗಿ ಯತ್ನವನ್ನೇ ಮಾಡಲಿಲ್ಲ. ಸುಜಾತೆಯು ಒಂದು ದಿನ ಗಂಡನನ್ನು ಏಕಾಂತದಲ್ಲಿ ಕರೆದು ಹೇಳಿದಳು : "ಪತಿದೇವ! ನನಗೆ ಹತ್ತನೆಯ ಮಾಸವು ಸಮೀಪಿಸುತ್ತಿದೆ. ಶಿಶುವು ಹುಟ್ಟಿದನಂತರ ಜಾತಕರ್ಮ-ನಾಮಕರಣಾದಿಗಳು ಯಥಾವಿಧಿಯಾಗಿ ನಡೆಯಬೇಕು. ಅದಕ್ಕೆ ಸ್ವಲ್ಪವಾದರೂ ಐಶ್ವರ್ಯ ವಿರಬೇಡವೇ? ಸ್ವಲ್ಪವಾದರೂ ದ್ರವ್ಯವೇ ಇಲ್ಲದೇ ನಾನು ಹೇಗೆತಾನೇ ಸುಧಾರಿಸಲಿ?"

ಋಷಿ-ಮಹರ್ಷಿಗಳಿಗೆ ಐಶ್ವರ್ಯವು ರಾಜನಿಂದ ತಾನೇ ಸಿಕ್ಕಬೇಕು! ಸುಜಾತೆಯ ಮಾತಿನಂತೆ ದ್ರವ್ಯಸಂಪಾದನೆಗಾಗಿ ಕಹೋಡನು ಜನಕರಾಜನ ಆಸ್ಥಾನಕ್ಕೆ ತೆರಳಿದನು. ಜನಕನ ಆಸ್ಥಾನದಲ್ಲಿ ಕಹೋಡನು ವಂದಿ ಎಂಬ ಮಹಾಪಂಡಿತನೊಡನೆ ವಾದದಲ್ಲಿ ತೊಡಗಬೇಕಾಯಿತು. ವಂದಿಯು ತರ್ಕ ಶಾಸ್ತ್ರದಲ್ಲಿ ಮಹಾಪ್ರವೀಣನಾಗಿದ್ದನು. ಕಹೋಡನಿಗೆ ಸ್ವಾಭಾವಿಕವಾಗಿಯೇ ವಾಕ್ಕಿನಲ್ಲಿ ದೋಷವಿದ್ದುದರಿಂದ ವಂದಿಯನ್ನು ಗೆಲ್ಲಲಾಗಲಿಲ್ಲ. ವಂದಿಯು

ವಾದದಲ್ಲಿ ಸೋತುಹೋದ ಕಹೋಡನ ಕೈಕಾಲುಗಳನ್ನು ಕಟ್ಟಿಸಿ ನದಿಗೆ ತಳ್ಳಿಸಿಬಿಟ್ಟನು.

ತನ್ನ ಅಳಿಯನು ವಂದಿಯೊಡನೆ ವಾದದಲ್ಲಿ ಸೋತುಹೋದ ವಿಷಯವೂ ಮತ್ತು ತತ್ಪರಿಣಾಮವಾಗಿ ಅವನನ್ನು ನದಿಗೆ ತಳ್ಳಿಸಿದ ವಿಷಯವೂ ಉದ್ದಾಲಕನಿಗೆ ತಿಳಿಯಿತು. ಬಹುದುಃಖಿತನಾದ ಉದ್ದಾಲಕನು ಮಗಳನ್ನು ಕರೆದು ವಿಷಯವನ್ನು ಹೇಳಿ–ಈ ವಿಷಯವನ್ನು ಮುಂದೆ ಹುಟ್ಟುವ ಶಿಶುವಿನಿಂದ ರಹಸ್ಯವಾಗಿಡಬೇಕೆಂದೂ, ಅವನಿಗೆ ಈ ವಿಷಯವನ್ನು ಸರ್ವಥಾ ತಿಳಿಸಕೂಡದೆಂದೂ–ಹೇಳಿದ್ದನು. ತಂದೆಯ ಮಾತಿನಂತೆ ಸುಜಾತೆಯು ಆ ವಿಷಯವನ್ನು ಬಹಿರಂಗಪಡಿಸಲಿಲ್ಲ. ಆದುದರಿಂದಲೇ ಅಷ್ಟಾವಕ್ರನು ಹುಟ್ಟಿದ ಅನೇಕ ವರ್ಷಗಳವರೆಗೆ ಆ ವಿಷಯವು ಅವನಿಗೆ ತಿಳಿದೇ ಇರಲಿಲ್ಲ. ಹುಟ್ಟಿದ ಶಿಶುವಿಗೆ ಉದ್ದಾಲಕನೇ ಜಾತಕರ್ಮ-ನಾಮಕರಣಾದಿಗಳನ್ನು ಮಾಡಿದುದರಿಂದ ಅಷ್ಟಾವಕ್ರನು ಉದ್ದಾಲಕನನ್ನೇ ತನ್ನ ತಂದೆಯೆಂದೂ–ಶ್ವೇತಕೇತುವನ್ನೇ ತನ್ನ ಸಹೋದರನೆಂದೂ ತಿಳಿದುಬಿಟ್ಟನು. ಅಷ್ಟಾವಕ್ರನಿಗೆ ಹನ್ನೆರಡು ವರ್ಷಗಳು ತುಂಬಿದುವು. ಎಂದಿನಂತೆ ಅಷ್ಟಾವಕ್ರನು ಉದ್ದಾಲಕನ ತೊಡೆಯ ಮೇಲೆ ಕುಳಿತು ಮಾತಾಮಹನೊಡನೆ ಶಾಸ್ತ್ರಾರ್ಥಗಳನ್ನು ತರ್ಕಿಸುತ್ತಿದ್ದನು. ಅನುದಿನವೂ ಹೀಗೆಯೇ ನಡೆಯುತ್ತಿದ್ದರೂ ಕಾಲಕರ್ಮಸಂಯೋಗವೋ ಎಂಬಂತೆ ಅಂದು ಅಷ್ಟಾವಕ್ರನು ತನ್ನ ತಂದೆಯ ತೊಡೆಯ ಮೇಲೆ ಕುಳಿತಿದ್ದುದು ಶ್ವೇತಕೇತುವಿಗೆ ಸಹ್ಯವಾಗಲಿಲ್ಲ. ಶ್ವೇತಕೇತುವು ಒಡನೆಯೇ ಅಷ್ಟಾವಕ್ರನ ತೋಳನ್ನು ಹಿಡಿದೆಳೆದನು. ಅಷ್ಟಾವಕ್ರನು ಅಳತೊಡಗಿದನು. ಆದರೂ ಬಿಡದೇ ಅವನನ್ನು ಉದ್ದಾಲಕನ ತೊಡೆಯಿಂದ ಕೆಳಕ್ಕೆ ತಳ್ಳಿ ತಾನು ತನ್ನ ತಂದೆಯ ತೊಡೆಯ ಮೇಲೆ ಕುಳಿತು ಅಷ್ಟಾವಕ್ರನನ್ನು ಕುರಿತು ಹೇಳತೊಡಗಿದನು :

"ಅಷ್ಟಾವಕ್ರ! ಈ ತೊಡೆಯು ನಿನ್ನ ತಂದೆಯ ತೊಡೆಯಲ್ಲ. ನನ್ನ ತಂದೆಯ ತೊಡೆ. ನನ್ನ ತಂದೆಯ ತೊಡೆಯ ಮೇಲೆ ನಾನು ಕುಳಿತುಕೊಳ್ಳಬೇಕು."

ಹನ್ನೆರಡು ವರ್ಷಗಳು ಕಳೆದಿದ್ದರೂ ಅಷ್ಟಾವಕ್ರನಿಗೆ ಉದ್ದಾಲಕನು

ತನ್ನ ತಂದೆಯಲ್ಲವೆಂಬ ವಿಷಯವೇ ತಿಳಿಯದಾಗಿತ್ತು. ತನ್ನಣ್ಣನೆಂದೇ ಅದು ವರೆಗೂ ಭಾವಿಸಿದ್ದ ಶ್ವೇತಕೇತುವಿನ ಆ ಮಾತನ್ನು ಕೇಳಿ ಅಷ್ಟಾವಕ್ರನ ಹೃದಯವು ದಾರುಣವಾದ ಯಾತನೆಯನ್ನನುಭವಿಸಿತು. ಒಡನೆಯೇ ಅಷ್ಟಾವಕ್ರನು ಮನೆಗೆ ಹೋಗಿ–'ನನ್ನ ತಂದೆಯೆಲ್ಲಮ್ಮಾ?'–ಎಂದು ತಾಯಿಯನ್ನು



ಕೇಳಿದನು. ಮಗನ ಆ ಪ್ರಶ್ನೆಯನ್ನು ಕೇಳಿದೊಡನೆಯೇ ಸುಜಾತೆಯು ಉದ್ವಿಗ್ನಳಾದಳು. ಒಂದೆಡೆಯಲ್ಲಿ ದುಃಖವೂ ಮತ್ತೊಂದೆಡೆಯಲ್ಲಿ ಮಗನೆಲ್ಲಿ ಶಪಿಸಿಬಿಡುವನೋ ಎಂಬ ಭಯವೂ ಉಂಟಾಯಿತು. ಮಗನೊಡನೆ ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ಹೇಳಿಬಿಟ್ಟಳು. ಆ ವಿಷಯಗಳೆಲ್ಲವನ್ನೂ ಕೇಳಿದನಂತರ ಅಷ್ಟಾವಕ್ರನು ದೀರ್ಘವಾಗಿ ನಿಟ್ಟುಸಿರುಬಿಟ್ಟು ಅಂದು ರಾತ್ರಿಯೇ ತನ್ನ ಸೋದರಮಾವನಾದ ಶ್ವೇತಕೇತುವಿಗೆ ಹೀಗೆಂದು ಹೇಳಿದನು:

"ಮಾತುಲ! ಜನಕರಾಜನ ಯಜ್ಞವು ಅತ್ಯಾಶ್ಚರ್ಯಕರವಾದ ಸಂಗತಿಗಳಿಂದ ಕೂಡಿರುವುದೆಂದು ಕೇಳಿದ್ದೇನೆ. ಅವೆಲ್ಲವನ್ನೂ ನೋಡ ಬೇಕೆಂದು ನನ್ನ ಇಚ್ಛೆಯಾಗಿದೆ. ಇಬ್ಬರೂ ನಾಳೆಯೇ ಪ್ರಯಾಣಮಾಡೋಣ. ಬ್ರಾಹ್ಮಣರು ಪರಸ್ಪರವಾಗಿ ಶಾಸ್ತ್ರಾರ್ಥಗಳ ಮೇಲೆ ನಡೆಸುವ ವಾಗ್ವಾದಗಳ ಸರಣಿಯನ್ನು ಕೇಳೋಣ. ಪುಷ್ಕಳವಾದ ಮೃಷ್ಟಾನ್ನ ಭೋಜನ ಸಮಾರಂಭದಲ್ಲಿ ಭಾಗವಹಿಸೋಣ. ವಿದ್ವಾಂಸರ ವಾದ-ವಿವಾದಗಳನ್ನು ಕೇಳುವುದರಿಂದ ನಮ್ಮ ಜ್ಞಾನವೂ ಹೆಚ್ಚುತ್ತದೆ. ಅಲ್ಲಿ ಮಾಡುವ ವೇದಘೋಷಗಳ ಶ್ರವಣವು ಕರ್ಣಾನಂದಕರವಾಗಿರುವುದಲ್ಲದೇ–ಉದಾತ್ತಾನುದಾತ್ತ-ಸ್ವರಿತಸ್ವರಗಳೊಡನೆ ಹೇಳುವ ವೇದಘೋಷವನ್ನು ಕೇಳುವುದರಿಂದ ನಮಗೆ ಶ್ರೇಯಸ್ಸೂ ಉಂಟಾಗುತ್ತದೆ."

ಅಷ್ಟಾವಕ್ರನ ಮಾತಿಗೆ ಶ್ವೇತಕೇತುವೂ ಒಪ್ಪಿದನು. ಮರುದಿನವೇ ಜನಕನ ರಾಜಧಾನಿಗೆ ಸೋದರಮಾವ-ಸೋದರಳಿಯಂದಿರು ಪ್ರಯಾಣ ಮಾಡಿದರು. ಅತ್ಯಂತಶೋಭಾಯಮಾನವಾಗಿದ್ದ, ಸಕಲಸಾಮಗ್ರಿಗಳಿಂದಲೂ ಸಮೃದ್ಧವಾಗಿದ್ದ ಜನಕರಾಜನ ಯಜ್ಞಶಾಲೆಯ ಕಡೆಗೆ ಹೋಗುತ್ತಿದ್ದರು. ಮಹಾ ದ್ವಾರವನ್ನು ಪ್ರವೇಶಿಸುತ್ತಿದ್ದಾಗಲೇ ರಾಜನೂ ಆ ಮಹಾದ್ವಾರದ ಮೂಲಕ ವಾಗಿ ಯಜ್ಞಶಾಲೆಗೆ ಹೋಗುತ್ತಿದ್ದನು. ರಾಜನಿಗೆ ದಾರಿಬಿಡುವಂತೆ ಸೇವಕ ರಿಂದ ನಿರ್ದೇಶಿತನಾದ ಅಷ್ಟಾವಕ್ರನು ಜನಕರಾಜನೊಡನೆ ಹೇಳತೊಡಗಿದನು.

೧೩೨ನೆಯ ಅಧ್ಯಾಯವು ಮುಗಿಯಿತು.

೧೩೩ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಜನಕರಾಜನೊಡನೆಯೂ–ದ್ವಾರಪಾಲಕನೊಡನೆಯೂ ಅಷ್ಟಾವಕ್ರನ ಸಂಭಾಷಣೆ

ಧರ್ಮಜ! ಅಷ್ಟಾವಕ್ರನು ರಾಜನನ್ನು ಉದ್ದೇಶಿಸಿ ಹೇಳುತ್ತಾನೆ :

**ಅನ್ಧಸ್ಯ ಪನ್ಥಾ ಬಧಿರಸ್ಯ ಪನ್ಥಾಃ**
**ಸ್ತ್ರಿಯಃ ಪನ್ಥಾ ಭಾರವಾಹಸ್ಯ ಪನ್ಥಾಃ ।**

**ರಾಜ್ಞಃ ಪನ್ಥಾ ಬ್ರಾಹ್ಮಣೇನಾಸಮೇತ್ಯ**
**ಸಮೇತ್ಯ ತು ಬ್ರಾಹ್ಮಣಸ್ಯೈವ ಪನ್ಥಾಃ ॥೧॥**

(ದೊಡ್ಡವರಾಗಲೀ, ಮುದುಕರಾಗಲೀ, ಸ್ತ್ರೀಯರಾಗಲೀ–ಬರುತ್ತಿದ್ದರೆ ಅವರಿಗೆ ದಾರಿಯನ್ನು ಬಿಟ್ಟು ನಡೆಯುವ ಸಂಪ್ರದಾಯವು ನಮ್ಮಲ್ಲಿ ಬಹಳ ಕಾಲದಿಂದಲೂ ನಡೆದುಬಂದಿರುವುದು. ಈ ವಿಷಯವನ್ನೇ ಅಷ್ಟಾವಕ್ರನು ರಾಜನೊಡನೆ ಹೇಳುತ್ತಾನೆ.)

"ಮಹಾರಾಜ! ಕುರುಡನಾದವನಿಗೆ ದಾರಿಯನ್ನು ಬಿಟ್ಟುಕೊಟ್ಟು ಅವನಿಗೆ ಮುಂದಿನ ದಾರಿಯನ್ನು ತೋರಿಸಬೇಕು. ಕಿವುಡನಾದವನು ಹೋಗುತ್ತಿದ್ದರೆ ಅವನಿಗೆ ದಾರಿಯನ್ನು ಬಿಟ್ಟುಕೊಡಬೇಕು. ಸ್ತ್ರೀಯರು ಬಂದರೆ, ದೊಡ್ಡದಾದ ಹೊರೆಯನ್ನು ಹೊತ್ತಿರುವವನು ಬಂದರೆ–ಅವರಿಗೆ ಪುರಸ್ಕಾರವನ್ನು ಕೊಟ್ಟು ಹಾದಿಯನ್ನು ಬಿಟ್ಟುಕೊಡಬೇಕು. ರಾಜನು ಎದುರಾಗಿ ಬಂದಾಗ ರಾಜನಿಗೆ ಪುರಸ್ಕಾರವನ್ನಿತ್ತು ಹಾದಿಯನ್ನು ಬಿಡಬೇಕು. ಆದರೆ ಬ್ರಾಹ್ಮಣನು ಎದುರಾಗಿ ಬಂದರೆ ರಾಜನು ಬ್ರಾಹ್ಮಣನಿಗೆ ಪ್ರಾಮುಖ್ಯವನ್ನು ಕೊಟ್ಟು ಹಾದಿಯನ್ನು ಅವನಿಗೇ ಬಿಟ್ಟುಕೊಡಬೇಕು."

ಅದಕ್ಕುತ್ತರವಾಗಿ ರಾಜನು ಹೇಳುತ್ತಾನೆ :

**ಪನ್ಥಾ ಅಯಂ ತೇಽದ್ಯ ಮಯಾತಿದಿಷ್ಟೋ**
**ಯೇನೇಚ್ಛಸಿ ತೇನ ಕಾಮಂ ವ್ರಜಸ್ವ ।**
**ನ ಪಾವಕೋ ವಿದ್ಯತೇ ವೈ ಲಘೀಯಾ–**
**ನಿನ್ದ್ರೋಽಪಿ ನಿತ್ಯಂ ನಮತೇ ಬ್ರಾಹ್ಮಣಾನಾಮ್ ॥೨॥**

"ಬ್ರಾಹ್ಮಣೋತ್ತಮನೇ! ನೀನು ಹೇಳುತ್ತಿರುವುದು ನಿಜ. ಈ ಹಾದಿಯನ್ನು ನಿನಗಾಗಿಯೇ ಬಿಟ್ಟುಕೊಟ್ಟಿದ್ದೇನೆ. ನೀನು ಈ ಹಾದಿಯಲ್ಲಿ ಮುಂದೆ ಹೋಗಿ ನಿನ್ನ ಇಚ್ಛೆಯಿದ್ದಲ್ಲಿಗೆ ಹೋಗಬಹುದು. ಅಗ್ನಿಯಲ್ಲಿ ಲಾಘವತ್ವವೆಂಬುದೇ ಇಲ್ಲ. (ಚಿಕ್ಕದು-ದೊಡ್ಡದೆಂಬ ತಾರತಮ್ಯವೇ ಇಲ್ಲ.) ದೇವೇಂದ್ರನು ಅನುದಿನವೂ ಬ್ರಾಹ್ಮಣರನ್ನು ನಮಸ್ಕರಿಸುತ್ತಾನೆ."

ಅಷ್ಟಾವಕ್ರನು ಮುಂದುವರಿದು ಹೇಳಿದನು :

ಪ್ರಾಪ್ತೌ ಸ್ವ ಯಜ್ಞಂ ನೃಪ ಸಂದಿದೃಕ್ಷೂ
ಕೌತೂಹಲಂ ನೌ ಬಲವನ್ನರೇನ್ದ್ರ ।
ಪ್ರಾಪ್ತಾವಿಹಾವಾಮತಿಥೀ ಪ್ರವೇಶಂ
ಕಾಂಕ್ಷಾವಹೇ ದ್ವಾರಪತೇಸ್ತವಾಜ್ಞಾಮ್ ॥೩॥

ಐನ್ದ್ರದ್ಯುಮ್ನೇ ಯಜ್ಞದೃಶಾವಿಹಾವಾಂ
ವಿವಕ್ಷೂ ವೈ ಜನಕೇನ್ದ್ರಂ ದಿದೃಕ್ಷೂ ।
ತೌ ವೈ ಕ್ರೋಧವ್ಯಾಧಿನಾ ದಹ್ಯಮಾನಾ-
ವಯಂ ಚ ನೌ ದ್ವಾರಪಾಲೋ ರುಣದ್ಧಿ ॥೪॥

"ಇಂದ್ರದ್ಯುಮ್ನಕುಮಾರನೇ! ಜನಕ! ನಾವು ನಿನ್ನ ಯಾಗವನ್ನು ನೋಡುವ ಸಲುವಾಗಿ ಇಲ್ಲಿಗೆ ಬಂದಿರುತ್ತೇವೆ. ನಿನ್ನ ಯಾಗವನ್ನು ನೋಡಬೇಕೆಂದು ನಮಗೆ ಬಹಳ ಕುತೂಹಲವಿದೆ. ಯಜ್ಞವನ್ನು ನೋಡುವ ಸಲುವಾಗಿಯೂ ಮತ್ತು ಯಜಮಾನನಾದ ಜನಕನನ್ನು (ನಿನ್ನನ್ನು) ನೋಡಿ ಮಾತನಾಡುವ ಸಲುವಾಗಿಯೂ ನಾವಿಲ್ಲಿಗೆ ಬಂದಿರುತ್ತೇವೆ. ಆದರೆ ನಿನ್ನ ದ್ವಾರಪಾಲಕನು ಮಾತ್ರ ನಮ್ಮನ್ನು ಒಳಗೆ ಬಿಡಲೊಲ್ಲನು. ಇದರಿಂದಾಗಿ ನಾವು ಕೋಪಾಗ್ನಿಯಿಂದ ಸುಟ್ಟುಹೋಗುತ್ತಿದ್ದೇವೆ. (ನಾವು ಕುಪಿತರಾಗಿದ್ದೇವೆ.)"

ಅಷ್ಟಾವಕ್ರನು ರಾಜನೊಡನೆ ಹೇಳಿದ ಮಾತುಗಳನ್ನು ಕೇಳಿ ದ್ವಾರಪಾಲಕನೇ ನೇರವಾಗಿ ಅಷ್ಟಾವಕ್ರನಿಗೆ ಉತ್ತರಿಸಿದನು :

ವನ್ದೇಃ ಸಮಾದೇಶಕರಾ ವಯಂ ಸ್ಮ
ನಿಬೋಧ ವಾಕ್ಯಂ ಚ ಮಯೇರ್ಯಮಾಣಮ್ ।
ನ ವೈ ಬಾಲಾಃ ಪ್ರವಿಶನ್ತ್ಯತ್ರ ವಿಪ್ರಾ
ವೃದ್ಧಾ ವಿದಗ್ಧಾಃ ಪ್ರವಿಶನ್ತ್ಯತ್ರ ವಿಪ್ರಾಃ ॥೫॥

"ಬ್ರಾಹ್ಮಣವಟುವೇ! ಮಹಾವಿದ್ವಾಂಸನಾದ ವಂದಿಯ ಆಜ್ಞಾಧಾರಕರಾಗಿ ನಾವಿಲ್ಲಿ ನಿಂತಿದ್ದೇವೆ. ನಾನು ಹೇಳುವುದನ್ನು ಸಾವಧಾನದಿಂದ ಕೇಳುವವನಾಗು. ಕುಪಿತನಾಗಬೇಡ. ಈ ಸಭಾಮಂದಿರದೊಳಕ್ಕೆ ಬಾಲಕರು

ಪ್ರವೇಶಿಸುವಂತಿಲ್ಲ. ಜ್ಞಾನವೃದ್ಧರಾದ ಮತ್ತು ವಯೋವೃದ್ಧರಾದ ಬ್ರಾಹ್ಮಣರಿಗೆ ಮಾತ್ರವೇ ಇಲ್ಲಿ ಪ್ರವೇಶವಿದೆ.”

ಅದಕ್ಕುತ್ತರವಾಗಿ ಅಷ್ಟಾವಕ್ರನು ಹೇಳುತ್ತಾನೆ :



ಯದ್ಯತ್ರ ವೃದ್ಧೇಷು ಕೃತಃ ಪ್ರವೇಶೋ
ಯುಕ್ತಂ ಪ್ರವೇಷ್ಟುಂ ಮಮ ದ್ವಾರಪಾಲ ।
ವಯಂ ಹಿ ವೃದ್ಧಾಶ್ಚರಿತವ್ರತಾಶ್ಚ
ವೇದಪ್ರಭಾವೇಣ ಸಮನ್ವಿತಾಶ್ಚ ॥೬॥

ಶುಶ್ರೂಷವಶ್ಚಾಪಿ ಜಿತೇನ್ದ್ರಿಯಾಶ್ಚ
ಜ್ಞಾನಾಗಮೇ ಚಾಪಿ ಗತಾಃ ಸ್ಮ ನಿಷ್ಠಾಮ್ ।

**ನ ಬಾಲ ಇತ್ಯವಮನ್ತವ್ಯಮಾಹು-**
**ರ್ಬಾಲೋಽಪ್ಯಗ್ನಿರ್ದಹತಿ ಸ್ಪೃಶ್ಯಮಾನಃ ॥೭॥**

"ದ್ವಾರಪಾಲಕನೇ! ವೃದ್ಧರಿಗೆ ಇಲ್ಲಿ ಪ್ರವೇಶವಿದೆಯೆನ್ನುವುದಾದರೆ– ನಮಗೂ ಇಲ್ಲಿ ಪ್ರವೇಶಿಸಲು ಅಧಿಕಾರವಿದ್ದೇ ಇರುವುದು. ಹೇಗೆಂದರೆ : ನಾವು ಜ್ಞಾನವೃದ್ಧರಾಗಿದ್ದೇವೆ. ವ್ರತಾನುಷ್ಠಾನಗಳನ್ನು ನಿಯಮದಿಂದ ಮಾಡಿ ಮುಗಿಸಿರುತ್ತೇವೆ. ವೇದ-ವೇದಾಂಗಗಳನ್ನೂ ಅಧ್ಯಯನಮಾಡಿ ವೇದ ಪ್ರಭಾವದಿಂದಲೂ ಕೂಡಿದವರಾಗಿದ್ದೇವೆ. ಮೇಲಾಗಿ ನಾವು ನಮ್ಮ ಗುರುಜನರ ಶುಶ್ರೂಷೆಯಲ್ಲಿ ನಿರತರಾಗಿದ್ದೇವೆ. ಜಿತೇಂದ್ರಿಯರಾಗಿದ್ದೇವೆ. ಜ್ಞಾನಯೋಗದಲ್ಲಿಯೂ ಪ್ರಾವೀಣ್ಯವನ್ನು ಹೊಂದಿದವರಾಗಿದ್ದೇವೆ. ನಾವು ನಿನ್ನ ಕಣ್ಣಿಗೆ ಬಾಲಕರಾಗಿ ಕಂಡಮಾತ್ರಕ್ಕೆ ನೀನು ನಮ್ಮನ್ನು ಉಪೇಕ್ಷಿಸಬಾರದು. ಅಗ್ನಿಯ ಕಣವು ಎಷ್ಟೇ ಚಿಕ್ಕದಾಗಿದ್ದರೂ ಅದನ್ನು ಮುಟ್ಟಿದೊಡನೆಯೇ ಮುಟ್ಟಿದವನನ್ನು ಸುಡುತ್ತದೆಯಲ್ಲವೇ?"

(ದ್ವಾರಪಾಲಕನಾದರೂ ಅವನು ಪಂಡಿತನೂ ಆಗಿದ್ದನು. ಅಂತೆಯೇ ಅಷ್ಟಾವಕ್ರನಿಗೆ ಹೇಳುತ್ತಾನೆ : )

**ಸರಸ್ವತೀಮೀರಯ ವೇದಜುಷ್ಟಾ-**
**ಮೇಕಾಕ್ಷರಾಂ ಬಹುರೂಪಾಂ ವಿರಾಜಮ್ ।**
**ಅಜಾಗ್ಮಾತ್ಮಾನಂ ಸಮವೇಕ್ಷಸ್ವ ಬಾಲಂ**
**ಕಿಂ ಶ್ಲಾಘಸೇ ದುರ್ಲಭೋ ವೈ ಮನೀಷೀ ॥೮॥**

"ಗೆಳೆಯನೇ! ನೀನು ವೇದ-ವೇದಾಂಗಗಳನ್ನು ಪೂರ್ಣವಾಗಿ ಅಧ್ಯಯನಮಾಡಿರುವೆಯಾದರೆ ವೇದಪ್ರತಿಪಾದ್ಯವಾದ, ಏಕಾಕ್ಷರವಾದ, ಏಕಾಕ್ಷರವಾದರೂ ಸರ್ವತ್ರ ವ್ಯಾಪ್ತವಾಗಿರುವ ವಾಣಿಯನ್ನು ಹೇಳು. (ಓಂಕಾರರೂಪವಾದ ಬ್ರಹ್ಮತತ್ತ್ವವನ್ನು ಪ್ರತಿಪಾದನೆಮಾಡು.) ನೀನಿನ್ನೂ ಬಾಲಕನೆಂಬುದನ್ನು ಮರೆಯಬೇಡ. ವ್ಯರ್ಥವಾಗಿ ಆತ್ಮಶ್ಲಾಘನೆಯಿಂದ ಪ್ರಯೋಜನವಿಲ್ಲ. ದುರ್ಲಭೋ ವೈ ಮನೀಷೀ-ಲೋಕದಲ್ಲಿ-ಜ್ಞಾನಿಗಳಾದವರು ಸಿಕ್ಕುವುದು ದುರ್ಲಭ."

ಅಷ್ಟಾವಕ್ರ :

ನ ಜ್ಞಾಯತೇ ಕಾಯವೃದ್ಧ್ಯಾ ವಿವೃದ್ಧಿ-
ರ್ಯಥಾಷ್ಠೀಲಾ ಶಾಲ್ಮಲೇಃ ಸಮ್ಪ್ರವೃದ್ಧಾ ।
ಹ್ರಸ್ವೋಽಲ್ಪಕಾಯಃ ಫಲಿತೋ ವಿವೃದ್ಧೋ
ಯಶ್ಚಾಫಲಸ್ತಸ್ಯ ನ ವೃದ್ಧಭಾವಃ ॥೯॥

"ದ್ವಾರಪಾಲಕನೇ! ಕೇವಲ ಶರೀರವೃದ್ಧಿಯಿಂದ (ವಯಸ್ಸಾಗಿರುವಿಕೆಯಿಂದ) ಜ್ಞಾನವೃದ್ಧಿಯಾಗುವುದೆಂದು ಸಿದ್ಧಾಂತಮಾಡುವ ಸಾಧ್ಯತೆ ಯಿಲ್ಲ. ದೊಡ್ಡದಾದ, ಮುದಿಯಾದ ಬೂರುಗದ ಮರದಲ್ಲೂ ಅನೇಕವಾದ ಫಲಗಳೇ ಬಿಡುತ್ತವೆ. ಆದರೆ ಆ ಫಲಗಳಲ್ಲಿರುವುದು ನಿಸ್ಸಾರವಾದ ಗ್ರಂಥಿಗಳು. ವೃಕ್ಷವು ಸಣ್ಣದಾಗಿದ್ದರೂ ರಸಯುಕ್ತವಾದ ಫಲಗಳಿಂದ ಕೂಡಿದ್ದಾದರೆ ಅದನ್ನು ಪೂರ್ಣಫಲಯುಕ್ತವಾದ ವೃಕ್ಷವೆಂದು ಹೇಳುತ್ತಾರೆ. ವೃಕ್ಷವು ದೊಡ್ಡದಾಗಿದ್ದರೂ ಫಲಯುಕ್ತವಾಗಿಲ್ಲದಿದ್ದರೆ ಆ ವೃಕ್ಷವು ವೃಕ್ಷವೆಂದೇ ಪರಿಗಣಿಸಲ್ಪಡುವುದಿಲ್ಲ. ಅಂತಹ ವೃಕ್ಷವು ಎಲ್ಲಿಯೋ ಹುಟ್ಟಿ ಹೇಗೋ ಬೆಳೆದು ಕಾಲಾಂತರದಲ್ಲಿ ಒಣಗಿಹೋಗುವುದೇ ಹೊರತು ಅಂತಹ ವೃಕ್ಷವನ್ನು ಯಾರೂ ಲಕ್ಷಿಸುವುದಿಲ್ಲ. (ಆದುದರಿಂದ ಮನುಷ್ಯನ ವಯಸ್ಸಿಗೆ ಅಥವಾ ಬೆಳವಣಿಗೆಗೆ ಬೆಲೆ ಕೊಡುವುದು ಸಾಧುವಲ್ಲ.)"

ದ್ವಾರಪಾಲಕನು ಹೇಳುತ್ತಾನೆ :

ವೃದ್ಧೇಭ್ಯ ಏವೇಹ ಮತಿಂ ಸ್ಮ ಬಾಲಾ
ಗೃಹ್ಣನ್ತಿ ಕಾಲೇನ ಭವನ್ತಿ ವೃದ್ಧಾಃ ।
ನ ಹಿ ಜ್ಞಾನಮಲ್ಪಕಾಲೇನ ಶಕ್ಯಂ
ಕಸ್ಮಾದ್ಬಾಲಃ ಸ್ಥವಿರ ಇವ ಪ್ರಭಾಷಸೇ ॥೧೦॥

"ಬ್ರಾಹ್ಮಣವಟುವೇ! ಲೋಕದಲ್ಲಿ ಸಂಪ್ರದಾಯವು ಈ ರೀತಿಯಾಗಿರುವುದು : ವೃದ್ಧರಿಂದಲೇ ಬಾಲಕರು ಜ್ಞಾನವನ್ನು ಪಡೆಯುತ್ತಾರೆ. ಕಾಲಕ್ರಮದಲ್ಲಿ ಆ ಬಾಲಕರೂ ವೃದ್ಧರಾಗಿ ಇತರರಿಗೆ ಜ್ಞಾನೋಪದೇಶ ಮಾಡುತ್ತಾರೆ. ಜ್ಞಾನವು ಅತ್ಯಲ್ಪಕಾಲದಲ್ಲಿ ಲಭ್ಯವಾಗತಕ್ಕುದಲ್ಲ. ಅನವರತವಾದ ಗುರುಶುಶ್ರೂಷೆಯಿಂದಲೂ, ಜಿಜ್ಞಾಸೆ ಮತ್ತು ಸಾಧನೆಗಳಿಂದಲೂ ಲಭ್ಯ

ವಾಗುವುದು. ಹೀಗಿರುವಾಗ ನೀನಿನ್ನೂ ಕೇವಲ ಬಾಲಕನಾಗಿದ್ದು ವಯೋ ವೃದ್ಧನಂತೇಕೆ ಮಾತನಾಡುತ್ತಿರುವೆ?"

ಅಷ್ಟಾವಕ್ರನು ಹೇಳುತ್ತಾನೆ :

**ನ ತೇನ ಸ್ಥವಿರೋ ಭವತಿ ಯೇನಾಸ್ಯ ಪಲಿತಂ ಶಿರಃ ।**
**ಬಾಲೋಽಪಿ ಯಃ ಪ್ರಜಾನಾತಿ ತಂ ದೇವಾಃ ಸ್ಥವಿರಂ ವಿದುಃ ॥೧೧॥**

"ತಲೆಯು ನರೆತುಹೋದಮಾತ್ರಕ್ಕೆ ಆ ಮನುಷ್ಯನು (ಜ್ಞಾನ) ವೃದ್ಧನಾಗಿಬಿಡುವುದಿಲ್ಲ. ಬಾಲಕನಾದರೂ ಜ್ಞಾನಿಯಾಗಿದ್ದರೆ ಅಂತಹವ ನನ್ನೇ ದೇವತೆಗಳೂ (ಜ್ಞಾನ) ವೃದ್ಧನೆಂದು ತಿಳಿಯುತ್ತಾರೆ.

**ನ ಹಾಯನೈರ್ನ ಪಲಿತೈರ್ನ ವಿತ್ತೇನ ನ ಬನ್ಧುಭಿಃ ।**
**ಋಷಯಶ್ಚಕ್ರಿರೇ ಧರ್ಮಂ ಯೋಽನೂಚಾನಃ ಸ ನೋ ಮಹಾನ್ ॥**

ಋಷಿಗಳು ಮನುಷ್ಯನ ಮಹತ್ತ್ವವನ್ನು ವಯಸ್ಸಿನಿಂದಾಗಲೀ, ನರೆತ ಕೂದಲಿನಿಂದಾಗಲೀ, ಐಶ್ವರ್ಯದಿಂದಾಗಲೀ, ಸಂಪದ್ಯುಕ್ತರಾದ ಬಂಧು ಗಳನ್ನು ಪಡೆದಿರುವುದರಿಂದಾಗಲೀ–ನಿಶ್ಚಯಿಸಿಲ್ಲ. ಯಾವನು ಸಾಂಗ ವೇದಾಧ್ಯಯನಮಾಡಿರುವನೋ ಮತ್ತು ವಾಗ್ಮಿಯೋ–ಅವನೇ ಶ್ರೇಷ್ಠನೆಂಬ ಧರ್ಮಮಾರ್ಗವನ್ನು ಋಷಿಗಳು ಸಿದ್ಧಮಾಡಿರುವರು.

ನಾನಿಲ್ಲಿಗೆ ವಂದಿಪಂಡಿತನನ್ನು ರಾಜನ ಆಸ್ಥಾನದಲ್ಲಿ ಕಾಣುವ ಆಶಯ ದಿಂದಲೇ ಬಂದಿರುತ್ತೇನೆ. ನಾನಿಲ್ಲಿಗೆ ಬಂದಿರುವ ವಿಷಯವನ್ನು ಪುಷ್ಕರ ಮಾಲೆಯನ್ನು ಧರಿಸಿರುವ ರಾಜನಿಗೆ ತಿಳಿಸು. ನಾನಿಂದು ವಿದ್ವಾಂಸರೊಡನೆ ತರ್ಕಮಾಡುವುದನ್ನು ನೀನೇ ನೋಡುವೆ. ವಂದಿಯನ್ನೂ ನಾನಿಂದು ವಾದ ದಲ್ಲಿ ಸೋಲಿಸುತ್ತೇನೆ. ನನ್ನೊಡನೆ ವಾದಮಾಡಲು ಬರುವವರೆಲ್ಲರನ್ನೂ ವಾಕ್ಶೂನ್ಯರನ್ನಾಗಿ ಮಾಡಿದನಂತರವೇ ಪರಿಪೂರ್ಣವಿದ್ಯಾವಂತರಾದ ಬ್ರಾಹ್ಮಣರು, ಅಮಾತ್ಯರು, ಪುರೋಹಿತರು, ಮಹಾರಾಜನಾದ ಜನಕ– ಇವರೆಲ್ಲರೂ ನನಗಿರುವ ಜ್ಞಾನವು ಉಚ್ಚವೇ? ನೀಚವೇ?–ಎಂಬುದನ್ನು ನಿರ್ಧರಿಸಲಿ."

"ಬ್ರಹ್ಮಚಾರಿಯೇ! ನೀನು ಹೇಳುವುದೆಲ್ಲವೂ ಸರಿಯೇ. ಆದರೂ ಕೇವಲ ಹತ್ತು ವರ್ಷದ ಬಾಲಕನು ಈ ಮಹಾಯಾಗಮಂಟಪಕ್ಕೆ ಪ್ರವೇ

ಶಿಸಲು ಹೇಗೆತಾನೇ ಸಾಧ್ಯವಾದೀತು? ಈ ಯಾಗಮಂಟಪಕ್ಕೆ ವೃದ್ಧರಾದ ವಿದ್ವಾಂಸರಿಗೆ ಮಾತ್ರ ಪ್ರವೇಶಾವಕಾಶವಿರುವುದು. ಆದರೂ ನಿನ್ನ ಪ್ರವೇಶಕ್ಕೆ ಹೇಗಾದರೂ ಮಾಡಿ ಅವಕಾಶವನ್ನು ಕಲ್ಪಿಸಿಕೊಡುತ್ತೇನೆ. ನೀನೂ ರಾಜನ ಮೂಲಕವಾಗಿ ಪ್ರವೇಶಾವಕಾಶವನ್ನು ಪಡೆಯಲು ಯತ್ನಿಸು."

ದ್ವಾರಪಾಲಕನು ಹೀಗೆ ಹೇಳಿದನಂತರ ಅಷ್ಟಾವಕ್ರನು ರಾಜನ ಕಡೆಗೆ ತಿರುಗಿ ಹೇಳಿದನು :

**ಭೋ ಭೋ ರಾಜಞ್ಜನಕಾನಾಂ ವರಿಷ್ಠ**
**ತ್ವಂ ವೈ ಸಮ್ರಾಟ್ ತ್ವಯಿ ಸರ್ವಂ ಸಮೃದ್ಧಮ್ ।**
**ತ್ವಂ ವಾ ಕರ್ತಾ ಕರ್ಮಣಾಂ ಯಜ್ಞಿಯಾನಾಂ**
**ಯಯಾತಿರೇಕೋ ನೃಪತಿರ್ವಾ ಪುರಸ್ತಾತ್ ॥೧೭॥**

**ವೃದ್ಧಾನ್ವನ್ದೀ ವಾದವಿದೋ ನಿಗೃಹ್ಯ**
**ವಾದೇ ಭಗ್ನಾನಪ್ರತಿಶಙ್ಕಮಾನಃ ।**
**ತ್ವಯಾಭಿಸೃಷ್ಟೈಃ ಪುರುಷೈರಾಪ್ತಕೃದ್ಭಿ-**
**ರ್ಜಲೇ ಸರ್ವಾನ್ಮಜ್ಜಯತೀತಿ ನಃ ಶ್ರುತಮ್ ॥೧೮॥**

**ಸೋಽಹಂ ಶ್ರುತ್ವಾ ಬ್ರಾಹ್ಮಣಾನಾಂ ಸಕಾಶಾ-**
**ದ್ಬ್ರಹ್ಮಾದ್ವೈತಂ ಕಥಯಿತುಮಾಗತೋಽಸ್ಮಿ ।**
**ಕ್ವಾಸೌ ವನ್ದೀ ಯಾವದೇನಂ ಸಮೇತ್ಯ**
**ನಕ್ಷತ್ರಾಣೀವ ಸವಿತಾ ನಾಶಯಾಮಿ ॥೧೯॥**

"ಜನಕವಂಶದಲ್ಲಿ ಶ್ರೇಷ್ಠನಾದ ರಾಜನೇ! ನೀನು ಚಕ್ರವರ್ತಿಯಾಗಿರುವೆ. ನಿನ್ನಲ್ಲಿಯೇ ಸಕಲೈಶ್ವರ್ಯಗಳೂ ಪರಿಪೂರ್ಣವಾಗಿವೆ. ಹಿಂದೆ ಯಯಾತಿಯು ಯಜ್ಞಮಾಡುವವರಲ್ಲಿ ಶ್ರೇಷ್ಠನೆನಿಸಿದ್ದಂತೆ ಈಗಿನ ಕಾಲದಲ್ಲಿ ಯಜ್ಞಮಾಡುವವರಲ್ಲಿ ನೀನು ಶ್ರೇಷ್ಠನೆನಿಸಿರುವೆ. ನಾವು ನಿನ್ನ ರಾಜಸಭೆಯಲ್ಲಿ ಬಹಳ ದಿನಗಳಿಂದಲೂ ನಡೆಯುತ್ತಿರುವ ವೃತ್ತಾಂತವೊಂದನ್ನು ತಿಳಿದು ಇಲ್ಲಿಗೆ ಬಂದಿರುತ್ತೇವೆ. ನಿನ್ನ ಆಸ್ಥಾನದಲ್ಲಿರುವ ವಂದಿಯೆಂಬ ಮಹಾವಿದ್ವಾಂಸನೊಬ್ಬನು ತನ್ನೊಡನೆ ವಾದಮಾಡಲು ಬರುವವರೆಲ್ಲರನ್ನೂ ವಾದದಲ್ಲಿ ಸೋಲಿಸಿ ಅನಂತರದಲ್ಲಿ ನಿನ್ನಿಂದ ನಿಯುಕ್ತರಾದ,

ಆಪ್ತರಾದ ಪುರುಷರ ಮೂಲಕವಾಗಿ ನದಿಯಲ್ಲಿ ಹಾಕಿಸಿಬಿಡುವನೆಂದು ಕೇಳಿದ್ದೇವೆ. ಈ ವೃತ್ತಾಂತವನ್ನು ನಾವು ಬ್ರಾಹ್ಮಣರ ಮೂಲಕ ಕೇಳಿ ಬ್ರಹ್ಮಾದ್ವೈತದ ವಿಷಯವಾಗಿ ತರ್ಕಮಾಡಲು ಇಲ್ಲಿಗೆ ಬಂದಿರುತ್ತೇವೆ. ಆ ವಂದಿಯು ಎಲ್ಲಿರುವನೆಂಬುದನ್ನು ಕೂಡಲೇ ಹೇಳು, ಮಹಾರಾಜ! ಸೂರ್ಯನು ಹುಟ್ಟಿದೊಡನೆಯೇ ಮಿನುಗುಟ್ಟುವ ನಕ್ಷತ್ರಗಳ ಪ್ರಕಾಶವನ್ನು ವಿನಾಶಮಾಡಿಬಿಡುವಂತೆ (ನಕ್ಷತ್ರಗಳು ಕಾಣದಂತೆ ಮಾಡುವಂತೆ)– ನಾನೀಗಲೇ ಅವನೊಡನೆ ವಾದಮಾಡಿ ಅವನ ಸೊಕ್ಕನ್ನು ಮುರಿಯುತ್ತೇನೆ. ಅವನ ಪ್ರಭಾವವನ್ನು ನಾಶಗೊಳಿಸುತ್ತೇನೆ.”

ಜನಕನು ಹೇಳುತ್ತಾನೆ :

ನಾಶಂಸಸೇ ವನ್ದಿನಂ ವೈ ವಿಜೇತು–
ಮವಿಜ್ಞಾಯ ತ್ವಂ ವಾಕ್ಯಬಲಂ ಪರಸ್ಯ ।
ವಿಜ್ಞಾತವೀರ್ಯೈಃ ಶಕ್ಯಮೇವಂ ಪ್ರವಕ್ತುಂ
ದೃಷ್ಟಶ್ಚಾಸೌ ಬ್ರಾಹ್ಮಣೈರ್ವೇದಶೀಲೈಃ ॥೨೦॥

ಆಶಂಸಸೇ ತ್ವಂ ವನ್ದಿನಂ ವೈ ವಿಜೇತು–
ಮವಿಜ್ಞಾಯ ತು ಬಲಂ ವನ್ದಿನೋಽಸ್ಯ ।
ಸಮಾಗತಾ ಬ್ರಾಹ್ಮಣಾಸ್ತೇನ ಪೂರ್ವಂ
ನ ಶೋಭನ್ತೇ ಭಾಸ್ಕರೇಣೇವ ತಾರಾಃ ॥೨೧॥

ಆಶಂಸನ್ತೋ ವನ್ದಿನಂ ಜೇತುಕಾಮಾ–
ಸ್ತಸ್ಯಾನ್ತಿಕಂ ಪ್ರಾಪ್ಯ ವಿಲುಪ್ತಶೋಭಾಃ ।
ವಿಜ್ಞಾನಮತ್ತಾ ನಿಃಸೃತಾಶ್ಚೈವ ತಾತ
ಕಥಂ ಸದಸ್ಯೈರ್ವಚನಂ ವಿಸ್ತರೇಯುಃ ॥೨೨॥

“ಬ್ರಾಹ್ಮಣವಟುವೇ! ನೀನು ಪ್ರತಿಕಕ್ಷಿಯ ವಾಗ್ಬಲವನ್ನು ತಿಳಿಯದ ಕಾರಣ ವಂದಿಯನ್ನು ಸೋಲಿಸಲು ಕಾತರನಾಗಿರುವೆ. ಅವನ ವಾಗ್ಬಲ ವೆಷ್ಟಿದೆಯೆಂದು ತಿಳಿದಿದ್ದರೆ ನೀನು ಈ ಮಾತನಾಡುತ್ತಿರಲಿಲ್ಲ. ಅವನ ವಾಕ್ಶಕ್ತಿಯನ್ನು ತಿಳಿದಿರುವ ಯಾವ ವಿದ್ವಾಂಸರು ತಾನೇ ನಿನ್ನಂತೆ ಹೀಗೆ

ಮಾತನಾಡುವರು? ವಂದಿಯನ್ನು ವೇದ-ವೇದಾಂಗಪಾರಂಗತರಾದ ವಿದ್ವಾಂಸರೇ ವಾದದಲ್ಲಿ ಎದುರಿಸಿರುತ್ತಾರೆ. ಆದರೆ ಅವನ ವಾಗ್ಬಲದ ಮುಂದೆ ನಿಲ್ಲಲಾರದೇ ಅವರೆಲ್ಲರೂ ಸೋಲನ್ನೊಪ್ಪಿಕೊಂಡಿರುತ್ತಾರೆ. ನೀನಾದರೋ ಇಂದು ವಂದಿಯ ವಾಗ್ಬಲವೆಷ್ಟೆಂಬುದನ್ನು ತಿಳಿಯದೇ ಇರುವುದರಿಂದ ಅವ



ನನ್ನು ಸೋಲಿಸುವುದಾಗಿ ಆರ್ಭಟಿಸುತ್ತಿರುವೆ. ಅನೇಕ ಬ್ರಾಹ್ಮಣರೂ ಅವನೊಡನೆ ವಾದಮಾಡಲು ಬಂದು–ಸೂರ್ಯನಿಂದ ತೇಜಶ್ಶೂನ್ಯವಾಗಿ ಮಾಡಲ್ಪಟ್ಟ ನಕ್ಷತ್ರಗಳಂತೆ–ಪರಾಭೂತರಾಗಿ ಹೋದರು. ಹಿಂದೆಯೂ ವಿಜ್ಞಾನ ಮತ್ತರಾದ ಅನೇಕವಿದ್ವಾಂಸರು ನಿನ್ನಂತೆಯೇ ವಂದಿಯನ್ನು ಗೆಲ್ಲುವುದಾಗಿ

ಆರ್ಭಟಮಾಡುತ್ತಾ ಬಂದು ಅತ್ಯಲ್ಪಕಾಲದಲ್ಲಿಯೇ ಪರಾಜಯಹೊಂದಿದವರಾಗಿ, ಕಾಂತಿಹೀನರಾಗಿ ರಾಜಸಭೆಯಿಂದ ಹೊರಟುಹೋಗುತ್ತಿದ್ದರು. ಹೀಗಿರುವಾಗ ಸಭೆಯಲ್ಲಿದ್ದ ಇತರ ಸದಸ್ಯರೊಡನೆ ವಾದಮಾಡಲು ಅವಕಾಶವೆಲ್ಲಿ? ಆದುದರಿಂದ ವಂದಿಯೊಡನೆ ವಾದಕ್ಕೆ ಸಿದ್ಧನಾಗಬೇಕಾದರೆ ಈ ಎಲ್ಲ ವಿಷಯಗಳನ್ನೂ ಸಂಪೂರ್ಣವಾಗಿ ವಿವೇಚಿಸುವುದು ಉತ್ತಮ."

ಅಷ್ಟಾವಕ್ರನು ಹೇಳುತ್ತಾನೆ :

**ವಿವಾದಿತೋಽಸೌ ನ ಹಿ ಮಾದೃಶೈರ್ಹಿ**
**ಸಿಂಹೀಕೃತಸ್ತೇನ ವದತ್ಯಭೀತಃ ।**
**ಸಮೇತ್ಯ ಮಾಂ ನಿಹತಃ ಶೇಷ್ಯತೇಽದ್ಯ**
**ಮಾರ್ಗೇ ಭಗ್ನಂ ಶಕಟಮಿವಾಚಲಾಕ್ಷಮ್ ॥೨೩॥**

"ಮಹಾರಾಜ! ವಂದಿಯು ಇದುವರೆಗೆ ನನ್ನಂತಹವರನ್ನು ಸಂಧಿಸದಿರುವುದೇ ಅವನ ಈ ದರ್ಪಕ್ಕೆ ಕಾರಣವಾಗಿದೆ. ಈ ಕಾರಣದಿಂದಲೇ ಅವನು ತನ್ನನ್ನು ಸಿಂಹವೆಂದೇ ಭಾವಿಸಿ ಸಿಂಹದಂತೆಯೇ ಗರ್ಜನೆಮಾಡು ತ್ತಿರುವನು. ಇಂದಿನ ದಿನ ಅವನು ನನ್ನನ್ನು ಸಂಧಿಸಿದರೆ ನನ್ನೊಡನೆ ವಾದಕ್ಕೆ ಬಂದು ಪರಾಜಿತನಾಗಿ–ಮಾರ್ಗಮಧ್ಯದಲ್ಲಿ ಅಚ್ಚುಮುರಿದ ಗಾಡಿಯಂತೆ– ಕೆಳಕ್ಕೆ ಬೀಳುತ್ತಾನೆ."

ಅಷ್ಟಾವಕ್ರನು ಇಷ್ಟು ಸ್ಪಷ್ಟವಾಗಿ ಹೇಳಿದರೂ ರಾಜನು ಹಿಂದಿನ ಅನುಭವದಿಂದ ಅಷ್ಟಾವಕ್ರನ ವಿದ್ಯೆಯ ವಿಷಯದಲ್ಲಿ ಸಂಶಯಾತ್ಮನಾಗಿಯೇ ಇದ್ದನು. ಅಷ್ಟಾವಕ್ರನನ್ನು ಪರೀಕ್ಷಿಸುವ ಸಲುವಾಗಿ ಸಮಸ್ಯಾತ್ಮಕವಾದ ಈ ಶ್ಲೋಕವನ್ನು ಹೇಳಿದನು :

**ತ್ರಿಂಶಕದ್ವಾದಶಾಂಶಸ್ಯ ಚತುರ್ವಿಂಶತಿಪರ್ವಣಃ ।**
**ಯಸ್ತ್ರಿಷಷ್ಟಿಶತಾರಸ್ಯ ವೇದಾರ್ಥಂ ಸ ಪರಃ ಕವಿಃ ॥೨೪॥**

"ಮೂವತ್ತು ಅಂಶಗಳನ್ನೂ, ಹನ್ನೆರಡು ವಿಭಾಗಗಳನ್ನೂ, ಇಪ್ಪತ್ತು ನಾಲ್ಕು ಪರ್ವಗಳನ್ನೂ ಮತ್ತು ಮುನ್ನೂರ ಅರುವತ್ತು ಅರೆಕಾಲುಗಳನ್ನೂ ಹೊಂದಿರುವ ಒಂದೇ ಒಂದು ವಸ್ತುವು ಯಾವುದೆಂಬುದನ್ನು ಯಾವನು ತಿಳಿದಿರುವನೋ ಮತ್ತು ಅವುಗಳಿಗೆ ಅರ್ಥವನ್ನು ಯಾವನು ತಿಳಿದಿರುವನೋ ಅವನೇ ಶ್ರೇಷ್ಠನಾದ ಕವಿಯು. (ವಿದ್ವಾಂಸನು.)"

(30 ದಿನಗಳು, 12 ಮಾಸಗಳು, 12 ಅಮಾವಾಸ್ಯೆ + 12 ಪೂರ್ಣಿಮೆಗಳು = 24 ಪರ್ವಗಳು (ಪಕ್ಷಗಳು) ಮತ್ತು 360 ದಿವಸಗಳು. ಇವುಗಳಿಷ್ಟೂ ಸೇರಿದ ಕಾಲವು ಸಂವತ್ಸರ. ಈ ಸಂವತ್ಸರದಲ್ಲಿ ಮೂರು ವಿಧವಾದ ಸಂವತ್ಸರಗಳಿವೆ. ಚಾಂದ್ರಮಾನ, ಸೌರಮಾನ ಮತ್ತು ಸಾವನ ಮಾನ. ಈ ಮೂರು ವಿಧವಾದ ಸಂವತ್ಸರಗಳನ್ನೂ ಅನುಸರಿಸಿ ಮಾಡ ಬೇಕಾದ ಕರ್ಮಗಳೂ ಅನೇಕವಾಗಿವೆ. ಸಂವತ್ಸರದಲ್ಲಿರುವ ಷಡೃತುಗಳು, ಇಪ್ಪತ್ತು ನಾಲ್ಕು ಪರ್ವಗಳು (ಪಕ್ಷಗಳು), ಹನ್ನೆರಡು ಮಾಸಗಳು, ಮುನ್ನೂರ ಅರುವತ್ತು ದಿನಗಳು–ಇವುಗಳಿಗೆ ಅನುಸಾರವಾಗಿ ನಮ್ಮ ದೇಹದಲ್ಲಿಯೂ ಷಟ್ಚಕ್ರಗಳೂ, ದ್ವಾದಶಗ್ರಂಥಿಗಳೂ, ಇಪ್ಪತ್ತುನಾಲ್ಕು ತತ್ತ್ವಗಳೂ ಇರುತ್ತವೆ. ಜ್ಞಾನಿಗಳು ಶರೀರವ್ಯಾಪಾರವನ್ನು ಸಂವತ್ಸರಕ್ಕೂ ಹೋಲಿಸುತ್ತಾರೆ.)

ರಾಜನ ಸಮಸ್ಯಾಪೂರ್ಣವಾದ ಶ್ಲೋಕಕ್ಕೆ ಉತ್ತರರೂಪವಾಗಿ ಅಷ್ಟಾವಕ್ರನೂ ಸಮಸ್ಯಾರೂಪವಾಗಿಯೇ ಹೇಳಿದನು :

**ಚತುರ್ವಿಂಶತಿಪರ್ವ ತ್ವಾಂ ಷಣ್ಣಾಭಿ ದ್ವಾದಶಪ್ರಧಿ ।**
**ತತ್ತ್ರಿಷಷ್ಟಿಶತಾರಂ ವೈ ಚಕ್ರಂ ಪಾತು ಸದಾಗತಿ ॥೨೫॥**

"ಯಾವುದು ಇಪ್ಪತ್ತುನಾಲ್ಕು ಪರ್ವಗಳಿಂದ (ಹನ್ನೆರಡು ಹುಣ್ಣಿಮೆಗಳು ಮತ್ತು ಹನ್ನೆರಡು ಅಮಾವಾಸ್ಯೆಗಳಿಂದ) ಕೂಡಿರುವುದೋ, ಆರು ನಾಭಿಗಳಿಂದಲೂ (ಆರು ಋತುಗಳಿಂದಲೂ ಅಥವಾ ಚಕ್ರದ ಗುಂಬ ಗಳಿಂದಲೂ), ಹನ್ನೆರಡು ಮಾಸಗಳಿಂದಲೂ (ದ್ವಾದಶಗ್ರಂಥಿಗಳಿಂದಲೂ), ಮುನ್ನೂರ ಅರುವತ್ತು ದಿವಸಗಳಿಂದಲೂ (ಅರೆಕಾಲುಗಳಿಂದಲೂ) ಕೂಡಿರು ವುದೋ–ಸದಾ ತಿರುಗುತ್ತಿರುವ ಅಂತಹ ಸಂವತ್ಸರರೂಪವಾದ ಚಕ್ರವು ನಿನ್ನನ್ನು ಕಾಪಾಡಲಿ. (ಷಟ್ಚಕ್ರಾತ್ಮಕವಾದ, ದ್ವಾದಶಗ್ರಂಥಿಯುಕ್ತವಾದ ಮತ್ತು ಇಪ್ಪತ್ತುನಾಲ್ಕು ತತ್ತ್ವಗಳಿಂದ ಕೂಡಿರುವ ಈ ಶರೀರದಲ್ಲಿ ಸಹಸ್ರಾರ ಚಕ್ರರೂಪ ನಾಗಿರುವ ಪರಮಾತ್ಮನು ನಿನ್ನನ್ನು ಕಾಪಾಡಲಿ.

ರಾಜನು ಮತ್ತೊಂದು ಸಮಸ್ಯಾತ್ಮಕವಾದ ಶ್ಲೋಕವನ್ನು ಹೇಳುತ್ತಾನೆ:

**ವಡವೇ ಇವ ಸಂಯುಕ್ತೇ ಶ್ಯೇನಪಾತೇ ದಿವೌಕಸಾಮ್ ।**
**ಕಸ್ತಯೋರ್ಗರ್ಭಮಾಧತ್ತೇ ಗರ್ಭಂ ಸುಷುವತುಶ್ಚ ಕಮ್ ॥೨೬॥**

"ಜೊತೆಗೂಡಿರುವ ಎರಡು ಕುದುರೆಗಳಂತಿರುವ, ಗಿಡಗದಂತೆ ಹಠಾತ್ತಾಗಿ ಮೇಲೆ ಬೀಳುವ ಸ್ವಭಾವವುಳ್ಳ ಯಾವ ಎರಡು ವಸ್ತುಗಳಿವೆ? ದೇವತೆಗಳ ಮಧ್ಯದಲ್ಲಿ ಯಾರು ಅವುಗಳಲ್ಲಿ ಗರ್ಭಧಾರಣೆಯಾಗುವಂತೆ ಮಾಡುತ್ತಾರೆ? ಅವೆರಡೂ ಏನನ್ನು ಪ್ರಸವಿಸುತ್ತವೆ?"

ಅಷ್ಟಾವಕ್ರನು ಉತ್ತರಿಸುತ್ತಾನೆ :

**ಮಾ ಸ್ಮ ತೇ ತೇ ಗೃಹೇ ರಾಜಞ್ಛಾತ್ರವಾಣಾಮಪಿ ಧ್ರುವಮ್ ।**
**ವಾತಸಾರಥಿರಾಗನ್ತಾ ಗರ್ಭಂ ಸುಷುವತುಶ್ಚ ತಮ್ ॥೨೭॥**

"ಮಹಾರಾಜ! ನಿನ್ನ ಮನೆಯಲ್ಲಾಗಲೀ, ನಿನ್ನ ಶತ್ರುಗಳ ಮನೆಯಲ್ಲಾಗಲೀ–ಎರಡು ಕುದುರೆಗಳಂತಿರುವ ವಿದ್ಯುದಶನಿಗಳ (ಮಿಂಚು-ಸಿಡಿಲುಗಳ) ಅಥವಾ ದುಃಖ-ಮೃತ್ಯುಗಳ ನಿಪಾತವಾಗದಿರಲಿ. ಗಾಳಿಯೇ ಸಾರಥಿಯಾಗಿರುವ ಮೇಘರಾಜನು ಅಥವಾ ಮನಸ್ಸು ಈ ಎರಡನ್ನೂ (ವಿದ್ಯುದಶನಿಗಳನ್ನು ಅಥವಾ ದುಃಖ-ಮೃತ್ಯುಗಳನ್ನು) ತನ್ನ ಗರ್ಭದಲ್ಲಿಟ್ಟುಕೊಂಡು ಹಠಾತ್ತಾಗಿ ಗಿಡಗಪಕ್ಷಿಯು ಬೀಳುವಂತೆ ಪ್ರಪಂಚದ ಮೇಲೆ ಬೀಳಿಸುತ್ತಾನೆ. ಗರ್ಭದಲ್ಲಿಯೇ ಅಡಗಿರುವ ದುಃಖ-ಮೃತ್ಯುಗಳು ಆಕಸ್ಮಿಕವಾಗಿ ಬಂದು ಆಘಾತವನ್ನುಂಟುಮಾಡುತ್ತವೆ." (ಮಿಂಚಿಲ್ಲದೇ ಸಿಡಿಲು ಬಡಿಯುವ ಸಾಧ್ಯತೆಯೇ ಇಲ್ಲ. ಇವೆರಡೂ ಯಾವಾಗಲೂ ಸೇರಿಯೇ ಇರುತ್ತವೆ. ಈ ಎರಡನ್ನೂ ಮೇಘವು ತನ್ನ ಗರ್ಭದಲ್ಲಿ ಧರಿಸಿರುತ್ತದೆ. ಸಿಡಿಲು ಬಡಿಯುವುದು ಆಕಸ್ಮಿಕ. ಈ ಶ್ಲೋಕಕ್ಕೆ ವ್ಯಾಖ್ಯಾನಕಾರರು ವೇದಾಂತದ ಪರವಾಗಿಯೂ ಅರ್ಥಮಾಡಿರುತ್ತಾರೆ. ಮನಸ್ಸೆಂಬ ಮೇಘವು ತನ್ನ ಗರ್ಭದಲ್ಲಿ ವಿದ್ಯುದಶನಿರೂಪಗಳಾದ ದುಃಖ-ಮೃತ್ಯುಗಳನ್ನು ಹೊಂದಿರುತ್ತದೆ.)

ರಾಜನಿಗೆ ಅಷ್ಟಾವಕ್ರನು ಹೇಳಿದ ಉತ್ತರವು ಸಮಾಧಾನಕರವಾಗಿ ಕಂಡಿತು. ಆದರೂ ಪ್ರಶ್ನೆಯನ್ನು ಅಷ್ಟಕ್ಕೇ ನಿಲ್ಲಿಸಲಿಲ್ಲ. ಮತ್ತೊಂದು ಪ್ರಶ್ನೆಯನ್ನು ಕೇಳಿದನು :

**ಕಿಂಸ್ವಿತ್ಸುಪ್ತಂ ನ ನಿಮಿಷತಿ ಕಿಂಸ್ವಿಜ್ಜಾತಂ ನ ಚೋಪತಿ ।**
**ಕಸ್ಯ ಸ್ವಿದ್ಧೃದಯಂ ನಾಸ್ತಿ ಕಿಂಸ್ವಿದ್ವೇಗೇನ ವರ್ಧತೇ ॥೨೮॥**

"ಯಾವ ಪ್ರಾಣಿಯು ನಿದ್ರಿಸುವಾಗಲೂ ಕಣ್ಣುಮುಚ್ಚಿರುವುದಿಲ್ಲ?

ಹುಟ್ಟಿದ ಮೇಲೂ ಚಲಿಸದೇ ಇರುವ ವಸ್ತುವು ಯಾವುದು? ಯಾವ ವಸ್ತುವಿಗೆ ಹೃದಯವಿಲ್ಲ ಮತ್ತು ವೇಗದಿಂದಲೇ ವರ್ಧಿಸುವುದು ಯಾವುದು?

**ಮತ್ಸ್ಯಃ ಸುಪ್ತೋ ನ ನಿಮಿಷತ್ಯಣ್ಡಂ ಜಾತಂ ನ ಚೋಪತಿ ।**
**ಅಶ್ಮನೋ ಹೃದಯಂ ನಾಸ್ತಿ ನದೀ ವೇಗೇನ ವರ್ಧತೇ ॥೨೯॥**

“ಮೀನುಗಳು ನಿದ್ರಿಸುವಾಗಲೂ ಕಣ್ಣುಮುಚ್ಚಿರುವುದಿಲ್ಲ. ತಾಯಿಯ ಗರ್ಭದಿಂದ ಹೊರಬಂದ ಮೊಟ್ಟೆಯು ಚಲಿಸುವುದಿಲ್ಲ. ಕಲ್ಲಿಗೆ ಹೃದಯವಿಲ್ಲ. ನದಿಯು ಪ್ರವಾಹವೇಗದಿಂದಲೇ ವರ್ಧಿಸುತ್ತದೆ.”

(ಕೇಳಿದ ಪ್ರಶ್ನೆಗಳಿಗೆ ಒಡನೆಯೇ ಇಷ್ಟು ನಿಷ್ಕೃಷ್ಟವಾದ ಉತ್ತರಗಳನ್ನು ಹೇಳುವುದು ಸುಲಭಸಾಧ್ಯವಲ್ಲ. ಅಪಾರವಾದ ವಿದ್ಯಾಭ್ಯಾಸಮಾಡಿದವನಿಗೆ ಮತ್ತು ಬುದ್ಧಿಕುಶಲತೆಯಿರುವವನಿಗೆ ಮಾತ್ರವೇ ಹೀಗೆ ಉತ್ತರಿಸಲು ಸಾಧ್ಯವಾಗುವುದು. ಈ ಶ್ಲೋಕಕ್ಕೂ ವೇದಾಂತಪರವಾಗಿಯೇ ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ. ಮತ್ಸ್ಯಃ –“**ಮಹಾನ್ಮತ್ಸ್ಯ ಉಭೇ ಕೂಲೇ ಅನುಸಂಚರತಿ**”–ಮೊದಲಾದ ಶ್ರುತ್ಯುಕ್ತಿಗಳಂತೆ–ಮತ್ಸ್ಯವೆಂದರೆ ಚಿದ್ರೂಪನಾದ ಪುರುಷನು ಜಾಗ್ರತ್ಸ್ವಪ್ನಗಳೆಂಬ ಎರಡು ದಡಗಳಲ್ಲಿಯೂ ಸಂಚರಿಸುತ್ತಿರುತ್ತಾನೆ. ಅಂಡಂ= ಬ್ರಹ್ಮಾಂಡವು ಚಲಿಸುವುದಿಲ್ಲ. ಆಶ್ಮಾ = ‘ಶ್ಮ’ ಎಂದರೆ ಶರೀರ. ( ಶ್ಮ ಶರೀರಮಿತಿ ಯಾಸ್ಕಃ ) ಶರೀರವಿಲ್ಲದವನು. ‘ಅಶ್ಮಾ’ ಎಂದರೆ ಶರೀರವನ್ನು ಬಿಟ್ಟ ಆತ್ಮನಿಗೆ (ಜ್ಯೋತಿಸ್ಸ್ವರೂಪನಾದ ಆತ್ಮನಿಗೆ) ಹೃದಯವಿಲ್ಲ. ಶರೀರದಲ್ಲಿ ಸೇರಿದ ಆತ್ಮನಿಗೆ ಹೃದಯಸಂಪರ್ಕವಿರುತ್ತದೆ. ಅಶರೀರಿಯಾದ ಆತ್ಮನಿಗೆ ಹೃದಯದ ಸಂಬಂಧವಿರುವುದಿಲ್ಲ. ನದೀ= ಯೋಗಿಯಿಂದ ನಿಯಂತ್ರಿತವಾದ ಚಿತ್ತನದಿಯು ಸಮಾಧಿಯ ಕಡೆಗೆ ವೇಗದಿಂದ ಧಾವಿಸುತ್ತದೆ.)

ಕಡೆಯ ಪ್ರಶ್ನೆಗೂ ನಿಷ್ಕೃಷ್ಟವಾದ ಉತ್ತರವನ್ನು ಅಷ್ಟಾವಕ್ರನು ಹೇಳಿದನಂತರ ರಾಜನು ಸಂತುಷ್ಟನಾಗಿ ಅಷ್ಟಾವಕ್ರನಿಗೆ ಹೇಳಿದನು :

**ನ ತ್ವಾಂ ಮನ್ಯೇ ಮಾನುಷಂ ದೇವಸತ್ವಂ**
**ನ ತ್ವಂ ಬಾಲಃ ಸ್ಥವಿರಃ ಸಮ್ಮತೋ ಮೇ ।**

**ನ ತೇ ತುಲ್ಯೋ ವಿದ್ಯತೇ ವಾಕ್ಪ್ರಲಾಪೇ**
**ತಸ್ಮಾದ್ದ್ವಾರಂ ವಿತರಾಮ್ಯೇಷ ವನ್ದೀ ॥೩೦॥**

"ಬ್ರಾಹ್ಮಣೋತ್ತಮನೇ! ದೇವತೆಗಳಿಗೆ ಸಮಾನವಾದ ಸತ್ತ್ವವುಳ್ಳ ನೀನು ಮನುಷ್ಯಮಾತ್ರನೇ ಅಲ್ಲವೆಂದು ನನಗೆ ಭಾಸವಾಗುತ್ತಿದೆ. ನನ್ನ ಸಮಸ್ಯಾತ್ಮಕವಾದ ಪ್ರಶ್ನೆಗಳಿಗೆ ಅನುರೂಪವಾದ ಉತ್ತರಗಳನ್ನು ನಿನ್ನಿಂದ ಕೇಳಿದ ಮೇಲೆ ನಾನು ನಿನ್ನನ್ನು ಬಾಲನೆಂದು ಖಂಡಿತವಾಗಿಯೂ ತಿಳಿಯುವುದಿಲ್ಲ. ನೀನು ಪರಿಪೂರ್ಣಪಾಂಡಿತ್ಯವನ್ನು ಪಡೆದಿರುವ, ಸಂಪೂರ್ಣಾನುಭವವನ್ನೂ ಪಡೆದಿರುವ ಸ್ಥವಿರ (ವೃದ್ಧ)ನಾಗಿರುವೆ. ವಾಗ್ವಾದದಲ್ಲಿ ನಿನ್ನ ಸಮಾನರಿಲ್ಲ. ಆದುದರಿಂದ ಯಜ್ಞಮಂಟಪಕ್ಕೆ ಹೋಗಲು ನಿನಗೆ ಅವಕಾಶವನ್ನು ಮಾಡಿಕೊಡುತ್ತೇನೆ. ಅಲ್ಲಿಯೇ ಆ ವಂದಿಪಂಡಿತನಿರುತ್ತಾನೆ. ಅವನನ್ನೂ ನೀನು ಕಾಣಬಹುದು."

೧೩೩ನೆಯ ಅಧ್ಯಾಯವು ಮುಗಿಯಿತು.

೧೩೪ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಅಷ್ಟಾವಕ್ರ ಮತ್ತು ವಂದಿಪಂಡಿತರ ನಡುವೆ ವಾಕ್ಯಾರ್ಥ : ವಂದಿಯ ಪರಾಭವ : ಸಮಂಗಾನದಿಯ ಸ್ನಾನದಿಂದ ಅಷ್ಟಾವಕ್ರನ ವಕ್ರಾಂಗಗಳು ಸರಿಹೋದುದು

ಅಷ್ಟಾವಕ್ರನು ರಾಜನನ್ನು ಕುರಿತು ಹೇಳುತ್ತಾನೆ :

**ಅತ್ರೋಗ್ರಸೇನ ಸಮಿತೇಷು ರಾಜ-**
**ನ್ಸಮಾಗತೇಷ್ವಪ್ರತಿಮೇಷು ರಾಜಸು ।**
**ನಾವ್ಯೈಮಿ ವನ್ದಿಂ ವರಮತ್ರ ವಾದಿನಾಂ**
**ಮಹಾಜಲೇ ಹಂಸಮಿವಾದದಾಮಿ ॥೧॥**

"ಉಗ್ರಸೇನಮಹಾರಾಜನೇ! (ಜನಕರಾಜ!) ಇಲ್ಲಿ ನೆರೆದಿರುವ ಅಪ್ರತಿಮರಾದ ರಾಜಾಧಿರಾಜರ ಮಧ್ಯದಲ್ಲಿ ಪ್ರತಿವಾದಿಭಯಂಕರನಾದ, ವಾದಿಗಳಲ್ಲಿ ಶ್ರೇಷ್ಠನಾದ ವಂದಿಯು ಯಾರೆಂಬುದನ್ನು ನಾನು ತಿಳಿದಿಲ್ಲ.

ಮಹಾಸರೋವರವೊಂದರಲ್ಲಿ ರಾಜಹಂಸವನ್ನು ಹಿಡಿಯುವ ರೀತಿಯಲ್ಲಿ ನಾನು ವಂದಿಯನ್ನಿಂದು ವಶಪಡಿಸಿಕೊಳ್ಳುತ್ತೇನೆ.”

ವಂದಿಯನ್ನು ಕಂಡನಂತರ ಅಷ್ಟಾವಕ್ರನು ಅವನನ್ನೇ ಉದ್ದೇಶಿಸಿ ಈ ಮಾತುಗಳನ್ನು ಹೇಳುತ್ತಾನೆ :

**ನ ಮೇಽದ್ಯ ವಕ್ಷ್ಯತಿವಾದಿಮಾನಿ–**
**ನ್ಗ್ಲಹಂ ಪ್ರಸನ್ನಃ ಸರಿತಾಮಿವಾಗಮಃ ।**
**ಹುತಾಶನಸ್ಯೇವ ಸಮಿದ್ಧತೇಜಸಃ**
**ಸ್ಥಿರೋ ಭವಸ್ವೇಹ ಮಮಾದ್ಯ ವನ್ದಿನ್ ॥೨॥**

“ಪ್ರತಿವಾದಿಭಯಂಕರನೆಂದೂ, ವಾದಮಾಡುವವರಲ್ಲಿ ಶ್ರೇಷ್ಠನೆಂದೂ ಭಾವಿಸಿರುವ ವಂದಿಯೇ! ನೀನು ನನ್ನೊಡನೆ ಪಣತೊಟ್ಟು ವಾದಕ್ಕೆ ಕುಳಿತಾಗ ನಿನ್ನ ಮಾತು ನಿಂತುಹೋಗುವುದು. ನದೀರೂಪವಾದ ನಿನ್ನ ವಾಕ್ಪ್ರವಾಹವು ಶುಷ್ಕವಾಗಿ ಹೋಗುವುದು. ಪ್ರಳಯಕಾಲದ ಅಗ್ನಿಯು ರಭಸದಿಂದ ಹರಿಯುವ ನದಿಯನ್ನೂ ಶೋಷಿಸಿಬಿಡುವಂತೆ–ನಿನ್ನ ವಾಕ್ಪ್ರವಾಹವನ್ನು ಹುತಾಶನನ ಮಹಾತೇಜಸ್ಸಿಗೆ ಸಮಾನವಾದ ನನ್ನ ತೇಜಸ್ಸಿನಿಂದ ಶೋಷಿಸಿಬಿಡುತ್ತೇನೆ. ಆದುದರಿಂದ ನನ್ನ ಮುಂದೆ ನೀನು ಅಚಲನಾಗಿ ವಾದಕ್ಕೆ ನಿಲ್ಲು.”

ಅಷ್ಟಾವಕ್ರನ ಚುಚ್ಚುಮಾತುಗಳನ್ನು ಕೇಳಿ ಕುಪಿತನಾದ ವಂದಿಯು ಹೇಳಿದನು :

**ವ್ಯಾಘ್ರಂ ಶಯಾನಂ ಪ್ರತಿ ಮಾ ಪ್ರಬೋಧಯ**
**ಆಶೀವಿಷಂ ಸೃಕ್ಕಿಣೀ ಲೇಲಿಹಾನಮ್ ।**
**ಪದಾಹತಸ್ಯೇಹ ಶಿರೋಽಭಿಹತ್ಯ**
**ನಾದಷ್ಟೋ ವೈ ಮೋಕ್ಷ್ಯಸೇ ತನ್ನಿಬೋಧ ॥೩॥**
**ಯೋ ವೈ ದರ್ಪಾತ್ಸಂಹನನೋಪಪನ್ನಃ**
**ಸುದುರ್ಬಲಃ ಪರ್ವತಮಾವಿಹನ್ತಿ ।**
**ತಸ್ಯೈವ ಪಾಣಿಃ ಸನಖೋ ವಿದೀರ್ಯತೇ**
**ನ ಚೈವ ಶೈಲಸ್ಯ ಹಿ ದೃಶ್ಯತೇ ವ್ರಣಃ ॥೪॥**

“ಮಲಗಿರುವ ಹುಲಿಯನ್ನೆಂದಿಗೂ ಎಚ್ಚರಗೊಳಿಸಬೇಡ. ಕಟವಾಯಿಗಳನ್ನು ಸವರಿಕೊಳ್ಳುತ್ತಿರುವ ಸರ್ಪವನ್ನು ಕೆಣಕಬೇಡ. ಘಟಸರ್ಪದ

ಹೆಡೆಯ ಮೇಲೆ ಕಾಲಿಟ್ಟೆಯಾದರೆ ಘಾಸಿಹೊಂದಿದ ವಿಷಸರ್ಪವು ನಿನ್ನನ್ನು ಕಚ್ಚಿಯೇ ತೀರುವುದು. ಪ್ರಕೋಪಿತವಾದ ವಿಷಸರ್ಪದ ದಂಶನದಿಂದ ನೀನು ತಪ್ಪಿಸಿಕೊಳ್ಳುವ ಸಾಧ್ಯತೆಯೇ ಇಲ್ಲ. ದುರಹಂಕಾರಿಯೇ! ದುರ್ಬಲನಾದವನೊಬ್ಬನು ತನಗೆ ಮಹಾಬಲವಿರುವುದೆಂಬ ದುರಹಂಕಾರದಿಂದ ಪರ್ವತವೊಂದನ್ನು ಅಪ್ಪಳಿಸಹೋದಲ್ಲಿ ಏನಾಗುವುದೆಂಬುದನ್ನು ತಿಳಿದಿರುವೆಯಾ? ದರ್ಪದಿಂದ ಕೊಬ್ಬಿ ಪರ್ವತವನ್ನು ಅಪ್ಪಳಿಸಹೋದವನ ಕೈಗಳೂ, ಉಗುರುಗಳೂ ಘಾಸಿಯನ್ನು ಹೊಂದುವುವೇ ಹೊರತು ಪರ್ವತಕ್ಕೆ ಯಾವ ಗಾಯವೂ ಉಂಟಾಗುವುದಿಲ್ಲ."

ವಂದಿಯ ದರ್ಪದ ಆ ಮಾತುಗಳನ್ನು ಕೇಳಿ ಅಷ್ಟಾವಕ್ರನು ರಾಜನೊಡನೆ ಹೇಳಿದನು :

**ಸರ್ವೇ ರಾಜ್ಞೋ ಮೈಥಿಲಸ್ಯ ಮೈನಾಕಸ್ಯೇವ ಪರ್ವತಾಃ ।**
**ನಿಕೃಷ್ಟಭೂತಾ ರಾಜಾನೋ ವತ್ಸಾ ಅನಡುಹೋ ಯಥಾ ॥೫॥**

**ಯಥಾ ಮಹೇನ್ದ್ರಃ ಪ್ರವರಃ ಸುರಾಣಾಂ**
**ನದೀಷು ಗಙ್ಗಾ ಪ್ರವರಾ ಯಥೈವ ।**
**ತಥಾ ನೃಪಾಣಾಂ ಪ್ರವರಸ್ತ್ವಮೇಕೋ**
**ವನ್ದಿಂ ಸಮಭ್ಯಾನಯ ಮತ್ಸಕಾಶಮ್ ॥೬॥**

"ಮೈನಾಕದ ಮುಂದೆ ಇತರ ಪರ್ವತಗಳು ನಿಕೃಷ್ಟವಾಗಿ ಕಾಣುವಂತೆ–ಹೋರಿಯ ಮುಂದೆ ಕರುಗಳು ನಿಕೃಷ್ಟವಾಗಿ ಕಾಣುವಂತೆ–ಜನಕರಾಜನ ಮುಂದೆ ಇತರ ರಾಜರು ನಿಕೃಷ್ಟರಾಗಿದ್ದಾರೆ. ದೇವತೆಗಳಲ್ಲಿ ಇಂದ್ರನು ಶ್ರೇಷ್ಠನೆಂದೆನಿಸಿರುವಂತೆಯೂ ನದಿಗಳಲ್ಲಿ ಗಂಗಾನದಿಯು ಶ್ರೇಷ್ಠನದಿಯೆಂದೆನಿಸಿರುವಂತೆಯೂ ಈ ಭೂವಲಯದ ರಾಜರಲ್ಲಿ ನೀನೊಬ್ಬನೇ ಶ್ರೇಷ್ಠನಾದ ರಾಜನೆಂದು ಪ್ರಸಿದ್ಧನಾಗಿರುವೆ. ಮಹಾರಾಜ! ಆದುದರಿಂದ ವಂದಿಯು ವಾದಿಸಲು ನನ್ನ ಸಮೀಪಕ್ಕೆ ಬರುವಂತೆಮಾಡು."

ಯುಧಿಷ್ಠಿರ! ಅಷ್ಟಾವಕ್ರನು ಹೀಗೆ ಹೇಳುತ್ತಾ ವಂದಿಯ ವಿಷಯದಲ್ಲಿ ಕೋಪಾವಿಷ್ಟನಾಗಿ ಸಭಾಮಂದಿರವನ್ನೇ ನಡುಗಿಸಿಬಿಟ್ಟನು. ವಾದಕ್ಕೆ ಬಂದ ವಂದಿಯನ್ನು ಉದ್ದೇಶಿಸಿ ಅಷ್ಟಾವಕ್ರನು ಹೇಳಿದನು :

ಉಕ್ತೇ ವಾಕ್ಯೇ ಚೋತ್ತರಂ ಮೇ ಬ್ರವೀಹಿ
ವಾಕ್ಯಸ್ಯ ಚಾಪ್ಯುತ್ತರಂ ತೇ ಬ್ರವೀಮಿ ॥೭॥

"ವಂದಿಪಂಡಿತನೇ! ನೀನು ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಹೇಳು. ನಾನೂ ನಿನ್ನ ಪ್ರಶ್ನೆಗಳಿಗೆ ಸಮಂಜಸವಾದ ಉತ್ತರಗಳನ್ನು ಕೊಡುತ್ತೇನೆ."

ವಂದಿಯು ಹೇಳುತ್ತಾನೆ :

ಏಕ ಏವಾಗ್ನಿರ್ಬಹುಧಾ ಸಮಿಧ್ಯತೇ
ಏಕಃ ಸೂರ್ಯಃ ಸರ್ವಮಿದಂ ವಿಭಾತಿ ।
ಏಕೋ ವೀರೋ ದೇವರಾಜೋಽರಿಹನ್ತಾ
ಯಮಃ ಪಿತೄಣಾಮೀಶ್ವರಶ್ಚೈಕ ಏವ ॥೮॥

"ಅಗ್ನಿಯೊಬ್ಬನೇ ಬಹುರೂಪನಾಗಿ ಪ್ರಜ್ವಲಿಸುತ್ತಾನೆ. ಸೂರ್ಯನೊಬ್ಬನೇ ಈ ವಿಶ್ವವೆಲ್ಲವನ್ನೂ ಪ್ರಕಾಶಗೊಳಿಸುತ್ತಾನೆ. ಮಹಾವೀರನಾದ ದೇವರಾಜನೊಬ್ಬನೇ ಶತ್ರುಸಂಹಾರಕನು. ಪಿತೃದೇವತೆಗಳಿಗೆ ಈಶ್ವರನಾಗಿರುವವನು ಯಮನೊಬ್ಬನೇ."

(ಅಷ್ಟಾವಕ್ರನು ಬ್ರಹ್ಮಾದ್ವೈತದ ವಿಷಯವಾಗಿ ವಂದಿಯೊಡನೆ ವಾದಮಾಡುವೆನೆಂದು ಹಿಂದೆ ಹೇಳಿದ್ದಾನೆ. ಆದರೆ ಈಗ ವಾದವನ್ನಾರಂಭಿಸಿರುವವನು ವಂದಿಪಂಡಿತ ; ಅಷ್ಟಾವಕ್ರನಲ್ಲ. ಆದುದರಿಂದ ವಂದಿಯು ಬ್ರಹ್ಮಾದ್ವೈತದ ವಿಷಯವಾಗಿ ವಾದವನ್ನು ಆರಂಭಿಸಿದನೆಂದು ಹೇಳುವುದಕ್ಕಾಗುವುದಿಲ್ಲ. ಒಂದು, ಎರಡು, ಮೂರು–ಇತ್ಯಾದಿಗಳಿಗೆ ಪ್ರಪಂಚದ ವಸ್ತುಗಳನ್ನು ತದನುರೂಪವಾಗಿ ಜೋಡಿಸಿ ಹೇಳುವುದೂ ಚತುರತೆಯೇ ಸರಿ. ಅದನ್ನು ಉದ್ದಕ್ಕೂ ಹೇಳುತ್ತಾ ಹೋಗಲು ಎಲ್ಲರಿಂದಲೂ ಸಾಧ್ಯವಿಲ್ಲ. ಜೋಡಿಸಿ ಹೀಗೆ ಹೇಳುವುದರಲ್ಲಿ ವಂದಿಪಂಡಿತನು 'ತಾನು ನಿಷ್ಣಾತ'ನೆಂದು ತಿಳಿದಿದ್ದುದರಿಂದಲೇ ಆ ವಿಧವಾದ ವಾದಸರಣಿಯನ್ನಾರಂಭಿಸಿದನು. ಇದು ವೇದಾಂತಪ್ರಕ್ರಿಯೆಯೆಂದೂ ಹೇಳಲಾಗುವುದಿಲ್ಲ. ಆದರೂ ವ್ಯಾಖ್ಯಾನಕಾರರು ಇದನ್ನು ವೇದಾಂತಪ್ರಕ್ರಿಯೆಯೆಂದೂ ವಂದಿಯು ಹೇಳಿರುವುದು ಬೌದ್ಧಮತದ ಸಿದ್ಧಾಂತವೆಂದೂ ಹೇಳಿದ್ದಾರೆ. ತ್ರೇತಾಯುಗದಲ್ಲಿ ಬೌದ್ಧಮತ ವಿದ್ದಿತೇ ಎಂಬುದೂ ವಿವಾದದ ಪ್ರಶ್ನೆ. ಆದುದರಿಂದ ಈ ಶ್ಲೋಕಗಳಿಗೆ

ಯಥಾವತ್ತಾದ ಅರ್ಥವನ್ನು ಹೇಳುವುದೇ ಸೂಕ್ತವೆಂದು ತೋರುತ್ತದೆ.) ವಂದಿಯು ಒಂದರ ಸಂಖ್ಯೆಯನ್ನು ತೆಗೆದುಕೊಂಡು ಅದಕ್ಕನುಗುಣವಾಗಿ ವಾಕ್ಪ್ರತಿಭೆಯನ್ನು ಪ್ರದರ್ಶಿಸಲಾಗಿ, ಅಷ್ಟಾವಕ್ರನು ಎರಡರ ಸಂಖ್ಯೆಯನ್ನು ತೆಗೆದುಕೊಂಡು ತನ್ನ ಪ್ರತಿಭೆಯನ್ನು ತೋರಿಸುತ್ತಾನೆ.

ದ್ವಾವಿನ್ದ್ರಾಗ್ನೀ ಚರತೋ ವೈ ಸಖಾಯೌ
ದ್ವೌ ದೇವರ್ಷೀ ನಾರದಪರ್ವತೌ ಚ ।
ದ್ವಾವಶ್ವಿನೌ ದ್ವೇ ರಥಸ್ಯಾಪಿ ಚಕ್ರೇ
ಭಾರ್ಯಾಪತೀ ದ್ವೌ ವಿಹಿತೌ ವಿಧಾತ್ರಾ ॥೯॥

"ಉಭಾವಾಮಿನ್ದ್ರಾಗ್ನೀ ಆಹುವಧ್ಯೈ । ಐನ್ದ್ರಾಗ್ನಮುಪಸಾದಿತಮ್॥ ಇತ್ಯಾದಿ ಶ್ರುತ್ಯುಕ್ತಿಗಳಂತೆ ಅನ್ಯೋನ್ಯಪ್ರಿಯಸಖರಾದ ಇಂದ್ರಾಗ್ನಿಗಳಿಬ್ಬರೂ ಜೊತೆಯಲ್ಲಿಯೇ ಸಂಚರಿಸುತ್ತಾರೆ. ನಾರದ-ಪರ್ವತರಿಬ್ಬರೂ ಯಾವಾಗಲೂ ಜೊತೆಯಲ್ಲಿಯೇ ಇರುವ ದೇವರ್ಷಿಗಳು.

ನಾಸತ್ಯಾ ಚಿತ್ರೌ ಜಗತೋ ನಿಧಾನೌ ।
ದ್ಯಾವಾಭೂಮೀ ಚರಥಸ್ಸಗ್ಂ ಸಖಾಯೌ ॥

ಎಂಬ ಶ್ರುತ್ಯುಕ್ತಿಯಂತೆ ಎಡೆಬಿಡದೇ ಯಾವಾಗಲೂ ಕೂಡಿಯೇ ಇರುವ ಅಶ್ವಿನೀದೇವತೆಗಳು ಇಬ್ಬರು. ಗಾಡಿಗೆ ಎರಡು ಚಕ್ರಗಳಿರುತ್ತವೆ. ದಂಪತಿಗಳಿಬ್ಬರೂ ಯಾವಾಗಲೂ ಜೊತೆಯಲ್ಲಿಯೇ ಇರತಕ್ಕುದೆಂದು ಬ್ರಹ್ಮನಿಂದಲೇ ನಿಯತವಾಗಿದೆ."

ವಂದಿಯು ಮೂರನ್ನು ಕುರಿತು ಹೇಳುತ್ತಾನೆ :

ತ್ರಿಃ ಸೂಯತೇ ಕರ್ಮಣಾ ವೈ ಪ್ರಜೇಯಂ
ತ್ರಯೋ ಯುಕ್ತಾ ವಾಜಪೇಯಂ ವಹನ್ತಿ ।
ಅಧ್ವರ್ಯವಸ್ತ್ರಿಸವನಾನಿ ತನ್ವತೇ
ತ್ರಯೋ ಲೋಕಾಸ್ತ್ರೀಣಿ ಜ್ಯೋತೀಂಷಿ ಚಾಹುಃ ॥೧೦॥

"ದೇವ-ಮನುಷ್ಯ-ತಿರ್ಯಕ್‌ಜನ್ಮಗಳು ಕರ್ಮದಿಂದಲೇ ಪ್ರಾಪ್ತವಾಗುತ್ತವೆ ಅಥವಾ ಪ್ರಾಣಿವರ್ಗಗಳು ಮೂರು ಪ್ರಕಾರವಾಗಿ ಹುಟ್ಟುತ್ತವೆ.

**ಸ್ವರ್ಗಾನ್ನರಕಾದ್ವಾ ಚ್ಯುತಸ್ಯೌಷಧಿಭಾವಪೂರ್ವಕಮೇವ ।**
**ರೇತೋದ್ವಾರಾ ನೃ-ಪಶು-ತಿರ್ಯಗ್ಯೋನಿಸಂಭವಸ್ಯ ಶ್ರೌತಪ್ರಸಿದ್ಧೇಃ ॥**

ಕರ್ಮಫಲವನ್ನು ಅನುಭವಿಸಿ ಅನಂತರದಲ್ಲಿ (ಸ್ವರ್ಗವನ್ನಾಗಲೀ, ನರಕವನ್ನಾಗಲೀ ಅನುಭವಿಸಿದ ಮೇಲೆ) ಜೀವನು ಜಲರೂಪನಾಗಿ ಭೂಮಿಯ ಮೇಲೆ ಬಿದ್ದು ಸಸ್ಯಗಳಲ್ಲಿ ಸೇರಿ ಆ ಸಸ್ಯಗಳನ್ನು ಪ್ರಾಣಿಯಾಗಲೀ ಮನುಷ್ಯನಾಗಲೀ ತಿಂದಾಗ ಅದು ರೇತೋರೂಪವಾಗಿ ಅನಂತರದಲ್ಲಿ ಅದರಿಂದ ಜನ್ಮಪ್ರಾಪ್ತಿಯಾಗುತ್ತದೆ. ಋಗ್ಯಜುಸ್ಸಾಮಗಳೆಂಬ ವೇದತ್ರಯ ಗಳಿಂದ ವಾಜಪೇಯಯಾಗವನ್ನು ಮಾಡುತ್ತಾರೆ. ಅಧ್ವರ್ಯುಗಳು ಪ್ರಾತಃಸವನ, ಮಾಧ್ಯಂದಿನಸವನ ಮತ್ತು ತೃತೀಯಸವನಗಳೆಂಬ ಮೂರು ಸವನಗಳನ್ನು ಅನುದಿನವೂ ಮಾಡುತ್ತಾರೆ. ಸ್ವರ್ಗ-ಮರ್ತ್ಯ-ಪಾತಾಳಗಳೆಂಬ ಮೂರು ಲೋಕಗಳು ಪ್ರಸಿದ್ಧವಾಗಿವೆ ಅಥವಾ ಸ್ವರ್ಗ-ನರಕ-ಭೂಮಿ ಎಂಬುವು ಮೂರು ಭೋಗಭೂಮಿಗಳು. ದಕ್ಷಿಣಾಗ್ನಿ-ಗಾರ್ಹಪತ್ಯ-ಆಹವನೀಯಗಳೆಂಬ ಅಗ್ನಿತ್ರಯವನ್ನು ಯಜ್ಞದಲ್ಲಿ ಆರಾಧಿಸುತ್ತಾರೆ."

ವಂದಿಯು ಹೇಳಿದುದಕ್ಕೆ ಪ್ರತಿಯಾಗಿ ಅಷ್ಟಾವಕ್ರನು ಹೇಳುತ್ತಾನೆ :

**ಚತುಷ್ಟಯಂ ಬ್ರಾಹ್ಮಣಾನಾಂ ನಿಕೇತಂ**
**ಚತ್ವಾರೋ ವರ್ಣಾ ಯಜ್ಞಮಿಮಂ ವಹನ್ತಿ ।**
**ದಿಶಶ್ಚತಸ್ರೋ ವರ್ಣಚತುಷ್ಟಯಂ ಚ**
**ಚತುಷ್ಪದಾ ಗೌರಪಿ ಶಶ್ವದುಕ್ತಾ ॥೧೧॥**

"ಬ್ರಾಹ್ಮಣರಿಗೆ ಜ್ಞಾನೋಪಲಬ್ಧಿಸಾಧಕವಾದುದು ನಾಲ್ಕನೆಯದಾದ ಸಂನ್ಯಾಸಾಶ್ರಮ. ಉಳಿದುವು ಬ್ರಹ್ಮಚರ್ಯ-ಗೃಹಸ್ಥ-ವಾನಪ್ರಸ್ಥಗಳೆಂಬ ಮೂರು ಆಶ್ರಮಗಳು. ಬ್ರಹ್ಮ-ಕ್ಷತ್ರಿಯ-ವೈಶ್ಯ-ಶೂದ್ರರೆಂಬ ನಾಲ್ಕು ವರ್ಣ ಗಳವರೂ ಯಜ್ಞನಿರ್ವಹಣೆಯಲ್ಲಿ ಪಾಲ್ಗೊಳ್ಳುತ್ತಾರೆ. ಪೂರ್ವ-ಪಶ್ಚಿಮ-ದಕ್ಷಿಣೋತ್ತರಗಳೆಂಬುವು ನಾಲ್ಕು ದಿಕ್ಕುಗಳು. ಅಕಾರ, ಉಕಾರ, ಅರ್ಧ ಮಾತ್ರಾಕಾಲದ ಮಕಾರ ಈ ಮೂರು ಸೇರಿ ಹುಟ್ಟುವ ನಾಲ್ಕನೆಯದಾದ ಓಂಕಾರಸ್ವರೂಪನೇ ಪರಮಾತ್ಮನು. (ಹ್ರಸ್ವ-ದೀರ್ಘ-ಪ್ಲುತರೂಪಗಳಾದ ಮೂರು ರೀತಿಯ ಸ್ವರಗಳೂ, ವ್ಯಂಜನಗಳೂ ಸೇರಿ ಅಕ್ಷರಗಳು ನಾಲ್ಕು

ವಿಧಗಳಾಗಿವೆ.) ಗೋರೂಪವಾದ ಧರ್ಮಕ್ಕೆ ನಾಲ್ಕು ಕಾಲುಗಳಿರುತ್ತವೆ. ವೈಖರೀ, ಮಧ್ಯಮಾ, ಪಶ್ಯನ್ತೀ, ಪರಾ–ಇವುಗಳೇ ವಾಣಿಯ ನಾಲ್ಕು ಪಾದಗಳು. ಚತ್ವಾರಿ ವಾಕ್ಪರಿಮಿತಾ ಪದಾನಿ । ತಾನಿ ವಿದುರ್ಬ್ರಾಹ್ಮಣಾ ಯೇ ಮನೀಷಿಣಃ ॥ (ಯಜುರ್ವೇದ) ಈ ನಾಲ್ಕು ಪಾದಗಳನ್ನೂ ಬ್ರಹ್ಮಜ್ಞಾನಿಗಳು ತಿಳಿದಿರುತ್ತಾರೆ."



ವಂದೀ :

ಪಞ್ಚಾಗ್ನಯಃ ಪಞ್ಚಪದಾ ಚ ಪಙ್ಕ್ತಿ-
ರ್ಯಜ್ಞಾಃ ಪಞ್ಚೈವಾಪ್ಯಥ ಪಞ್ಚೇನ್ದ್ರಿಯಾಣಿ ।

**ದೃಷ್ಟಾ ವೇದೇ ಪಞ್ಚಚೂಡಾಪ್ಸರಾಶ್ಚ**
**ಲೋಕೇ ಖ್ಯಾತಂ ಪಞ್ಚನದಂ ಚ ಪುಣ್ಯಮ್ ॥೧೨॥**

"ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯ, ಸಭ್ಯ, ಅವತಥ್ಯ ಗಳೆಂಬುವು ಪಂಚಾಗ್ನಿಗಳು. ಪಂಚಾಕ್ಷರಯುಕ್ತವಾದ ಪಾದಗಳುಳ್ಳ ಛಂದಸ್ಸಿಗೆ ಪಙ್ಕ್ತಿ ಛಂದಸ್ಸೆಂದು ಹೆಸರು. (ಭಗೌ ಗೆತಿಪಙ್ಕ್ತಿಃ). ಅಗ್ನಿಹೋತ್ರ, ದರ್ಶಪೂರ್ಣಮಾಸಗಳು, ಚಾತುರ್ಮಾಸ್ಯ, ಪಶು, ಸೋಮಯಜ್ಞ–ಈ ಐದು ಪಂಚಯಜ್ಞಗಳು. ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯ ಯಜ್ಞ, ಬ್ರಹ್ಮಯಜ್ಞ–ಈ ಐದೂ ಪಂಚಯಜ್ಞಗಳು. ಚಕ್ಷುಸ್ಸು, ಶ್ರೋತ್ರ, ಜಿಹ್ವಾ, ಘ್ರಾಣ, ತ್ವಕ್–ಇವುಗಳೇ ಪಂಚೇಂದ್ರಿಯಗಳು. ಐದು ವೇಣಿಗಳುಳ್ಳ ಪಂಚಚೂಡಾ ಎಂಬ ಅಪ್ಸರೆಯೊಬ್ಬಳ ಹೆಸರು ವೇದಪ್ರಸಿದ್ಧವಾಗಿದೆ. ಪಶ್ಚಿಮವಾಹಿನಿಗಳಾದ ಪಂಚನದಗಳು ಈ ಲೋಕದಲ್ಲಿ ಪ್ರಸಿದ್ಧವಾಗಿವೆ. ವಿಪಾಶಾ (ಬಿಯಾಸ್), ಇರಾವತೀ (ರಾವಿ), ವಿತಸ್ತಾ (ಝೀಲಂ), ಚಂದ್ರ ಭಾಗಾ (ಚೀನಾಬ್) ಮತ್ತು ಶತದ್ರು (ಸಟ್ಲೆಜ್) ಇವೇ ಐದು ನದಗಳು."

ಅಷ್ಟಾವಕ್ರ :

**ಷಡಾಧಾನೇ ದಕ್ಷಿಣಾಮಾಹುರೇಕೇ**
**ಷಟ್‌ಚೈವೇಮೇ ಋತವಃ ಕಾಲಚಕ್ರಮ್ ।**
**ಷಡಿನ್ದ್ರಿಯಾಣ್ಯುತ ಷಟ್ ಕೃತ್ತಿಕಾಶ್ಚ**
**ಷಟ್‌ಸಾದ್ಯಸ್ಕಾಃ ಸರ್ವವೇದೇಷು ದೃಷ್ಟಾಃ ॥೧೩॥**

"ಅಗ್ನ್ಯಾಧಾನದ ಸಮಯದಲ್ಲಿ ಆರು ಗೋವುಗಳನ್ನು ದಕ್ಷಿಣಾರೂಪ ವಾಗಿ ಕೊಡಬೇಕೆಂಬುದು ಕೆಲವರ ಅಭಿಪ್ರಾಯವಾಗಿದೆ. ಕಾಲಚಕ್ರರೂಪ ವಾಗಿರುವ ಋತುಗಳೂ ಷಟ್ ಸಂಖ್ಯಾಕವಾಗಿವೆ. ವಾಕ್ಪಾಣಿ-ಪಾದ-ಪಾಯೂಪಸ್ಥಗಳೂ ಮತ್ತು ಮನಸ್ಸೂ ಸೇರಿ ಇಂದ್ರಿಯಗಳು ಆರು ಸಂಖ್ಯೆಯಲ್ಲಿವೆ. ಕೃತ್ತಿಕಾನಕ್ಷತ್ರಗಳು ಆರು. ("ಷಟ್ಕೃತ್ತಿಕಾಃ" ಶ್ರುತಿಃ.) ಸಾದ್ಯಸ್ಕ ಎಂಬ ಆರು ವಿಶೇಷಯಜ್ಞಗಳು ಎಲ್ಲ ವೇದಗಳಲ್ಲಿಯೂ ಉಕ್ತವಾಗಿವೆ."

ವಂದೀ :

**ಸಪ್ತ ಗ್ರಾಮ್ಯಾಃ ಪಶವಃ ಸಪ್ತ ವನ್ಯಾಃ**
**ಸಪ್ತಚ್ಛನ್ದಾಂಸಿ ಕ್ರತುಮೇಕಂ ವಹನ್ತಿ ।**

**ಸಪ್ತರ್ಷಯಃ ಸಪ್ತ ಚಾಪ್ಯರ್ಹಣಾನಿ**
**ಸಪ್ತತನ್ತ್ರೀ ಪ್ರಥಿತಾ ಚೈವ ವೀಣಾ ॥೧೪॥**

"'ಸಪ್ತಗ್ರಾಮ್ಯಾಃ ಪಶವಃ ಸಪ್ತಾರಣ್ಯಾಃ' ಎಂಬ ಶ್ರುತ್ಯುಕ್ತಿಯಂತೆ ಏಳು ಮೃಗಗಳು ಗ್ರಾಮ್ಯಮೃಗಗಳೆಂದೂ, ಏಳು ಮೃಗಗಳು ಅರಣ್ಯಮೃಗಗಳೆಂದೂ ಉಕ್ತವಾಗಿವೆ. 'ಸಪ್ತ ತೇ ಅಗ್ನೇ ಸಮಿಧಃ ಸಪ್ತ ಜಿಹ್ವಾಃ ಸಪ್ತ ಋಷಯಸ್ಸಪ್ತಧಾಮ ಪ್ರಿಯಾಣಿ । ಸಪ್ತಹೋತ್ರಾಃ ಸಪ್ತಧಾತ್ವಾ ಯಜನ್ತಿ ಸಪ್ತಯೋನೀರಾಪೃಣಸ್ವಾಘೃತೇನ'–ಎಂಬ ಏಳು ಛಂದಸ್ಸುಗಳಿಂದ ಯಜ್ಞವನ್ನು ಪೂರ್ಣಮಾಡುತ್ತಾರೆ. ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತೀ, ತ್ರಿಷ್ಟುಪ್, ಜಗತಿ–ಇವು ಏಳು ಛಂದಸ್ಸುಗಳು. ಋಷಿಗಳು ಏಳು ಮಂದಿ.

**ಮರೀಚಿರಙ್ಗಿರಾಶ್ಚಾತ್ರಿಃ ಪುಲಸ್ತ್ಯಃ ಪುಲಹಃ ಕ್ರತುಃ ।**
**ವಸಿಷ್ಠ ಇತಿ ಸಪ್ತೈತೇ ಮಾನಸಾ ನಿರ್ಮಿತಾ ಹಿ ತೇ ॥**

(ಶಾಂತಿಪರ್ವ ಅ. ೩೪೦ ಶ್ಲೋಕ ೬೯)

ಮರೀಚಿ, ಅಂಗಿರಸ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು ಮತ್ತು ವಸಿಷ್ಠ ಈ ಏಳು ಮಹರ್ಷಿಗಳು ಬ್ರಹ್ಮಮಾನಸಪುತ್ರರು. ಪ್ರಪಂಚದಲ್ಲಿ ಏಳು ವಿಧವಾದ ಸತ್ಕಾರಗಳು ಪ್ರಸಿದ್ಧವಾಗಿವೆ–ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಆಚಮನ ಮತ್ತು ತಾಂಬೂಲ. ವೀಣೆಯು ಏಳುತಂತಿಗಳಿಂದ ಯುಕ್ತವಾದುದೆಂದು ಪ್ರಸಿದ್ಧವಾಗಿದೆ.

ಅಷ್ಟಾವಕ್ರ :

**ಅಷ್ಟೌ ಶಾಣಾಃ ಶತಮಾನಂ ವಹನ್ತಿ**
**ತಥಾಷ್ಟಪಾದಃ ಶರಭಃ ಸಿಂಹಘಾತೀ ।**
**ಅಷ್ಟೌ ವಸೂಞ್ಶುಶ್ರುಮ ದೇವತಾಸು**
**ಯೂಪಶ್ಚಾಷ್ಟಾಸ್ರಿರ್ವಿಹಿತಃ ಸರ್ವಯಜ್ಞೇ ॥೧೫॥**

"ಎಂಟು ಚೀಲಗಳು ಅನಂತವಾದ ಪ್ರಮಾಣವನ್ನೂ ವಹಿಸುತ್ತವೆ. (ಎಂಟು ಕೋಶಗಳಿಂದ ಕೂಡಿರುವ ಈ ದೇಹವು ನೂರು ವರ್ಷಗಳ ಕಾಲ ಆ ಎಂಟು ಚೀಲಗಳಲ್ಲಿರುವ ಪದಾರ್ಥಗಳನ್ನೂ ಧಾರಣೆಮಾಡಿರುತ್ತದೆ.)

ಸಿಂಹವನ್ನು ವಧಿಸುವ ಶಕ್ತಿಯುಳ್ಳ ಶರಭಮೃಗಕ್ಕೆ ಎಂಟು ಕಾಲುಗಳಿವೆ. ದೇವತೆಗಳ ಸಮೂಹದಲ್ಲಿರುವ ವಸುಗಳು ಎಂಟು ಮಂದಿ.

**ಧರೋ ಧ್ರುವಶ್ಚ ಸೋಮಶ್ಚ ಅಹಶ್ಚೈವಾನಿಲೋಽನಲಃ ।**
**ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ॥**

ಆದಿ. ಅಧ್ಯಾಯ ೬೬

ಧರ, ಧ್ರುವ, ಸೋಮ, ಅಹಸ್ಸು, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ–ಇವರೇ ಅಷ್ಟವಸುಗಳೆಂದು ಪ್ರಸಿದ್ಧರಾಗಿದ್ದಾರೆ.

ಎಲ್ಲ ಯಜ್ಞಗಳಲ್ಲಿಯೂ ಎಂಟು ಕೋನಗಳಿರುವ ಯೂಪಗಳಿರಬೇಕೆಂಬುದು ವಿಧ್ಯುಕ್ತವಾಗಿದೆ."

ವಂದೀ :

**ನವೈವೋಕ್ತಾಃ ಸಾಮಿಧೇನ್ಯಃ ಪಿತೃಣಾಂ**
**ತಥಾ ಪ್ರಾಹುರ್ನವಯೋಗಂ ವಿಸರ್ಗಮ್ ।**
**ನವಾಕ್ಷರಾ ಬೃಹತೀ ಸಮ್ಪ್ರದಿಷ್ಟಾ**
**ನವಯೋಗೋ ಗಣನಾಮೇತಿ ಶಶ್ವತ್ ॥೧೬॥**

"ಪಿತೃದೇವತೆಗಳ ಯಜ್ಞದಲ್ಲಿ ಉಶಂತಸ್ತ್ವಾ ಹವಾಮಹೇ ಮೊದಲಾದ ಒಂಬತ್ತು ಸಾಮಿಧೇನೀಋಕ್ಕುಗಳನ್ನು ಹೇಳುತ್ತಾರೆ. ಪ್ರಪಂಚದ ಸೃಷ್ಟಿಕ್ರಮವು ಪ್ರಕೃತಿ, ಪುರುಷ, ಮಹತ್ತತ್ತ್ವ, ಅಹಂಕಾರ ಮತ್ತು ಪಂಚತನ್ಮಾತ್ರಗಳು–ಈ ಒಂಬತ್ತರ ಸಂಯೋಜನೆಗೆ ಒಳಪಟ್ಟಿರುವುದೆಂದು ಹೇಳುತ್ತಾರೆ. ಒಂದು ಪಾದದಲ್ಲಿ ಒಂಬತ್ತು ಅಕ್ಷರಗಳಿರುವ ಛಂದಸ್ಸಿಗೆ ಬೃಹತೀ ಛಂದಸ್ಸೆಂದು ಹೆಸರು. ಒಂಬತ್ತನೆಯ ಸಂಖ್ಯೆಯು ಗಣನೆಯಲ್ಲಿ ಕಡೆಯದಾಗಿರುತ್ತದೆ."

ಅಷ್ಟಾವಕ್ರ :

**ದಿಶೋ ದಶೋಕ್ತಾಃ ಪುರುಷಸ್ಯ ಲೋಕೇ**
**ಸಹಸ್ರಮಾಹುರ್ದಶಪೂರ್ಣಂ ಶತಾನಿ ।**
**ದಶೈವ ಮಾಸಾನ್ಬಿಭ್ರತಿ ಗರ್ಭವತ್ಯೋ**
**ದಶೈರಕಾ ದಶ ದಾಶಾ ದಶಾರ್ಹಾಃ ॥೧೭॥**

"ದಿಕ್ಕುಗಳು ಹತ್ತು. ಹತ್ತು ನೂರುಗಳನ್ನು ಸೇರಿಸಿದರೆ ಒಂದು ಸಾವಿರವಾಗುತ್ತದೆ. ಗರ್ಭಿಣಿಯರು ಹತ್ತು ತಿಂಗಳು ಗರ್ಭಧಾರಣೆ ಮಾಡುತ್ತಾರೆ. ಶರೀರದ ಅವಸ್ಥೆಗಳು ಹತ್ತು. ತತ್ತ್ವೋಪದೇಶಕ್ಕೆ ಅನರ್ಹರಾದವರು ಹತ್ತು ಮಂದಿ ಮತ್ತು ಪೂಜನೀಯರೂ ಹತ್ತು ಮಂದಿ."

ಶರೀರದ ಹತ್ತು ಅವಸ್ಥೆಗಳು : ಗರ್ಭವಾಸ, ಜನ್ಮ, ಬಾಲ್ಯ, ಕೌಮಾರ, ಪೌಗಂಡ, ಕೈಶೋರ, ಯೌವನ, ಪ್ರೌಢತೆ, ವಾರ್ಧಕ್ಯ ಮತ್ತು ಮೃತ್ಯು.

ಹತ್ತು ಮಂದಿ ನಿಂದಕರು :

**ಆಮಯೀ ದುರ್ಮತಃ ಶೋಕೀ ದಣ್ಡಿತಶ್ಚ ಶಠಃ ಖಲಃ ।**
**ನಷ್ಟವೃತ್ತಿರ್ಮದೀ ಚೇರ್ಷ್ಯೀ ಕಾಮೀ ಚ ದಶ ನಿನ್ದಕಾಃ ॥** –ನೀತಿಶಾಸ್ತ್ರ

ರೋಗಿ, ದುಷ್ಟನೆಂದು ಪರಿಗಣಿತನಾದವನು, ಶೋಕಾರ್ತನಾದವನು, ರಾಜದಂಡನೆಯನ್ನು ಪಡೆದವನು, ಶಠ, ಖಲ (ನೀಚ), ಕೆಲಸವನ್ನು ಕಳೆದುಕೊಂಡವನು, ಉನ್ಮತ್ತನಾದವನು, ಅಸೂಯಾಪರನಾದವನು ಮತ್ತು ಕಾಮುಕನು.

ಹತ್ತು ಮಂದಿ ಪೂಜನೀಯರು :

**ಉಪಾಧ್ಯಾಯಃ ಪಿತಾ ಜ್ಯೇಷ್ಠಭ್ರಾತಾ ಚೈವ ಮಹೀಪತಿಃ ।**
**ಮಾತುಲಃ ಶ್ವಶುರಶ್ಚೈವ ಮಾತಾಮಹಪಿತಾಮಹೌ ।**
**ಬನ್ಧುರ್ಜ್ಯೇಷ್ಠಃ ಪಿತೃವ್ಯಶ್ಚ ಪುಂಸ್ಯೇತೇ ಗುರವೋ ಮತಾಃ ॥**

–ಕೂರ್ಮಪುರಾಣ

ಅಧ್ಯಾಪಕ, ತಂದೆ, ದೊಡ್ಡಣ್ಣ, ರಾಜ, ಸೋದರಮಾವ, ಹೆಣ್ಣುಕೊಟ್ಟ ಮಾವ, ತಾಯಿಯ ತಂದೆ, ತಂದೆಯ ತಂದೆ, ಬಂಧುಗಳಲ್ಲಿ ಜ್ಯೇಷ್ಠರಾದವರು, ಚಿಕ್ಕಪ್ಪ ಅಥವಾ ದೊಡ್ಡಪ್ಪ.)

ವಂದೀ :

**ಏಕಾದಶೈಕಾದಶಿನಃ ಪಶೂನಾ–**
**ಮೇಕಾದಶೈವಾತ್ರ ಭವನ್ತಿ ಯೂಪಾಃ ।**
**ಏಕಾದಶ ಪ್ರಾಣಭೃತಾಂ ವಿಕಾರಾ**
**ಏಕಾದಶೋಕ್ತಾ ದಿವಿ ದೇವೇಷು ರುದ್ರಾಃ ॥೧೮॥**

"ಪ್ರಾಣಿಗಳಿಗೆ ಉಪಭೋಗಿಸಲು ಹನ್ನೊಂದು ಇಂದ್ರಿಯಗಳಿವೆ. ವಾಕ್ (ಮಾತು), ಪಾಣಿ (ಕೈ ), ಪಾದ (ಕಾಲು), ಪಾಯು (ಆಸನದ್ವಾರ), ಉಪಸ್ಥ (ಜನನೇಂದ್ರಿಯ)–ಇವು ಐದು ಕರ್ಮೇಂದ್ರಿಯಗಳು ; ಶ್ರೋತ್ರ (ಕಿವಿ), ಚಕ್ಷುಸ್ಸು (ಕಣ್ಣು ), ಜಿಹ್ವಾ (ನಾಲಿಗೆ), ಘ್ರಾಣ (ಮೂಗು), ತ್ವಕ್ಕು (ಚರ್ಮ)–ಈ ಐದು ಜ್ಞಾನೇಂದ್ರಿಯಗಳು ; ಮನಸ್ಸೂ ಸೇರಿ ಹನ್ನೊಂದು ಇಂದ್ರಿಯಗಳಾಗುತ್ತವೆ.

ಯಜ್ಞದಲ್ಲಿ ಪ್ರತಿಷ್ಠಾಪಿಸುವ ಯೂಪಸ್ತಂಭಗಳು ಹನ್ನೊಂದು. ಪ್ರಾಣಿಗಳಿಗೆ ಹನ್ನೊಂದು ವಿಧವಾದ ವಿಕಾರಗಳುಂಟಾಗುವುವು.

ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಹರ್ಷ, ಶೋಕ, ರಾಗ, ದ್ವೇಷ ಮತ್ತು ಅಹಂಕಾರ–ಇವು ಮಾನವನ ಹನ್ನೊಂದು ವಿಕಾರಗಳು.

ದೇವತೆಗಳಲ್ಲಿ ಹನ್ನೊಂದು ಮಂದಿ ರುದ್ರರಿದ್ದಾರೆ.

**ಮೃಗವ್ಯಾಧಶ್ಚ ಸರ್ಪಶ್ಚ ನಿರ್‌ಋತಿಶ್ಚ ಮಹಾಯಶಾಃ ।**
**ಅಜೈಕಪಾದಹಿರ್ಬುಧ್ನ್ಯಃ ಪಿನಾಕೀ ಚ ಪರಂತಪಃ ॥**
**ದಹನೋಽಥೇಶ್ವರಶ್ಚೈವ ಕಪಾಲೀ ಚ ಮಹಾದ್ಯುತಿಃ ।**
**ಸ್ಥಾಣುರ್ಭವಶ್ಚ ಭಗವಾನ್ರುದ್ರಾ ಏಕಾದಶ ಸ್ಮೃತಾಃ ॥**

ಆದಿ. ಅಧ್ಯಾಯ ೬೬ ಶ್ಲೋಕ ೨-೩

ಮೃಗವ್ಯಾಧ, ಸರ್ಪ, ಮಹಾಯಶೋವಂತನಾದ ನಿರ್‌ಋತಿ, ಅಜೈಕಪಾದ, ಅಹಿರ್ಬುಧ್ನ್ಯ, ಶತ್ರುಸಂತಾಪಕನಾದ ಪಿನಾಕೀ, ದಹನ, ಈಶ್ವರ, ಪರಮಕಾಂತಿಮಂತನಾದ ಕಪಾಲೀ, ಸ್ಥಾಣು ಮತ್ತು ಭವ–ಇವರು ಏಕಾದಶ ರುದ್ರರು."

ಅಷ್ಟಾವಕ್ರ :

**ಸಂವತ್ಸರಂ ದ್ವಾದಶಮಾಸಮಾಹು–**
**ರ್ಜಗತ್ಯಾಃ ಪಾದೋ ದ್ವಾದಶೈವಾಕ್ಷರಾಣಿ ।**
**ದ್ವಾದಶಾಹಃ ಪ್ರಾಕೃತೋ ಯಜ್ಞ ಉಕ್ತೋ**
**ದ್ವಾದಶಾದಿತ್ಯಾನ್ಕಥಯನ್ತೀಹ ಧೀರಾಃ ॥೧೯॥**

ಸಂವತ್ಸರವು ಹನ್ನೆರಡು ಮಾಸಗಳಿಂದ ಯುಕ್ತವಾಗಿದೆ. ಜಗತೀ ಛಂದಸ್ಸಿನ ಪ್ರತಿಪಾದವೂ ಹನ್ನೆರಡು ಅಕ್ಷರಗಳಿಂದ ಕೂಡಿರುವುದು. ಪ್ರಾಕೃತ ಯಜ್ಞವು ಹನ್ನೆರಡು ದಿನಗಳು ನಡೆಯಬೇಕೆಂದು ಶ್ರೌತದಲ್ಲಿ ಉಕ್ತವಾಗಿದೆ. ಜ್ಞಾನಿಗಳಾದವರು ಹನ್ನೆರಡು ಸೂರ್ಯರಿದ್ದಾರೆಂದು ಹೇಳುತ್ತಾರೆ.

**ಧಾತಾ ಮಿತ್ರೋಽರ್ಯಮಾ ಶಕ್ರೋ ವರುಣಸ್ತ್ವಂಶ ಏವ ಚ ।**
**ಭಗೋ ವಿವಸ್ವಾನ್ಪೂಷಾ ಚ ಸವಿತಾ ದಶಮಸ್ತಥಾ ।**
**ಏಕಾದಶಸ್ತಥಾ ತ್ವಷ್ಟಾ ದ್ವಾದಶೋ ವಿಷ್ಣುರುಚ್ಯತೇ ॥**

ಆದಿ. ಅಧ್ಯಾಯ ೬೫-ಶ್ಲೋಕ ೧೫-೧೬

ಧಾತೃ, ಮಿತ್ರ, ಅರ್ಯಮಾ, ಇಂದ್ರ, ವರುಣ, ಅಂಶ, ಭಗ, ವಿವಸ್ವಂತ, ಪೂಷಾ, ಸವಿತೃ, ತ್ವಷ್ಟೃ ಮತ್ತು ವಿಷ್ಣು–ಇವರು ದ್ವಾದಶಾದಿತ್ಯರು.”

ವಂದೀ :

**ತ್ರಯೋದಶೀ ತಿಥಿರುಕ್ತಾ ಪ್ರಶಸ್ತಾ**
**ತ್ರಯೋದಶದ್ವೀಪವತೀ ಮಹೀ ಚ ।**

“ಶುಕ್ಲಪಕ್ಷದ ತ್ರಯೋದಶೀತಿಥಿಯು ಬಹುಶುಭಪ್ರದವಾದುದೆಂದು ಹೇಳುತ್ತಾರೆ. ಪ್ರಪಂಚವು ಹದಿಮೂರು ದ್ವೀಪಗಳಿಂದ ಕೂಡಿರುವುದು.”

ಇಷ್ಟು ಮಾತ್ರ ಹೇಳಿ ವಂದಿಯು ಸುಮ್ಮನೆ ಕುಳಿತುಬಿಟ್ಟನು.

ಲೋಮಶರು ಹೇಳುತ್ತಾರೆ :

“ಯುಧಿಷ್ಠಿರ! ಉತ್ತರಾರ್ಧವನ್ನು ಹೇಳಲು ವಂದಿಪಂಡಿತನಿಗೆ ಸಾಧ್ಯವಾಗಲಿಲ್ಲ. ವಂದಿಯು ಸ್ತಬ್ಧನಾದುದನ್ನು ಕಂಡು ಅಷ್ಟಾವಕ್ರನೇ ಉತ್ತರಾರ್ಧವನ್ನು ಪೂರ್ಣಮಾಡಿದನು :

**ತ್ರಯೋದಶಾಹಾನಿ ಸಸಾರ ಕೇಶೀ**
**ತ್ರಯೋದಶಾದೀನ್ಯತಿಚ್ಛಂದಾಂಸಿ ಚಾಹುಃ ॥೨೦॥**

“ಕೇಶೀ ಎಂಬ ದಾನವನು ಹದಿಮೂರು ದಿವಸಗಳ ಪರ್ಯಂತವಾಗಿ ಮಹಾವಿಷ್ಣುವಿನೊಡನೆ ಯುದ್ಧಮಾಡಿದನು. (ಯುಯುಧೇ ವಿಷ್ಣುನಾ ಸಾರ್ಧಂ ತ್ರಯೋದಶದಿನಾನ್ಯಸೌ –ನೃಸಿಂಹಪುರಾಣ) ವೇದದಲ್ಲಿರುವ

ಅತಿಜಗತೀಛಂದಸ್ಸಿನ ಪ್ರತಿಪಾದಗಳಲ್ಲಿಯೂ ಹದಿಮೂರು ಅಕ್ಷರಗಳಿರು ತ್ತವೆ. (ಅತಿಶಕ್ವರೀಛಂದಸ್ಸಿನ ಪಾದಗಳಲ್ಲಿ 15 ಅಕ್ಷರಗಳೂ ಅತ್ಯಷ್ಟಿಕಾ, ಛಂದಸ್ಸಿನ ಪಾದಗಳಲ್ಲಿ 17 ಅಕ್ಷರಗಳೂ, ಅತಿಧೃತಿಕಾಛಂದಸ್ಸಿನ ಪಾದಗಳಲ್ಲಿ 19 ಅಕ್ಷರಗಳೂ ಇರುತ್ತವೆ. ಪಾದಗಳಲ್ಲಿ ಹದಿಮೂರು ಮತ್ತು ಹೆಚ್ಚು ಅಕ್ಷರಗಳಿಂದ ಕೂಡಿದ ಛಂದಸ್ಸುಗಳು ಅತಿಛಂದಸ್ಸುಗಳು.)"

ಅಷ್ಟಾವಕ್ರನು ಶ್ಲೋಕಪೂರಣಮಾಡಲಾಗಿ ವಂದಿಪಂಡಿತನು ಕಳೆಗುಂದಿ ನತಶಿರನಾಗಿ ಕುಳಿತುಬಿಟ್ಟನು. ಅದನ್ನು ಕಂಡು ಸಭಾಸದರು ಕಲ-ಕಲನಿನಾದ ಗಳನ್ನು ಮಾಡಿದರು. ಜನಕರಾಜನ ಯಜ್ಞಮಂಟಪದಲ್ಲಿ ಆ ವಿಧವಾದ ಕಲ-ಕಲನಿನಾದವುಂಟಾಗಲಾಗಿ ಅಷ್ಟಾವಕ್ರನ ಅಪ್ರತಿಮವಾದ ವಿದ್ವತ್ತೆಯನ್ನು ಕಂಡು ಪರಮಸಂತುಷ್ಟರಾದ ಬ್ರಾಹ್ಮಣರು ಮೇಲೆದ್ದು ಬದ್ಧಾಂಜಲಿಗಳಾಗಿ ಅಷ್ಟಾವಕ್ರನನ್ನು ಯಥೋಚಿತವಾಗಿ ಗೌರವಿಸಿದರು.

ಅನಂತರ ರಾಜನನ್ನು ಕುರಿತು ಅಷ್ಟಾವಕ್ರನು ಹೇಳಿದನು :

ಅನೇನೈವ ಬ್ರಾಹ್ಮಣಾಃ ಶುಶ್ರುವಾಂಸೋ
ವಾದೇ ಜಿತ್ವಾ ಸಲಿಲೇ ಮಜ್ಜಿತಾಃ ಪ್ರಾಕ್ ।
ತಾನೇವ ಧರ್ಮಾನಯಮದ್ಯ ವನ್ದೀ
ಪ್ರಾಪ್ನೋತು ಗೃಹ್ಯಾಪ್ಸು ನಿಮಜ್ಜಯೈನಮ್ ॥೨೩॥

"ಮಹಾರಾಜ! ಈ ಹಿಂದೆ ಈ ವಂದಿಪಂಡಿತನು ನಿನ್ನ ಆಸ್ಥಾನಕ್ಕಾ ಗಮಿಸಿದ ವಿದ್ವಾಂಸರನ್ನು ವಾದದಲ್ಲಿ ಸೋಲಿಸಿ ಅವರನ್ನು ರಹಸ್ಯದಲ್ಲಿ ರಾಜ ಭಟರಿಂದ ನೀರಿಗೆ ತಳ್ಳಿಸುತ್ತಿದ್ದನು. ಇಂದು ನನ್ನೊಡನೆ ವಾದದಲ್ಲಿ ಸೋತಿ ರುವ ಇವನಿಗೂ ಅದೇ ಗತಿಯಾಗಲಿ. ಇವನನ್ನೂ ಬಂಧಿಸಿ ನೀರಿಗೆ ತಳ್ಳಿಸು."

ಅಷ್ಟಾವಕ್ರನ ಆ ಮಾತಿಗೆ ಉತ್ತರವಾಗಿ ವಂದಿಪಂಡಿತನು ಜನಕರಾಜ ನಿಗೆ ಹೇಳಿದನು :

ಅಹಂ ಪುತ್ರೋ ವರುಣಸ್ಯೋತ ರಾಜ್ಞ-
ಸ್ತತ್ರಾಸ ಸತ್ರಂ ದ್ವಾದಶವಾರ್ಷಿಕಂ ವೈ ।
ಸತ್ರೇಣ ತೇ ಜನಕ ತುಲ್ಯಕಾಲಂ
ತದರ್ಥಂ ತೇ ಪ್ರಹಿತಾ ಮೇ ದ್ವಿಜಾಗ್ರ್ಯಾಃ ॥೨೪॥

**ತೇ ತು ಸರ್ವೇ ವರುಣಸ್ಯೋತ ಯಜ್ಞಂ**
**ದ್ರಷ್ಟುಂ ಗತಾ ಇಹ ಆಯಾನ್ತಿ ಭೂಯಃ ।**
**ಅಷ್ಟಾವಕ್ರಂ ಪೂಜಯೇ ಪೂಜನೀಯಂ**
**ಯಸ್ಯ ಹೇತೋರ್ಜನಿತಾರಂ ಸಮೇಷ್ಯೇ ॥೨೫॥**

"ಮಹಾರಾಜ! ನಾನು ವರುಣನ ಮಗನು. ನೀನು ಇಲ್ಲಿ ಹನ್ನೆರಡು ವರ್ಷಗಳ ಪರ್ಯಂತವಾದ ಯಾಗವನ್ನು ಪ್ರಾರಂಭಿಸಿದಾಗಲೇ ನಮ್ಮ ತಂದೆಯಾದ ವರುಣನೂ ದ್ವಾದಶವರ್ಷಪರ್ಯಂತವಾದ ಯಾಗವನ್ನಾರಂಭಿಸಿದನು. ಆ ಯಾಗಕ್ಕೆ ಆರ್ತ್ವಿಜ್ಯವನ್ನು ವಹಿಸಲು ನಾನಿಲ್ಲಿಂದ ಬ್ರಾಹ್ಮಣಶ್ರೇಷ್ಠರನ್ನು ಕಳುಹಿಸುತ್ತಿದ್ದೆನು. (ಸಮುದ್ರವು ವರುಣಾಲಯವಾದುದರಿಂದ ಬ್ರಾಹ್ಮಣರನ್ನು ಸಮುದ್ರಕ್ಕೆ ತಳ್ಳಿದಂತೆ ಇತರರಿಗೆ ಕಂಡರೂ ನಾನು ಮಾತ್ರ ಯಾಗದಲ್ಲಿ ಆರ್ತ್ವಿಜ್ಯವನ್ನು ವಹಿಸುವ ಸಲುವಾಗಿ ಅವರನ್ನು ನಮ್ಮ ತಂದೆಯ ಮನೆಗೆ ಕಳುಹಿಸುತ್ತಿದ್ದೆನು.) ವರುಣನ ಯಜ್ಞವನ್ನು ನೋಡುವ ಅಥವಾ ಅದರಲ್ಲಿ (ಯಜ್ಞದಲ್ಲಿ) ಭಾಗವಹಿಸುವ ಸಲುವಾಗಿ ಹೋಗಿರುವ ಆ ಬ್ರಾಹ್ಮಣರೆಲ್ಲರೂ ಪುನಃ ಇಲ್ಲಿಗೆ ಆಗಮಿಸುತ್ತಾರೆ. ನಾನೂ ಸರ್ವವಂದ್ಯನಾದ, ಪೂಜನೀಯನಾದ ಅಷ್ಟಾವಕ್ರನನ್ನು ಅಭಿನಂದಿಸುತ್ತೇನೆ. ಇವನ ಕಾರಣದಿಂದಾಗಿ ನಾನು ನಮ್ಮ ತಂದೆಯಾದ ವರುಣನನ್ನು ಪುನಃ ಸೇರಲು ಸಾಧ್ಯವಾಯಿತು."

ಅಷ್ಟಾವಕ್ರನು ವಂದಿಯ ಮಾತುಗಳನ್ನು ಪ್ರಾಣವುಳಿಸಿಕೊಳ್ಳಲು ಹೇಳಿದ ಮಾತುಗಳೆಂದು ಭಾವಿಸಿ ಸಭೆಯನ್ನು ಉದ್ದೇಶಿಸಿ ಹೇಳಿದನು :

"ಊಹಾಪೋಹಕೌಶಲದಿಂದಲೂ (ಕುತರ್ಕದಿಂದಲೂ) ಗಟ್ಟಿಯಾಗಿ ಮಾತನಾಡುವುದರಿಂದಲೂ ವಂದಿಯು ಪಂಡಿತರಾದ ಬ್ರಾಹ್ಮಣರನ್ನು ಸೋಲಿಸಿ ಸಮುದ್ರದ ನೀರಿನಲ್ಲಿ ಮುಳುಗಿಸಿಬಿಟ್ಟನು. (ವಂದಿಯು ಬ್ರಾಹ್ಮಣರನ್ನು ನೀರಿನಲ್ಲಿ ಮುಳುಗಿಸುವುದರ ಜೊತೆಯಲ್ಲಿಯೇ ವೇದಮಯವಾದ ವಾಣಿಯನ್ನೂ (ಸತ್ಯವನ್ನು ) ಕುತರ್ಕಾರ್ಣವದಲ್ಲಿ ಮುಳುಗಿಸಿದನು.) ಕುತರ್ಕದ ಹೊರತು ಪಂಡಿತರಾದ ಬ್ರಾಹ್ಮಣರನ್ನು ಸೋಲಿಸುವ ಸಾಧ್ಯತೆಯಿರಲಿಲ್ಲ. ವಂದಿಪಂಡಿತನು ಕುತರ್ಕಾರ್ಣವದಲ್ಲಿ ಮುಚ್ಚಿಟ್ಟ ವೇದಮಯಿಯಾದ ವಾಣಿಯನ್ನು (ಸತ್ಯವನ್ನು ) ನಾನು ಉದ್ಧರಿಸಿದೆನು. ನಾನು ವಾಣಿಯನ್ನು (ಸತ್ಯವನ್ನು)

ಯಾವ ರೀತಿಯಲ್ಲಿ ಉದ್ಧರಿಸಿದೆನೆಂಬುದನ್ನು ಸದಸದ್ವಿವೇಕವುಳ್ಳ ಪಂಡಿತರು ಪರೀಕ್ಷಿಸಲಿ.

'ಸಮುದ್ರದಲ್ಲಿ ಮುಳುಗಿಸಿದ್ದುಂಟು; ಸಾಯಿಸಿಲ್ಲ. ಆದರೆ ಅವರನ್ನು ಆರ್ತ್ವಿಜ್ಯಕ್ಕೆ ಕಳುಹಿಸಿದ್ದೇನೆ'–ಎಂದು ವಂದಿಯು ಹೇಳುವ ಮಾತನ್ನು ಸತ್ಪುರುಷರು ಈ ದೃಷ್ಟಿಯಿಂದ ವಿವೇಚಿಸುತ್ತಾರೆ. 'ಸತ್ಪುರುಷರಾರು–ಅಸತ್ಪುರುಷರಾರು? ಎಂದು ತಿಳಿದುಕೊಂಡಿರುವ (**ಜಾತಾನಿ ಸತಾಂ ಅಸತಾಂ ಚ ವೃತ್ತಾನಿ ವೇದ ಜಾನಾತಿ ಇತಿ ಜಾತವೇದಾಃ**) ಅಗ್ನಿಯು ಸರ್ವತ್ರ ವ್ಯಾಪಿಸಿ ಸುಡುತ್ತಿದ್ದಾಗ ಸತ್ಪುರುಷರ ಮನೆಗಳನ್ನು ವಿಸರ್ಜಿಸುತ್ತಾ ತನ್ನ ತೇಜಸ್ಸಿನಿಂದ ಅವುಗಳನ್ನು ಭಸ್ಮಮಾಡಲಿಲ್ಲ'–ಎಂಬುದಾಗಿ ಸತ್ಪುರುಷರ ಮಹತ್ತ್ವವನ್ನು ತೊಡೆಯ ಮೇಲೆ ಕುಳಿತಿರುವ ಚಿಕ್ಕಮಕ್ಕಳಿಗೆ ಹೇಳುತ್ತಿರುವಾಗ ಅದನ್ನೇ ನಂಬಿದ ಮಕ್ಕಳು ಸತ್ಪುರುಷರಾಗಬೇಕೆಂದು ಭಾವಿಸಬಹುದು. ಆದರೆ ಸುಡುತ್ತಿರುವ ಅಗ್ನಿಗೆ ಸತ್ಪುರುಷರು-ಅಸತ್ಪುರುಷರೆಂಬ ವಿವೇಚನೆಯಿರುವುದಿಲ್ಲ. ಮಕ್ಕಳಿಗೆ ಹೇಳುವಂತೆ ಈ ವಂದಿಯು ಈ ಪರಿಯಲ್ಲಿ ನಮಗೂ ಹೇಳುತ್ತಿದ್ದಾನೆಯೇ ಹೊರತು ನೀರಿನಲ್ಲಿ ಮುಳುಗಿಸಿದ ನಂತರ ಆರ್ತ್ವಿಜ್ಯಕ್ಕೆ ಹೋಗುವುದಿರಲಿ–ಅವರು ಉಳಿದಿರುವ ಸಾಧ್ಯತೆಯೇ ಇಲ್ಲ."

ಬಳಿಕ ಅಷ್ಟಾವಕ್ರನು ಜನಕನ ಕಡೆಗೆ ತಿರುಗಿ ಹೇಳಿದನು :

"ಜನಕರಾಜ! ನಿನ್ನ ಬುದ್ಧಿಯು ಶ್ಲೇಷ್ಮಾತ್ರಕೀ (ಉಮ್ಮತ್ತಿ) ಹಣ್ಣನ್ನು ತಿಂದವನ ಬುದ್ಧಿಯಂತೆ ಮಂಕಾಗಿ ಹೋಯಿತೇ? (ಉಮ್ಮತ್ತಿಯ ಬೀಜವನ್ನು ಅಥವಾ ಹಣ್ಣನ್ನು ತಿಂದರೆ ಬುದ್ಧಿಯು ಮಂಕಾಗುವುದೆಂದು ಹೇಳುತ್ತಾರೆ.) ಅಥವಾ ನಿನ್ನ ವಿಷಯದಲ್ಲಿ ಈ ವಂದಿಯೂ ಮತ್ತು ಪಂಡಿತರೂ ಮಾಡುವ ಹೊಗಳಿಕೆಯು ನಿನ್ನನ್ನು ಭ್ರಾಂತನನ್ನಾಗಿ ಮಾಡಿಬಿಟ್ಟಿರುವುದೋ? ಏಕೆಂದರೆ : ಆನೆಗೆ ಅಂಕುಶವನ್ನು ಚುಚ್ಚುವ ರೀತಿಯಲ್ಲಿ ನಾನು ಮನಸ್ಸನ್ನು ಚುಚ್ಚುವ ಮಾತುಗಳನ್ನಾಡುತ್ತಿದ್ದರೂ ನೀನು ನನ್ನ ಯಾವ ಮಾತುಗಳನ್ನೂ ಕೇಳದವನಂತೆಯೇ ಮೌನವಹಿಸಿ ಕುಳಿತಿರುವೆ."

ಅಷ್ಟಾವಕ್ರನ ಆ ಮಾತಿಗುತ್ತರವಾಗಿ ಜನಕರಾಜನು ಹೇಳಿದನು :

**ಶೃಣೋಮಿ ವಾಚಂ ತವ ದಿವ್ಯರೂಪಾ-**
**ಮಮಾನುಷೀಂ ದಿವ್ಯರೂಪೋऽಸಿ ಸಾಕ್ಷಾತ್ ।**
**ಅಜೈಷೀರ್ಯದ್ವನ್ದಿನಂ ತ್ವಂ ವಿವಾದೇ**
**ನಿಸೃಷ್ಟ ಏಷ ತವ ಕಾಮೋऽದ್ಯ ವನ್ದೀ ॥೨೯॥**

"ಬ್ರಾಹ್ಮಣೋತ್ತಮನೇ! ನಿಶ್ಚಯವಾಗಿಯೂ ನಿನ್ನ ಮಾತುಗಳು ದಿವ್ಯವೂ ಮತ್ತು ಸಾಮಾನ್ಯಮನುಷ್ಯರಿಂದ ಹೇಳಲು ಅಶಕ್ಯವಾದುವೂ ಆಗಿವೆ. ನೀನೂ ದಿವ್ಯರೂಪನಾಗಿರುವೆ. ಮಾನವರಲ್ಲಿ ಯಾರೊಬ್ಬರೂ ಈ ವಿಧವಾದ ದಿವ್ಯವಾಣಿಯನ್ನಾಡುವುದನ್ನು ನಾನು ಇದುವರೆಗೂ ಕೇಳಿರುವುದಿಲ್ಲ. ನೀನಿಂದು ನಿನ್ನ ವಿದ್ಯಾಪ್ರೌಢಿಮೆಯಿಂದಲೂ, ವಾಕ್ಚಾತುರ್ಯದಿಂದಲೂ ವಂದಿಪಂಡಿತನನ್ನು ಸೋಲಿಸಿರುವೆಯಾದುದರಿಂದ ನಾನಿವನನ್ನು ನಿನ್ನ ವಶಕ್ಕೆ ಒಪ್ಪಿಸಿಬಿಟ್ಟಿರುತ್ತೇನೆ. ನಿನ್ನ ಇಚ್ಛೆಬಂದಂತೆ ಇವನನ್ನು ನೀನು ದಂಡಿಸಬಹುದು."

**ನಾನೇನ ಜೀವತಾ ಕಶ್ಚಿದರ್ಥೋ ಮೇ ವನ್ದಿನಾ ನೃಪ ।**
**ಪಿತಾ ಯದ್ಯಸ್ಯ ವರುಣೋ ಮಜ್ಜಯೈನಂ ಜಲಾಶಯೇ ॥೩೦॥**

"ಜನಕರಾಜನೇ! ಈ ವಂದಿಯು ಬದುಕಿರುವುದರಿಂದ ನನಗಾವ ಪ್ರಯೋಜನವೂ ಇಲ್ಲ. ವರುಣನೇ ತನ್ನ ತಂದೆಯೆಂದು ಈ ವಂದಿ ಪಂಡಿತನು ಹೇಳಿಕೊಂಡನಲ್ಲವೇ? ಇವನನ್ನೂ ಇವನ ತಂದೆಯ ಮನೆಗೇ ಕಳುಹಿಸಿಬಿಡೋಣ. ಈಗಲೇ ಇವನನ್ನು ಸಮುದ್ರದಲ್ಲಿ ಮುಳುಗಿಸೋಣವಾಗಲಿ."

ಅಷ್ಟಾವಕ್ರನ ಮಾತನ್ನು ಕೇಳಿ ವಂದಿಪಂಡಿತನು ನಸುನಗುತ್ತಾ ಹೇಳಿದನು:

**ಅಹಂ ಪುತ್ರೋ ವರುಣಸ್ಯೋತ ರಾಜ್ಞೋ**
**ನ ಮೇ ಭಯಂ ವಿದ್ಯತೇ ಮಜ್ಜಿತಸ್ಯ ।**

**ಇಮಂ ಮುಹೂರ್ತಂ ಪಿತರಂ ದ್ರಕ್ಷ್ಯತೇ ಯ-**
**ಮಷ್ಟಾವಕ್ರಶ್ಚಿರನಷ್ಟಂ ಕಹೋಡಮ್ ॥೩೧॥**

"ನಾನು ನಿಶ್ಚಯವಾಗಿಯೂ ವರುಣರಾಜನ ಮಗನೇ ಆಗಿರುವೆನು. ಆದುದರಿಂದ ಸಮುದ್ರದಲ್ಲಿ ಮುಳುಗಿಸುವ ವಿಷಯದಲ್ಲಿ ನಾನು ಭಯಪಡುವುದಿಲ್ಲ. ಇಷ್ಟು ಮಾತ್ರವಲ್ಲದೇ ನಾನು ಬ್ರಾಹ್ಮಣರನ್ನು ನನ್ನ ತಂದೆಯ ಮನೆಗೆ ಕಳುಹಿಸಿರುವೆನೆಂಬ ನನ್ನ ಮಾತೂ ಸತ್ಯವಚನವೇ ಆಗಿರುವುದು. ಅಷ್ಟಾವಕ್ರನ ತಂದೆಯಾದ ಕಹೋಡನನ್ನೂ ನಾನಲ್ಲಿಗೆ ಕಳುಹಿಸಿದ್ದೇನೆ. ಬಹಳ ವರ್ಷಗಳ ಹಿಂದೆಯೇ ಅದೃಶ್ಯನಾಗಿಹೋಗಿದ್ದ ತನ್ನ ತಂದೆಯಾದ ಕಹೋಡನನ್ನೂ ಅಷ್ಟಾವಕ್ರನು ಈ ಮುಹೂರ್ತದಲ್ಲಿಯೇ ಸಂದರ್ಶಿಸುತ್ತಾನೆ."

ಲೋಮಶರು ಧರ್ಮರಾಜನನ್ನು ಕುರಿತು ಹೇಳುತ್ತಾರೆ :

"ಧರ್ಮಜ! ವಂದಿಪಂಡಿತನು ಹೀಗೆ ಹೇಳಿದ ಸ್ವಲ್ಪಹೊತ್ತಿನೊಳಗಾಗಿಯೇ ವರುಣನಿಂದ ಸತ್ಕೃತರಾದ ಬ್ರಾಹ್ಮಣರೆಲ್ಲರೂ ಜನಕನ ಬಳಿಗೆ ಬಂದರು. ಅವರ ಸಮೂಹದಲ್ಲಿದ್ದ ಅಷ್ಟಾವಕ್ರನ ತಂದೆಯಾದ ಕಹೋಡನು ಜನಕನ ಸಮೀಪಕ್ಕೆ ಬಂದು ಹೇಳಿದನು :

**ಇತ್ಯರ್ಥಮಿಚ್ಛನ್ತಿ ಸುತಾಞ್ಜನಾ ಜನಕ ಕರ್ಮಣಾ ।**
**ಯದಹಂ ನಾಶಕಂ ಕರ್ತುಂ ತತ್ಪುತ್ರಃ ಕೃತವಾನ್ಮಮ ॥೩೩॥**

**ಉತಾಬಲಸ್ಯ ಬಲವಾನುತ ಬಾಲಸ್ಯ ಪಣ್ಡಿತಃ ।**
**ಉತವಾ ವಿದುಷೋ ವಿದ್ವಾನ್ಪುತ್ರೋ ಜನಕ ಜಾಯತೇ ॥೩೪॥**

"ಜನಕರಾಜ! ಈ ಕಾರಣದಿಂದಲೇ ಪ್ರಜೆಗಳು ನಾನಾವಿಧವಾದ ವ್ರತಾನುಷ್ಠಾನಗಳನ್ನು ಮಾಡಿಯಾದರೂ ಮಕ್ಕಳನ್ನು ಪಡೆಯಲು ಯತ್ನಿಸುತ್ತಾರೆ. ನಾನು ಮಾಡಲಾಗದೇ ಇದ್ದುದನ್ನು ನನ್ನ ಮಗನು ಮಾಡಿದನು. ಅಂತೆಯೇ ಪ್ರಪಂಚದಲ್ಲಿ ದುರ್ಬಲರಾದ ಪ್ರಜೆಗಳಿಗೆ ಮಹಾಬಲಶಾಲಿಗಳಾದ ಮಕ್ಕಳೂ ಹುಟ್ಟುತ್ತಾರೆ. ಅಜ್ಞಾನಿಗಳ ಹೊಟ್ಟೆಯಲ್ಲಿ ಜ್ಞಾನಿಗಳೂ ಹುಟ್ಟುತ್ತಾರೆ. ಅವಿದ್ಯಾವಂತರಾದವರಿಗೆ ಮಹಾಬುದ್ಧಿಕೌಶಲ್ಯವುಳ್ಳ ವಿದ್ವಾಂಸರಾದ ಮಕ್ಕಳೂ ಹುಟ್ಟುತ್ತಾರೆ.

ಶಿತೇನ ತೇ ಪರಶುನಾ ಸ್ವಯಮೇವಾನ್ತಕೋ ನೃಪ ।
ಶಿರಾಂಸ್ಯಪಾಹರತ್ವಾಜೌ ರಿಪೂಣಾಂ ಭದ್ರಮಸ್ತು ತೇ ॥೩೫॥

ಮಹದೌಕ್ಥ್ಯಂ ಗೀಯತೇ ಸಾಮ ಚಾಗ್ರ್ಯಂ
ಸಮ್ಯಕ್ಸೋಮಃ ಪೀಯತೇ ಚಾತ್ರ ಸತ್ರೇ ।
ಶುಚೀನ್ಭಾಗಾನ್ಪ್ರತಿಜಗೃಹುಶ್ಚ ಹೃಷ್ಟಾಃ
ಸಾಕ್ಷಾದ್ದೇವಾ ಜನಕಸ್ಯೇಹ ರಾಜ್ಞಃ ॥೩೬॥

ಯುದ್ಧದಲ್ಲಿ ನಿನ್ನೆದುರಾಗಿ ಬರುವ ಶತ್ರುಗಳ ತಲೆಗಳನ್ನು ಸಾಕ್ಷಾತ್ ಯಮನೇ ನಿಶಿತವಾದ ಪರಶುವಿನಿಂದ ತುಂಡರಿಸಲಿ. ನಿನಗೆ ಮಂಗಳವುಂಟಾಗಲಿ. ಜನಕನ ಈ ಮಹಾಯಜ್ಞದಲ್ಲಿ ಪರಮಶ್ರೇಷ್ಠವಾದ ಉಕ್ಥ್ಯಸಾಮವು ಗಾಯನಮಾಡಲ್ಪಡುತ್ತಿದೆ. ಸೋಮಪಾನವೂ ಯಥೇಚ್ಛವಾಗಿ ಮಾಡಲ್ಪಡುತ್ತಿದೆ. ದೇವತೆಗಳೇ ಸಾಕ್ಷಾತ್ತಾಗಿ ಬಂದು ಯಜ್ಞದ ಹವಿರ್ಭಾಗಗಳನ್ನು ಆದರದಿಂದ ಸ್ವೀಕರಿಸುತ್ತಾರೆ."

ಲೋಮಶರು ಧರ್ಮಜನಿಗೆ ಹೇಳುತ್ತಾರೆ :

"ಧರ್ಮಜ! ಹಿಂದೆಯೇ ಹೇಳಿದಂತೆ ತೇಜೋವಿಶಿಷ್ಟರಾದ ಬ್ರಾಹ್ಮಣರು ಸಮುದ್ರದಿಂದ ಹೊರಗೆ ಬಂದನಂತರ ವಂದಿಪಂಡಿತನು ಜನಕರಾಜನ ಅನುಮತಿಯನ್ನು ಪಡೆದು ಸಮುದ್ರವನ್ನು ಪ್ರವೇಶಿಸಿದನು. ಜನ್ಮಾರಭ್ಯ ಕಾಣದಿದ್ದ ತನ್ನ ತಂದೆಯನ್ನು ಕಂಡು ಅಷ್ಟಾವಕ್ರನು ಸಂತೋಷಭರಿತನಾಗಿ ಆತನ ಚರಣಕಮಲಗಳಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಯಥೋಚಿತವಾಗಿ ತಂದೆಯನ್ನು ಸತ್ಕರಿಸಿದನು. ಅಲ್ಲಿ ನೆರೆದಿದ್ದ ಬ್ರಾಹ್ಮಣರೂ ಅಷ್ಟಾವಕ್ರನನ್ನು ಯಥೋಚಿತವಾಗಿ ಸತ್ಕರಿಸಿದರು. ವಂದಿಯನ್ನು ಜಯಿಸಿದ ಅಷ್ಟಾವಕ್ರನು ಜನಕರಾಜನಿಂದಲೂ ಸತ್ಕೃತನಾಗಿ ಸೋದರಮಾವನೊಡನೆಯೂ, ತಂದೆಯಾದ ಕಹೋಡನೊಡನೆಯೂ ತನ್ನ ಆಶ್ರಮಕ್ಕೆ ಹಿಂದಿರುಗಿದನು. ಪತಿಯನ್ನು ಕಂಡ ಸುಜಾತಳ ಆನಂದಕ್ಕೆ ಪಾರವೇ ಇಲ್ಲವಾಯಿತು. ಅಂತಹ ಸಂತಸದ ಸಂದರ್ಭದಲ್ಲಿ ಕಹೋಡನು ತನ್ನ ಮಗನಾದ ಅಷ್ಟಾವಕ್ರನಿಗೆ ಹೇಳಿದನು :

"ಮಗು! ನೀನು ನಮ್ಮ ಆಶ್ರಮದ ಸಮೀಪದಲ್ಲಿರುವ ನದಿಯಲ್ಲಿ ಈಗಲೇ ಹೋಗಿ ಸ್ನಾನಮಾಡು."

ತಂದೆಯು ಹೇಳಿದಂತೆಯೇ ಅಷ್ಟಾವಕ್ರನು ನದಿಯಲ್ಲಿ ಮುಳುಗಿ ಮೇಲೇಳಲಾಗಿ ಅವನ ಅಷ್ಟಾಂಗಗಳಲ್ಲಿದ್ದ ವಕ್ರತೆಯು ಮಾಯವಾಗಿ ಹೋಗಿತ್ತು.

**ನದೀ ಸಮಙ್ಗಾ ಚ ಬಭೂವ ಪುಣ್ಯಾ**
**ಯಸ್ಯಾಂ ಸ್ನಾತೋ ಮುಚ್ಯತೇ ಕಿಲ್ಬಿಷಾದ್ಧಿ ।**
**ತ್ವಮಪ್ಯೇನಾಂ ಸ್ನಾನಪಾನಾವಗಾಹೈಃ**
**ಸಭ್ರಾತೃಕಃ ಸಹಭಾರ್ಯೋ ವಿಶಸ್ವ ॥೪೦॥**

ಧರ್ಮಜ! ಅಷ್ಟಾವಕ್ರನ ವಕ್ರತೆಯನ್ನು ಹೋಗಲಾಡಿಸಿ ಅವನ ಅಂಗಗಳನ್ನು ಸಮನಾಗಿ ಮಾಡಿದ ಆ ನದಿಗೆ ಅಂದಿನಿಂದಲೂ 'ಸಮಂಗಾ' ಎಂದೇ ಹೆಸರಾಯಿತು. ಶರೀರಾವಯವಗಳ ವಕ್ರತೆಯನ್ನೇ ಹೋಗಲಾಡಿಸಿರುವ ಈ ಪುಣ್ಯನದಿಗೆ ಪಾಪಗಳನ್ನು ಪರಿಹರಿಸುವ ಶಕ್ತಿಯಿದೆಯೆಂಬುದನ್ನು ಹೇಳಲೇ ಬೇಕಾಗಿಲ್ಲ. ಇದರಲ್ಲಿ ಮಿಂದವರು ಸಕಲಪಾಪಗಳಿಂದಲೂ ವಿಮುಕ್ತರಾಗುತ್ತಾರೆ. ಆದುದರಿಂದ ನೀನೂ ನಿನ್ನ ಅನುಜರೊಡನೆಯೂ, ದ್ರೌಪದಿಯೊಡನೆಯೂ ಈ ಸಮಂಗಾನದಿಯಲ್ಲಿ ಮಿಂದು ಸಂಧ್ಯಾವಂದನಾದಿ ಕರ್ಮಗಳನ್ನು ಮಾಡುವುದು ಶ್ರೇಯಸ್ಕರ."

ಗ೩೪ನೆಯ ಅಧ್ಯಾಯವು ಮುಗಿಯಿತು.

ಗ೩೫ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಕರ್ದಮಿಲಕ್ಷೇತ್ರವೇ ಮೊದಲಾದ ತೀರ್ಥಕ್ಷೇತ್ರಗಳ ಮಹಿಮೆ : ರೈಭ್ಯ ಮತ್ತು ಯವಕ್ರೀತರ ಕಥೆ : ಮೇಧಾವಿಯ ಮರಣ

ಲೋಮಶರು ಆ ಕ್ಷೇತ್ರದ ಮಹಿಮೆಯನ್ನು ವಿವರವಾಗಿ ಹೇಳತೊಡಗಿದರು :

"ಧರ್ಮಜ! ಇಲ್ಲಿ ಕಾಣುತ್ತಿರುವುದೇ ಸಮಂಗಾನದಿಯು. ಅಷ್ಟಾ

ವಕ್ರನು ಸ್ನಾನಮಾಡುವ ಮೊದಲು ಈ ನದಿಗೆ 'ಮಧುವಿಲಾ' ಎಂಬ ಹೆಸರಿದ್ದಿತು. ಇಲ್ಲಿಗೆ ಸ್ವಲ್ಪದೂರದಲ್ಲಿ ಕರ್ದಮಿಲವೆಂಬ ಸರೋವರವಿರುವುದು. ಭರತನು ಸ್ನಾನಮಾಡಿದ ಪುಣ್ಯತೀರ್ಥವದು. ಹಿಂದೆ ಶಚೀಪತಿಯಾದ ಇಂದ್ರನಿಗೆ ವೃತ್ರಾಸುರನ ವಧೆಯಿಂದ ಬ್ರಹ್ಮಹತ್ಯಾದೋಷವು ಪ್ರಾಪ್ತವಾಗಿ ಅಲಕ್ಷ್ಮಿಯು ಅವನನ್ನು ಆವರಿಸಿದ್ದಿತು. ಆ ಸಮಯದಲ್ಲಿ ಇಂದ್ರನು ಸಮಂಗಾತೀರ್ಥಕ್ಕೆ ಬಂದು ಈ ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಬ್ರಹ್ಮಹತ್ಯಾ ಪಾಪವನ್ನು ಪರಿಹರಿಸಿಕೊಂಡು ತನ್ನ ಅಲಕ್ಷ್ಮಿಯನ್ನು ಕಳೆದುಕೊಂಡನು. ಈ ಮೈನಾಕಪರ್ವತದ ಮಧ್ಯದಲ್ಲಿ ವಿನಶನಕ್ಷೇತ್ರವಿದೆ. ಈ ಪವಿತ್ರಕ್ಷೇತ್ರದಲ್ಲಿಯೇ ಹಿಂದೆ ಅದಿತಿಯು ಪುತ್ರಕಾಮಳಾಗಿ ಬ್ರಹ್ಮೌದನವನ್ನು ಸಿದ್ಧಗೊಳಿಸಿ ಸಾಧ್ಯದೇವತೆಗಳಿಗೆ ನಿವೇದನೆಮಾಡಿದಳು. **"ಅದಿತಿಃ ಪುತ್ರಕಾಮಾ ಸಾಧ್ಯೇಭ್ಯೋ ದೇವೇಭ್ಯೋ ಬ್ರಹ್ಮೌದನಮಪಚತ್"**

(ಯಜುರ್ವೇದ)

ಧರ್ಮಜ! ಈ ಪರ್ವತವೂ ಪರಮಪವಿತ್ರವಾದುದು. ಈ ಪರ್ವತವನ್ನು ನೀವೆಲ್ಲರೂ ನನ್ನೊಡನೆ ಆರೋಹಣಮಾಡಿ ನಿಮಗೆ ಪ್ರಾಪ್ತವಾಗಿರುವ, ಬಾಯಿಂದಲೂ ಉಚ್ಚರಿಸಲು ಯೋಗ್ಯವಲ್ಲದ ಅಪಯಶಸ್ಸನ್ನು ಹೋಗಲಾಡಿಸಿಕೊಳ್ಳಿರಿ. ಇತ್ತಲಾಗಿ ಕನಖಲಪರ್ವತಗಳಿವೆ. ಇಲ್ಲಿ ಅನೇಕ ಋಷಿ-ಮಹರ್ಷಿಗಳು ವಾಸಮಾಡುತ್ತಿದ್ದಾರೆ. ಇಲ್ಲಿಗೆ ಸ್ವಲ್ಪದೂರದಲ್ಲಿ ಮಹಾನದಿಯಾದ ಗಂಗೆಯು ಪ್ರವಹಿಸುತ್ತಿದೆ. ಭಗವಂತನಾದ ಸನತ್ಕುಮಾರನು ಗಂಗಾನದಿಯ ಈ ತೀರದಲ್ಲಿ ಅನೇಕವರ್ಷಗಳ ಕಾಲ ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆದನು. ನೀನೂ ಈ ಪುಣ್ಯನದಿಯಲ್ಲಿ ಸ್ನಾನಮಾಡುವುದರಿಂದ ಸಕಲಪಾಪಗಳಿಂದಲೂ ವಿಮುಕ್ತನಾಗುವೆ. ನೀನು ನಿನ್ನ ಪರಿವಾರದವರೊಡನೆ 'ಪುಣ್ಯ' ಎಂಬ ಹೆಸರಿನ ಈ ಹ್ರದದಲ್ಲಿ ಸ್ನಾನಮಾಡಿ ಅನಂತರ ಭೃಗುತುಂಗ ಪರ್ವತವನ್ನು ಹತ್ತಿ ಅಲ್ಲಿರುವ ಮಹರ್ಷಿಗಳನ್ನು ಸೇವಿಸಿದ ನಂತರ ಉಷ್ಣೀ ಗಂಗಾನದಿಗಳಲ್ಲಿ ಸ್ನಾನಮಾಡು.

ಧರ್ಮಜ! ಈ ಕ್ಷೇತ್ರದಲ್ಲಿಯೇ ಸ್ಥೂಲಶಿರಮಹರ್ಷಿಗಳ ರಮಣೀಯವಾದ ಆಶ್ರಮವಿರುವುದು. ಈ ದಿವ್ಯಾಶ್ರಮದಲ್ಲಿ, ನಿನ್ನಲ್ಲಿ ಇನ್ನೂ ಉಳಿದಿರುವ ಮಾನ-ಕ್ರೋಧಗಳನ್ನು ವಿಸರ್ಜಿಸುವವನಾಗು. ದಿವ್ಯವಾದ

ಕಾಂತಿಯಿಂದ ಕೂಡಿರುವ ರೈಭ್ಯಾಶ್ರಮವೂ ಇಲ್ಲಿಯೇ ಇರುವುದು. ಭರದ್ವಾಜನ ಪುತ್ರನೂ, ಪಂಡಿತನೂ ಆದ ಯವಕ್ರೀತನು ಈ ಆಶ್ರಮದಲ್ಲಿ ವಿನಾಶಹೊಂದಿದನು."

ಯುಧಿಷ್ಠಿರನು ಪ್ರಶ್ನಿಸುತ್ತಾನೆ :

"ಮಹರ್ಷಿಗಳೇ! ಮಹರ್ಷಿಯಾದ ಭರದ್ವಾಜನು ಎಂತಹ ಶಕ್ತಿ ಸಂಪನ್ನನಾಗಿದ್ದನು? ಅವನ ಮಗನಾದ ಯವಕ್ರೀತನು ಹೇಗೆ ಅಧ್ಯಯನ ಮಾಡಿದನು ಮತ್ತು ಈ ಕ್ಷೇತ್ರದಲ್ಲಿ ಅವನು ವಿನಾಶಹೊಂದಲು ಕಾರಣ ವೇನು? ನಾನು ಆ ಚರಿತ್ರೆಯನ್ನು ವಿಶದವಾಗಿ ಕೇಳುವ ಆಶಯದಿಂದಿರು ವೆನು. ದೇವಸದೃಶರಾದವರು ಮಾಡಿದ ಮಹಾಕಾರ್ಯಗಳನ್ನು ಕೇಳುವುದ ರಿಂದ ನನಗೆ ಹೆಚ್ಚು ಆನಂದವಾಗುತ್ತದೆ."

ಯುಧಿಷ್ಠಿರನ ಪ್ರಾರ್ಥನೆಯಂತೆ ಲೋಮಶರು ಯವಕ್ರೀತನ ಚರಿತೆ ಯನ್ನು ಹೇಳಲು ಪ್ರಾರಂಭಿಸಿದರು.

"ಧರ್ಮಜ! ಭರದ್ವಾಜ ಮತ್ತು ರೈಭ್ಯರು ಬಾಲ್ಯಸ್ನೇಹಿತರಾಗಿದ್ದರು. ಅವರಿಬ್ಬರೂ ಈ ಕ್ಷೇತ್ರದಲ್ಲಿಯೇ ವಾಸವಾಗಿದ್ದರು. ಪರಸ್ಪರ ಸಮಾಗಮ, ಸಂಭಾಷಣೆ, ಧರ್ಮಜಿಜ್ಞಾಸೆ–ಇತ್ಯಾದಿಗಳಿಂದ ಅವರು ಹೆಚ್ಚಿನ ಆನಂದವನ್ನು ಪಡೆಯುತ್ತಿದ್ದರು.

ರೈಭ್ಯನಿಗೆ ಅರ್ವಾವಸು, ಪರಾವಸು ಎಂಬ ಇಬ್ಬರು ಮಕ್ಕಳಿದ್ದರು. ಭರದ್ವಾಜನಿಗೆ ಯವಕ್ರೀತನೆಂಬ ಒಬ್ಬನೇ ಮಗನಿದ್ದನು. ರೈಭ್ಯನೂ ಮತ್ತು ಅವನ ಮಕ್ಕಳೂ ವೇದ-ವೇದಾಂಗಗಳಲ್ಲಿ ಪಾರಂಗತರಾಗಿದ್ದರು. ಮಕ್ಕಳಿಂದ ಕೂಡಿದ್ದ ರೈಭ್ಯನು ವಿದ್ವಾಂಸನಾಗಿಯೂ ತಪಸ್ವಿಯಾಗಿಯೂ ಮತ್ತು ಚತುರನಾಗಿಯೂ ಇದ್ದನು. ಬಾಲ್ಯದಿಂದಲೂ ರೈಭ್ಯನ ಇಬ್ಬರು ಮಕ್ಕಳೂ ಅತುಲವಾದ ಕೀರ್ತಿಯನ್ನು ಗಳಿಸಿದ್ದರು.

ಸಮಾಜದಲ್ಲಿ ರೈಭ್ಯನಿಗೂ ಮತ್ತು ಅವನ ಮಕ್ಕಳಿಗೂ ಹೆಚ್ಚು ಗೌರವ ವಿದ್ದಿತು. ಅವರು ವೇದ-ವೇದಾಂಗಪಾರಂಗತರಾಗಿ ಸಕಲಶಾಸ್ತ್ರಗಳಲ್ಲಿಯೂ ನಿಷ್ಣಾತರಾಗಿದ್ದುದೇ ಅದಕ್ಕೆ ಮುಖ್ಯಕಾರಣ. ಭರದ್ವಾಜನು ಯಾರ ಗೊಡವೆಗೂ ಹೋಗದೇ ಸರ್ವದಾ ಜಪ-ತಪಗಳಲ್ಲಿಯೇ ನಿರತನಾಗಿದ್ದುದ

ರಿಂದ ಭರದ್ವಾಜನನ್ನಾಗಲೀ ಅವನ ಮಗ ಯವಕ್ರೀತನನ್ನಾಗಲೀ ಬ್ರಾಹ್ಮಣರು ಪುರಸ್ಕರಿಸುತ್ತಿರಲಿಲ್ಲ. ಬದಲಾಗಿ ಭರದ್ವಾಜನನ್ನು ಸ್ವಲ್ಪ ತಿರಸ್ಕಾರಭಾವನೆಯಿಂದಲೇ ಕಾಣುತ್ತಿದ್ದರು. ಬ್ರಾಹ್ಮಣರು ತನ್ನ ವಿಷಯದಲ್ಲಿ ತೋರುತ್ತಿದ್ದ ಅನಾದರಣೆಯನ್ನು ಜ್ಞಾನಿಯಾದ ಭರದ್ವಾಜನು ಪರಿಗಣಿಸದಿದ್ದರೂ ಯುವಕನಾದ ಯವಕ್ರೀತನಿಗೆ ಆ ವಿಷಯವು ಹೆಚ್ಚು ಖೇದವನ್ನುಂಟು ಮಾಡಿತು. ಯವಕ್ರೀತನು ಕುಪಿತನಾಗಿ ತಾನೂ ವೇದ-ವೇದಾಂಗಪಾರಂಗತನಾಗಲು ನಿಶ್ಚಯಿಸಿ ವೇದಗಳಲ್ಲಿ ಪಾಂಡಿತ್ಯವನ್ನು ತಪಸ್ಸಿನ ಮೂಲಕವಾಗಿಯೇ ಪಡೆಯಲು ಸಂಕಲ್ಪಿಸಿದವನಾಗಿ ಬಹುಘೋರತರವಾದ ತಪಸ್ಸಿನಲ್ಲಿ ನಿರತನಾದನು.

ಯಜ್ಞೇಶ್ವರನನ್ನು ಪ್ರತಿಷ್ಠಾಪಿಸಿ ಧಗಧಗನೆ ಉರಿಯುವ ಅಗ್ನಿಯಲ್ಲಿ ತನ್ನ ದೇಹವನ್ನು ಕಾಯಿಸುತ್ತಿದ್ದನು. ಅವನ ಘೋರಕರ್ಮವು ಇಂದ್ರನಿಗೂ ಸಂತಾಪವನ್ನುಂಟುಮಾಡಿತು. ಒಡನೆಯೇ ಇಂದ್ರನು ಯವಕ್ರೀತನ ಬಳಿಗೆ ಬಂದು ಪ್ರಶ್ನಿಸಿದನು :

"ಮಹರ್ಷಿಯೇ! ಯಾವ ಕಾರಣದಿಂದ ನೀನು ಈ ಘೋರವಾದ ತಪಸ್ಸಿನಲ್ಲಿ ಉದ್ಯುಕ್ತನಾಗಿರುವೆ?"

ಯವಕ್ರೀತನು ಹೇಳಿದನು :

**ದ್ವಿಜಾನಾಮನಧೀತಾ ವೈ ವೇದಾಃ ಸುರಗಣಾರ್ಚಿತ ।**
**ಪ್ರತಿಭಾನ್ತ್ವಿತಿ ತಪ್ಯೇಽಹಮಿದಂ ಪರಮಕಂ ತಪಃ ॥೧೯॥**

**ಸ್ವಾಧ್ಯಾಯಾರ್ಥಂ ಸಮಾರಮ್ಭೋ ಮಮಾಯಂ ಪಾಕಶಾಸನ ।**
**ತಪಸಾ ಜ್ಞಾತುಮಿಚ್ಛಾಮಿ ಸರ್ವಜ್ಞಾನಾನಿ ಕೌಶಿಕ ॥೨೦॥**

**ಕಾಲೇನ ಮಹತಾ ವೇದಾಃ ಶಕ್ಯಾ ಗುರುಮುಖಾದ್ವಿಭೋ ।**
**ಪ್ರಾಪ್ತುಂ ತಸ್ಮಾದಯಂ ಯತ್ನಃ ಪರಮೋ ಮೇ ಸಮಾಸ್ಥಿತಃ ॥೨೧॥**

"ಪಾಕಶಾಸನನೇ! 'ಅಧ್ಯಯನವಿಲ್ಲದೆಯೇ ಬ್ರಾಹ್ಮಣರಿಗೆ ವೇದಗಳು ಸ್ಫುರಿಸಲಿ'–ಎಂಬ ಧ್ಯೇಯಕ್ಕಾಗಿ ಪರಮೋಚ್ಚವಾದ ಈ ತಪಸ್ಸನ್ನು ಮಾಡುತ್ತಿದ್ದೇನೆ. ಅಧ್ಯಯನಸಿದ್ಧಿಗಾಗಿಯೇ ನನ್ನ ಮಹಾಪ್ರಯತ್ನವಿದು. ನನ್ನ ಈ ತಪಶ್ಚರಣೆಯಿಂದಲೇ ನಾನು ಸಕಲವೇದಗಳನ್ನೂ, ವೇದಾರ್ಥ

ಗಳನ್ನೂ ತಿಳಿಯಬೇಕೆನ್ನುವ ಆಶಯದಿಂದಿರುತ್ತೇನೆ. ಸಂಪ್ರದಾಯದಂತೆ ಅನುಕ್ರಮವಾಗಿ ಆಚಾರ್ಯಮುಖೇನ ವೇದಾಧ್ಯಯನವನ್ನು ಮಾಡಬೇಕಾದರೆ ಹೆಚ್ಚು ಕಾಲವು ಬೇಕಾಗುತ್ತದೆ. ಕೌಶಿಕನೇ! ಅತ್ಯಲ್ಪಕಾಲದಲ್ಲಿಯೇ ವೇದವೇದಾಂಗಗಳಲ್ಲಿ ಪ್ರಾವೀಣ್ಯವನ್ನು ಪಡೆಯುವ ಸಲುವಾಗಿ ನಾನೀ ಘೋರವಾದ ತಪಸ್ಸನ್ನು ಮಾಡುತ್ತಿದ್ದೇನೆ.”

ಇಂದ್ರನು ಹೇಳುತ್ತಾನೆ :

**ಅಮಾರ್ಗ ಏಷ ವಿಪ್ರರ್ಷೇ ಯೇನ ತ್ವಂ ಯಾತುಮಿಚ್ಛಸಿ ।**
**ಕಿಂ ವಿಘಾತೇನ ತೇ ವಿಪ್ರ ಗಚ್ಛಾಧೀಹಿ ಗುರೋರ್ಮುಖಾತ್ ॥**

“ವಿಪ್ರರ್ಷಿಯೇ! ನೀನು ತಪಸ್ಸಿನ ಮೂಲಕವಾಗಿ ವೇದ-ವೇದಾಂಗಗಳ ಜ್ಞಾನವನ್ನು ಪಡೆಯಲಿಚ್ಛಿಸಿರುವುದು ಸರಿಯಾದ ಮಾರ್ಗವಲ್ಲ. ಗುರುಮುಖೇನ ವೇದಾಧ್ಯಯನವನ್ನು ಮಾಡುವುದೇ ವಿಹಿತವೂ, ಶ್ರೇಯಸ್ಕರವೂ ಆಗಿರುವುದು. ಸಂಪ್ರದಾಯಾನುಸಾರವಾಗಿ ಬಂದಿರುವ ಅಧ್ಯಯನಕ್ರಮ ವನ್ನು ನಾಶಮಾಡುವುದರಿಂದ ನಿನಗಾಗುವ ಪ್ರಯೋಜನವಾದರೂ ಏನು? ಇದರಿಂದ ನಿನಗೆ ಸರ್ವಥಾ ಶ್ರೇಯಸ್ಸುಂಟಾಗಲಾರದು. ಆದುದರಿಂದ ಈ ಘೋರತಪಸ್ಸನ್ನು ಇಲ್ಲಿಗೇ ನಿಲ್ಲಿಸಿ ಆಚಾರ್ಯರ ಬಳಿಗೆ ಹೋಗಿ ವೇದಾಧ್ಯಯನವನ್ನು ಆರಂಭಿಸುವವನಾಗು.”

ಧರ್ಮಜ! ಇಂದ್ರನು ಧರ್ಮಯುಕ್ತವಾದ ಇಷ್ಟು ಮಾತುಗಳನ್ನು ಯವಕ್ರೀತನಿಗೆ ಹೇಳಿ ಹೊರಟುಹೋದನು. ಆದರೆ ಯವಕ್ರೀತನು ಮಾತ್ರ ಇಂದ್ರನ ಮಾತಿಗೆ ಕಿವಿಗೊಡದೇ, ತಪಸ್ಸನ್ನೇ ಮುಂದುವರಿಸಿದನು. ತನ್ನ ಘೋರವಾದ ತಪಸ್ಸಿನಿಂದ ಪುನಃ ಇಂದ್ರನ ಮನಸ್ಸನ್ನೇ ಸಂತಾಪಗೊಳಿಸಿದನು. ಅವನ ತಪಸ್ಸಿನ ಬೇಗೆಯನ್ನು ತಾಳಲಾರದೇ ಇಂದ್ರನು ಪುನಃ ಯವಕ್ರೀತನಿಗೆ ಆದೇಶನೀಡುತ್ತಾ ಹೇಳಿದನು :

**ಅಶಕ್ಯೋಽರ್ಥಃ ಸಮಾರಬ್ಧೋ ನೈತದ್ಬುದ್ಧಿಕೃತಂ ತವ ।**
**ಪ್ರತಿಭಾಸ್ಯನ್ತಿ ವೈ ವೇದಾಸ್ತವ ಚೈವ ಪಿತುಶ್ಚ ತೇ ॥೨೬॥**

“ಭಾರದ್ವಾಜನೇ! ನೀನು ಅಶಕ್ಯವಾದುದನ್ನು ಶಕ್ಯಮಾಡಲು ಉಪಕ್ರಮಿಸಿರುವೆ. ತಪಸ್ಸಿನ ಪ್ರಭಾವದಿಂದಲೇ ವೇದಗಳ ದಿವ್ಯಜ್ಞಾನವು

ಬ್ರಾಹ್ಮಣಸಾಮಾನ್ಯಕ್ಕೂ ಸ್ಫುರಿಸಬೇಕೆಂಬ ಆಶಯದಿಂದ ನೀನೀ ಘೋರವಾದ ತಪಸ್ಸನ್ನು ಮಾಡುತ್ತಿರುವೆ. ಇದೆಂದಿಗೂ ಸಾಧ್ಯವಾಗತಕ್ಕುದಲ್ಲ. ಸರಿಯಾಗಿ ಸಮಾಲೋಚಿಸಿ ನೀನು ಈ ತಪಸ್ಸನ್ನು ಪ್ರಾರಂಭಿಸಿರುವುದಿಲ್ಲ. ನಿನ್ನ ತಪಸ್ಸಿನ ಫಲದಿಂದ ನಿನ್ನ ಮತ್ತು ನಿನ್ನ ತಂದೆಯ ಹೃದಯಗಳಲ್ಲಿ ಮಾತ್ರ ವೇದಗಳು ಪ್ರಕಾಶಗೊಳ್ಳುತ್ತವೆ. (ಇಷ್ಟರಿಂದಲೇ ಸಂತೃಪ್ತನಾಗು.)"

ಅದಕ್ಕುತ್ತರವಾಗಿ ಯವಕ್ರೀತನು ಹೇಳಿದನು :

**ನ ಚೈತದೇವಂ ಕ್ರಿಯತೇ ದೇವರಾಜ ಮಮೇಪ್ಸಿತಮ್ ।**
**ಮಹತಾ ನಿಯಮೇನಾಹಂ ತಪ್ಸ್ಯೇ ಘೋರತರಂ ತಪಃ ॥೨೭॥**

**ಸಮಿದ್ಧೇಽಗ್ನಾವುಪಕೃತ್ಯಾಙ್ಗಮಙ್ಗಂ**
**ಹೋಷ್ಯಾಮಿ ವಾ ಮಘವಂಸ್ತನ್ನಿಬೋಧ ।**
**ಯದ್ಯೇತದೇವಂ ನ ಕರೋಷಿ ಕಾಮಂ**
**ಮಮೇಪ್ಸಿತಂ ದೇವರಾಜೇಹ ಸರ್ವಮ್ ॥೨೮॥**

"ಇಂದ್ರದೇವ! ನೀನು ನನ್ನ ಅಪೇಕ್ಷೆಯನ್ನು ಈಡೇರಿಸದಿದ್ದರೆ ನಾನು ತಪಸ್ಸಿನಿಂದ ಖಂಡಿತವಾಗಿಯೂ ವಿಮುಖನಾಗುವುದಿಲ್ಲ. ನಾನು ಮತ್ತೂ ಘೋರವಾದ ತಪಸ್ಸನ್ನು ಮಾಡಲು ಉಪಕ್ರಮಿಸುವೆನು. ನನ್ನ ಶರೀರವನ್ನು ಅನೇಕಭಾಗಗಳಾಗಿ ಕತ್ತರಿಸಿ ಯಜ್ಞೇಶ್ವರನಲ್ಲಿ ಹೋಮಮಾಡುವೆನು. ಈ ತಪಸ್ಸಿನ ಫಲದಿಂದ ಬ್ರಾಹ್ಮಣರೆಲ್ಲರೂ ಅಧ್ಯಯನವನ್ನು ಮಾಡದೆಯೇ ವೇದವನ್ನು ಪಡೆದುಕೊಳ್ಳುವಂತಾಗಬೇಕು."

ಲೋಮಶರು ಧರ್ಮಜನಿಗೆ ಹೇಳುತ್ತಾರೆ :

"ಧರ್ಮಜ! ಯದ್ಯಪಿ ಇಂದ್ರನು ಹೇಳಿದುದು ಧರ್ಮಸಮ್ಮತ ವಾಗಿದ್ದರೂ ಯವಕ್ರೀತನ ನಿರ್ಧಾರವನ್ನು ಬದಲಾಯಿಸಲು ಅವನಿಗೆ ಸಾಧ್ಯ ವಾಗಲಿಲ್ಲ. ಇಂದ್ರನು ಕ್ಷಣಕಾಲ ಯೋಚಿಸಿದನು. ಉಪಾಯಾಂತರದಿಂದ ಲಾದರೂ ಅವನನ್ನು ಆ ಘೋರತಪಸ್ಸಿನಿಂದ ವಿಮುಖನನ್ನಾಗಿ ಮಾಡ ಬೇಕೆಂದು ನಿಶ್ಚಯಿಸಿದವನಾಗಿ, ಅನೇಕಶತವರ್ಷಗಳು ಕಳೆದಿರುವ, ಬಲಹೀನ ನಾದ, ಯಕ್ಷ್ಮ ( ರೋಗ ) ಪೀಡಿತನಾದ ವೃದ್ಧಬ್ರಾಹ್ಮಣನ ರೂಪವನ್ನು

ಧರಿಸಿ, ಯವಕ್ರೀತನು ಸ್ನಾನಮಾಡಲು ಬರುತ್ತಿದ್ದ ಗಂಗಾನದಿಯ ದಂಡೆಯಲ್ಲಿ ಅಲ್ಲಿದ್ದ ಮರಳಿನಿಂದ ಗಂಗಾನದಿಗೆ ಕಟ್ಟೆಕಟ್ಟಲು ಸತತವಾಗಿ ಪ್ರಯತ್ನಿಸುತ್ತಿದ್ದನು.

ವೃದ್ಧಬ್ರಾಹ್ಮಣನು ಸ್ವಲ್ಪವಾದರೂ ಬಿಡುವಿಲ್ಲದೇ ಮುಷ್ಟಿಯಲ್ಲಿ ಮರಳನ್ನು ಹಿಡಿದು ಗಂಗೆಯಲ್ಲಿ ಹಾಕುತ್ತಾ ಅಣೆಕಟ್ಟನ್ನು ಕಟ್ಟಲು ಯತ್ನಿಸುವಂತೆ ನಟಿಸುತ್ತಿದ್ದನು. ಶೌಚ-ಮುಖಮಾರ್ಜನ-ಸ್ನಾನಾದಿಗಳಿಗಾಗಿ ಗಂಗಾನದಿಗೆ ಬರುತ್ತಿದ್ದ ಯವಕ್ರೀತನ ಗಮನವು ಒಮ್ಮೆ ಆ ಅಸಾಧಾರಣವಾದ ಕಾರ್ಯದೆಡೆಗೆ ಹೊರಳಿತು. ತಡೆಯಲಾಗದ ನಗುವು ಬಂದು ಯವಕ್ರೀತನು ಪಕ-ಪಕನೆ ನಕ್ಕು ಬ್ರಾಹ್ಮಣನಿಗೆ ಹೇಳಿದನು :

**ಕಿಮಿದಂ ವರ್ತತೇ ಬ್ರಹ್ಮನ್ಕಿಂ ಚ ತೇಹ ಚಿಕೀರ್ಷಿತಮ್ ।**
**ಅತೀವ ಹಿ ಮಹಾನ್ಯತ್ನಃ ಕ್ರಿಯತೇಽಯಂ ನಿರರ್ಥಕಃ ॥೩೫॥**

"ಬ್ರಾಹ್ಮಣೋತ್ತಮನೇ! ನೀನು ಮಾಡುತ್ತಿರುವ ಕಾರ್ಯವಾದರೂ ಏನು? ಯಾವ ಉದ್ದೇಶಸಾಧನೆಗಾಗಿ ಈ ಕಾರ್ಯವನ್ನು ಮಾಡುತ್ತಿರುವೆ? ಸಾಧ್ಯವಾಗದೇ ಇರುವ ಕಾರ್ಯಕ್ಕಾಗಿ ನೀನೇಕಿಷ್ಟು ಶ್ರಮಿಸುತ್ತಿರುವೆ?"

ಬ್ರಾಹ್ಮಣನು ಹೇಳುತ್ತಾನೆ :

**ಬನ್ಧಿಷ್ಯೇ ಸೇತುನಾ ಗಙ್ಗಾಂ ಸುಖಃ ಪನ್ಥಾ ಭವಿಷ್ಯತಿ ।**
**ಕ್ಲಿಶ್ಯತೇ ಹಿ ಜನಸ್ತಾತ ತರಮಾಣಃ ಪುನಃ ಪುನಃ ॥೩೬॥**

"ಮಗು! ನಾನು ಗಂಗಾನದಿಗೆ ಸೇತುವೆಯನ್ನು ಕಟ್ಟಲು ಯತ್ನಿಸುತ್ತಿದ್ದೇನೆ. ನಾನು ಸೇತುವೆಯನ್ನು ಕಟ್ಟಿದೆನಾದರೆ ಜನರಿಗೆ ಗಂಗಾನದಿಯನ್ನು ದಾಟಲು ಬಹುಸುಲಭವಾದ ದಾರಿಯನ್ನು ಮಾಡಿಕೊಟ್ಟಂತಾಗುತ್ತದೆ. ಈಗ ಜನರು ದೋಣಿಯಲ್ಲಿಯೇ ಹೋಗಿ-ಬಂದು ಮಾಡಬೇಕಾಗಿರುವುದರಿಂದ ಬಹಳ ತೊಂದರೆಗೀಡಾಗಿದ್ದಾರೆ. ಸ್ವತಂತ್ರವಾಗಿ ಹೋಗಿ ಬರುವಂತಿಲ್ಲ. ಪರಾವಲಂಬನೆಯಿಂದಲೇ ಈ ಗಂಗಾನದಿಯನ್ನು ದಾಟಬೇಕಾಗಿದೆ. ಆದುದರಿಂದ ನಾನು ಈ ಪರಾವಲಂಬನೆಯ ಕಷ್ಟವನ್ನು ಜನರಿಗೆ ತಪ್ಪಿಸಲು ಸೇತುವೆಯನ್ನು ಕಟ್ಟಲು ಉದ್ಯುಕ್ತನಾಗಿದ್ದೇನೆ."

**ನಾಯಂ ಶಕ್ಯಸ್ತ್ವಯಾ ಬದ್ಧುಂ ಮಹಾನೋಘಸ್ತಪೋಧನ ।**
**ಅಶಕ್ಯಾದ್ವಿನಿವರ್ತಸ್ವ ಶಕ್ಯಮರ್ಥಂ ಸಮಾರಭ ॥೩೭॥**

"ಬ್ರಾಹ್ಮಣೋತ್ತಮನೇ! ಮಹಾರಭಸವುಳ್ಳ ಈ ಗಂಗಾಪ್ರವಾಹದಲ್ಲಿ ನೀನು ಸೇತುವೆಯನ್ನು ಕಟ್ಟುವ ಸಾಧ್ಯತೆಯಿಲ್ಲ. ಆದುದರಿಂದ, ಕಾರ್ಯರೂಪಕ್ಕೆ ಖಂಡಿತವಾಗಿಯೂ ತರಲಾಗದ ಕಾರ್ಯದಲ್ಲಿ ಪ್ರವೃತ್ತನಾಗಬೇಡ. ಶಕ್ಯವಿರುವ ಕಾರ್ಯವನ್ನು ಮಾಡು."

**ಯಥೈವ ಭವತಾ ಚೇದಂ ತಪೋ ವೇದಾರ್ಥಮುದ್ಯತಮ್ ।**
**ಅಶಕ್ಯಂ ತದ್ವದಸ್ಮಾಭಿರಯಂ ಭಾರಂ ಸಮಾಹಿತಃ ॥೩೮॥**

"ತಪೋಧನನೇ! ನಾನೀ ಕಾರ್ಯವನ್ನು ಮಾಡಿ ಮುಗಿಸಿಯೇ ತೀರಬೇಕೆಂದು ಸಂಕಲ್ಪಿಸಿಬಿಟ್ಟಿದ್ದೇನೆ. ನೀನೂ ತಪಸ್ಸಿನ ಮೂಲಕವಾಗಿಯೇ ವೇದ-ವೇದಾಂಗಗಳನ್ನು ತಿಳಿಯಬೇಕೆಂದು ಸಾಧಿಸಲು ಅಶಕ್ಯವಾದ ಕಾರ್ಯದಲ್ಲಿಯೇ ಪ್ರವೃತ್ತನಾಗಿರುವೆಯಲ್ಲವೇ?"

ಯವಕ್ರೀತನಿಗೆ ವೃದ್ಧಬ್ರಾಹ್ಮಣನ ಆ ಮಾತುಗಳನ್ನು ಕೇಳಿ ಇಂದ್ರನೇ ವೃದ್ಧಬ್ರಾಹ್ಮಣರೂಪವನ್ನು ಧರಿಸಿ ತನಗೆ ಬುದ್ಧಿಕಲಿಸುವ ಸಲುವಾಗಿ ಬಂದಿರುವನೆಂಬುದು ತಿಳಿಯಿತು. ಬ್ರಾಹ್ಮಣರೆಲ್ಲರಿಗೂ ತನ್ನೊಬ್ಬನ ತಪಸ್ಸಿನಿಂದಲೇ ವೇದಜ್ಞಾನವು ಲಭಿಸಬೇಕೆಂಬುದು ಯವಕ್ರೀತನ ಘೋರ ತಪಸ್ಸಿಗೆ ಕಾರಣವಾಗಿದ್ದಿತು. ಅದು ಲಭಿಸಲಾರದೆಂದು ನಿಶ್ಚಯವಾದನಂತರ ಬ್ರಾಹ್ಮಣನನ್ನು 'ಇಂದ್ರ!'–ಎಂದೇ ಸಂಬೋಧಿಸಿ ಯವಕ್ರೀತನು ಹೇಳಿದನು:

**ಯಥಾ ತವ ನಿರರ್ಥೋಽಯಮಾರಮ್ಭಸ್ತ್ರಿದಶೇಶ್ವರ ।**
**ತಥಾ ಯದಿ ಮಮಾಪೀದಂ ಮನ್ಯಸೇ ಪಾಕಶಾಸನ ॥೩೯॥**

**ಕ್ರಿಯತಾಂ ಯದ್ಭವೇಚ್ಛಕ್ಯಂ ತ್ವಯಾ ಸುರಗಣೇಶ್ವರ ।**
**ವರಾಂಶ್ಚ ಮೇ ಪ್ರಯಚ್ಛಾನ್ಯೈರ್ಯೈರನ್ಯಾನ್ಭವಿತಾಸ್ಮ್ಯತಿ ॥೪೦॥**

"ದೇವರಾಜನೇ! ನಿನ್ನ ಪ್ರಯತ್ನವೂ ವ್ಯರ್ಥವಾಗುವಂತೆ ನನ್ನ ಪ್ರಯತ್ನವೂ ವ್ಯರ್ಥವಾಗುವುದಾದರೆ–ಕಾರ್ಯರೂಪಕ್ಕೆ ತರಬಹುದಾದ

ಮಾರ್ಗವನ್ನಾದರೂ ನಿರ್ದೇಶಿಸು. ಬ್ರಾಹ್ಮಣರೆಲ್ಲರೂ ತಪಶ್ಚರಣೆಯಿಂದ ವೇದವಿದರಾಗುವ ಸಾಧ್ಯತೆಯಿಲ್ಲದಿದ್ದರೆ ಬೇರೆಯ ವರಗಳನ್ನಾದರೂ ದಯ ಪಾಲಿಸು. ನಿನ್ನ ವರಪ್ರಭಾವದಿಂದ ನಾನು ಎಲ್ಲರಿಗಿಂತಲೂ ಶ್ರೇಷ್ಠನೆಂದು ಬ್ರಾಹ್ಮಣಸಮೂಹದಲ್ಲಿ ಪರಿಗಣಿತನಾಗಬೇಕು. ಇದೇ ನನ್ನ ಆಶಯ."

ಧರ್ಮಜ! ದೇವರಾಜನು ಯವಕ್ರೀತನಿಗೆ ಅವನು ಕೇಳಿದಂತೆಯೇ ವರಗಳನ್ನು ದಯಪಾಲಿಸಿ ಹೇಳಿದನು :

**ಪ್ರತಿಭಾಸ್ಯನ್ತಿ ತೇ ವೇದಾಃ ಪಿತ್ರಾ ಸಹ ಯಥೇಪ್ಸಿತಾಃ ।**
**ಯಚ್ಚಾನ್ಯತ್ಕಾಂಕ್ಷಸೇ ಕಾಮಂ ಯವಕ್ರೀರ್ಗಮ್ಯತಾಮಿತಿ ॥೪೧॥**

"ಬ್ರಾಹ್ಮಣೋತ್ತಮ! ನಿನ್ನ ಇಚ್ಛೆಯಂತೆ ಸಕಲವೇದಗಳೂ ನಿನ್ನಲ್ಲಿಯೂ ನಿನ್ನ ತಂದೆಯಲ್ಲಿಯೂ ಉಪಸ್ಥಿತವಾಗುವುವು ಮತ್ತು ನಿನ್ನ ಎಲ್ಲ ಅಭಿಲಾಷೆಗಳೂ ಪೂರ್ಣವಾಗುವುವು. ನೀನಿನ್ನು ಆಶ್ರಮಕ್ಕೆ ಹಿಂದಿರುಗ ಬಹುದು."

ಲೋಮಶರು ಧರ್ಮಜನಿಗೆ ಹೇಳುತ್ತಾರೆ :

"ಧರ್ಮಜ! ತನ್ನ ಅಭಿಲಾಷೆಯನ್ನು ಪೂರ್ಣಮಾಡಿಕೊಂಡು ಯವ ಕ್ರೀತನು ಆಶ್ರಮಕ್ಕೆ ಬಂದು ತಂದೆಗೆ ಅಭಿವಾದನಮಾಡಿ ಹೇಳಿದನು :

**ಪ್ರತಿಭಾಸ್ಯನ್ತಿ ವೈ ವೇದಾ ಮಮ ತಾತಸ್ಯ ಚೋಭಯೋಃ ।**
**ಅತಿ ಚಾನ್ಯಾನ್ಭವಿಷ್ಯಾವೋ ವರಾ ಲಬ್ಧಾಸ್ತಥಾ ಮಯಾ ॥೪೩॥**

"ತಂದೆಯೇ! ನಿನ್ನಲ್ಲಿಯೂ ಮತ್ತು ನನ್ನಲ್ಲಿಯೂ ಸಕಲವೇದಗಳೂ ಉಪಸ್ಥಿತವಾಗುವುವು ಮತ್ತು ನಾವಿಬ್ಬರೂ ಎಲ್ಲರನ್ನೂ ಮೀರಿಸುವೆವು. ಈ ವರಗಳನ್ನು ಇಂದ್ರನಿಂದ ಪಡೆದು ಬಂದಿರುವೆನು."

**ದರ್ಪಸ್ತೇ ಭವಿತಾ ತಾತ ವರಾಲ್ಲಬ್ಧ್ವಾ ಯಥೇಪ್ಸಿತಾನ್ ।**
**ಸ ದರ್ಪಪೂರ್ಣಃ ಕೃಪಣಃ ಕ್ಷಿಪ್ರಮೇವ ವಿನಂಕ್ಷ್ಯಸಿ ॥೪೪॥**

"ಮಗು! ನೀನಿಷ್ಟು ವರಗಳನ್ನು ಪಡೆದು ಬಂದಿದ್ದರೂ ನಾನಿದರಿಂದ ಸಂತುಷ್ಟನಾಗಿಲ್ಲ. ಈ ವರಗಳು ನಿನ್ನ ವಿನಾಶಕ್ಕೇ ಕಾರಣವಾಗುವುವೆಂದು ನಾನು ಭಾವಿಸುತ್ತೇನೆ. ಹೇಗೆಂದರೆ : ನೀನು ನಿನ್ನ ಮನಸ್ಸಿನ ಅಭಿಲಾಷೆ

ಗಳನ್ನು ತಪಸ್ಸಿನ ಮೂಲಕವೇ ಪೂರ್ಣಮಾಡಿಕೊಂಡಿರುವೆಯಾದುದರಿಂದ ನಿನಗೆ ದರ್ಪವುಂಟಾಗುವುದು ಸ್ವಾಭಾವಿಕ. ಅಹಂಕಾರ, ದುರಭಿಮಾನ ಮತ್ತು ಕೃಪಣತ್ವಗಳಿಂದ ಕೂಡಿದ ನೀನು ಬಹುಬೇಗ ವಿನಾಶಹೊಂದುವೆ. ಈ ವಿಷಯದಲ್ಲಿ ದೇವತೆಗಳೇ ಹೇಳಿದ ಒಂದು ಕಥೆಯಿರುವುದು. ಅದನ್ನು ನಿನಗೂ ಹೇಳುವೆನು ; ಕೇಳು :

ಹಿಂದೆ ವೀರ್ಯವಂತನಾದ ಬಾಲಧಿ ಎಂಬ ಋಷಿಯಿದ್ದನು. ಅವನಿಗಿದ್ದ ಏಕಮಾತ್ರಪುತ್ರನೂ ಅಕಾಲಮರಣಕ್ಕೆ ತುತ್ತಾದನು. ಪುತ್ರಶೋಕ ಪೀಡಿತನಾದ ಮಹರ್ಷಿಯು ಮರಣರಹಿತನಾದ ಮತ್ತೊಬ್ಬ ಪುತ್ರನನ್ನು ಪಡೆಯಲು ಉಗ್ರವಾದ ತಪಸ್ಸನ್ನು ಮಾಡಲು ಉಪಕ್ರಮಿಸಿದನು. ಉಗ್ರತಪಸ್ಸಿನ ಫಲವಾಗಿ ಅವನ ಅಪೇಕ್ಷೆಯಂತೆಯೇ ದೇವತೆಗಳು ಅವನಿಗೆ ದೇವತುಲ್ಯನಾದ ಒಬ್ಬ ಮಗನನ್ನು ಅನುಗ್ರಹಿಸಿದರು. ಆದರೆ ಆ ಮಗುವಿಗೆ ದೇವತೆಗಳು ತಮ್ಮಂತೆ ಅಮರತ್ವವನ್ನು ಅಥವಾ ತಮ್ಮ ಸಮಾನತೆಯನ್ನು ಅನುಗ್ರಹಿಸಲಿಲ್ಲ. ಅವರು ಬಾಲಧಿಯನ್ನು ಕುರಿತು ಹೀಗೆ ಹೇಳಿದರು :

"ಋಷಿಸತ್ತಮನೇ! ಯಾವುದೇ ಕಾರಣದಿಂದಲೂ ಮನುಷ್ಯರು ಅಮರರಾಗುವ ಸಾಧ್ಯತೆಯೇ ಇಲ್ಲ. ನಿನ್ನ ಮಗನು ಕೋಟ್ಯನುಕೋಟಿ ವರ್ಷಗಳಾದರೂ ಜೀವಿಸಿರಬಹುದು. ಅನಂತರವಾದರೂ ಅವನಿಗೆ ಮರಣವು ಸನ್ನಿಹಿತವಾಗುವುದು ನಿಶ್ಚಯ. ಆದುದರಿಂದ ಅವನ ಆಯುಸ್ಸಿಗೆ ಪರಿಮಿತಿಯನ್ನು ನೀನೇ ನಿರೂಪಿಸು."

ದೇವತೆಗಳ ಆ ಮಾತಿಗೆ ಉತ್ತರವಾಗಿ ಬಾಲಧಿಯು ಹೇಳಿದನು :

"ಇಲ್ಲಿ ಕಾಣುವ ಪರ್ವತಗಳು ಇದೇ ಸ್ಥಳದಲ್ಲಿಯೇ ಅನಾದಿಕಾಲ ದಿಂದಲೂ ಸ್ಥಿರವಾಗಿ ನಿಂತಿವೆ. ಇವಕ್ಕೆ ನಾಶವಿಲ್ಲ. ಈ ಪರ್ವತಗಳು ಇರುವ ವರೆಗೂ ನನ್ನ ಮಗನು ಬದುಕಿರಲಿ." (ಪರ್ವತಗಳ ವಿನಾಶವು ಅಸಾಧ್ಯ ವಾದುದರಿಂದ ತನ್ನ ಮಗನು ಎಂದೆಂದಿಗೂ ಬದುಕುವನು : ಎಂಬುದೇ ಬಾಲಧಿಯ ಆಶಯವಾಗಿದ್ದಿತು.)

'ಹಾಗೆಯೇ ಆಗಲಿ'–ಎಂದು ಹೇಳಿ ಇಂದ್ರಪ್ರಮುಖರಾದ ದೇವತೆ ಗಳು ತಮ್ಮ-ತಮ್ಮ ಸ್ಥಾನಗಳಿಗೆ ಹೊರಟುಹೋದರು.

ಕೆಲವು ದಿನಗಳು ಕಳೆದನಂತರ ಬಾಲಧಿಗೆ ದೇವತೆಗಳ ವರಪ್ರಸಾದ

ದಂತೆ ಒಂದು ಗಂಡುಮಗುವು ಜನಿಸಿತು. ಆ ಶಿಶುವಿಗೆ ಮೇಧಾವೀ ಎಂದು ಹೆಸರಿಟ್ಟರು. ಪ್ರಾಪ್ತವಯಸ್ಕನಾದ ಮೇಧಾವಿಯು ಮಹಾಕೋಪಿಷ್ಠ ನಾಗಿದ್ದನು. 'ದೀರ್ಘಾಯುಷ್ಮಂತನಾದ ಮಗನನ್ನು ಪಡೆಯಲು ತನ್ನ ತಂದೆಯು ಘೋರವಾದ ತಪಸ್ಸನ್ನು ಮಾಡಿದುದು ಮತ್ತು ಅದರ ಫಲವಾಗಿ ದೇವತೆಗಳು ವರಕೊಟ್ಟುದು'–ಈ ಎಲ್ಲ ವಿಷಯಗಳೂ ಮೇಧಾವಿಗೆ ತಿಳಿಯಿತು. ತನಗೆ ಮರಣವೇ ಇಲ್ಲವೆಂದೂ ತನ್ನನ್ನು ಯಾರೂ ಎದುರಿಸಲಾರರೆಂದೂ ಭಾವಿಸಿದ ಮೇಧಾವಿಯು ದುರಭಿಮಾನದಿಂದ ಋಷಿ- ಮಹರ್ಷಿಗಳನ್ನೂ ಅಪಮಾನಗೊಳಿಸತೊಡಗಿದನು. ಪ್ರಪಂಚದ ಎಲ್ಲೆಡೆಗಳಲ್ಲಿಯೂ ಸ್ವೇಚ್ಛೆಯಿಂದ ಸುತ್ತಾಡುತ್ತಾ ಹಾದಿಯಲ್ಲಿ ಸಿಕ್ಕಿದ ಋಷಿ- ಮಹರ್ಷಿಗಳೆಲ್ಲರಿಗೂ ಉಪದ್ರವಕೊಡುತ್ತಾ ಧನುಷಾಕ್ಷನೆಂಬ ಮಹರ್ಷಿಯ ಸಮೀಪಕ್ಕೆ ಹೋದನು. ಮೇಧಾವಿಯ ಹೀನಕೃತ್ಯವನ್ನು ಕಂಡು ಕುಪಿತನಾದ ಧನುಷಾಕ್ಷನು ಮೇಧಾವಿಯನ್ನು ಭಸ್ಮೀಭೂತನಾಗುವಂತೆ ಶಪಿಸಿದನು. ಧನುಷಾಕ್ಷನ ಶಾಪವು ಮೇಧಾವಿಯ ಮೇಲೆ ಪರಿಣಾಮಕಾರಿಯಾಗಲಿಲ್ಲ. ಅದರಿಂದಾಗಿ ಮತ್ತಷ್ಟು ದರ್ಪಿತನಾದ ಮೇಧಾವಿಯು ಪಕ-ಪಕನೆ ನಗುತ್ತಾ ಧನುಷಾಕ್ಷ ಮಹರ್ಷಿಯನ್ನು ಮತ್ತೂ ಅಪಮಾನಗೊಳಿಸಿದನು. ಮಹಾತಪಸ್ವಿಯಾದ ಧನುಷಾಕ್ಷನು ಅವನ ಮರಣರಹಸ್ಯವನ್ನು ಜ್ಞಾನದೃಷ್ಟಿಯಿಂದ ತಿಳಿದವನಾಗಿ ಒಡನೆಯೇ ತನ್ನ ತಪಶ್ಶಕ್ತಿಯಿಂದ ಕಾಡೆಮ್ಮೆಗಳನ್ನು ಸೃಷ್ಟಿಸಿ ಮೇಧಾವಿಯ ಆಯುಸ್ಸಿಗೆ ಕಾರಣಭೂತವಾದ ಪರ್ವತಗಳನ್ನು ಕಾಡೆಮ್ಮೆಗಳ ಮೂಲಕ ಧ್ವಂಸಗೊಳಿಸಿದನು. ಪರ್ವತಗಳು ಛಿದ್ರ-ವಿಚ್ಛಿದ್ರವಾಗಿ ಮಾಡಲ್ಪಟ್ಟೊಡನೆಯೇ ಧನುಷಾಕ್ಷನ ಶಾಪವು ಪರಿಣಾಮಕಾರಿಯಾಗಿ ಕ್ಷಣಾರ್ಧದಲ್ಲಿ ಮೇಧಾವಿಯು ಮೃತನಾದನು. ಸತ್ತುಹೋದ ತನ್ನ ಮಗನನ್ನು ಕಂಡು ಬಾಲಧಿಯು ವಿಲಪಿಸತೊಡಗಿದನು.

ಯವಕ್ರೀತ! ಬಾಲಧಿಯು ತನ್ನ ಮೃತನಾದ ಮಗನನ್ನು ತೊಡೆಯ ಮೇಲಿಟ್ಟುಕೊಂಡು ರೋದಿಸುತ್ತಿದ್ದ ಸಮಯದಲ್ಲಿ ಸುತ್ತಲೂ ನೆರೆದಿದ್ದ ವೇದ-ವೇದಾಂಗಪಾರಂಗತರಾದ ಋಷಿ-ಮಹರ್ಷಿಗಳು ಬಾಲಧಿಗೆ ಹೇಳಿದರು :

**ನ ದಿಷ್ಟಮರ್ಥಮತ್ಯೇತುಮೀಶೋ ಮರ್ತ್ಯಃ ಕಥಂಚನ ।**
**ಮಹಿಷೈರ್ಭೇದಯಾಮಾಸ ಧನುಷಾಕ್ಷೋ ಮಹೀಧರಾನ್ ॥೫೫॥**

"ಬಾಲಧಿಯೇ! ದೈವನಿಯಮವನ್ನು ಮೀರಲು ಮಾನವನೆಂದಿಗೂ ಸಮರ್ಥನಲ್ಲ. ಧನುಷಾಕ್ಷನು ಕಾಡುಕೋಣಗಳಿಂದ ಪರ್ವತಗಳನ್ನೇ ನಿರ್ಮೂಲಗೊಳಿಸಿದನು. ಆದುದರಿಂದ ನಿನ್ನ ಪುತ್ರನ ಮರಣಕ್ಕಾಗಿ ದುಃಖಿಸಬೇಡ."

ಮಗು! ಯುವಕರಾದ ಋಷಿಕುಮಾರರು ಘೋರವಾದ ತಪಸ್ಸನ್ನು ಮಾಡಿ ವರಗಳನ್ನು ಪಡೆದು ಗರ್ವಿಷ್ಠರಾಗಿ ಅತ್ಯಲ್ಪಕಾಲದಲ್ಲಿಯೇ ವಿನಾಶ ವನ್ನು ಹೊಂದುತ್ತಾರೆ. ಈ ಕಾರಣದಿಂದ ನೀನಿಂದು ಪಡೆದಿರುವ ವರಕ್ಕಾಗಿ ನಾನೆಂದಿಗೂ ಸಂತೋಷಪಡುವುದಿಲ್ಲ. ನಿನ್ನ ವಿನಾಶವು ಸನ್ನಿಹಿತವಾಯಿತೆಂದೇ ಸಂಕಟಪಡುತ್ತಿದ್ದೇನೆ. ನನ್ನ ಈ ಮಾತನ್ನಾದರೂ ನೆನಪಿನಲ್ಲಿಟ್ಟುಕೊ. ನನ್ನ ಮಿತ್ರನಾದ ರೈಭ್ಯನು ಸಾಮಾನ್ಯನಲ್ಲ. ಮಹಾವೀರ್ಯನು ಮತ್ತು ಮಹಾಸತ್ತ್ವನು. ಅವನ ಮಕ್ಕಳು ತಂದೆಯಂತೆಯೇ ಮಹಾವೀರ್ಯರೂ ಮತ್ತು ಮಹಾಸತ್ತ್ವರೂ ಆಗಿರುತ್ತಾರೆ. ಆದುದರಿಂದ ನೀನು ಯಾವಾಗಲೂ ಅವರ ವಿಷಯದಲ್ಲಿ ಅತ್ಯಂತಜಾಗರೂಕನಾಗಿರು. ಅವರ ಹತ್ತಿರಕ್ಕೂ ಹೋಗಬೇಡ. ರೈಭ್ಯನು ಮಹಾಕೋಪಿಷ್ಠನೂ ಆಗಿರುತ್ತಾನೆ. ಅವನು ನಿನ್ನ ಮೇಲೆ ಕೋಪಗೊಂಡರೆ ನಿನಗೆ ಖಂಡಿತವಾಗಿಯೂ ಕೇಡುಂಟಾಗುತ್ತದೆ."

ಯವಕ್ರೀತನು ಹೇಳಿದನು :

"ತಂದೆಯೇ! ನೀನು ಹೇಳಿದಂತೆಯೇ ನಾನು ನಡೆಯುವೆನು. ಈ ವಿಷಯವಾಗಿ ನೀನು ಸ್ವಲ್ಪವೂ ಪರಿತಾಪಪಡಬೇಕಾಗಿಲ್ಲ. ತಂದೆಯಾದ ನಿನ್ನನ್ನು ಗೌರವಿಸುವಂತೆಯೇ ಪೂಜ್ಯನಾದ ರೈಭ್ಯನನ್ನೂ ಗೌರವಿಸುತ್ತೇನೆ."

ಧರ್ಮಜ! ಯವಕ್ರೀತನು ತಂದೆಯಾದ ಭರದ್ವಾಜನನ್ನು ಸಂತೈಸು ವುದಕ್ಕಾಗಿ ಸೌಜನ್ಯಯುತವಾದ ಮಾತುಗಳನ್ನು ಹೇಳಿದ್ದೇನೋ ನಿಜ. ಆದರೆ ಯಾರಿಗೂ ಯಾವುದಕ್ಕೂ ಭಯಪಡದೇ ಸ್ವೇಚ್ಛಾಚಾರಿಯಾಗಿ ಋಷಿ-ಮಹರ್ಷಿಗಳನ್ನು ಕುಚೋದ್ಯಮಾಡುತ್ತಾ ಅದರಿಂದಲೇ ಆನಂದ ಪಡುತ್ತಾ ಯವಕ್ರೀತನು ಕಾಲಕಳೆಯುತ್ತಿದ್ದನು."

ಁ೩೭ನೆಯ ಅಧ್ಯಾಯವು ಮುಗಿಯಿತು.

## ಯವಕ್ರೀತನು ರೈಭ್ಯನ ಸೊಸೆಯೊಡನೆ ಅತ್ಯಾಚಾರವನ್ನೆಸಗಲು ಉದ್ಯುಕ್ತನಾದುದು: ರೈಭ್ಯನ ಕೋಪದಿಂದ ಉತ್ಪನ್ನನಾದ ರಾಕ್ಷಸನಿಂದ ಯವಕ್ರೀತನ ಸಂಹಾರ

ಲೋಮಶರು ಮುಂದುವರಿದು ಹೇಳುತ್ತಾರೆ :

"ಧರ್ಮಜ! ವೈಶಾಖಮಾಸದ ಒಂದು ದಿನ ಯವಕ್ರೀತನು ಭಯ ರಹಿತನಾಗಿ ಅಲ್ಲಲ್ಲಿ ತಿರುಗಾಡುತ್ತಾ ಕಡೆಗೆ ರೈಭ್ಯನ ಆಶ್ರಮಕ್ಕೂ ಹೋದನು. ರಮ್ಯವಾಗಿಯೂ ಪುಷ್ಪಭರಿತವಾಗಿದ್ದ ವೃಕ್ಷಗಳಿಂದ ಸುತ್ತುವರಿಯಲ್ಪಟ್ಟಿದ್ದಾಗಿಯೂ ಇದ್ದ ರೈಭ್ಯನ ಪುಣ್ಯಾಶ್ರಮದಲ್ಲಿ ಕಿನ್ನರಿಯೋಪಾದಿಯಲ್ಲಿ ಅನುಪಮವಾದ ಸೌಂದರ್ಯದಿಂದ ಕಂಗೊಳಿಸುತ್ತಾ ಅತ್ತಲಿತ್ತ ತಿರುಗಾಡುತ್ತಿದ್ದ ರೈಭ್ಯನ ಸೊಸೆಯನ್ನು ಯವಕ್ರೀತನು ನೋಡಿದನು. ಅವಳ ಅನುಪಮ ಸೌಂದರ್ಯವನ್ನು ಕಂಡು ಯವಕ್ರೀತನ ಬುದ್ಧಿಯು ಭ್ರಮಿಸಿತು. ಕಾಮದೇವನು ಅವನ ಮನಸ್ಸನ್ನು ಕಲಕಿಬಿಟ್ಟನು. ಲಜ್ಜಾನ್ವಿತೆಯಾದ ರೈಭ್ಯನ ಸೊಸೆಯನ್ನು ಕುರಿತು ಯವಕ್ರೀತನು ನಿರ್ಲಜ್ಜನಾಗಿ ಹೇಳಿದನು :

"ಮಂಗಳಾಂಗಿಯೇ! ನೀನು ನನ್ನವಳಾಗು."

ರೈಭ್ಯನ ಸೊಸೆಯು ಸೌಂದರ್ಯವತಿಯಾಗಿದ್ದುದು ಮಾತ್ರವಲ್ಲದೇ ಬಹಳ ಚತುರೆಯೂ ಆಗಿದ್ದಳು. ಅವಳಿಗೆ ಯವಕ್ರೀತನ ತಪಶ್ಶಕ್ತಿಯೆಷ್ಟೆಂಬುದೂ ತಿಳಿದಿತ್ತು. ಪ್ರಸಕ್ತಸಮಯದಲ್ಲಿ ತಾನು ಅವನ ಮಾತಿಗೆ ವಿರೋಧವಾಗಿ ವರ್ತಿಸಿದರೆ ತನ್ನನ್ನು ಶಪಿಸದೇ ಬಿಡಲಾರನೆಂದೂ ಅವಳು ತಿಳಿದಿದ್ದಳು. ಮೇಲಾಗಿ ತನ್ನ ಮಾವನಾದ ರೈಭ್ಯಮಹರ್ಷಿಯೂ ಸಾಮಾನ್ಯನೆಂದು ಅವಳು ಭಾವಿಸಿರಲಿಲ್ಲ. ಆದುದರಿಂದಲೇ ಉಪಾಯಾಂತರದಿಂದ ತನಗೆ ಒದಗಲಿರುವ ಆಪತ್ತನ್ನು ತಪ್ಪಿಸಿಕೊಳ್ಳಲು ನಿಶ್ಚಯಿಸಿದವಳಾಗಿ ಯವಕ್ರೀತನ ಸಮೀಪಕ್ಕೆ ಹೋಗಿ 'ಮಹರ್ಷಿಯೇ! ನಿನ್ನ ಮಾತಿಗೆ ನಾನು ಒಪ್ಪಿದ್ದೇನೆ' ಎಂದಳು.

ಅನಂತರದಲ್ಲಿ ಯವಕ್ರೀತನನ್ನು ಗೋಪ್ಯವಾದ ಸ್ಥಳಕ್ಕೆ ಕರೆದುಕೊಂಡು

ಹೋಗಿ ಅವನೊಡನೆ ಸ್ವಲ್ಪಕಾಲ ಸರಸವಾಡುತ್ತಿರುವಂತೆ ನಟಿಸುತ್ತಿದ್ದು ಅನಂತರದಲ್ಲಿ ಅವನನ್ನು ಅಲ್ಲಿಯೇ ಬಿಚ್ಚಿಟ್ಟು ಆಶ್ರಮಕ್ಕೆ ಹಿಂದಿರುಗಿದಳು. ಆ ವೇಳೆಗೆ ಸರಿಯಾಗಿ ಆಶ್ರಮಕ್ಕೆ ಆಗಮಿಸಿದ ರೈಭ್ಯನು ತನ್ನ ಸೊಸೆಯು ಕಣ್ಣೀರಿಡುತ್ತಿರುವುದನ್ನು ಕಂಡು ಆಶ್ಚರ್ಯಚಕಿತನಾಗಿ ಅವಳ ಅಳುವಿಗೆ ಕಾರಣವನ್ನು ಕೇಳಿದನು.

ಅದಕ್ಕುತ್ತರವಾಗಿ ಪರಾವಸುವಿನ ಪತ್ನಿಯು–ಯವಕ್ರೀತನು ಆಗಮಿಸಿದುದನ್ನೂ ಮತ್ತು ತನ್ನೊಡನೆ ಮಾಡಿದ ಸಂಭಾಷಣೆಯನ್ನೂ–ವಿವರವಾಗಿ ಹೇಳಿದಳು. ಯವಕ್ರೀತನು ಮಾಡಿದ ಆ ದುಶ್ಚೇಷ್ಟೆಯಿಂದಾಗಿ ರೈಭ್ಯನ ಮನಸ್ಸು ಕೋಪಾಗ್ನಿಯಿಂದ ಕದಡಿಹೋಯಿತು. ಈ ಪ್ರಪಂಚವನ್ನೇ ದಹಿಸಿಬಿಡುವನೋ ಎಂಬಂತೆ ರೌದ್ರಾವತಾರವನ್ನೇ ತಾಳಿದನು. ಕೋಪಾವಿಷ್ಟನಾದ, ತಪಸ್ವಿಯಾದ ರೈಭ್ಯನು ಒಡನೆಯೇ ತನ್ನ ಜಟೆಯಿಂದ ಒಂದು ಕೂದಲನ್ನು ಕಿತ್ತು ಅದಕ್ಕೆ ಸಂಸ್ಕರಣಮಾಡಿ ಯಜ್ಞೇಶ್ವರನಲ್ಲಿ ಹೋಮ ಮಾಡಿದನು. ಒಡನೆಯೇ ಯಜ್ಞೇಶ್ವರನ ಮಧ್ಯದಿಂದ ಪರಾವಸುವಿನ ಪತ್ನಿಗೆ ಸದೃಶಳಾದ ಸ್ತ್ರೀಯೊಬ್ಬಳು ಹೊರಗೆ ಬಂದಳು. ರೈಭ್ಯಮಹರ್ಷಿಯು ಪುನಃ ತನ್ನ ಜಟೆಯಿಂದ ಮತ್ತೊಂದು ಕೂದಲನ್ನು ಕಿತ್ತು ಯಥಾವಿಧಿಯಾಗಿ ಸಂಸ್ಕರಣಮಾಡಿ ಯಜ್ಞೇಶ್ವರನಲ್ಲಿ ಹೋಮಮಾಡಿದನು. ಎರಡನೆಯ ಬಾರಿ ಕೇಶಹೋಮವನ್ನು ಮಾಡಿದೊಡನೆಯೇ ಕ್ರೂರವಾದ ದೃಷ್ಟಿಯನ್ನು ಹೊಂದಿದ್ದ ಭಯಂಕರನಾದ ರಾಕ್ಷಸನು ಯಜ್ಞಕುಂಡದಿಂದ ಹೊರಬಂದನು. ಅಗ್ನಿಸಮುದ್ಭೂತರಾದ ಆ ಇಬ್ಬರೂ ಬದ್ಧಾಂಜಲಿಗಳಾಗಿ ರೈಭ್ಯನ ಮುಂದೆ ನಿಂತು–"ಬ್ರಾಹ್ಮಣೋತ್ತಮನೇ! ನಾವಿಬ್ಬರೂ ನಿನಗಾಗಿ ಯಾವ ಕಾರ್ಯವನ್ನು ಮಾಡಬೇಕಾಗಿದೆ? ಒಡನೆಯೇ ತಿಳಿಸು"–ಎಂದು ಪ್ರಾರ್ಥಿಸಿದರು.

ಅದಕ್ಕುತ್ತರವಾಗಿ ಕುಪಿತನಾದ ರೈಭ್ಯನು–"ಈಗಲೇ ಹೋಗಿ ಯವಕ್ರೀತನನ್ನು ಕೊಂದುಬಿಡಿರಿ"–ಎಂದು ಆಜ್ಞಾಪಿಸಿದನು.

"ಹಾಗೆಯೇ ಆಗಲಿ ; ತಮ್ಮ ಅಪ್ಪಣೆಯಂತೆ ಯವಕ್ರೀತನನ್ನು ಕೊಲ್ಲು

ತ್ತೇವೆ”–ಎಂದು ಹೇಳಿ ಯವಕ್ರೀತನನ್ನು ಕೊಲ್ಲುವ ಸಲುವಾಗಿ ಇಬ್ಬರೂ ಹೊರಟುಹೋದರು.

ಯವಕ್ರೀತನಿದ್ದ ರಹಸ್ಯಸ್ಥಳಕ್ಕೆ ಆಗಮಿಸಿದ ತರುಣಿಯು ತನ್ನ ಹಾವ-ಭಾವಗಳಿಂದ ಋಷಿಪುತ್ರನನ್ನು ವಿಮೋಹಗೊಳಿಸಿ ಅವನ ಸಮೀಪದಲ್ಲಿದ್ದ ಕಮಂಡಲುವನ್ನು ಅಪಹರಿಸಿಬಿಟ್ಟಳು. ಕಮಂಡಲುವು ಸಮೀಪದಲ್ಲಿಲ್ಲದಿದ್ದರೆ ತಪಸ್ವಿಗೆ ಅಶುಚಿತ್ವವುಂಟಾಗುತ್ತದೆ. ಅದೇ ಸಮಯದಲ್ಲಿ ರೈಭ್ಯನ ಹೋಮಾಗ್ನಿಯಿಂದ ಪ್ರಾದುರ್ಭೂತನಾದ ರಾಕ್ಷಸನು ಕೈಯಲ್ಲಿ ತ್ರಿಶೂಲವನ್ನು ಹಿಡಿದು ಅಪರಿಶುದ್ಧನಾದ ಯವಕ್ರೀತನನ್ನು ಕೊಲ್ಲುವ ಸಲುವಾಗಿ ಅವನ ಮೇಲೆ ಬೀಳಲು ಹೋದನು. ತಾನು ಕಾಮಿಸಿದ್ದ ತರುಣಿಯೂ ಆ ವೇಳೆಗೆ ಕಮಂಡಲುವಿನೊಡನೆ ಮಾಯವಾಗಿದ್ದಳು. ತನಗೊದಗಿದ ವಿಪತ್ತನ್ನು ತಪ್ಪಿಸಿಕೊಳ್ಳಲು ಯವಕ್ರೀತನಿಗೆ ಒಂದು ಉದ್ಧರಣೆಯಷ್ಟು ಮಾತ್ರ ತೀರ್ಥವು ಬೇಕಾಗಿದ್ದಿತು. ಕಮಂಡಲುವು ಹತ್ತಿರದಲ್ಲಿದ್ದಿದ್ದರೆ ಅಂತಹ ನೂರಾರು ಭೂತಗಳನ್ನಾದರೂ ಯವಕ್ರೀತನು ಕ್ಷಣಮಾತ್ರದಲ್ಲಿ ತನ್ನ ಮಂತ್ರಶಕ್ತಿಯಿಂದ ದಹಿಸಿಬಿಡುತ್ತಿದ್ದನು. ಆದರೆ ಪವಿತ್ರೋದಕದಿಂದ ಪೂರ್ಣವಾದ ಕಮಂಡಲುವೇ ಮಾಯವಾಗಿ ಹೋಗಿತ್ತು. ಈ ಕಾರಣದಿಂದ ಯವಕ್ರೀತನು ಅಶುಚಿಯಾದನು. ಅವನು ಭಯಗೊಂಡು ತೀರ್ಥಕ್ಕಾಗಿ ಸರೋವರದ ಕಡೆಗೆ ಧಾವಿಸಿದನು. ಹಿಂದೆಯೇ ತ್ರಿಶೂಲವನ್ನೆತ್ತಿ ರಾಕ್ಷಸನೂ ಧಾವಿಸಿದನು. ರಾಕ್ಷಸನ ಮಾಯೆಯಿಂದಾಗಿ ಸರೋವರದಲ್ಲಿ ನೀರೇ ಇರಲಿಲ್ಲ. ಯವಕ್ರೀತನು ಮತ್ತೂ ಭೀತನಾಗಿ ನದಿಯ ಕಡೆಗೂ ಧಾವಿಸಿದನು. ನದಿಯೂ ಅವನ ಕಣ್ಣಿಗೆ ಒಣಗಿಹೋಗಿರುವಂತೆಯೇ ಕಂಡಿತು. ರಾಕ್ಷಸನು ಬೆನ್ನಟ್ಟಿ ಬರುತ್ತಲೇ ಇದ್ದನು. ಪ್ರಾಣವುಳಿಸಿಕೊಳ್ಳಲು ಮುಂದೇನು ಮಾಡಬೇಕೆಂಬುದೇ ಯವಕ್ರೀತನಿಗೆ ತಿಳಿಯದೇ ಹೋಯಿತು. ತನ್ನ ತಂದೆಯ ಅಗ್ನಿಹೋತ್ರಶಾಲೆಯನ್ನಾದರೂ ಪ್ರವೇಶಿಸಿದರೆ ತನ್ನ ಪ್ರಾಣವುಳಿಯಬಹುದೆಂದು ಯವಕ್ರೀತನು ಭಾವಿಸಿ, ಅಗ್ನಿಹೋತ್ರಾಗಾರಕ್ಕೆ ಪ್ರವೇಶಿಸಹೋದನು. ಆ ಸಮಯಕ್ಕೆ ಸರಿಯಾಗಿ ದುರ್ವಿಧಿಯೋ ಎಂಬಂತೆ ಅಗ್ನಿಹೋತ್ರಾಗಾರದ ಬಾಗಿಲನ್ನು ಕಾಯುತ್ತಿದ್ದ ಕುರುಡನಾದ, ನೀಚಜಾತಿಯ ಕಾವಲುಗಾರನು ಯವಕ್ರೀತನನ್ನು ಹಿಡಿದು ನಿಲ್ಲಿಸಿದನು. ಒಳಗೆ ಹೋಗುತ್ತಿರುವವನು ಭರದ್ವಾಜಪುತ್ರನಾದ ಯವಕ್ರೀತ

ನೆಂಬ ಅರಿವೂ ಆ ಸಮಯದಲ್ಲಿ ಕುರುಡನಿಗಾಗಲಿಲ್ಲ. ಕಾವಲುಗಾರನ ಸ್ಪರ್ಶವಾದೊಡನೆಯೇ ಯವಕ್ರೀತನಿಗೆ ಹೆಚ್ಚು ಅಶುಚಿತ್ವವುಂಟಾಗಿ ಬೆನ್ನಟ್ಟಿಬಂದ ರಾಕ್ಷಸನಿಗೆ ಅವನನ್ನು ಕೊಲ್ಲಲು ಒಳ್ಳೆಯ ಸಮಯವೂ ಸಿಕ್ಕಿದಂತಾಯಿತು. ಕ್ಷಣಮಾತ್ರದಲ್ಲಿ ರಾಕ್ಷಸನು ಶೂಲಾಯುಧದಿಂದ ಕಾವಲುಗಾರನಿಂದ ಹಿಡಿಯಲ್ಪಟ್ಟಿದ್ದ ಯವಕ್ರೀತನನ್ನು ಇರಿದು ಕೊಂದುಹಾಕಿದನು.

ಈ ರೀತಿಯಲ್ಲಿ ಯವಕ್ರೀತನನ್ನು ಕೊಂದ ರಾಕ್ಷಸನು ಪುನಃ ರೈಭ್ಯನ ಸಮೀಪಕ್ಕೆ ಹೋಗಿ ಯವಕ್ರೀತನನ್ನು ಸಂಹರಿಸಿದ ವಾರ್ತೆಯನ್ನು ತಿಳಿಸಿ ಅವನ ಅನುಮತಿಯನ್ನು ಪಡೆದು ಯವಕ್ರೀತನ ಕೊಲೆಯ ಸಲುವಾಗಿ ಸೃಷ್ಟಿಸಿದ್ದ ತರುಣಿಯೊಡನೆ ಸುಖವಾಗಿ ಕಾಲಕಳೆಯತೊಡಗಿದನು.

೧೩೬ನೆಯ ಅಧ್ಯಾಯವು ಮುಗಿಯಿತು.

---

೧೩೭ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಭರದ್ವಾಜನ ಪುತ್ರಶೋಕ : ರೈಭ್ಯನಿಗೆ ಶಾಪವಿತ್ತು ಭರದ್ವಾಜನು ಅಗ್ನಿಪ್ರವೇಶಮಾಡಿದುದು

ಧರ್ಮಜ! ಅತ್ತಲಾಗಿ ಭರದ್ವಾಜಮಹರ್ಷಿಯು ನದೀತೀರದಲ್ಲಿ ಅಧ್ಯಯನ ಮತ್ತು ಆಹ್ನಿಕಗಳನ್ನು ಮುಗಿಸಿಕೊಂಡು ಹೋಮಕ್ಕಾಗಿ ಸಮಿತ್ಕುಶಗಳನ್ನು ತೆಗೆದುಕೊಂಡು ಆಶ್ರಮವನ್ನು ಪ್ರವೇಶಿಸಿದನು. ಅನುದಿನವೂ ಅವನು ಆಶ್ರಮಕ್ಕೆ ಪ್ರವೇಶಿಸುತ್ತಿದ್ದಂತೆಯೇ ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯಾಗ್ನಿಗಳೇ ಬಂದು ಭರದ್ವಾಜಮಹರ್ಷಿಯನ್ನು ಸ್ವಾಗತಿಸುವ ಸಂಪ್ರದಾಯವಿತ್ತು. ಆದರೆ ಅಂದಿನ ದಿನ ಮಹರ್ಷಿಯ ಮಗನಾದ ಯವಕ್ರೀತನು ಅಗ್ನಿಹೋತ್ರಾಗಾರದ ಸಮೀಪದಲ್ಲಿಯೇ ಸತ್ತುಬಿದ್ದಿದ್ದನಾದುದರಿಂದ ಆ ಅಗ್ನಿಗಳು ಮಹರ್ಷಿಯನ್ನು ಸ್ವಾಗತಿಸಲು ಬರಲಿಲ್ಲ. ಆ ಬದಲಾವಣೆಯನ್ನು ಕಂಡು ಚಕಿತನಾದ ಮಹರ್ಷಿಯು ಹೋಮಾಗಾರದ ಬಾಗಿಲಿನ ಸಮೀಪದಲ್ಲಿ ಯಥಾಪೂರ್ವಕವಾಗಿ ಕುಳಿತಿದ್ದ ಕುರುಡನಾದ ಕಾವಲುಗಾರನನ್ನು ಪ್ರಶ್ನಿಸಿದನು :

“ನನ್ನ ಆಗಮನವನ್ನು ಕಂಡರೂ ನನ್ನ ಹೋಮಾಗ್ನಿಗಳೇಕೆ ಸಂತೋಷಿಸುತ್ತಿಲ್ಲ? ಆ ಅಗ್ನಿಗಳಂತೆಯೇ ನೀನಾದರೂ ನಾನು ಬಂದುದರ ಅರಿವುಂಟಾದರೂ ಅನುದಿನದಂತೆ ಹರ್ಷವನ್ನೇಕೆ ತೋರುತ್ತಿಲ್ಲ? ಆಶ್ರಮದಲ್ಲಿ ಎಲ್ಲವೂ ಯಥಾಪೂರ್ವವಾಗಿಯೇ ಇವೆಯಲ್ಲವೇ? ಅಥವಾ ಅಚಾತುರ್ಯವೇನಾದರೂ ನಡೆದಿರುವುದೇ? ಅಲ್ಪಬುದ್ಧಿಯವನಾದ ನನ್ನ ಮಗನು ರೈಭ್ಯನ ಆಶ್ರಮಕ್ಕೆ ಹೋಗಿಲ್ಲ ತಾನೇ? ಈ ನನ್ನ ಎಲ್ಲ ಪ್ರಶ್ನೆಗಳಿಗೂ ಶೀಘ್ರವಾಗಿ ಉತ್ತರಿಸು. ನನ್ನ ಮನಸ್ಸು ಇಂದಿನ ಈ ವಾತಾವರಣವನ್ನು ಕಂಡು ಬಹುವಾಗಿ ಶಂಕಿಸುತ್ತಿದೆ.”

“ಮಹರ್ಷಿಗಳೇ! ಅಲ್ಪಬುದ್ಧಿಯವನಾದ ನಿಮ್ಮ ಮಗನು ನಿಮ್ಮ ಹಿತವಚನಗಳನ್ನು ಲೆಕ್ಕಿಸದೇ ರೈಭ್ಯರ ಆಶ್ರಮಕ್ಕೆ ಹೋದನು. ಆದುದರಿಂದಲೇ ಅವನಿಂದು ಇಲ್ಲಿ ಸತ್ತುಬಿದ್ದಿದ್ದಾನೆ. ರೈಭ್ಯರಿಂದ ನಿಯಂತ್ರಿತನಾದ ರಾಕ್ಷಸನು ಅಶುಚಿಯಾಗಿದ್ದ ನಿಮ್ಮ ಮಗನನ್ನು ಕೊಂದುಹಾಕಿದನು. ಶೂಲಪಾಣಿಯಾದ ರಾಕ್ಷಸನು ಬೆನ್ನಟ್ಟಿಬಂದಾಗ, ಅವನು ಭೀತ-ಭೀತನಾಗಿ, ಅಗ್ನ್ಯಾಗಾರವನ್ನು ಪ್ರವೇಶಿಸಲಿದ್ದಾಗ ನಾನವನನ್ನು ಯಾರೆಂದು ತಿಳಿಯದೇ ನನ್ನ ತೋಳುಗಳಿಂದ ತಡೆದುಬಿಟ್ಟೆನು. ಅಶುಚಿಯಾಗಿದ್ದ ಯವಕ್ರೀತನು ನೀರನ್ನು ಅಪೇಕ್ಷಿಸಿ ಬಂದಾಗ ನಾನವನನ್ನು ತಡೆದುಬಿಟ್ಟೆನಾದುದರಿಂದ ಮುಂದೇನು ಮಾಡಬೇಕೆಂದು ತೋರದೇ ನಿಂತಿದ್ದ ನಿಮ್ಮ ಮಗನನ್ನು ಶೂಲಪಾಣಿಯಾದ ರಾಕ್ಷಸನು ಕೊಂದನು.”

ಲೋಮಶರು ಧರ್ಮಜನಿಗೆ ಹೇಳುತ್ತಾರೆ :

“ಧರ್ಮಜ! ಕಾವಲುಗಾರನ ನಿರೋಧದಿಂದ ತನ್ನ ಮಗನ ಮರಣವು ಪ್ರಾಪ್ತವಾಯಿತೆಂಬ ವಾರ್ತೆಯನ್ನು ಕೇಳಿದ ಭರದ್ವಾಜನು ಬಹಳ ದುಃಖಿತನಾಗಿ ಸತ್ತುಬಿದ್ದಿದ್ದ ತನ್ನ ಮಗನ ದೇಹವನ್ನು ಅಪ್ಪಿಕೊಂಡು ನಾನಾವಿಧವಾಗಿ ಪ್ರಲಾಪಿಸುತ್ತಾ ರೋದನಮಾಡತೊಡಗಿದನು :

“ಮಗನೇ! ಬ್ರಾಹ್ಮಣರ ಹಿತಕ್ಕಾಗಿಯೇ ನೀನು ಬಹುಕಾಲ ಕಠೋರವಾದ ತಪಶ್ಚರಣೆಮಾಡಿ, ಕೊನೆಗೆ ಸಂಪ್ರದಾಯಾನುಕ್ರಮವಾದ ಅಧ್ಯಯನವಿಲ್ಲದೆಯೇ ಸಕಲವೇದಗಳೂ ನಿನ್ನಲ್ಲಿ ಮೂರ್ತಿಮತ್ತಾಗಿ ನೆಲೆಸಿರುವಂತೆ

ಇಂದ್ರನಿಂದ ವರವನ್ನು ಪಡೆದು ಬಂದೆ. ಬ್ರಾಹ್ಮಣರ ವಿಷಯದಲ್ಲಿಯೂ, ಮಹಾತ್ಮರ ವಿಷಯದಲ್ಲಿಯೂ ನೀನು ಯಾವಾಗಲೂ ಕಲ್ಯಾಣಶೀಲ ನಾಗಿಯೇ ಇದ್ದೆ. (ವಿಧೇಯನಾಗಿಯೇ ಇದ್ದೆ.) ನೀನು ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ದಯಾಪೂರ್ಣನಾಗಿದ್ದೆ. ಆದರೆ ಈ ಸಂದರ್ಭದಲ್ಲಿ ಮಾತ್ರ ನೀನು ಮಹಾಕ್ರೂರಿಯಂತೆ ವರ್ತಿಸಿಬಿಟ್ಟೆ. ನಾನು ನಿನಗೆ ರೈಭ್ಯನ ಆಶ್ರಮವನ್ನು ಪ್ರವೇಶಿಸಬೇಡವೆಂದು ಎಷ್ಟೋ ಬಾರಿ ಎಚ್ಚರಿಸಿದ್ದೆನಲ್ಲವೇ? ಕಾಲಾಂತಕನಿಗೂ ಯಮನಿಗೂ ಸದೃಶನಾದ ರೈಭ್ಯನನ್ನು ನೋಡಲು ನನ್ನ ಹಿತವಚನಗಳನ್ನೂ ಮೀರಿ ಹೋಗಿಬಿಟ್ಟೆಯಲ್ಲಾ! ಅಯ್ಯೋ! ನಾನು ವೃದ್ಧನೆಂಬುದನ್ನೂ, ನನಗೆ ಒಬ್ಬನೇ ಒಬ್ಬ ಮಗನಿರುವುದನ್ನೂ ತಿಳಿದೂ ದುರ್ಮತಿಯಾದ ಆ ರೈಭ್ಯನು ನನ್ನ ವಂಶವನ್ನು ನಿರ್ಮೂಲಗೊಳಿಸುವ ಉದ್ದೇಶದಿಂದಲೇ ಕೋಪಕ್ಕೆ ವಶನಾದನು. ದುಷ್ಟನಾದ ರೈಭ್ಯನ ಕುಕರ್ಮದಿಂದ ನಾನಿಂದು ಪುತ್ರಶೋಕಕ್ಕೆ ಬಲಿಯಾಗಿದ್ದೇನೆ. ಪ್ರಪಂಚದಲ್ಲಿ ಮಾನವನಿಗೆ ಎಲ್ಲ ವಸ್ತುಗಳಿಗಿಂತಲೂ 'ಪ್ರಾಣವೇ' ಅತಿಪ್ರಿಯವಾದುದು. ಮಗು! ನಿನ್ನನ್ನು ಅಗಲಿದ ನಾನು ಅಂತಹ ಪರಮಪ್ರಿಯವಾದ ಪ್ರಾಣಗಳನ್ನೂ ತೊರೆಯಲು ನಿಶ್ಚಯಿಸಿದ್ದೇನೆ. ಪುತ್ರನ ಮರಣದಿಂದ ಶೋಕಾಕ್ರಾಂತನಾದ ನಾನು ಯಾವ ರೀತಿಯಲ್ಲಿ ಈ ದೇಹವನ್ನು ತ್ಯಜಿಸುವೆನೋ-ಅದೇ ರೀತಿಯಲ್ಲಿ ರೈಭ್ಯನೂ ತನ್ನ ಜ್ಯೇಷ್ಠಪುತ್ರನಾದ ಪರಾವಸುವಿನಿಂದಲೇ ಕೊಲ್ಲಲ್ಪಟ್ಟು ಪ್ರಾಣತ್ಯಾಗಮಾಡಲಿ. ನಿನ್ನ ಮರಣಕ್ಕೆ ಕಾರಣನಾದ ಅವನೂ ಇನ್ನು ಹೆಚ್ಚು ಕಾಲ ಜೀವಿಸಿರಲಾಗದು. ಅಯ್ಯೋ! ನಿಶ್ಚಯವಾಗಿಯೂ ಮಕ್ಕಳಿಲ್ಲದವರೇ ಧನ್ಯರು.

**ಸುಖಿನೋ ವೈ ನರಾ ಯೇಷಾಂ ಜಾತ್ಯಾ ಪುತ್ರೋ ನ ವಿದ್ಯತೇ ।**
**ತೇ ಪುತ್ರಶೋಕಮಪ್ರಾಪ್ಯ ವಿಚರನ್ತಿ ಯಥಾಸುಖಮ್ ॥೧೬॥**

ಮಕ್ಕಳಿಲ್ಲದಿದ್ದರೆ ಮಕ್ಕಳಿಲ್ಲವೆಂಬ ಒಂದೇ ಒಂದು ಕೊರತೆಯೇ ಹೊರತು ಮತ್ತಾವ ದುಃಖವೂ ಇರುವುದಿಲ್ಲ. ದಾರುಣವಾದ ಇಂತಹ ಪುತ್ರಶೋಕಕ್ಕೆ ಅವರು ಈಡಾಗದೇ ಸುಖದಿಂದಿರುತ್ತಾರೆ. ಅಂತಹವರೇ ನಿಶ್ಚಯವಾಗಿಯೂ ಪರಮಸುಖಿಗಳು.

**ಯೇ ತು ಪುತ್ರಕೃತಾಚ್ಛೋಕಾದ್ಭೃಶಂ ವ್ಯಾಕುಲಚೇತಸಃ ।**
**ಶಪನ್ತೀಷ್ಟಾನ್ಸಖೀನಾರ್ತಾಸ್ತೇಭ್ಯಃ ಪಾಪತರೋ ನು ಕಃ ॥೧೭॥**

ಪುತ್ರಶೋಕವೆಂಬುದು ಅತಿದಾರುಣವಾದುದು. ಇಂತಹ ಶೋಕ ದಿಂದ ಅನೇಕವಾದ ಅಕಾರ್ಯಗಳೂ ನಡೆದುಹೋಗುತ್ತವೆ. ಪುತ್ರಶೋಕ ದಿಂದ ವ್ಯಾಕುಲಚಿತ್ತರಾಗಿ ಪ್ರಿಯಮಿತ್ರರನ್ನೂ ಶಪಿಸಿಬಿಡುತ್ತಾರೆ. ಇದಕ್ಕಿಂತಲೂ ದುಷ್ಟವಾದ ಕಾರ್ಯವು ಬೇರಾವುದಿದೆ? ನನಗಿಂತಲೂ ದುಷ್ಟಾತ್ಮರಾದವರು ಯಾರಿದ್ದಾರೆ? ಪ್ರಿಯತಮನಾದ ನನ್ನ ಪುತ್ರನು ಸತ್ತುಬಿದ್ದಿರುವುದನ್ನು ಕಂಡೆನು. ನನ್ನ ಮನಸ್ಸು ರೋಷಾವಿಷ್ಟವಾಯಿತು. ವಿಚಾರಪರಾಮರ್ಶೆಯೇ ಇಲ್ಲದೇ ನನ್ನ ಪ್ರಿಯಮಿತ್ರನನ್ನೂ ಶಪಿಸಿಬಿಟ್ಟೆನು. ನನಗಿಂತಲೂ ಅದೃಷ್ಟ ಹೀನರಾದವರು ಈ ಪೃಥ್ವಿಯಲ್ಲಿ ಬೇರೊಬ್ಬರಿಲ್ಲ. ಏಕಕಾಲದಲ್ಲಿ ಪ್ರಿಯಪುತ್ರ ನನ್ನೂ–ಪ್ರಿಯಸಖನನ್ನೂ ಕಳೆದುಕೊಂಡೆನಲ್ಲವೇ? ಅಯ್ಯೋ!"

ಇವೇ ಮುಂತಾಗಿ ಹೇಳಿಕೊಂಡು ಬಹಳ ಹೊತ್ತಿನವರೆಗೂ ಪ್ರಲಾಪ ಮಾಡುತ್ತಲಿದ್ದ ಭರದ್ವಾಜನು ತನ್ನ ಮಗನ ಶವಸಂಸ್ಕಾರವನ್ನು ಮಾಡಿ ಧಗ-ಧಗನೆ ಉರಿಯುತ್ತಿದ್ದ ಬೆಂಕಿಯಲ್ಲಿ ತಾನೂ ಬಿದ್ದನು."

ರಿತು ೧೩೭ನೆಯ ಅಧ್ಯಾಯವು ಮುಗಿಯಿತು.

೧೩೮ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಅರ್ವಾವಸುವಿನ ತಪಃಪ್ರಭಾವದಿಂದ ಪರಾವಸುವಿನ ಬ್ರಹ್ಮಹತ್ಯಾಶಾಪದ ವಿಮೋಚನೆ: ರೈಭ್ಯ, ಭರದ್ವಾಜ ಮತ್ತು ಯವಕ್ರೀತರು ಪುನಃ ಜೀವಿಸಿದುದು

ಲೋಮಶರು ರೈಭ್ಯ-ಭರದ್ವಾಜರ ಕಥೆಯನ್ನು ಮುಂದುವರಿಸುತ್ತಾ ಹೇಳುತ್ತಾರೆ :

"ಧರ್ಮಜ! ಅದೇ ಸಮಯಕ್ಕೆ ಸರಿಯಾಗಿ ಮಹಾಪ್ರತಾಪಶಾಲಿ ಯಾದ ಬೃಹದ್ಯುಮ್ನನೆಂಬ ಮಹಾರಾಜನು ಒಂದು ಸತ್ರವನ್ನು ಪ್ರಾರಂಭಿಸಿ ದನು. ಅವನು ರೈಭ್ಯನ ಶಿಷ್ಯ. ಬೃಹದ್ಯುಮ್ನನು ತಾನು ಆರಂಭಿಸಿದ ಯಜ್ಞಕ್ಕೆ ಪುರೋಹಿತರಾದ ರೈಭ್ಯರ ಮಕ್ಕಳಾದ ಅರ್ವಾವಸು-ಪರಾವಸು

ಗಳನ್ನು ಸಹಾಯಾರ್ಥವಾಗಿ ಕರೆಸಿಕೊಂಡನು. ತಂದೆಯ ಅಪ್ಪಣೆಯನ್ನು ಪಡೆದು ಅರ್ವಾವಸು-ಪರಾವಸುಗಳಿಬ್ಬರೂ ಬೃಹದ್ಯುಮ್ನನ ಸತ್ರಕ್ಕೆ ತೆರಳಿದರು. ಇತ್ತಲಾಗಿ ರೈಭ್ಯನೂ, ಪರಾವಸುವಿನ ಭಾರ್ಯೆಯೂ ಆಶ್ರಮ ದಲ್ಲಿಯೇ ಇದ್ದರು.

ಒಂದು ದಿನ ಪರಾವಸುವು ತನ್ನ ಪತ್ನಿಯನ್ನು ಕಾಣುವ ಸಲುವಾಗಿ ತಾನೊಬ್ಬನೇ ಏಕಾಕಿಯಾಗಿ ಆಶ್ರಮಕ್ಕೆ ಬರುತ್ತಿದ್ದನು. ಹಾದಿಯಲ್ಲಿ ಕೃಷ್ಣ ಚರ್ಮದಿಂದ ಆಚ್ಛಾದಿತವಾಗಿದ್ದ ಪ್ರಾಣಿಯೊಂದನ್ನು ಪರಾವಸುವು ಕಂಡನು. ರಾತ್ರಿಯಲ್ಲಿ ಬಹಳ ಹೊತ್ತಾಗಿದ್ದರಿಂದಲೂ, ಪರಾವಸುವಿನ ಕಣ್ಣಿಗೆ ನಿದ್ರೆಯು ಆವರಿಸಿದ್ದರಿಂದಲೂ ಕೃಷ್ಣಚರ್ಮದಿಂದ ಆವೃತವಾಗಿದ್ದ ಪ್ರಾಣಿಯನ್ನು ಯಾವುದೋ ಹಿಂಸ್ರಮೃಗವಿರಬಹುದೆಂದು ಭ್ರಮಿಸಿದ ಪರಾವಸುವು ತನ್ನ ಶರೀರರಕ್ಷಣಾರ್ಥವಾಗಿ ಅದನ್ನು ಕೊಂದುಬಿಟ್ಟನು. ಕೃಷ್ಣಚರ್ಮದಿಂದ ಆಚ್ಛಾದಿತನಾಗಿದ್ದವನು ತನ್ನ ತಂದೆಯಾದ ರೈಭ್ಯನೆಂಬುದು –'ಅಯ್ಯೋ!' ಎಂದು ರೈಭ್ಯನು ಪ್ರಾಣತೊರೆದ ನಂತರವೇ–ಪರಾವಸುವಿಗೆ ತಿಳಿಯಿತು. ಕೈಮಿಂಚಿಹೋಗಿತ್ತಾದ ಕಾರಣ ಬಹುದುಃಖಿತನಾದ ಪರಾವಸುವು ತಂದೆಯ ದಹನಾದಿ ಸಂಸ್ಕಾರಕ್ರಿಯೆಗಳನ್ನು ಮುಗಿಸಿದವನಾಗಿ ರಾಜನ ಯಾಗ ಮಂಟಪಕ್ಕೆ ಹೋಗಿ ಅರ್ವಾವಸುವಿಗೆ ಹೇಳಿದನು :

"ಅರ್ವಾವಸುವೇ! ನನ್ನ ಸಹಾಯವಿಲ್ಲದೇ ನೀನೊಬ್ಬನೇ ಈ ಮಹಾ ಯಾಗವನ್ನು ಪೂರ್ಣಗೊಳಿಸಲಾರೆ. ನಾನಾದರೋ ಕೃಷ್ಣಚರ್ಮದಿಂದ ಆಚ್ಛಾದಿತನಾಗಿದ್ದ ನಮ್ಮ ತಂದೆಯನ್ನು ರಾತ್ರಿಯಲ್ಲಿ ಹಿಂಸ್ರಮೃಗವೆಂದು ಭ್ರಮಿಸಿ ಕೊಂದುಬಿಟ್ಟೆನು. ಆದುದರಿಂದ ನೀನೀಗ ನನ್ನ ಬ್ರಹ್ಮಹತ್ಯಾದೋಷ ನಿವಾರಣಾರ್ಥವಾಗಿ ಮಾಡಬೇಕಾದ ವ್ರತಾನುಷ್ಠಾನಗಳನ್ನು ಮಾಡು. ನೀನು ನನಗಾಗಿ ಈ ವ್ರತಾನುಷ್ಠಾನಗಳನ್ನು ಮಾಡುವೆಯಾದರೆ ನಾನೊಬ್ಬನೇ ನಿನ್ನ ಸಹಾಯವಿಲ್ಲದೆಯೇ ಈ ಸತ್ರವನ್ನು ಮುಗಿಸಬಲ್ಲೆನು."

ಅದಕ್ಕುತ್ತರವಾಗಿ ಅರ್ವಾವಸುವು ಹೇಳಿದನು :

"ಸಹೋದರನೇ! ನೀನು ಹೇಳಿದಂತೆಯೇ ಆಗಬಹುದು. ಧೀಮಂತನಾದ ಈ ಬೃಹದ್ಯುಮ್ನನ ಯಾಗವನ್ನು ನೀನು ಪೂರೈಸು. ನಾನು

ಜಿತೇಂದ್ರಿಯನಾಗಿದ್ದುಕೊಂಡು ನಿನ್ನ ಸಲುವಾಗಿ ಬ್ರಹ್ಮಹತ್ಯಾದೋಷ ನಿವಾರಣೆಗೆ ಆಚರಿಸಬೇಕಾದ ವ್ರತಾನುಷ್ಠಾನಗಳನ್ನು ಕೈಗೊಳ್ಳುವೆನು.”

ಯುಧಿಷ್ಠಿರ! ಅರ್ವಾವಸುವು ಬ್ರಹ್ಮಹತ್ಯಾದೋಷದ ನಿವಾರಣಾರ್ಥವಾಗಿ ಮಾಡಬೇಕಾದ ಪ್ರಾಯಶ್ಚಿತ್ತವನ್ನು ಪರಾವಸುವಿನ ಸಲುವಾಗಿ ಮಾಡಿ, ಪರಾವಸುವನ್ನು ಆ ಮಹಾಪಾಪದಿಂದ ವಿಮೋಚನಗೊಳಿಸಿ ಪುನಃ ಬೃಹದ್ಯುಮ್ನನ ಯಾಗಮಂಟಪಕ್ಕೆ ಬಂದನು. ಅರ್ವಾವಸುವು ಅಣ್ಣನ ಪಾಪಪರಿಹಾರಕ್ಕಾಗಿ ಪ್ರಾಯಶ್ಚಿತ್ತಾದಿಗಳನ್ನು ಮಾಡಿ ಪುನಃ ಯಾಗಭೂಮಿಗೆ ಬಂದುದನ್ನು ಕಂಡ ಪರಾವಸುವು ಸಂತಸಗೊಂಡರೂ ಗದ್ಗದಕಂಠದಿಂದ ರಾಜನನ್ನು ಕುರಿತು ಹೇಳಿದನು :

**ಏಷ ತೇ ಬ್ರಹ್ಮಹಾ ಯಜ್ಞಂ ಮಾ ದ್ರಷ್ಟುಂ ಪ್ರವಿಶೇದಿತಿ ।**
**ಬ್ರಹ್ಮಹಾ ಪ್ರೇಕ್ಷಿತೇನಾಪಿ ಪೀಡಯೇತ್ತ್ವಾಮಸಂಶಯಮ್ ॥೧೩॥**

“ಮಹಾರಾಜ! ಈ ಬ್ರಾಹ್ಮಣಹಂತಕನು ಯಜ್ಞಮಂಟಪದೊಳಗೆ ಪ್ರವೇಶಿಸಕೂಡದು ಮತ್ತು ಯಾಗವನ್ನು ನೋಡಲೂಕೂಡದು. ಇವನೊಮ್ಮೆ ನೋಡಿದರೂ ಈ ಮಹಾಯಾಗವು ಕೆಟ್ಟುಹೋಗುವ ಸಂಭವವುಂಟು. ಬ್ರಹ್ಮಹತ್ಯಾಪಾತಕಿಯ ದೃಷ್ಟಿಯು ಅಷ್ಟೊಂದು ಕ್ರೂರವಾದುದು. ಮಹಾರಾಜ! ಆ ದೃಷ್ಟಿಯು ನಿನಗೆ ಬಹಳ ಕೇಡನ್ನುಂಟುಮಾಡುತ್ತದೆ.”

ಪರಾವಸುವಿನ ಮಾತುಗಳನ್ನು ಕೇಳಿ ಬೃಹದ್ಯುಮ್ನನು ಒಡನೆಯೇ ರಾಜಭಟರನ್ನು ಕರೆದು ಅರ್ವಾವಸುವನ್ನು ಹೊರಕ್ಕೆ ದೂಡುವಂತೆ ಆಜ್ಞಾಪಿಸಿದನು. ರಾಜಭಟರು ಮುಂದೆ ಬಂದು–“ಬ್ರಹ್ಮಹತ್ಯಾಪಾತಕಿಯೇ! ಹೊರಗೆ ಹೊರಡು”–ಎಂದು ಹೇಳುತ್ತಾ ಅರ್ವಾವಸುವನ್ನು ತಳ್ಳಿದರು.

ಅರ್ವಾವಸುವು ಸಾವಧಾನಚಿತ್ತನಾಗಿಯೇ ರಾಜಭಟರೊಡನೆ ಹೇಳಿದನು :

“ಬ್ರಹ್ಮಹತ್ಯೆಯು ನನ್ನಿಂದ ಮಾಡಲ್ಪಡಲಿಲ್ಲ. ಬ್ರಹ್ಮಹತ್ಯೆಯನ್ನು ಮಾಡಿದವನು ನಾನಲ್ಲ”–ಎಂದು ಹೇಳಿದನು.

ಆ ಮಾತನ್ನು ನಾಲ್ಕಾರು ಬಾರಿ ಹೇಳಿದರೂ ರಾಜಭಟರು–“ನೀನು ಸುಳ್ಳು ಹೇಳುತ್ತಿರುವೆ. ಒಬ್ಬರು ಮಾಡಿದ ಪಾಪಕ್ಕೆ ಮತ್ತೊಬ್ಬರು

ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾರೆಯೇ?"–ಎಂದು ಹೇಳಿ ಅವನನ್ನು ಬಾರಿ-ಬಾರಿಗೂ ನಿಂದಿಸುತ್ತಾ ಹೊರಕ್ಕೆ ತಳ್ಳಿಯೇಬಿಟ್ಟರು.

**ನೈವ ಸ್ಮ ಪ್ರತಿಜಾನಾತಿ ಬ್ರಹ್ಮವಧ್ಯಾಂ ಸ್ವಯಂಕೃತಾಮ್ ।**
**ಮಮ ಭ್ರಾತ್ರಾ ಕೃತಮಿದಂ ಮಯಾ ಸ ಪರಿಮೋಕ್ಷಿತಃ ॥೧೬॥**

ಅರ್ವಾವಸುವು ತಾನು ಬ್ರಹ್ಮಹತ್ಯೆಯನ್ನು ಮಾಡಿದೆನೆಂದು ಒಪ್ಪಿಕೊಳ್ಳಲಿಲ್ಲ. 'ನಮ್ಮಣ್ಣನು ಬ್ರಹ್ಮಹತ್ಯೆಯನ್ನು ಮಾಡಿದನು. ನಾನವನನ್ನು ಕಠೋರವಾದ ಪ್ರಾಯಶ್ಚಿತ್ತದ ಮೂಲಕವಾಗಿ ಆ ಪಾಪದಿಂದ ವಿಮೋಚಿಸಿದೆನು'–ಎಂದು ಹೇಳಿಕೊಂಡು ರಾಜಭಟರು ಮಾಡಿದ ಅಪಚಾರಕ್ಕಾಗಿ ಖತಿಗೊಂಡು ನಿಟ್ಟುಸಿರುಬಿಡುತ್ತಾ ಮುಂದೆ ಯಾರೊಡನೆಯೂ ಮಾತನಾಡದೇ ಮೌನಿಯಾಗಿ ಕಾಡಿಗೆ ಹಿಂದಿರುಗಿ ಸೂರ್ಯನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಲು ಉಪಕ್ರಮಿಸಿದನು. ಅತ್ಯಂತರಹಸ್ಯವಾಗಿದ್ದ ಸೂರ್ಯಾಷ್ಟಾಕ್ಷರೀಮಂತ್ರವು ( ಘೃಣಿಃ ಸೂರ್ಯ ಆದಿತ್ಯೋಮ್ ) ಅವನ ಸ್ಮೃತಿಪಥಕ್ಕೆ ಬಂದಿತು. ಆ ಮಹಾಮಂತ್ರದ ಪುನಶ್ಚರಣೆಯಿಂದಾಗಿ ಅವ್ಯಯನಾದ, ಯಜ್ಞದಲ್ಲಿ ಮೊದಲು ಹವಿರ್ಭಾಗವನ್ನು ಉಪಭುಂಜಿಸುವ, ದೇವದೇವನಾದ ಸೂರ್ಯನು ಮೂರ್ತಿಮತ್ತಾಗಿ ಅರ್ವಾವಸುವಿಗೆ ಪ್ರತ್ಯಕ್ಷನಾಗಿ ಬಂದು ಅನುಗ್ರಹಿಸಿದನು.

ಇಂದ್ರಾದಿದೇವತೆಗಳು ಅರ್ವಾವಸುವಿನ ವಿಷಯದಲ್ಲಿ ಪ್ರಸನ್ನರಾದರು. ದೇವತೆಗಳು ಮಹಾಮಹಿಮನಾದ ಅರ್ವಾವಸುವನ್ನೇ ಯಜ್ಞಕ್ಕೆ ಮುಖ್ಯ ಪುರೋಹಿತನನ್ನಾಗಿ ಇಟ್ಟುಕೊಳ್ಳುವಂತೆಯೂ ಕಪಟಿಯಾದ ಪರಾವಸುವನ್ನು ಹೊರದೂಡುವಂತೆಯೂ ಬೃಹದ್ಯುಮ್ನನಿಗೆ ನಿರ್ದೇಶವನ್ನಿತ್ತರು.

ಸುಪ್ರೀತರಾದ ಅಗ್ನಿಪ್ರಮುಖರಾದ ದೇವತೆಗಳು ಅರ್ವಾವಸುವಿಗೆ ವರಗಳನ್ನಿತ್ತರು. ಅರ್ವಾವಸುವು ದೇವತೆಗಳನ್ನು ಈ ರೀತಿಯಾಗಿ ಪ್ರಾರ್ಥಿಸಿದನು :

"ನನ್ನ ತಂದೆಯು ಪುನಃ ಜೀವಂತನಾಗಲಿ. ನನ್ನ ಸಹೋದರನ ಬ್ರಹ್ಮಹತ್ಯಾಪಾಪದ ವಿಮೋಚನೆಯಾಗಲಿ. ಅವನಿಗೆ ಪಿತೃವಧೆಯ ಸ್ಮರಣೆಯೇ

ಬಾರದಿರಲಿ. ಭರದ್ವಾಜ-ಯವಕ್ರೀತರು ಜೀವಂತರಾಗಲಿ. ಸೂರ್ಯ ಮಂತ್ರದ ಪುನಶ್ಚರಣೆಮಾಡಿದವರಿಗೆ ಅಪಾರವಾದ ಫಲವು ಪ್ರಾಪ್ತವಾಗಲಿ."

ಆ ಎಲ್ಲ ವರಗಳಿಗೂ ದೇವತೆಗಳು 'ತಥಾಸ್ತು' ಎಂದು ಪ್ರತಿವಚನ ವನ್ನಿತ್ತರು. ನಿದ್ದೆಯಿಂದ ಎಚ್ಚರಗೊಂಡವರಂತೆ ರೈಭ್ಯ-ಭರದ್ವಾಜ-ಯವ ಕ್ರೀತರು ಜೀವಂತರಾದರು.

ಯವಕ್ರೀತನು ಅಗ್ನಿಯೇ ಮೊದಲಾದ ದೇವತೆಗಳನ್ನು ಪ್ರಶ್ನಿಸಿದನು :

"ದೇವತೆಗಳಿರಾ! ನಾನು ಎಲ್ಲ ವೇದಗಳನ್ನೂ ಸಾಂಗವಾಗಿ ತಿಳಿದಿರು ವೆನು. ತಪಶ್ಚರಣೆಯನ್ನೂ ಮಾಡಿರುವೆನು. ನನ್ನಂತಹವನನ್ನು ಕೊಲ್ಲಲು ರೈಭ್ಯನಿಗೆ ಹೇಗೆ ಸಾಧ್ಯವಾಯಿತು?"

ದೇವತೆಗಳು ಉತ್ತರಿಸಿದರು :

**ಮೈವಂ ಕೃಥಾ ಯವಕ್ರೀತ ಯಥಾ ವದಸಿ ವೈ ಮುನೇ ।**
**ಋತೇ ಗುರುಮಧೀತಾ ಹಿ ಸುಖಂ ವೇದಾಸ್ತ್ವಯಾ ಪುರಾ ॥೨೫॥**

**ಅನೇನ ತೇ ಗುರೂನ್ದುಃಖಾತ್ತೋಷಯಿತ್ವಾತ್ಮಕರ್ಮಣಾ ।**
**ಕಾಲೇನ ಮಹತಾ ಕ್ಲೇಶಾದ್ಬ್ರಹ್ಮಾಧಿಗತಮುತ್ತಮಮ್ ॥೨೬॥**

"ಯವಕ್ರೀತನೇ! ಹಿಂದೆ ಮಾಡಿದಂತೆ ಮುಂದೆಯೂ ಮಾಡಬೇಡ. ವೇದಾಧ್ಯಯನಮಾಡಿದವರನ್ನು ಯಾವ ವಿಧವಾದ ಕೃತ್ಯೆಗಳೂ ಬಾಧೆಪಡಿಸ ಲಾರವೆಂಬುದು ನಿಶ್ಚಯ. ಆದರೆ ವೇದಾಧ್ಯಯನವನ್ನು ಸಂಪ್ರದಾಯಬದ್ಧ ವಾಗಿ ಮಾಡಬೇಕು. ನೀನು ವೇದಗಳನ್ನು ತಿಳಿದಿರುವುದೇನೋ ನಿಜ. ಆದರೆ ವೇದಗಳನ್ನು ನೀನು ಸಂಪ್ರದಾಯಾನುಸಾರವಾಗಿ ಕಷ್ಟಪಟ್ಟು ಅಧ್ಯಯನ ಕ್ರಮದಲ್ಲಿ ಅಧ್ಯಯನಮಾಡಿರುವುದಿಲ್ಲ. ಗುರುಶುಶ್ರೂಷೆಯಿಂದ ವೇದಾಧ್ಯಯನವನ್ನು ಮಾಡಿರುವುದಿಲ್ಲ. ಆದರೆ ರೈಭ್ಯನು ಮಾತ್ರ ಸಂಪ್ರದಾಯಾನುಕ್ರಮದಿಂದಲೇ ವೇದಾಧ್ಯಯನವನ್ನು ಮಾಡಿರುತ್ತಾನೆ. ಕಷ್ಟಪಟ್ಟು ಗುರುಶುಶ್ರೂಷೆಮಾಡಿ ಗುರುವಿನ ಒಲುಮೆಗೂ ಪಾತ್ರನಾಗಿರು ತ್ತಾನೆ. ಅನೇಕ ವರ್ಷಗಳ ಪರ್ಯಂತವಾಗಿ ಇವನು ಶ್ರಮಿಸಿ ವೇದ-ವೇದಾಂಗಗಳನ್ನು ತಿಳಿದಿರುತ್ತಾನೆ. ಇಂತಹವನಲ್ಲಿ ಈ ವಿಧವಾದ ಶಕ್ತಿಯಿರು ವುದು ಸ್ವಾಭಾವಿಕವೇ ಆಗಿರುವುದು."

ಹೀಗೆ ಹೇಳಿ ಎಲ್ಲರಿಗೂ ಜೀವಪ್ರದಾನಮಾಡಿ ದೇವತೆಗಳು ಇಂದ್ರ ಸಮೇತರಾಗಿ ಸ್ವರ್ಗಕ್ಕೆ ತೆರಳಿದರು.

ಯುಧಿಷ್ಠಿರ! ಅಂತಹ ಮಹಾನುಭಾವರಾದ ರೈಭ್ಯ-ಭರದ್ವಾಜರ ಆಶ್ರಮಭೂಮಿಯೇ ಇದು. ಇಲ್ಲಿರುವ ಈ ವೃಕ್ಷಗಳು ಸರ್ವಕಾಲದಲ್ಲಿಯೂ ಸರ್ವರ್ತುಗಳಲ್ಲಿಯೂ ಫಲ-ಪುಷ್ಪಭರಿತಗಳಾಗಿಯೇ ಇರುವುವು. ಈ ಪುಣ್ಯ ಕ್ಷೇತ್ರದಲ್ಲಿ ನೀನು ಅನುಜರೊಡನೆ ಸ್ವಲ್ಪದಿನಗಳು ತಂಗುವುದರಿಂದ ನಿನ್ನ ಸಕಲವಿಧವಾದ ಪಾಪಗಳೂ ವಿನಾಶಹೊಂದುವುವು.

೧೩೮ನೆಯ ಅಧ್ಯಾಯವು ಮುಗಿಯಿತು.

೧೩೯ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಪಾಂಡವರ ಉತ್ತರಖಂಡದ ಯಾತ್ರೆ: ಲೋಮಶರಿಂದ ಉತ್ತರಖಂಡದ ದುರ್ಗಮತೆಯ ವಿವರಣೆ

ಲೋಮಶರು ಧರ್ಮಜನಿಗೆ ಹೇಳುತ್ತಾರೆ :

"ಧರ್ಮಜ! ನೀನೀಗ ಉಶೀರಬೀಜವೆಂಬ ಪರ್ವತವನ್ನೂ, ಮೈನಾಕ-ಶ್ವೇತಪರ್ವತಗಳನ್ನೂ, ಕಾಲಪರ್ವತವನ್ನೂ ದಾಟಿ ಬಂದಿರುವೆ. ನಿನ್ನ ಮುಂದೆ ಕಾಣುತ್ತಿರುವ ಈ ಪ್ರವಾಹಗಳು ಸಪ್ತಗಂಗಾಪ್ರವಾಹಗಳಾಗಿವೆ. ಈ ಕ್ಷೇತ್ರವು ಅತ್ಯಂತಪವಿತ್ರವಾದ, ಪುಣ್ಯತಮವಾದ ಕ್ಷೇತ್ರವಾಗಿರುವುದು. ಈ ಕ್ಷೇತ್ರದಲ್ಲಿ ಅಗ್ನಿದೇವನು ಸರ್ವಕಾಲದಲ್ಲಿಯೂ ಬೆಳಗುತ್ತಿರುತ್ತಾನೆ. ಈ ಪರಮಾದ್ಭುತವು ಮಾನವರಿಂದ ನೋಡಲು ಸಾಧ್ಯವಾಗುವುದಿಲ್ಲ. ನೀವು ಏಕಾಗ್ರಚಿತ್ತರಾಗಿ ಸಮಾಧಿಸ್ಥರಾದರೆ ಮಾತ್ರ ಈ ಸಪ್ತಗಂಗಾಪ್ರವಾಹಗಳನ್ನೂ ಮತ್ತು ಯಜ್ಞೇಶ್ವರನನ್ನೂ ನೋಡಲು ಸಮರ್ಥರಾಗುವಿರಿ. ದೇವತೆಗಳ ಕ್ರೀಡೋದ್ಯಾನವನ್ನೂ ಮತ್ತು ಅವರ ಕಾಲಿನ ಗುರುತುಗಳನ್ನೂ ಕಾಣುವಿರಿ. ನಾವೀಗ ಕಾಲಪರ್ವತವನ್ನು ದಾಟಿಯಾಯಿತು. ಶ್ವೇತಪರ್ವತವಾದ ಮಂದರಪರ್ವತವನ್ನು ಹತ್ತೋಣ. ಈ ಪರ್ವತದಲ್ಲಿ ಯಕ್ಷರಾಜನಾದ ಕುಬೇರನೂ, ಮಣಿಭದ್ರನೂ ವಾಸವಾಗಿರುತ್ತಾರೆ. ಈ ಸ್ಥಳದಲ್ಲಿ ಎಂಬತ್ತು ಸಾವಿರ ಮಂದಿ ಗಂಧರ್ವರೂ ಇದಕ್ಕೆ ನಾಲ್ಕುಪಟ್ಟು ಹೆಚ್ಚಾದ ಸಂಖ್ಯೆಯಿಂದ

ಕೂಡಿದ ಕಿಂಪುರುಷರೂ ಮತ್ತು ನಾನಾರೂಪಧಾರಿಗಳಾದ ಯಕ್ಷರೂ–ನಾನಾವಿಧವಾದ ಆಯುಧಗಳನ್ನು ಧರಿಸಿದವರಾಗಿ, ಯಕ್ಷರಾಜನಾದ ಮಣಿಭದ್ರನ ಸೇವೆಯಲ್ಲಿ ನಿರತರಾಗಿದ್ದಾರೆ. ಈ ಸ್ಥಳದಲ್ಲಿ ಅವರಿಗೆ ಹೆಚ್ಚಿನ ಪ್ರಭಾವವಿರುತ್ತದೆ. ವಾಯುವಿಗೆ ಸಮಾನವಾದ ವೇಗದಿಂದ ಅವರು ಸಂಚರಿಸಬಲ್ಲರು.

ಅವರು ದೇವರಾಜನನ್ನೂ ಸ್ಥಾನಭ್ರಷ್ಟನನ್ನಾಗಿ ಮಾಡುವ ಸಾಮರ್ಥ್ಯವುಳ್ಳವರಾಗಿದ್ದಾರೆ. ಇಂತಹ ಯಕ್ಷ-ಗಂಧರ್ವ-ಕಿಂಪುರುಷರಿಂದಲೂ, ರಾಕ್ಷಸರಿಂದಲೂ ರಕ್ಷಿತವಾದ ಈ ಪರ್ವತವು ಬಹುದುರ್ಗಮವಾಗಿರುತ್ತದೆ. ಆದುದರಿಂದ ನೀನು ಕುಬೇರನನ್ನು ಧ್ಯಾನಮಾಡಿ ಅವನ ಅನುಗ್ರಹವನ್ನು ಪಡೆದೇ ಈ ಪರ್ವತವನ್ನು ಆರೋಹಣಮಾಡಬೇಕಾಗಿದೆ. ಕುಬೇರನನ್ನು ಸಂದರ್ಶಿಸುವ ಮೊದಲು ಭಯಂಕರರಾದ ಕುಬೇರನ ಅಮಾತ್ಯರನ್ನು ಕಾಣಬೇಕು. ಅವರನ್ನು ಸಂದರ್ಶಿಸಲು ಸಿದ್ಧನಾಗು. ಅಲ್ಲಿಯೇ ಇರುವ ಕೈಲಾಸಪರ್ವತವು ಆರು ಯೋಜನಗಳಷ್ಟು ಎತ್ತರವಾಗಿದೆ. ಅದರ ಸಮೀಪದಲ್ಲಿಯೇ ಬದರೀವೃಕ್ಷವಿದೆ. ಅನೇಕಾನೇಕ ದೇವತೆಗಳೂ, ಯಕ್ಷ-ರಾಕ್ಷಸ-ಕಿನ್ನರರೂ, ನಾಗ-ಸುಪರ್ಣರೂ, ಗಂಧರ್ವರೂ ಇದೇ ಮಾರ್ಗವಾಗಿ ಕುಬೇರನ ಅರಮನೆಗೆ ಹೋಗುತ್ತಿರುತ್ತಾರೆ. ನನ್ನಿಂದಲೂ ಮತ್ತು ಭೀಮಸೇನನಿಂದಲೂ ರಕ್ಷಿತನಾದ, ತಪಸ್ಸಿನಿಂದಲೂ, ಶಮ-ದಮಾದಿಗಳಿಂದಲೂ ಕೂಡಿರುವ ನೀನು ದೇವತೆಗಳನ್ನೂ, ಯಕ್ಷ-ರಾಕ್ಷಸ-ಕಿನ್ನರ-ಕಿಂಪುರುಷರನ್ನೂ, ಕುಬೇರನನ್ನೂ ಸಂಧಿಸು.

**ಸ್ವಸ್ತಿ ತೇ ವರುಣೋ ರಾಜಾ ಯಮಶ್ಚ ಸಮಿತಿಂಜಯಃ ।**
**ಗಙ್ಗಾ ಚ ಯಮುನಾ ಚೈವ ಪರ್ವತಶ್ಚ ದಧಾತು ತೇ ॥೧೪॥**
**ಮರುತಶ್ಚ ಸಹಾಶ್ವಿಭ್ಯಾಂ ಸರಿತಶ್ಚ ಸರಾಂಸಿ ಚ ।**
**ಸ್ವಸ್ತಿ ದೇವಾಸುರೇಭ್ಯಶ್ಚ ವಸುಭ್ಯಶ್ಚ ಮಹಾದ್ಯುತೇ ॥೧೫॥**

ಮಹಾದ್ಯುತಿಮಂತನೇ! ಯಮ-ವರುಣರೂ, ಗಂಗಾ-ಯಮುನೆಯರೂ, ಈ ಮಂದರಪರ್ವತವೂ, ಸಪ್ತಮಹರ್ಷಿಗಳೂ, ಅಶ್ವಿನೀದೇವತೆಗಳೂ, ನೀನು ಇದುವರೆಗೆ ಸಂದರ್ಶಿಸಿದ ಎಲ್ಲ ಸರೋವರಗಳೂ ಮತ್ತು ಎಲ್ಲ ನದಿಗಳೂ–ನಿನಗೆ ಈ ಸಮಯದಲ್ಲಿ ಮಂಗಳಾಶಿಷಗಳನ್ನು ಮಾಡಲಿ.

ದೇವತೆಗಳಿಂದಲೂ, ಅಸುರರಿಂದಲೂ, ಅಷ್ಟವಸುಗಳಿಂದಲೂ ನಿನಗೆ ಮಂಗಳಾನುಶಾಸನವು ಲಭಿಸಲಿ."

ಲೋಮಶರು ಯುಧಿಷ್ಠಿರನಿಗೆ ಹೀಗೆ ಹೇಳಿ ಅವನ ಕ್ಷೇಮಕ್ಕಾಗಿ ಗಂಗೆಯನ್ನು ಸ್ತೋತ್ರಮಾಡಿದರು :

**ಇನ್ದ್ರಸ್ಯ ಜಾಮ್ಬೂನದಪರ್ವತಾದ್ಧ್ವೈ**
**ಶೃಣೋಮಿ ಘೋಷಂ ತವ ದೇವಿ ಗಙ್ಗೇ ।**
**ಗೋಪಾಯ್ಯೈನಂ ತ್ವಂ ಸುಭಗೇ ಗಿರಿಭ್ಯಃ**
**ಸರ್ವಾಜಮೀಢಾಪಚಿತಂ ನರೇನ್ದ್ರಮ್ ॥೧೬॥**

**ದದಸ್ವ ಶರ್ಮ ಪ್ರವಿವಿಕ್ಷತೋಽಸ್ಯ**
**ಶೈಲಾನಿಮಾನ್ ಶೈಲಸುತೇ ನೃಪಸ್ಯ ॥೧೭॥**

"ಗಂಗಾದೇವಿಯೇ! ಇಂದ್ರನ ಸುವರ್ಣಪರ್ವತದ ಮಧ್ಯಭಾಗದಲ್ಲಿ ಹರಿಯುತ್ತಿರುವ ನಿನ್ನ ಕರ್ಣಾನಂದಕರವಾದ ಪ್ರವಾಹಧ್ವನಿಯನ್ನು ಕೇಳುತ್ತಿದ್ದೇನೆ. ಸುಭಗಳೇ! ಈ ಪರ್ವತದ ತಪ್ಪಲಿನಲ್ಲಿ ಪ್ರವಾಸಮಾಡಲಿರುವ ಅಜಮೀಢವಂಶೀಯರೆಲ್ಲರಿಂದಲೂ ಪೂಜಿಸಲ್ಪಡುತ್ತಿರುವ ಈ ಧರ್ಮಜನನ್ನು ರಕ್ಷಿಸು. ಶೈಲಸುತೇ! ಈ ಪರ್ವತದ ತಪ್ಪಲುಗಳನ್ನು ಪ್ರವೇಶಿಸಲಿರುವ ಧರ್ಮರಾಜನಿಗೆ ನೀನು ರಕ್ಷಣೆಯನ್ನು ದಯಪಾಲಿಸು."

ಲೋಮಶರು ಹೀಗೆ ಗಂಗಾದೇವಿಯನ್ನು ಪ್ರಾರ್ಥಿಸಿ ಧರ್ಮರಾಜನಿಗೆ ಪುನಃಹೇಳಿದರು :

"ಧರ್ಮಜ! ಜಾಗರೂಕನಾಗಿ ಪ್ರಯಾಣಮಾಡು. ನಿನಗೆ ಮಂಗಳವಾಗಲಿ."

ಲೋಮಶರು ತನ್ನ ರಕ್ಷಣೆಯ ವಿಷಯವಾಗಿ ಹಿಂದೆಂದೂ ಹೀಗೆ ಹೇಳಿರಲಿಲ್ಲ. ಈಗ ಮಹರ್ಷಿಗಳು ಹೆಚ್ಚಿನ ಜಾಗರೂಕತೆಯನ್ನು ವಹಿಸಿರುವುದನ್ನು ಕಂಡು ಧರ್ಮಜನು ಅನುಜರಿಗೆ ಹೇಳಿದನು :

"ನಿಶ್ಚಯವಾಗಿಯೂ ಲೋಮಶರು ನನ್ನ ರಕ್ಷಣೆಯ ವಿಷಯವಾಗಿ ಹಿಂದೆ ಯಾವಾಗಲೂ ಇಷ್ಟೊಂದು ಅಧೀರರಾಗಿರಲಿಲ್ಲ. ಆದುದರಿಂದ ಈ

ಪ್ರದೇಶವು ಹೆಚ್ಚು ಅಪಾಯದಿಂದಲೇ ಕೂಡಿದ್ದಾಗಿರಬೇಕು. ಆದುದರಿಂದ ನೀವೆಲ್ಲರೂ ನಮ್ಮೊಡನಿರುವ ಅಬಲೆಯಾದ ದ್ರೌಪದಿಯನ್ನು ಜಾಗರೂಕತೆಯಿಂದ ರಕ್ಷಿಸಿರಿ. ಈ ಪ್ರದೇಶವು ಅತಿದುರ್ಗಮವಾದುದೆಂದೂ ಪರಮಪವಿತ್ರವಾದುದೆಂದೂ ಲೋಮಶರು ಹೇಳಿದ್ದಾರೆ. ಆದುದರಿಂದ ನೀವೆಲ್ಲರೂ ಶುಚೀಭೂತರಾಗಿರಿ."

ಬಳಿಕ ಯುಧಿಷ್ಠಿರನು ಭೀಮನೊಬ್ಬನನ್ನು ಕುರಿತು ಹೀಗೆ ಹೇಳಿದನು :

"ಭೀಮಸೇನ! ನೀನು ಬಹಳ ಜಾಗರೂಕನಾಗಿದ್ದುಕೊಂಡು ದ್ರೌಪದಿಯನ್ನು ಸಂರಕ್ಷಿಸು. ಅರ್ಜುನನು ನಮ್ಮ ಸಮೀಪದಲ್ಲಿಲ್ಲದಿದ್ದ ಸಮಯದಲ್ಲಿ ಭಯವು ಸನ್ನಿಹಿತವಾದಾಗ ದ್ರೌಪದಿಯು ನಿನ್ನಿಂದಲೇ ರಕ್ಷಣೆಯನ್ನು ಅಪೇಕ್ಷಿಸುತ್ತಾಳೆ."

ಭೀಮಸೇನನಿಗೆ ಹೀಗೆ ಹೇಳಿದನಂತರ ಧರ್ಮಜನು ನಕುಲ-ಸಹದೇವರ ಬಳಿಗೆ ಹೋಗಿ ಅವರ ನೆತ್ತಿಯನ್ನು ಆಘ್ರಾಣಿಸಿ ಮೈದಡವುತ್ತಾ ಕಂಬನಿಯಿಂದ ಕೂಡಿದ ಕಣ್ಣುಗಳುಳ್ಳವನಾಗಿ ಅವರನ್ನು ಕುರಿತು ಹೇಳಿದನು:

"ನೀವು ಸ್ವಲ್ಪವಾದರೂ ಭಯಪಡಬೇಕಾದ ಕಾರಣವಿಲ್ಲ. ಆದರೂ ಜಾಗರೂಕತೆಯಿಂದ ಪ್ರಯಾಣಮಾಡಿರಿ."

೧೩೯ನೆಯ ಅಧ್ಯಾಯವು ಮುಗಿಯಿತು.

೧೪೦ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಭೀಮಸೇನನ ಉತ್ಸಾಹ: ಗಂಧಮಾದನ ಮತ್ತು ಹಿಮಾಲಯ ಪರ್ವತಗಳಿಗೆ ಪಾಂಡವರ ಪ್ರಯಾಣ

ಯುಧಿಷ್ಠಿರನು ಭೀಮನಿಗೆ ಹೇಳುತ್ತಾನೆ :

"ವೃಕೋದರ! ಈ ಸ್ಥಳದಲ್ಲಿ ಕಣ್ಣಿಗೆ ಗೋಚರಿಸದೇ ಇರುವ ಬಲಿಷ್ಠವಾದ ಅನೇಕಭೂತಗಳು ಅಡಗಿವೆ. ಅಗ್ನಿಹೋತ್ರಿಗಳಿಗೆ ಮತ್ತು ತಪಸ್ವಿಗಳಿಗೆ ಮಾತ್ರವೇ ಇಲ್ಲಿ ಭೀತಿಯಿಲ್ಲದೇ ಸಂಚರಿಸಲು ಸಾಧ್ಯವಾಗುವುದು. ಆದುದರಿಂದ ನೀನು ಹಸಿವನ್ನೂ ಬಾಯಾರಿಕೆಯನ್ನೂ ನಿರೋಧಿಸಿ ಆತ್ಮಬಲವನ್ನು ಆಶ್ರಯಿಸು. ದಕ್ಷತೆಯಿಂದಿರು. ಕೈಲಾಸಪರ್ವತದ ವಿಷಯವಾಗಿ

ಮಹರ್ಷಿಗಳಾದ ಲೋಮಶರು ಹೇಳಿದುದೆಲ್ಲವನ್ನೂ ನೀನೂ ಕೇಳಿರುವೆ. ಅವರು ಹೇಳಿದುದನ್ನು ಮನಸ್ಸಿಗೆ ತಂದುಕೊಂಡು ಕೃಷ್ಣೆಯು ಈ ಭಯಂಕರವಾದ ಮಾರ್ಗದಲ್ಲಿ ಹೇಗೆ ಪ್ರಯಾಣಮಾಡಿಯಾಳೆಂಬುದನ್ನು ಪರ್ಯಾಲೋಚಿಸು. ಅಥವಾ ನೀನು ಹೀಗೂ ಮಾಡಬಹುದಾಗಿದೆ. ಸಹದೇವನನ್ನೂ, ರಥ-ತುರಗಗಳನ್ನೂ, ಪ್ರಯಾಣಮಾಡಿ ಬಳಲಿರುವ ಬ್ರಾಹ್ಮಣರನ್ನೂ ಕರೆದುಕೊಂಡು ನೀನು ಹಿಂದಿರುಗು. ನಾನು ನಕುಲನನ್ನೂ ಮಹಾತಪಸ್ವಿಗಳಾದ ಲೋಮಶರನ್ನೂ ಕರೆದುಕೊಂಡು ಲಘುವಾದ ಆಹಾರವನ್ನು ಸೇವಿಸುತ್ತಾ ನಿಯಮಾನುಷ್ಠಾನಪರನಾಗಿ ಮುಂದೆ ಪ್ರಯಾಣಮಾಡುತ್ತೇನೆ. ನಾನು ಹೇಳಿದಂತೆ ನೀನು ಗಂಗಾದ್ವಾರಕ್ಕೆ (ಹರಿದ್ವಾರಕ್ಕೆ) ದ್ರೌಪದೀಸಮೇತನಾಗಿ ಹೋಗಿ ನನ್ನ ಆಗಮನವನ್ನು ನಿರೀಕ್ಷಿಸುತ್ತಾ ದ್ರೌಪದಿಯನ್ನೂ ಮತ್ತು ಇತರ ಪರಿವಾರದವರನ್ನೂ ನಾನು ಬರುವವರೆಗೂ ರಕ್ಷಿಸಿಕೊಂಡಿರು.”

“ಅಣ್ಣ! ನೀನು ಹೇಳಿದಂತೆ ಈ ದ್ರೌಪದಿಯೇನೋ ದುಃಖಾರ್ತಳಾಗಿದ್ದಾಳೆ ಮತ್ತು ಬಹುದೂರದ ಪ್ರಯಾಣದಿಂದ ಆಯಾಸಗೊಂಡಿದ್ದಾಳೆ. ಆದರೂ ಇವಳು ನಿನ್ನನ್ನು ಬಿಟ್ಟು ಹಿಂದೆ ನಿಲ್ಲಲಾರಳು. ಅದೂ ಅಲ್ಲದೇ ಪಾರ್ಥನನ್ನು ಕಾಣುವ ಆಶಯದಿಂದಾಗಿ ಇವಳು ಆಯಾಸವನ್ನು ಸಹಿಸಿಕೊಂಡು ನಿನ್ನೊಡನೆ ಪ್ರಯಾಣಮಾಡುವಳು. ನೀನಾದರೂ ಪ್ರಯಾಣದ ಆಯಾಸದಿಂದ ಬಹಳವಾಗಿ ಬಳಲಿರುವೆ. ಮಹಾತ್ಮನಾದ ಅರ್ಜುನನನ್ನು ಬಹಳ ವರ್ಷಗಳಿಂದ ಕಾಣದ ನಿನಗೂ ಯಾವ ವಿಷಯದಲ್ಲಿಯೂ ಆಸಕ್ತಿಯಿಲ್ಲ. ಹೀಗಿರುವಾಗ ನನ್ನನ್ನೂ, ಸಹದೇವನನ್ನೂ, ದ್ರೌಪದಿಯನ್ನೂ ಬಿಟ್ಟು ಹೋಗುವುದರಿಂದ ನಿನ್ನ ಬೇಸರವು ಮತ್ತಷ್ಟು ಹೆಚ್ಚುವುದು. ನೀನು ಹೇಳಿದಂತೆ ನಮ್ಮೊಡನಿರುವ ಬ್ರಾಹ್ಮಣರೂ, ಅಡಿಗೆಯವರೂ, ಸೇವಕರೂ ಹಿಂದಿರುಗಲಿ. ಇದನ್ನು ನಾನು ಬೇಡವೆನ್ನುವುದಿಲ್ಲ. ಆದರೆ ರಾಕ್ಷಸರಿಂದಲೂ, ದುಷ್ಟಮೃಗಗಳಿಂದಲೂ ಕೂಡಿರುವ ಅತಿದುರ್ಗಮವಾದ ಪರ್ವತ ಪ್ರದೇಶದಲ್ಲಿ ಪ್ರಯಾಣಮಾಡಲಿರುವ ನಿನ್ನನ್ನು ಮಾತ್ರ ಬಿಟ್ಟಿರಲಾರೆನು. ಪತಿವ್ರತೆಯಾದ, ಮಹಾಭಾಗಳಾದ, ರಾಜಪುತ್ರಿಯಾದ ದ್ರೌಪದಿಯೂ ನಿನ್ನನ್ನು ಬಿಟ್ಟು ಹಿಂದಿರುಗಲು ಖಂಡಿತವಾಗಿಯೂ ಇಚ್ಛಿಸುವುದಿಲ್ಲ. ಈ ಸಹದೇವನಾದರೋ ನಿನ್ನನ್ನಗಲಿ ಒಂದು ಕ್ಷಣವಾದರೂ ಇದ್ದವನೇ ಅಲ್ಲ.

ಈಗಲೂ ನಿನ್ನನ್ನು ಬಿಟ್ಟು ಹಿಂದಿರುಗಲು ಇವನು ಖಂಡಿತವಾಗಿಯೂ ಒಪ್ಪುವುದಿಲ್ಲ. ಇವನ ಸ್ವಭಾವವು ನನಗೆ ಚೆನ್ನಾಗಿ ತಿಳಿದಿದೆ. ಒಟ್ಟಿನಲ್ಲಿ ಹೇಳುವುದಾದರೆ ನಾವೆಲ್ಲರೂ ಅರ್ಜುನನನ್ನು ನೋಡಲು ಕುತೂಹಲಿಗಳಾಗಿದ್ದೇವೆ ಮತ್ತು ನಿನ್ನನ್ನು ಬಿಟ್ಟಿರಲೂ ಅಸಮರ್ಥರಾಗಿದ್ದೇವೆ. ಆದುದರಿಂದ ನಾವೆಲ್ಲರೂ ನಿನ್ನನ್ನನುಸರಿಸಿ ಬಂದೇ ತೀರುವೆವು. ಬಹುಕಂದರಗಳಿಂದ ಕೂಡಿರುವ ಈ ಪರ್ವತಗಳನ್ನು ರಥದಲ್ಲಿ ಕುಳಿತು ಹತ್ತುವ ಸಾಧ್ಯತೆಯಿಲ್ಲದಿದ್ದರೆ ರಥವನ್ನು ಇಲ್ಲಿಯೇ ಬಿಟ್ಟು ಕಾಲ್ನಡಿಗೆಯಲ್ಲಿಯೇ ಪ್ರಯಾಣ ಮಾಡೋಣ. ಮಹಾರಾಜ! ನೀನು ಈ ವಿಷಯದಲ್ಲಿ ಸ್ವಲ್ಪವೂ ಅಧೀರನಾಗಬೇಡ. ಪಾಂಚಾಲಿಯು ನಡೆಯಲಾಗದ ಪರ್ವತಪ್ರದೇಶಗಳಲ್ಲಿ ನಾನವಳನ್ನು ಎತ್ತಿಕೊಂಡು ಗುಡ್ಡಗಳನ್ನು ದಾಟಿಸುತ್ತೇನೆ. ನಾನೀ ವಿಷಯವನ್ನು ಮೊದಲೇ ನಿರ್ಧರಿಸಿಬಿಟ್ಟಿದ್ದೇನೆ. ದ್ರೌಪದಿಯನ್ನು ಮಾತ್ರವೇ ಅಲ್ಲ! ದುರ್ಗಮವಾದ ಪ್ರದೇಶಗಳಲ್ಲಿ ಸುಕುಮಾರರಾದ ನಕುಲ-ಸಹದೇವರನ್ನೂ ಎತ್ತಿಕೊಳ್ಳುತ್ತೇನೆ. ಆದುದರಿಂದ ನಮ್ಮನ್ನೂ ನಿನ್ನ ಜೊತೆಯಲ್ಲಿ ಕರೆದುಕೊಂಡು ಹೋಗಲು ಸ್ವಲ್ಪವಾದರೂ ನೀನು ಯೋಚಿಸುವ ಕಾರಣವಿಲ್ಲ."

ಧರ್ಮಜನು ಹೇಳುತ್ತಾನೆ :

"ಭೀಮ! ನೀನು ನನ್ನ ಮನಸ್ಸಿಗೆ ಹಿತವುಂಟಾಗುವ ರೀತಿಯಲ್ಲಿ ಮಾತನಾಡಿರುವೆ. ನಿನ್ನ ಬಲವು ಅಭಿವೃದ್ಧಿಹೊಂದಲಿ. ನೀನು ಈ ಪಾಂಚಾಲಿಯನ್ನೂ ಮತ್ತು ಯಮಳರನ್ನೂ ಎತ್ತಿಕೊಂಡು ಈ ಪರ್ವತಪ್ರದೇಶವನ್ನು ದಾಟಿಸುವೆನೆಂದು ಹೇಳುತ್ತಿರುವೆ. ಅದಕ್ಕೆ ಅನುಗುಣವಾದ ಬಲವೂ ನಿನಗೆ ಪ್ರಾಪ್ತವಾಗಲಿ. ಇಂತಹ ಸಾಮರ್ಥ್ಯವು ಹಿಂದೆ ಯಾರಿಗೂ ಇರಲಿಲ್ಲ. ವೃಕೋದರ! ನಾವು ಒಬ್ಬೊಬ್ಬರೇ ಇಲ್ಲಿ ಪ್ರಯಾಣಮಾಡಲು ಸುಲಭಸಾಧ್ಯವಲ್ಲದಿರುವಾಗ ಇಬ್ಬರು-ಮೂವರನ್ನು ಎತ್ತಿಕೊಂಡು ಪ್ರಯಾಣಮಾಡುವ ಧಾರ್ಷ್ಟ್ಯವು ನಿನ್ನಲ್ಲಲ್ಲದೇ ಮತ್ತಾರಲ್ಲಿ ತಾನೇ ಇದ್ದೀತು? ನಿನ್ನ ಬಲ, ಯಶಸ್ಸು, ಧರ್ಮ, ಕೀರ್ತಿ ಎಲ್ಲವೂ ಹೆಚ್ಚಲಿ. ಕೃಷ್ಣೆಯನ್ನೂ, ಯಮಳರನ್ನೂ ಎತ್ತಿಕೊಂಡೇ ಹೋಗುವೆನೆಂಬ ಉತ್ಸಾಹವನ್ನು ನೀನು ತೋರಿರುವೆಯಾದುದರಿಂದ ನಿನಗೆ ಶ್ರಮವಾಗಲೀ, ಪರಾಭವವಾಗಲೀ, ನಿನ್ನ ಕೀರ್ತಿಗೆ ಕಳಂಕವಾಗಲೀ ಉಂಟಾಗದಿರಲೆಂದು ನಾನು ಹರಸುತ್ತೇನೆ."

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

ಜನಮೇಜಯ! ಧರ್ಮಜನು ಭೀಮಸೇನನಿಗೆ ಹೀಗೆ ಹೇಳಿದನಂತರ ಮನೋರಮೆಯಾದ ದ್ರೌಪದಿಯು ಮಂದಸ್ಮಿತೆಯಾಗಿ ಧರ್ಮಜನನ್ನು ಕುರಿತು ಹೇಳಿದಳು :

"ಭಾರತನೇ! ನಾನೂ ಸಹ ನಿನ್ನೊಡನೆ ಕಾಲ್ನಡಿಗೆಯಲ್ಲಿಯೇ ಬರಲು ಸಮರ್ಥಳಾಗಿದ್ದೇನೆ. ನನಗಾಗಿ ನೀನು ಸ್ವಲ್ಪವಾದರೂ ಸಂತಾಪಪಡುವ ಕಾರಣವಿಲ್ಲ."

ಅವರ ಮಾತುಕತೆಗಳು ಮುಗಿದನಂತರ ಲೋಮಶರು ಧರ್ಮಜನಿಗೆ ಹೇಳಿದರು :

"ಧರ್ಮಜ! ಗಂಧಮಾದನಪರ್ವತವನ್ನು ಹತ್ತಬೇಕಾದರೆ ಕೇವಲ ತಪಶ್ಚರಣೆಯಿಂದ ಮಾತ್ರವೇ ಸಾಧ್ಯವಾಗುವುದು. ಆದುದರಿಂದ ನಾವೆಲ್ಲರೂ ತಪೋನಿಷ್ಠರಾಗಿದ್ದುಕೊಂಡು ನಿಯತವ್ರತಾನುಷ್ಠಾನಪರರಾಗಿದ್ದು ಈ ಪರ್ವತವನ್ನು ಹತ್ತೋಣ. ಈ ಪರ್ವತದಲ್ಲಿ ಭೀಮ-ನಕುಲ-ಸಹದೇವರೂ, ನಾನೂ ಮತ್ತು ನೀನೂ-ಶ್ವೇತವಾಹನನಾದ ಅರ್ಜುನನನ್ನು ಸಂದರ್ಶಿಸೋಣ."

"ಜನಮೇಜಯ! ಹೀಗೆಯೇ ಪರಸ್ಪರಸಂಭಾಷಣೆಗಳನ್ನು ಮಾಡುತ್ತಾ ಪ್ರಯಾಣಮಾಡುತ್ತಿದ್ದಾಗ ಪಾಂಡವರು ಆನೆಗಳಿಂದಲೂ, ಕುದುರೆ ಗಳಿಂದಲೂ ಸಮೃದ್ಧವಾಗಿದ್ದ, ಕಿರಾತರಿಂದಲೂ–ನೂರಾರು ಪುಲಿಂದ ರಿಂದಲೂ ವ್ಯಾಪ್ತವಾಗಿದ್ದ, ದೇವಸೇವ್ಯವಾಗಿದ್ದ, ಅನೇಕಾನೇಕ ಆಶ್ಚರ್ಯಕರ ವಾದ ಸನ್ನಿವೇಶಗಳಿಂದ ಕೂಡಿದ್ದ ಸುಬಾಹುವಿನ ರಾಜ್ಯವನ್ನು ಕಂಡರು. ಪುಲಿಂದರ ಅಧಿಪತಿಯಾದ ಸುಬಾಹುರಾಜನು ತನ್ನ ದೇಶದ ಎಲ್ಲೆಗೆ ಪರಿವಾರ ಸಮೇತರಾಗಿ ಬಂದ ಪಾಂಡವರನ್ನು ಸ್ವಾಗತಿಸಿ ಸತ್ಕರಿಸಿದನು. ರಾಜನಿಂದ ಸತ್ಕೃತರಾದ ಪಾಂಡವರು ಅಲ್ಲಿಯೇ ಅಂದು ತಂಗಿದ್ದು ಮಾರನೆಯ ದಿನ ಸೂರ್ಯೋದಯಾನಂತರ ಹಿಮವತ್ಪರ್ವತವನ್ನು ಹತ್ತಲಾರಂಭಿಸಿದರು.

ಜನಮೇಜಯ! ಪಾಂಡವರು ಹೊರಡುವ ಮೊದಲು ಇಂದ್ರಸೇನನೇ ಮೊದಲಾದ ತಮ್ಮ ಪರಿವಾರದವರ ಯೋಗ-ಕ್ಷೇಮವನ್ನು ಪುಲಿಂದಾಧಿಪತಿ

ಯಾದ ಸುಬಾಹುವಿಗೆ ಒಪ್ಪಿಸಿ ದ್ರೌಪದೀಸಮೇತರಾಗಿ ಕಾಲ್ನಡಿಗೆಯಲ್ಲಿಯೇ ಪರ್ವತಾರೋಹಣಮಾಡಲು ಉಪಕ್ರಮಿಸಿದರು. ಮೆಲ್ಲಮೆಲ್ಲನೆ ಪರ್ವತಾ ರೋಹಣಮಾಡುತ್ತಿದ್ದ ಅವರು ಅರ್ಜುನನನ್ನು ಸಂದರ್ಶಿಸಲು ಬಹಳ ಉತ್ಸುಕರಾಗಿದ್ದರು. ಆದುದರಿಂದ ಅವರಿಗೆ ಆಯಾಸದ ಅರಿವೇ ಆಗಲಿಲ್ಲ."

೧೪೦ನೆಯ ಅಧ್ಯಾಯವು ಮುಗಿಯಿತು.

೧೪೧ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಅರ್ಜುನನನ್ನು ಕಾಣದೇ ಯುಧಿಷ್ಠಿರನ ಕಳವಳ : ಭೀಮನಲ್ಲಿ ಪ್ರಸ್ತಾಪ : ಅರ್ಜುನನ ಗುಣವರ್ಣನೆ

ಜನಮೇಜಯ! ಯುಧಿಷ್ಠಿರನು ತನ್ನ ತಮ್ಮಂದಿರನ್ನೂ, ದ್ರೌಪದಿ ಯನ್ನೂ ಕುರಿತು ಹೇಳುತ್ತಾನೆ :

"ಭೀಮಸೇನ! ಯಮಳರೇ! ದ್ರೌಪದಿ! ನಾನು ಹೇಳಲಿರುವ ಮಾತನ್ನು ಅನನ್ಯಮನಸ್ಕರಾಗಿ ಕೇಳಿರಿ.

**ನಾಸ್ತಿ ಭೂತಸ್ಯ ನಾಶೋ ವೈ ಪಶ್ಯತಾಸ್ಮಾನ್ವನೇಚರಾನ್ ।**
**ದುರ್ಬಲಾಃ ಕ್ಲೇಶಿತಾಃ ಸ್ಮೇತಿ ಯದ್ಬ್ರುವಾಮೇತರೇತರಮ್ ॥೨॥**

**ಅಶಕ್ಯೇऽಪಿ ವ್ರಜಾಮೋ ಯದ್ಧನಂಜಯದಿದೃಕ್ಷಯಾ ।**
**ತನ್ಮೇ ದಹತಿ ಗಾತ್ರಾಣಿ ತೂಲರಾಶಿಮಿವಾನಲಃ ॥೩॥**

ಹಿಂದಿನ ಕರ್ಮಫಲವು ಈ ಜನ್ಮಕ್ಕೂ ಅನುಸರಿಸಿ ಬರುತ್ತದೆ. ಕರ್ಮ ಫಲವು ಆಯಾ ಜನ್ಮಕ್ಕೆ ಪರ್ಯವಸಾನವನ್ನು ಹೊಂದುವುದಿಲ್ಲ. ರಾಜಪುತ್ರ ರಾಗಿ ಹುಟ್ಟಿರುವ ನಾವಿಂದು ವನೇಚರರಾಗಿದ್ದೇವೆ. ದುರ್ಬಲರಾಗಿ ನಾನಾ ವಿಧವಾದ ಕ್ಲೇಶಗಳನ್ನು ಅನುಭವಿಸುತ್ತಿದ್ದೇವೆ. ನಮಗೆ ಸಹಾಯಕರು ಬೇರೊಬ್ಬರಿಲ್ಲದೇ ನಮ್ಮನ್ನೇ ನಾವು ಅವಲಂಬಿಸಬೇಕಾದ ಸನ್ನಿವೇಶವು ಪ್ರಾಪ್ತವಾಗಿದೆ. ಇವೆಲ್ಲವೂ ನಮ್ಮ ಪೂರ್ವಜನ್ಮದ ಕರ್ಮವಿಪಾಕವೇ ಆಗಿರು ವುದು. ಇಂತಹ ದಾರುಣಸ್ಥಿತಿಯಲ್ಲಿಯೂ ಧನಂಜಯನನ್ನು ನೋಡುವ ಆಕಾಂಕ್ಷೆಯಿಂದ ದುರ್ಗಮವಾದ ಈ ಹಾದಿಯನ್ನು ಹಿಡಿದು ಹೋಗುತ್ತಿದ್ದೇವೆ. ಬೆಂಕಿಯು ಹತ್ತಿಯ ರಾಶಿಯನ್ನೇ ಸುಟ್ಟುಬಿಡುವಂತೆ–ಈ ದುಃಸ್ಥಿತಿಯು ನನ್ನ ಶರೀರವನ್ನೇ ದಹಿಸುತ್ತಿದೆ.

ಭೀಮಸೇನ! ಅರ್ಜುನನು ನನ್ನ ಸಮೀಪದಲ್ಲಿಲ್ಲದಿರುವುದು, ಅವನ ದರ್ಶನಾಕಾಂಕ್ಷೆಯಿಂದ ಈ ಘೋರಾರಣ್ಯದಲ್ಲಿ ನಾನು ನನ್ನ ತಮ್ಮಂದಿರೊಡನೆ ಜೀವಿಸುತ್ತಿರುವುದು, ದ್ರೌಪದಿಗೆ ಅಂದು ಸಭೆಯಲ್ಲಾದ ಅಪಮಾನ–ಈ ಎಲ್ಲ ವಿಷಯಗಳ ಸ್ಮರಣೆಯು ನನಗುಂಟಾದಾಗ ನಾನು ಪರಿತಾಪದಿಂದ ಬೆಂದುಹೋಗುತ್ತೇನೆ.

**ನಕುಲಾತ್ಪೂರ್ವಜಂ ಪಾರ್ಥಂ ನ ಪಶ್ಯಾಮ್ಯಮಿತೌಜಸಮ್ ।**
**ಅಜೇಯಮುಗ್ರಧನ್ವಾನಂ ತೇನ ತಪ್ಯೇ ವೃಕೋದರ ॥೫॥**

ವೃಕೋದರನೇ! ಅಜೇಯನಾದ, ಮಹಾಧನುರ್ಧರನಾದ, ಮಹಾ ಪರಾಕ್ರಮಿಯಾದ, ನಕುಲಪೂರ್ವಜನಾದ ಪಾರ್ಥನು ನನ್ನ ಸಮೀಪದಲ್ಲಿಲ್ಲ ದಿರುವುದರಿಂದಲೂ ನಾನು ಬಹಳ ಪರಿತಾಪಪಡುತ್ತಿದ್ದೇನೆ.

**ತೀರ್ಥಾನಿ ಚೈವ ರಮ್ಯಾಣಿ ವನಾನಿ ಚ ಸರಾಂಸಿ ಚ ।**
**ಚರಾಮಿ ಸಹ ಯುಷ್ಮಾಭಿಸ್ತಸ್ಯ ದರ್ಶನಕಾಂಕ್ಷಯಾ ॥೬॥**

**ಪಞ್ಚವರ್ಷಾಣ್ಯಹಂ ವೀರಂ ಸತ್ಯಸಂಧಂ ಧನಂಜಯಮ್ ।**
**ಯನ್ನ ಪಶ್ಯಾಮಿ ಬೀಭತ್ಸುಂ ತೇನ ತಪ್ಯೇ ವೃಕೋದರ ॥೭॥**

ಸತ್ಯಸಂಧನಾದ ಧನಂಜಯನನ್ನು ದರ್ಶನಮಾಡುವ ಆಕಾಂಕ್ಷೆ ಯಿಂದಲೇ ನಾನು ನಿಮ್ಮೊಡನೆ ಕಳೆದ ಐದು ವರ್ಷಗಳಿಂದಲೂ ಪುಣ್ಯಕ್ಷೇತ್ರ ಗಳಲ್ಲಿಯೂ, ರಮ್ಯವಾದ ವನಪ್ರದೇಶಗಳಲ್ಲಿಯೂ ಸಂಚಾರಮಾಡುತ್ತಿದ್ದೇನೆ. ಆದರೂ ನಾನಿನ್ನೂ ಪಾರ್ಥನನ್ನು ಕಾಣಲಿಲ್ಲ. ಇದರಿಂದಾಗಿ ನನ್ನ ಪರಿತಾಪವು ಅಧಿಕವಾಗಿದೆ.

**ತಂ ವೈ ಶ್ಯಾಮಂ ಗುಡಾಕೇಶಂ ಸಿಂಹವಿಕ್ರಾನ್ತಗಾಮಿನಮ್ ।**
**ನ ಪಶ್ಯಾಮಿ ಮಹಾಬಾಹುಂ ತೇನ ತಪ್ಯೇ ವೃಕೋದರ ॥೮॥**

ಶ್ಯಾಮಲವರ್ಣನಾದ, ಮಹಾಬಾಹುವಾದ, ಸಿಂಹದಂತೆ ಗಂಭೀರ ವಾದ ನಡಿಗೆಯುಳ್ಳ ಗುಡಾಕೇಶನನ್ನು ನಾನು ಬಹಳ ದಿನಗಳಿಂದಲೂ ಕಾಣಲಿಲ್ಲ. ಇದರಿಂದ ನನಗೆ ತಡೆಯಲಾಗದ ದುಃಖವುಂಟಾಗಿದೆ.

**ಕೃತಾಸ್ತ್ರಂ ನಿಪುಣಂ ಯುದ್ಧೇಽಪ್ರತಿಮಾನಂ ಧನುಷ್ಮತಾಮ್ ।**
**ನ ಪಶ್ಯಾಮಿ ಕುರುಶ್ರೇಷ್ಠ ತೇನ ತಪ್ಯೇ ವೃಕೋದರ ॥೯॥**

ಕುರುಶ್ರೇಷ್ಠನೇ! ಅಸ್ತ್ರವಿದ್ಯೆಯಲ್ಲಿ ಪ್ರಾವೀಣ್ಯವನ್ನು ಪಡೆದಿರುವ, ಯುದ್ಧವಿಶಾರದನಾದ, ಧನುರ್ಧಾರಿಗಳಲ್ಲಿ ಅಪ್ರತಿಮನಾದ ಧನಂಜಯನನ್ನು ನಾನು ಇದುವರೆಗೂ ಕಾಣಲಿಲ್ಲ. ಅದರಿಂದ ನಾನು ಪರಿತಾಪಪಡುತ್ತಿದ್ದೇನೆ.

**ಚರನ್ತಮರಿಸಂಘೇಷು ಕಾಲೇ ಕ್ರುದ್ಧಮಿವಾನ್ತಕಮ್ ।**
**ಪ್ರಭಿನ್ನಮಿವ ಮಾತಙ್ಗಂ ಸಿಂಹಸ್ಕನ್ಧಂ ಧನಂಜಯಮ್ ॥೧೦॥**

**ಯಃ ಸ ಶಕ್ರಾದನವರೋ ವೀರ್ಯೇಣ ದ್ರವಿಣೇನ ಚ ।**
**ಯಮಯೋಃ ಪೂರ್ವಜಃ ಪಾರ್ಥಃ ಶ್ವೇತಾಶ್ವೋಽಮಿತವಿಕ್ರಮಃ ॥೧೧॥**

**ದುಃಖೇನ ಮಹತಾವಿಷ್ಟಸ್ತಂ ನ ಪಶ್ಯಾಮಿ ಫಾಲ್ಗುನಮ್ ।**
**ಅಜೇಯಮುಗ್ರಧನ್ವಾನಂ ತೇನ ತಪ್ಯೇ ವೃಕೋದರ ॥೧೨॥**

ವೃಕೋದರನೇ! ಯುಗಾಂತ್ಯದಲ್ಲಿ ಕೋಪಗೊಂಡ ಯಮನಂತೆ ಧನಂಜಯನು ಶತ್ರುಸಮೂಹವನ್ನು ಭೇದಿಸುತ್ತಾನೆ. ಅವನು ಮದೋದಕ ವನ್ನು ಸುರಿಸುತ್ತಿರುವ ಮದಗಜಕ್ಕೆ ಸಮನಾದ ಪರಾಕ್ರಮವುಳ್ಳವನು. ಸಿಂಹಸ್ಕಂಧನು. ಪರಾಕ್ರಮದಲ್ಲಿಯಾಗಲೀ ಶಕ್ತಿಯಲ್ಲಾಗಲೀ ಅವನು ಇಂದ್ರನಿಗೂ ಕಡಿಮೆಯವನಲ್ಲ. ನಕುಲ-ಸಹದೇವರಿಗೆ ಅಗ್ರಜನಾದ, ಶ್ವೇತಾಶ್ವನಾದ ಅವನು ಮಹಾಪರಾಕ್ರಮವುಳ್ಳವನು. ಫಲ್ಗುನೀನಕ್ಷತ್ರದಲ್ಲಿ ಜನ್ಮತಾಳಿದ ಅತುಲಪರಾಕ್ರಮಿಯಾದ, ಉಗ್ರಗಾಂಡೀವಧನುರ್ಧಾರಿಯಾದ ಫಾಲ್ಗುನನನ್ನು ನೋಡದೇ ನಾನು ಬಹಳ ದುಃಖಿತನಾಗಿರುವೆನು.

**ಸತತಂ ಯಃ ಕ್ಷಮಾಶೀಲಃ ಕ್ಷಿಪ್ಯಮಾಣೋಽಪ್ಯಣೀಯಸಾ ।**
**ಋಜುಮಾರ್ಗಪ್ರಸನ್ನಸ್ಯ ಶರ್ಮದಾತಾಭಯಸ್ಯ ಚ ॥೧೩॥**

**ಸ ತು ಜಿಹ್ಮಪ್ರವೃತ್ತಸ್ಯ ಮಾಯಯಾಭಿಜಿಘಾಂಸತಃ ।**
**ಅಪಿ ವಜ್ರಧರಸ್ಯಾಪಿ ಭವೇತ್ಕಾಲವಿಷೋಪಮಃ ॥೧೪॥**

ಭೀಮಸೇನ! ಅವನಲ್ಲಿರುವ ಮತ್ತೊಂದು ಗುಣವೂ ಬಹಳ ಶ್ಲಾಘ್ಯ ವಾದುದು. ನಾನು ಹೇಳಿದಂತೆ ನಮ್ಮ ಪಾರ್ಥನು ಅತುಲಪರಾಕ್ರಮಿಯಾಗಿ ದ್ದರೂ ಕ್ಷಮಾಶೀಲನು. ಅಲ್ಪನಾದವನೊಬ್ಬ ವಿವೇಕಶೂನ್ಯನಾಗಿ ನಿಂದಿಸಿ ದರೂ ಕೋಪಗೊಳ್ಳತಕ್ಕವನಲ್ಲ. ಋಜುಮಾರ್ಗಪ್ರವರ್ತಕರಿಗೆ, ಸತ್ಪುರುಷ ರಿಗೆ ಸುಖವನ್ನೂ ಅಭಯವನ್ನೂ ಕೊಡತಕ್ಕವನು. ವಂಚನೆಯ ಮಾರ್ಗ

ವನ್ನು ಹಿಡಿದು ಮಾಯೆಯಿಂದ ಆಕ್ರಮಣಮಾಡಲು ಬರುವವನು ಸಾಕ್ಷಾತ್ ಇಂದ್ರನೇ ಆಗಿದ್ದರೂ ಅವನಿಗೆ ಪಾರ್ಥನು ಕಾಲವಿಷಸದೃಶನಾಗುತ್ತಾನೆ. (ಮೋಸಗಾರನನ್ನೂ, ಧರ್ಮಭ್ರಷ್ಟನನ್ನೂ ಧನಂಜಯನು ಧ್ವಂಸಮಾಡದೇ ಬಿಡುವುದಿಲ್ಲ.)

**ಶತ್ರೋರಪಿ ಪ್ರಸನ್ನಸ್ಯ ಸೋಽನೃಶಂಸಃ ಪ್ರತಾಪವಾನ್ ।**
**ದಾತಾಭಯಸ್ಯ ಬೀಭತ್ಸುರಮಿತಾತ್ಮಾ ಮಹಾಬಲಃ ॥೧೫॥**

**ಸರ್ವೇಷಾಮಾಶ್ರಯೋಽಸ್ಮಾಕಂ ರಣೇಽರೀಣಾಂ ಪ್ರಮರ್ದಿತಾ ।**
**ಆಹರ್ತಾ ಸರ್ವರತ್ನಾನಾಂ ಸರ್ವೇಷಾಂ ನಃ ಸುಖಾವಹಃ ॥೧೬॥**

ದಯಾರ್ದ್ರಹೃದಯನಾದ, ಪ್ರತಾಪಶಾಲಿಯಾದ, ಮಹಾಬಲನಾದ, ಮಹಾತ್ಮನಾದ ನಮ್ಮ ಪಾರ್ಥನು ಶರಣಾಗತನಾಗಿ ಬಂದ ಶತ್ರುವಿಗೂ ಅಭಯನೀಡುತ್ತಾನೆ. ಅಂತಹ ಪಾರ್ಥನೇ ನಮಗೂ ರಕ್ಷಕನು. ಭೀಮಸೇನ! ಶತ್ರುಗಳನ್ನು ಯುದ್ಧದಲ್ಲಿ ದಮನಮಾಡುವ ಪಾರ್ಥನು ನಮ್ಮೆಲ್ಲರಿಗೂ ಆಶ್ರಯಭೂತನಾಗಿದ್ದಾನೆ. ಅವನು ಯುದ್ಧದಲ್ಲಿ ಸಕಲಶತ್ರುಗಳನ್ನೂ ಪರಾಜಯಗೊಳಿಸಿ ಹೇರಳವಾದ ಐಶ್ವರ್ಯವನ್ನು ಗಳಿಸಿ ನಮ್ಮೆಲ್ಲರಿಗೂ ಸುಖವನ್ನುಂಟುಮಾಡುತ್ತಾನೆ.

**ರತ್ನಾನಿ ಯಸ್ಯ ವೀರ್ಯೇಣ ದಿವ್ಯಾನ್ಯಾಸನ್ಪುರಾ ಮಮ ।**
**ಬಹೂನಿ ಬಹುಜಾತೀನಿ ಯಾನಿ ಪ್ರಾಪ್ತಃ ಸುಯೋಧನಃ ॥೧೭॥**

**ಯಸ್ಯ ಬಾಹುಬಲಾದ್ವೀರ ಸಭಾ ಚಾಸೀತ್ಪುರಾ ಮಮ ।**
**ಸರ್ವರತ್ನಮಯೀ ಖ್ಯಾತಾ ತ್ರಿಷು ಲೋಕೇಷು ಪಾಣ್ಡವ ॥೧೮॥**

ಯಾವನ ಭುಜಬಲ-ಪರಾಕ್ರಮಗಳಿಂದ ಬಹುಮೂಲ್ಯಗಳಾದ ಯಾವ ವಜ್ರ-ವೈಡೂರ್ಯ-ರತ್ನಾಭರಣಗಳನ್ನು ಹಿಂದೆ ನಾನು ಪಡೆದಿದ್ದೆನೋ–ಆ ಐಶ್ವರ್ಯವೆಲ್ಲವೂ ದುರ್ಯೋಧನನ ವಶವಾಗಿಹೋಯಿತು. ರತ್ನಮಯವಾದ ತ್ರಿಲೋಕಪ್ರಸಿದ್ಧವಾದ ನನ್ನ ದಿವ್ಯಸಭಾಮಂಟಪವೂ ಪಾರ್ಥನ ಭುಜಬಲ-ಪರಾಕ್ರಮಗಳಿಂದಲೇ ನಿರ್ಮಿತವಾಗಿದ್ದಿತು.

**ವಾಸುದೇವಸಮಂ ವೀರ್ಯೇ ಕಾರ್ತವೀರ್ಯಸಮಂ ಯುಧಿ ।**
**ಅಜೇಯಮಮಿತಂ ಯುದ್ಧೇ ತಂ ನ ಪಶ್ಯಾಮಿ ಫಾಲ್ಗುನಮ್ ॥೧೯॥**

ವೃಕೋದರ! ನಮ್ಮ ಪಾರ್ಥನು ವೀರ್ಯದಲ್ಲಿ ವಾಸುದೇವನಿಗೆ ಸಮಾನನು. ಯುದ್ಧದಲ್ಲಿ ಕಾರ್ತವೀರ್ಯಾರ್ಜುನನಿಗೆ ಸಮಾನನು. ಯುದ್ಧದಲ್ಲಿ ಇತರರಿಂದ ಜಯಿಸಲು ಅಶಕ್ಯನಾದವನು. ಅಂತಹ ಫಾಲ್ಗುನನನ್ನಿಂದು ನಾನು ಕಾಣದವನಾಗಿದ್ದೇನೆ.



**ಸಂಕರ್ಷಣಂ ಮಹಾವೀರ್ಯಂ ತ್ವಾಂ ಚ ಭೀಮಾಪರಾಜಿತಮ್ ।**
**ಅನುಯಾತಃ ಸ್ವವೀರ್ಯೇಣ ವಾಸುದೇವಂ ಚ ಶತ್ರುಹಾ ॥೨೦॥**

ಶತ್ರುನಿಷೂದನನಾದ ಅರ್ಜುನನು ಪರಾಕ್ರಮದಲ್ಲಿ ಮಹಾಪರಾಕ್ರಮಿಯಾದ ಬಲರಾಮನನ್ನೂ, ಅಪರಾಜಿತನಾದ ನಿನ್ನನ್ನೂ ಮತ್ತು ವಾಸುದೇವನನ್ನೂ ಅನುಸರಿಸಿದ್ದಾನೆ.

**ಯಸ್ಯ ಬಾಹುಬಲೇ ತುಲ್ಯಃ ಪ್ರಭಾವೇ ಚ ಪುರಂದರಃ ।**
**ಜವೇ ವಾಯುರ್ಮುಖೇ ಸೋಮಃ ಕ್ರೋಧೇ ಮೃತ್ಯುಃ ಸನಾತನಃ ॥**

ಯಾವ ನಮ್ಮ ಪಾರ್ಥನ ಬಾಹುಬಲ-ಪ್ರಭಾವಗಳಿಗೆ ತ್ರೈಲೋಕ್ಯಾಧಿಪತಿಯಾದ ಇಂದ್ರನೊಬ್ಬನು ಮಾತ್ರ ಸದೃಶನಾಗಿರುವನೋ–ವೇಗದಲ್ಲಿ ವಾಯುವೊಬ್ಬನು ಸಮಾನನೆನಿಸಿರುವನೋ–ಮುಖಕಾಂತಿಯಲ್ಲಿ ಯಾವ ನಮ್ಮ ಪಾರ್ಥನಿಗೆ ಚಂದ್ರನೊಬ್ಬನು ಸಮಾನನೆನಿಸಿದ್ದಾನೆಯೋ ಮತ್ತು ಕೋಪದಲ್ಲಿ ಸನಾತನನಾದ ಮೃತ್ಯುವೊಬ್ಬನು ಸಮಾನನೆನಿಸಿರುವನೋ–ಅಂತಹ ಪಾರ್ಥನನ್ನು ನಾನು ಕಾಣದೇ ಪರಿತಪಿಸುತ್ತಿದ್ದೇನೆ.

ಭೀಮ! ನರವ್ಯಾಘ್ರನಾದ ಪಾರ್ಥನನ್ನು ಕಾಣುವ ಸಲುವಾಗಿ ನಾವೆಲ್ಲರೂ ಗಂಧಮಾದನಪರ್ವತಕ್ಕೆ ಹೋಗೋಣ. ಗಂಧಮಾದನಪರ್ವತದಲ್ಲಿ ವಿಶಾಲವಾದ ಬದರೀವೃಕ್ಷವೂ ಮತ್ತು ಆ ವೃಕ್ಷದ ಆಶ್ರಯದಲ್ಲಿ ನರ-ನಾರಾಯಣರ ಆಶ್ರಮವೂ ಇರುವುದು. ಅಲ್ಲಿ ಯಕ್ಷರು ಸದಾಕಾಲದಲ್ಲಿಯೂ ಉಪಸ್ಥಿತರಾಗಿರುವರು. ಪವಿತ್ರವಾದ ಆ ಪರ್ವತವನ್ನು ನಾವು ಪರಸ್ಪರ ಸಹಕಾರದಿಂದ ಹತ್ತಿಹೋಗೋಣ.

ಭೀಮಸೇನ! ರಾಕ್ಷಸರಿಂದ ಸಂಸೇವ್ಯಮಾನವಾದ, ಬಹುರಮ್ಯವಾದ ಕುಬೇರಪುಷ್ಕರಣಿಯೂ ಅಲ್ಲಿಯೇ ಇರುವುದು. ಅಲ್ಲಿಗೂ ಯಾನಾದಿಗಳಲ್ಲಿ ಕುಳಿತು ಪ್ರಯಾಣಮಾಡುವ ಸಾಧ್ಯತೆಯಿಲ್ಲ. ವ್ರತಾನುಷ್ಠಾನಪರರಾಗಿದ್ದುಕೊಂಡು ಕಾಲ್ನಡಿಗೆಯಲ್ಲಿಯೇ ಪ್ರಯಾಣಮಾಡೋಣ. ದಯಾರಹಿತರೂ (ಕ್ರೂರಿಗಳೂ), ಲುಬ್ಧರೂ, ಕ್ಷುದ್ರವಾದ ಮನಸ್ಸುಳ್ಳವರೂ, ಮನಶ್ಶಾಂತಿಯಿಲ್ಲದವರೂ ಅಲ್ಲಿಗೆ ಹೋಗಲಾರರು. ಆದುದರಿಂದ ನಾವು ಪ್ರಶಾಂತ ಮನಸ್ಕರಾಗಿ ಅಲ್ಲಿಗೆ ಪ್ರಯಾಣಮಾಡೋಣ. ಕತ್ತಿಯನ್ನೂ, ಧನುಸ್ಸನ್ನೂ ಧರಿಸಿದವರಾಗಿ, ವ್ರತನಿಷ್ಠರಾದ ಬ್ರಾಹ್ಮಣರಿಂದೊಡಗೂಡಿ ಅರ್ಜುನನನ್ನು ಕಾಣುವ ಸಲುವಾಗಿ ನಾವು ಅಲ್ಲಿಗೆ ಪ್ರಯಾಣಮಾಡೋಣ.

**ಮಕ್ಷಿಕಾದಂಶಮಶಕಾನ್ಸಿಂಹಾನ್ವ್ಯಾಘ್ರಾನ್ಸರೀಸೃಪಾನ್ ।**
**ಪ್ರಾಪ್ನೋತ್ಯನಿಯತಃ ಪಾರ್ಥ ನಿಯತಸ್ತಾನ್ನ ಪಶ್ಯತಿ ॥೨೭॥**

ಆ ಪರ್ವತದಲ್ಲಿ ಮತ್ತೊಂದು ವಿಚಿತ್ರವಿದೆ. ಯಾರು ಪರಿಶುದ್ಧರೋ

ಅವರನ್ನು ಕಾಡುನೊಣಗಳಾಗಲೀ, ಸೊಳ್ಳೆಗಳಾಗಲೀ, ಸಿಂಹ-ವ್ಯಾಘ್ರಗಳೇ ಆಗಲೀ, ಹಾವು-ಚೇಳುಗಳಾಗಲೀ ಬಾಧೆಪಡಿಸುವುದಿಲ್ಲ. ಅವರು ಸುಗಮ ವಾಗಿ ಆ ಪರ್ವತವನ್ನು ಹತ್ತಬಲ್ಲರು. ಅಪರಿಶುದ್ಧರಾದವರನ್ನು ಆ ದುಷ್ಟ ಪ್ರಾಣಿಗಳು ಒಂದು ಹೆಜ್ಜೆ ಮುಂದೆ ಹೋಗಲೂ ಬಿಡುವುದಿಲ್ಲ. ಆದುದರಿಂದ ನಾವೆಲ್ಲರೂ ವ್ರತಾನುಷ್ಠಾನಪರರಾಗಿ, ಪರಿಶುದ್ಧರಾಗಿ, ನಿಯತಾಹಾರ ವುಳ್ಳವರಾಗಿ ಧನಂಜಯನನ್ನು ನೋಡುವ ಸಲುವಾಗಿ ಗಂಧಮಾದನ ಪರ್ವತವನ್ನು ಹತ್ತೋಣ."

೧೪೧ನೆಯ ಅಧ್ಯಾಯವು ಮುಗಿಯಿತು.

೧೪೨ನೆಯ ಅಧ್ಯಾಯ ತೀರ್ಥಯಾತ್ರಾಪರ್ವ (ಮುಂದುವರಿದಿದೆ.)

## ಗಂಗೆಯ ಮಹಿಮಾವರ್ಣನೆ : ನರಕಾಸುರವಧೆ ಮತ್ತು ವರಾಹಾವತಾರದ ಕಥೆ

ಲೋಮಶರು ಪಾಂಡವರಿಗೆ ಹೇಳುತ್ತಾರೆ :

"ಪಾಂಡುಪುತ್ರರೇ! ನೀವು ಇದುವರೆಗೂ ಅನೇಕಾನೇಕಪರ್ವತ ಗಳನ್ನೂ, ನದಿಗಳನ್ನೂ, ಪಟ್ಟಣಗಳನ್ನೂ, ಅರಣ್ಯಗಳನ್ನೂ, ರಮ್ಯವಾದ ತೀರ್ಥಗಳನ್ನೂ ಸಂದರ್ಶಿಸಿರುವಿರಿ ಮತ್ತು ಅನೇಕತೀರ್ಥಗಳಲ್ಲಿ ಸ್ನಾನಾದಿ ಗಳನ್ನೂ ಮಾಡಿರುವಿರಿ. ಈಗ ನಾವು ಹೋಗುತ್ತಿರುವ ಹಾದಿಯು ನಮ್ಮನ್ನು ಪರಮಪವಿತ್ರವಾದ ಮಂದರಪರ್ವತಕ್ಕೆ ಒಯ್ಯುತ್ತದೆ. ಆದುದರಿಂದ ನೀವೆಲ್ಲರೂ ನಿರುದ್ವಿಗ್ನರಾಗಿಯೂ, ಏಕಾಗ್ರಚಿತ್ತರಾಗಿಯೂ ಇರಬೇಕು. ಮಂದರಪರ್ವತವು ದೇವತೆಗಳ ನಿವಾಸವೇ ಆಗಿರುವುದು. ಅಲ್ಲಿಗೆ ನೀವೀಗ ಪ್ರಯಾಣಮಾಡುತ್ತಿರುವಿರಿ. ಈ ಮಂದರಪರ್ವತವು ಪುಣ್ಯಕರ್ಮಿಗಳಾದ ಮಹರ್ಷಿಗಳ ನಿವಾಸಸ್ಥಾನವೂ ಆಗಿರುವುದು."

ಗಂಗಾನದಿಯನ್ನು ನಿರ್ದೇಶಿಸುತ್ತಾ ಲೋಮಶರು ಹೇಳುತ್ತಾರೆ :

**ಏಷಾ ಶಿವಜಲಾ ಪುಣ್ಯಾ ಯಾತಿ ಸೌಮ್ಯ ಮಹಾನದೀ ।**
**ಬದರೀಪ್ರಭವಾ ರಾಜನ್ದೇವರ್ಷಿಗಣಸೇವಿತಾ ॥೪॥**

**ಏಷಾ ವೈಹಾಯಸೈರ್ನಿತ್ಯಂ ವಾಲಖಿಲ್ಯೈರ್ಮಹಾತ್ಮಭಿಃ ।**
**ಅರ್ಚಿತಾ ಚೋಪಯಾತಾ ಚ ಗನ್ಧರ್ವೈಶ್ಚ ಮಹಾತ್ಮಭಿಃ ॥೫॥**

ಅತ್ರ ಸಾಮ ಸ್ಮ ಗಾಯನ್ತಿ ಸಾಮಗಾಃ ಪುಣ್ಯನಿಃಸ್ವನಾಃ ।
ಮರೀಚಿಃ ಪುಲಹಶ್ಚೈವ ಭೃಗುಶ್ಚೈವಾಙ್ಗಿರಾಸ್ತಥಾ ॥೬॥

ಅತ್ರಾಹ್ನಿಕಂ ಸುರಶ್ರೇಷ್ಠೋ ಜಪತೇ ಸಮರುದ್ಗಣಃ ।
ಸಾಧ್ಯಾಶ್ಚೈವಾಶ್ವಿನೌ ಚೈವ ಪರಿಧಾವನ್ತಿ ತಂ ತದಾ ॥೭॥

ಚನ್ದ್ರಮಾಃ ಸಹ ಸೂರ್ಯೇಣ ಜ್ಯೋತೀಂಷಿ ಚ ಗ್ರಹೈಃ ಸಹ ।
ಅಹೋರಾತ್ರವಿಭಾಗೇನ ನದೀಮೇನಾಮನುವ್ರಜನ್ ॥೮॥

ಏತಸ್ಯಾಃ ಸಲಿಲಂ ಮೂರ್ಧ್ನಿ ವೃಷಾಙ್ಕಃ ಪರ್ಯಧಾರಯತ್ ।
ಗಙ್ಗಾದ್ವಾರೇ ಮಹಾಭಾಗ ಯೇನ ಲೋಕಸ್ಥಿತಿರ್ಭವೇತ್ ॥೯॥

ಏತಾಂ ಭಗವತೀಂ ದೇವೀಂ ಭವನ್ತಃ ಸರ್ವ ಏವ ಹಿ ।
ಪ್ರಯತೇನಾತ್ಮನಾ ತಾತ ಪ್ರತಿಗಮ್ಯಾಭಿವಾದತ ॥೧೦॥

"ಇಲ್ಲಿಯೇ ಸಮೀಪದಲ್ಲಿ ಶುಭಜಲದಿಂದ ಕೂಡಿರುವ ಮಹಾಪುಣ್ಯವತಿಯಾದ ಗಂಗಾನದಿಯೂ (ಅಲಕನಂದಾ) ಹರಿಯುತ್ತಿರುವುದು. ಪರಮಪಾವನೆಯಾದ ಈ ನದಿಯು ಬದರಿಕಾಶ್ರಮದಲ್ಲಿ ಹುಟ್ಟುವುದು. ಈ ಮಹಾನದಿಯು ಯಾವಾಗಲೂ ದೇವರ್ಷಿಗಣಗಳಿಂದ ಸಂಸೇವಿಸಲ್ಪಡುತ್ತಿರುವುದು. ದೇವರ್ಷಿಗಳೂ ಸಹ ಸ್ನಾನಾರ್ಥವಾಗಿ ಈ ಪುಣ್ಯನದಿಗೆ ಬರುತ್ತಿರುತ್ತಾರೆ. ಮಹಾತ್ಮರಾದ ದೇವತೆಗಳೂ, ವಾಲಖಿಲ್ಯರೂ, ಗಂಧರ್ವರೂ ಈ ನದಿಯ ಸಮೀಪಕ್ಕೆ ಬಂದು ಅನುದಿನವೂ ಈ ನದಿಯನ್ನು ಪೂಜಿಸುತ್ತಾರೆ. ಮರೀಚಿ, ಪುಲಹ, ಭೃಗು, ಅಂಗಿರಸರೇ ಮುಂತಾದ ಮಹರ್ಷಿಗಳೂ ಈ ಪುಣ್ಯನದಿಯ ತೀರದಲ್ಲಿ ಉಪಸ್ಥಿತರಾಗಿ ಸುಮಧುರಧ್ವನಿಯಿಂದ ಸಾಮಗಾನವನ್ನು ಮಾಡುತ್ತಾರೆ. ಮರುತ್ತುಗಳಿಂದೊಡಗೂಡಿ ಇಂದ್ರನು ಈ ಪುಣ್ಯನದಿಯಲ್ಲಿ ಸಂಧ್ಯೋಪಾಸನೆಯನ್ನು ಮಾಡುತ್ತಾನೆ. ಆ ಸಮಯದಲ್ಲಿ ಇಂದ್ರನನ್ನು ಅಶ್ವಿನೀ ದೇವತೆಗಳೂ, ಸಾಧ್ಯರೂ ಉಪಚರಿಸುತ್ತಿರುತ್ತಾರೆ. ಸೂರ್ಯ-ಚಂದ್ರರೂ ಗ್ರಹ-ನಕ್ಷತ್ರಗಳ ಅಧಿದೇವತೆಗಳೂ ಹಗಲಿನಲ್ಲಿಯೂ, ರಾತ್ರಿಯಲ್ಲಿಯೂ ಕ್ರಮಪ್ರಕಾರವಾಗಿ ಬಂದು ಈ ನದಿಯನ್ನು ಪೂಜಿಸುತ್ತಾರೆ. ಈ ಹರಿದ್ವಾರದಲ್ಲಿಯೇ ಸಕಲಲೋಕರಕ್ಷಕನಾದ, ವೃಷಭಲಾಂಛನನಾದ ಪರಮೇಶ್ವರನು ಆಕಾಶದಿಂದ ಬೀಳುತ್ತಿದ್ದ ಗಂಗಾದೇವಿಯನ್ನು ಲೋಕಸ್ಥಿತಿಗಾಗಿ ಜಟೆಯಲ್ಲಿ

ಧರಿಸಿದನು. ಇಂತಹ ಮಹಾಪುಣ್ಯವತಿಯಾದ ಗಂಗಾನದಿಯ ತೀರಕ್ಕೆ ನೀವೆಲ್ಲರೂ ಜಿತಮನಸ್ಕರಾಗಿ ಹೋಗಿ ಆ ಮಹಾನದಿಯಲ್ಲಿ ಮಿಂದು ಅಭಿವಾದನಮಾಡಿರಿ."



ಲೋಮಶರ ಮಾತುಗಳನ್ನು ಕೇಳಿ ಪಾಂಡವರು ಆಕಾಶಗಂಗೆಯಲ್ಲಿ ಸ್ನಾನಮಾಡಿ ಭಕ್ತಿಪೂರ್ವಕವಾಗಿ ಗಂಗೆಗೆ ನಮಸ್ಕರಿಸಿದರು. ಲೋಮಶರ ನಿರ್ದೇಶದಂತೆ ಗಂಗಾನದಿಯನ್ನು ಪೂಜಿಸಿದನಂತರ ಪಾಂಡವರು ಋಷಿ-ಮಹರ್ಷಿಗಳೊಡನೆ ಮುಂದಕ್ಕೆ ಪ್ರಯಾಣಹೊರಟರು. ಹೀಗೆಯೇ ಪ್ರಯಾಣ ಮಾಡುತ್ತಿರುವಾಗ ಮೇರುಪರ್ವತಕ್ಕೆ ಸಮಾನವಾದ ಗಾತ್ರವುಳ್ಳ, ಸರ್ವತ್ರ ವ್ಯಾಪ್ತವಾಗಿದ್ದ ಬಿಳಿಯದಾದ ಒಂದು ದೊಡ್ಡವಸ್ತುವು ಅವರಿಗೆ ಕಾಣಿಸಿತು.

ಆ ವಸ್ತುವಿನ ಪೂರ್ವೇತಿಹಾಸವನ್ನು ಪಾಂಡವರು ಕೇಳುವರೆಂದು ಲೋಮಶರು ಮೊದಲೇ ಯೋಚಿಸಿ ಅವರು ಪ್ರಶ್ನಿಸುವ ಮೊದಲೇ ಆ ಮಹಾವಸ್ತುವಿನ ಪೂರ್ವೇತಿಹಾಸವನ್ನು ಹೇಳಲುಪಕ್ರಮಿಸಿದರು :

"ಪುರುಷಶ್ರೇಷ್ಠರೇ! ನಿಮ್ಮ ಮುಂದೆ ಕಾಣುತ್ತಿರುವ ಈ ಮಹಾವಸ್ತುವು ಯಾವುದಿರಬಹುದೆಂದು ನೀವು ಈಗಾಗಲೇ ಯೋಚಿಸುತ್ತಿರಬಹುದು. ಕೈಲಾಸಶಿಖರದಂತೆ ಪ್ರಕಾಶಮಾನವಾಗಿರುವ ಬಹುವಿಸ್ತೃತವಾದ ಈ ವಸ್ತುವು ನರಕಾಸುರನ ಮೂಳೆಯ ರಾಶಿಯಾಗಿರುವುದು. ಈ ಮೂಳೆಯ ರಾಶಿಯು ಒಂದು ಪರ್ವತದ ಮೇಲೆ ನಿಕ್ಷಿಪ್ತವಾಗಿರುವುದರಿಂದ ಅದು ಹೀಗೆ ಕಾಣುತ್ತಿರುವುದು. ದೇವರಾಜನ ಹಿತಾರ್ಥವಾಗಿ ಪರಮಾತ್ಮನಾದ ಮಹಾ ವಿಷ್ಣುವು ನರಕಾಸುರನನ್ನು ಸಂಹಾರಮಾಡಿದನು. ಧರ್ಮಜ! ಆ ನರಕಾ ಸುರನೂ ಸಾಮಾನ್ಯನಲ್ಲ. ಇಂದ್ರಪದವಿಯನ್ನು ಪಡೆಯಲೋಸುಗ ಹತ್ತು ಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡಿದನು. ವೇದವಿಹಿತ ಕರ್ಮಗಳಿಂದಲೂ ತಪಸ್ಸಿನಿಂದಲೂ ಮತ್ತು ಭುಜಬಲದಿಂದಲೂ ನರಕಾಸುರನು ದಿನ-ದಿನಕ್ಕೂ ಅಭೇದ್ಯನೂ ದುರ್ಜಯನೂ ಆಗುತ್ತಿದ್ದನು. ತಪಶ್ಶಕ್ತಿಯಿಂದಲೂ, ಭುಜಬಲ-ಪರಾಕ್ರಮಗಳಿಂದಲೂ ದುರಭಿಮಾನಿ ಯಾದ ಅವನು ಸರ್ವಕಾಲದಲ್ಲಿಯೂ ಇಂದ್ರನನ್ನು ನಾನಾಪ್ರಕಾರವಾಗಿ ಪೀಡಿಸುತ್ತಿದ್ದನು.

ಇಂದ್ರನಿಗೆ ನರಕಾಸುರನ ಭುಜಬಲ-ತಪೋಬಲಗಳು ಚೆನ್ನಾಗಿ ತಿಳಿದಿದ್ದುದರಿಂದ ಅವನನ್ನು ಎದುರಿಸಿ ನಿಲ್ಲಲಾರದೇ ಭೀತನೂ ಉದ್ವಿಗ್ನನೂ ಆದನು. ತನ್ನ ಮುಂದಿನ ಪರಿಣಾಮವೇನೆಂಬುದನ್ನು ಯೋಚಿಸುತ್ತಾ ಭೀತ ನಾಗಿದ್ದ ಇಂದ್ರನು ಸಕಲಲೋಕರಕ್ಷಕನಾದ ಮಹಾವಿಷ್ಣುವನ್ನು ಮನಸ್ಸಿ ನಲ್ಲಿಯೇ ಧ್ಯಾನಿಸಿದನು. ಸರ್ವವ್ಯಾಪಿಯಾದ, ಆಶ್ರಿತರಕ್ಷಕನಾದ, ಮಹಾ ವಿಷ್ಣುವು ಒಡನೆಯೇ ಇಂದ್ರನಿಗೆ ಪ್ರತ್ಯಕ್ಷನಾದನು. ಇಂದ್ರನ ಸಮೀಪದಲ್ಲಿದ್ದ ಋಷಿ-ಮಹರ್ಷಿಗಳೂ, ದೇವತೆಗಳೂ ಇಂದ್ರನೊಡನೆ ಮಹಾವಿಷ್ಣುವನ್ನು ಪರಿ-ಪರಿಯಾಗಿ ಸ್ತೋತ್ರಮಾಡಿದರು. ಜಾಜ್ವಲ್ಯಮಾನವಾದ ಪ್ರಕಾಶವುಳ್ಳ ಯಜ್ಞೇಶ್ವರನೂ ಮಹಾವಿಷ್ಣುವಿನ ದಿವ್ಯತೇಜಸ್ಸಿನ ಮುಂದೆ ಸೂರ್ಯನ ಮುಂದಿಟ್ಟ ದೀಪದೋಪಾದಿಯಲ್ಲಿ ಕಾಂತಿಹೀನನಾದನು.

ಅಂತಹ ಮಹಾತೇಜಸ್ವಿಯಾದ, ದೇವದೇವನಾದ, ಅಪ್ರಮೇಯನಾದ,

ಅಚಿಂತ್ಯನಾದ, ಪರಂಧಾಮನಾದ, ಚಿನ್ಮಯನಾದ ಮಹಾವಿಷ್ಣುವನ್ನು ವಜ್ರಧರನಾದ ಇಂದ್ರನು ಅಭಿವಾದನಪೂರ್ವಕವಾಗಿ ನಮಸ್ಕರಿಸಿ ತನಗುಂಟಾಗಿರುವ ಭಯದ ಕಾರಣವನ್ನು ವಿಷ್ಣುವಿನಲ್ಲಿ ನಿವೇದಿಸಿಕೊಂಡು ತನ್ನ ಭಯವನ್ನು ನಾಶಮಾಡುವಂತೆ ಪ್ರಾರ್ಥಿಸಿಕೊಂಡನು.



ಪುರುಷೋತ್ತಮನಾದ ಮಹಾವಿಷ್ಣುವು ಇಂದ್ರನಿಗೆ ಅಭಯಪ್ರದಾನ ರೂಪವಾದ ಈ ಮಾತುಗಳನ್ನು ಹೇಳಿದನು :

"ಮಹೇಂದ್ರನೇ! ನಿನಗೆ ದೈತ್ಯರ ಒಡೆಯನಾದ ನರಕಾಸುರನಿಂದ ಭಯವುಂಟಾಗಿದೆಯೆಂಬ ವಿಷಯವು ನನಗೂ ತಿಳಿದಿರುವುದು. ತನ್ನಲ್ಲಿರುವ ತಪಃಶಕ್ತಿಯ ಅವಲಂಬನೆಯಿಂದ ನರಕಾಸುರನು ಇಂದ್ರಪದವಿಯನ್ನೇ

ಆಶಿಸುತ್ತಿದ್ದಾನೆ. ಈ ಕಾರಣದಿಂದಲೇ ಅವನು ನಿನಗೆ ನಾನಾವಿಧವಾಗಿ ಕಿರುಕುಳವನ್ನು ಕೊಡುತ್ತಿದ್ದಾನೆ. ತಪಸ್ಸಿದ್ಧಿಯನ್ನು ಪಡೆದಿದ್ದರೂ ನರಕಾಸುರನನ್ನು ನಿನ್ನ ಪ್ರೀತ್ಯರ್ಥವಾಗಿ ಬೇರ್ಪಡಿಸಲ್ಪಟ್ಟ ತಲೆಯುಳ್ಳವನನ್ನಾಗಿ ಮಾಡುತ್ತೇನೆ. (ಸಂಹರಿಸುತ್ತೇನೆ.) ಮುಹೂರ್ತಕಾಲ ಸಾವಧಾನದಿಂದಿರು."

ಹೀಗೆ ಹೇಳಿದ ಮಹಾವಿಷ್ಣುವು ದುರ್ಭೇದ್ಯನೆನಿಸಿದ್ದ ನರಕಾಸುರನನ್ನು ಕೈಯಿಂದಲೇ ಹೊಡೆದು ಕ್ಷಣಮಾತ್ರದಲ್ಲಿಯೇ ಸಂಹರಿಸಿದನು.

ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಪರ್ವತಶಿಖರವು ಕೆಳಗೆ ಬೀಳುವಂತೆ–ಮಹಾಕಾಯನಾದ ನರಕಾಸುರನು ಘೋರಧ್ವನಿಮಾಡುತ್ತಾ ಕೆಳಗುರುಳಿದನು. ಈ ಪ್ರಕಾರವಾಗಿ ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಮಹಾವಿಷ್ಣುವಿನಿಂದ ಕೊಲ್ಲಲ್ಪಟ್ಟ ನರಕಾಸುರನ ಅಸ್ಥಿಸಂಚಯವೇ ಇಲ್ಲಿ ಕಾಣುತ್ತಿರುವುದು. ಇದೇ ಸ್ಥಳದಲ್ಲಿ ಮಹಾವಿಷ್ಣುವು ಮತ್ತೊಂದು ಅದ್ಭುತಕಾರ್ಯವನ್ನೂ ಮಾಡಿರುವನು. ಹಿಂದೊಂದು ಸಮಯದಲ್ಲಿ ಭೂಭಾರದಿಂದಾಗಿ ಭೂದೇವಿಯು ನೂರು ಯೋಜನಗಳ ಆಳಕ್ಕೆ (ಪಾತಾಳಕ್ಕೆ) ಕುಸಿದು ಹೋದಳು. ಆ ಸಮಯದಲ್ಲಿ ಭೂದೇವಿಯ ಪ್ರಾರ್ಥನೆಯಂತೆ ಮಹಾವಿಷ್ಣುವು ಒಂದೇ ಕೋರೆದಾಡೆಯಿದ್ದ ವರಾಹರೂಪವನ್ನು ಧರಿಸಿ ಆ ಕೋರೆದಾಡೆಯ ಮೇಲೆ ಭೂಮಂಡಲವನ್ನಿಟ್ಟುಕೊಂಡು ಮೇಲಕ್ಕೆತ್ತಿ ಭೂಮಿಯ ಅಕ್ಷದಲ್ಲಿ ಭೂಮಂಡಲವನ್ನು ಯಥಾಪೂರ್ವಕವಾಗಿ ಇರಿಸಿದನು."

ಲೋಮಶರ ಮಾತನ್ನು ಕೇಳಿ ಯುಧಿಷ್ಠಿರನು ಕೇಳಿದನು :

"ಮಹರ್ಷಿಗಳೇ! ಈ ವಿಷಯವು ಬಹಳ ಆಶ್ಚರ್ಯಕರವಾಗಿರುವುದು. ನೂರು ಯೋಜನಗಳಷ್ಟು ಕುಸಿದುಹೋಗಿದ್ದ ಭೂಮಿಯನ್ನು ಮೇಲಕ್ಕೆ ತಂದಿಟ್ಟ ಮಹಾವಿಷ್ಣುವಿನ ಆ ಸುಚರಿತೆಯನ್ನು ದಯೆಯಿಟ್ಟು ವಿಶದವಾಗಿ ಹೇಳಿರಿ. ಸಕಲಚರಾಚರವಸ್ತುಗಳಿಗೂ ಆಶ್ರಯನೀಡುತ್ತಿರುವ ಸಸ್ಯಶಾಲಿನಿ ಯಾದ, ವಸುಂಧರೆಯಾದ, ಅಚಲೆಯಾದ ಭೂದೇವಿಯು ನೂರುಯೋಜನ ಗಳಷ್ಟು ಕುಸಿದುಹೋದುದಾದರೂ ಹೇಗೆ? ಕುಸಿದುಬಿದ್ದವಳನ್ನು ಮೇಲೆತ್ತಿ ತಂದಿದ್ದಾದರೂ ಹೇಗೆ? ಈ ಎರಡೂ ಅತ್ಯಾಶ್ಚರ್ಯಕರವಾದ ವಿಷಯಗಳಾಗಿವೆ. ಪರಮಾದ್ಭುತವಾದ ಈ ವಿಷಯವನ್ನು ನಾನು ವಿವರವಾಗಿ ನಿಮ್ಮಿಂದ

ಕೇಳಲಿಚ್ಛಿಸುತ್ತೇನೆ. ನೀವೆಲ್ಲವನ್ನೂ ವಿಶದವಾಗಿ ತಿಳಿದಿರುವಿರಿ. ದಯಮಾಡಿ ಹೇಳಿರಿ.''

“ಧರ್ಮಜ! ನೀನು ಕೇಳಿದ ವಿಷಯವನ್ನು ವಿಶದಪಡಿಸುವೆನು. ಸಾವಧಾನಚಿತ್ತನಾಗಿ ಕೇಳು. ಹಿಂದೆ ಕೃತಯುಗದಲ್ಲಿ ಭಯಂಕರವಾದ ಪರಿಸ್ಥಿತಿಯೊಂದು ಪ್ರಾಪ್ತವಾಯಿತು. ಆದಿದೇವನಾದ, ಸನಾತನನಾದ, ಸಕಲರಿಗೂ ರಕ್ಷಕನಾದ ಪರಮಾತ್ಮನೇ ಯಮನ ಸ್ಥಾನದಲ್ಲಿ ಕುಳಿತು ಕಾರ್ಯ ಮಾಡತೊಡಗಿದನು. ದಯಾಮಯನಾದ ಪರಮಾತ್ಮನು ಯಮನ ಸ್ಥಾನದಲ್ಲಿ ಕುಳಿತುದುದರಿಂದ ಯಮನ ಕರ್ತವ್ಯವಾದ ಸಂಹಾರಕಾರ್ಯವನ್ನು ಮಾಡಲು ವಿಷ್ಣುವಿನಿಂದ ಸಾಧ್ಯವಾಗಲಿಲ್ಲ. ಆದುದರಿಂದಲೇ ಪರಮಾತ್ಮನು ಯಮನ ಕಾರ್ಯಭಾರವನ್ನು ವಹಿಸಿದ್ದ ಕಾಲದಲ್ಲಿ ಪ್ರಪಂಚದಲ್ಲಿ ಯಾವುದೊಂದು ಪ್ರಾಣಿಯೂ ಸಾಯಲಿಲ್ಲ. ಆದರೆ ಸೃಷ್ಟಿಯು ಮಾತ್ರ ಯಥಾಪೂರ್ವಕವಾಗಿ ಯಾವ ವಿಧವಾದ ವಿಘ್ನಗಳೂ ಇಲ್ಲದೇ ಮುಂದುವರಿಯುತ್ತಲೇ ಇದ್ದಿತು. ಅತ್ಯಲ್ಪಕಾಲದಲ್ಲಿಯೇ ಪ್ರಪಂಚದಲ್ಲಿದ್ದ ಪಕ್ಷಿಗಳೂ, ಮೃಗಗಳೂ, ಹಸುಗಳೂ, ಕುರಿಗಳೂ, ಜಿಂಕೆಗಳೂ, ಕುದುರೆಗಳೂ, ಮಾಂಸ ಭಕ್ಷಣಮಾಡುವ ಸಿಂಹ-ವ್ಯಾಘ್ರಾದಿ ದುಷ್ಟಮೃಗಗಳೂ ದ್ವಿಗುಣಿತವಾದುವು. ಮಳೆಯಿಂದ ನದೀ-ನದ-ತಟಾಕಗಳು ತುಂಬಿಹೋಗುವಂತೆ–ಪ್ರಪಂಚದಲ್ಲಿ ಸಂಹಾರಕ್ರಿಯೆಯು ಲುಪ್ತವಾಗಲಾಗಿ ಮನುಷ್ಯರೂ ಲಕ್ಷೋಪಲಕ್ಷ ಸಂಖ್ಯೆಯಲ್ಲಿ ಹೆಚ್ಚಿಹೋದರು. ಸರ್ವತ್ರ ವೃದ್ಧಿಯಾಗುತ್ತಿದ್ದ ಆ ಕಾಲದಲ್ಲಿ ಭೂದೇವಿಯು ಪ್ರಪಂಚದ ಪಶು-ಪಕ್ಷಿ-ಪ್ರಾಣಿಗಳ ಮತ್ತು ಅಸಂಖ್ಯಾತ ಜನರ ಭಾರವನ್ನು ತಾಳಲಾರದೇ ನೂರು ಯೋಜನಗಳಷ್ಟು ಕೆಳಕ್ಕೆ ಕುಸಿದು ಹೋದಳು. ಜನಸಂಖ್ಯೆಯು ಅಪರಿಮಿತವಾಗಿ, ಅದರಿಂದುಂಟಾದ ಭಾರದಿಂದ ಭೂದೇವಿಯ ಅಂಗಾಂಗಗಳಲ್ಲಿ ಯಾತನೆಯುಂಟಾಯಿತು. ಅವಳ ಬುದ್ಧಿಯೂ ಭ್ರಮಣೆಯಾಗತೊಡಗಿತು. ಅಂತಹ ಕಷ್ಟಪರಿಸ್ಥಿತಿಯಲ್ಲಿ ಬಹುದುಃಖಿತೆಯಾದ ಭೂದೇವಿಯು ಮುಂದೇನು ಮಾಡಬೇಕೆಂಬುದನ್ನು ತಿಳಿಯದೇ ಭಕ್ತಪರಾಧೀನನಾದ, ದೇವದೇವನಾದ, ದಯಾಮಯನಾದ ಶ್ರೀಮನ್ನಾರಾಯಣನನ್ನೇ ಮರೆಹೊಕ್ಕಳು.

**ಭಗವಂಸ್ತ್ವತ್ಪ್ರಸಾದಾದ್ಧಿ ತಿಷ್ಠೇಯಂ ಸುಚಿರಂ ತ್ವಿಹ ।**
**ಭಾರೇಣಾಸ್ಮಿ ಸಮಾಕ್ರಾನ್ತಾ ನ ಶಕ್ನೋಮಿ ಸ್ಮ ವರ್ತಿತುಮ್ ॥೪೧॥**

**ಮಮೇಮಂ ಭಗವನ್ಭಾರಂ ವ್ಯಪನೇತುಂ ತ್ವಮರ್ಹಸಿ ।**
**ಶರಣಾಗತಾಸ್ಮಿ ತೇ ದೇವ ಪ್ರಸಾದಂ ಕುರು ಮೇ ಪ್ರಭೋ ॥೪೨॥**

"ಪೂಜ್ಯನೇ! ನಿನ್ನ ಅನುಗ್ರಹದಿಂದಲೇ ನಾನು ನದೀ-ನದ-ಪರ್ವತಗಳನ್ನೂ, ಜನಸ್ತೋಮವನ್ನೂ, ಪಶು-ಪಕ್ಷಿ-ಮೃಗಗಳನ್ನೂ ಧರಿಸಿ ಬಹಳ ಕಾಲದಿಂದಲೂ ಸುಸ್ಥಿರಳಾಗಿ ನಿಂತಿದ್ದೇನೆ. ಆದರೆ ಈಗ ಈ ಭಾರವು ದ್ವಿಗುಣಿತವಾಗಿರುವುದು. ನಾನು ಹೆಚ್ಚುಕಾಲ ಈ ಭಾರವನ್ನು ಧರಿಸಲು ಅಸಮರ್ಥಳಾಗಿದ್ದೇನೆ. ದೇವದೇವ! ಆದುದರಿಂದ ನಾನಿಂದು ನಿನಗೆ ಶರಣಾಗತಳಾಗಿದ್ದೇನೆ. ನನ್ನ ಈ ಭಾರವನ್ನು ಕಡಿಮೆಮಾಡಿ ನನ್ನನ್ನು ಉದ್ಧರಿಸುವ ಕೃಪೆಮಾಡು."

ಭೂದೇವಿಯ ಕರುಣಾಜನಕವಾದ ಮಾತುಗಳನ್ನು ಕೇಳಿ ದಯಾಮಯನಾದ ವಿಷ್ಣುವು ಉತ್ತರಿಸಿದನು :

**ನ ತೇ ಮಹಿ ಭಯಂ ಕಾರ್ಯಂ ಭಾರಾರ್ತೇ ವಸುಧಾರಿಣಿ ।**
**ಅಹಮೇವಂ ತಥಾ ಕುರ್ಮಿ ಯಥಾ ಲಘ್ವೀ ಭವಿಷ್ಯಸಿ ॥೪೪॥**

"ವಸುಂಧರೆಯೇ! ಭೂದೇವಿ! ಭಾರಪೀಡಿತಳಾಗಿರುವ ನೀನು ಇದಕ್ಕಾಗಿ ಭಯಪಡುವ ಕಾರಣವಿಲ್ಲ. ನಿನ್ನೀ ಭಾರವು ಸ್ವಲ್ಪಕಾಲದಲ್ಲಿಯೇ ಕಡಿಮೆಯಾಗುವಂತೆ ನಾನು ಮಾಡುತ್ತೇನೆ." ಮಹಾವಿಷ್ಣುವು ಹೀಗೆ ಹೇಳಿ ಪರ್ವತವೇ ಕರ್ಣಕುಂಡಲವಾಗಿ ಉಳ್ಳ ಭೂದೇವಿಯನ್ನು ಸಂತೈಸಿ ಕಳುಹಿಸಿಕೊಟ್ಟು ಒಡನೆಯೇ ವರಾಹರೂಪವನ್ನು ಧರಿಸಿದನು. ಆ ವರಾಹಕ್ಕೆ ಪ್ರಕಾಶಮಾನವಾದ ಒಂದೇ ಒಂದು ಶೃಂಗವಿದ್ದಿತು. ಕಣ್ಣುಗಳು ಕೆಂಪಾಗಿದ್ದು ನೋಡಲು ಬಹುಭಯಂಕರವಾಗಿ ಕಾಣುತ್ತಿದ್ದ ಆ ಮಹಾವರಾಹವು ತನ್ನ ಶರೀರಕಾಂತಿಯಿಂದ ಹೊರಟ ಧೂಮವನ್ನು ಹೊರಸೂಸುತ್ತಾ ಆ ಪ್ರದೇಶವನ್ನೆಲ್ಲಾ ಬೆಳಗಿತು. ವೇದಾತ್ಮನಾದ ವರಾಹರೂಪಿಯಾದ, ದೇವದೇವನಾದ ಮಹಾವಿಷ್ಣುವು ತನ್ನ ಒಂದೇ ಒಂದು ಕೋರೆದಾಡೆಯಿಂದಲೇ ನೂರು ಯೋಜನಗಳಷ್ಟು ಕೆಳಕ್ಕೆ ಕುಸಿದಿದ್ದ ಭೂದೇವಿಯನ್ನು ಕ್ಷಣಮಾತ್ರದಲ್ಲಿ ಮೇಲೆತ್ತಿ ಭೂಮಿಯ ಅಕ್ಷದಲ್ಲಿ ನಿಕ್ಷೇಪಿಸಿದನು. ಈ ರೀತಿಯಲ್ಲಿ ವರಾಹರೂಪಿಯಾದ ಮಹಾವಿಷ್ಣುವು ಭೂದೇವಿಯನ್ನು ತನ್ನ ಕೋರೆದಾಡೆಯ

ಮೇಲೆ ಕುಳ್ಳಿರಿಸಿಕೊಂಡು ಮೇಲೆ ಬರುತ್ತಿದ್ದಾಗ ದೊಡ್ಡ ಕೋಲಾಹಲವೇ ಉಂಟಾಯಿತು. ಲೋಕತ್ರಯಗಳಲ್ಲಿಯೂ ಹಾಹಾಕಾರವುಂಟಾಯಿತು. ದೇವತೆಗಳಾಗಲೀ, ಮಾನವರಾಗಲೀ–ಶಾಂತಿಯಿಂದಿರಲು ಸಾಧ್ಯವಾಗಲಿಲ್ಲ. ಅಗಣಿತಸಂಖ್ಯಾತರಾದ ದೇವತೆಗಳು ದೇವರ್ಷಿಗಳೊಡನೆ ಸ್ವಯಂಪ್ರಭೆಯಿಂದ ಕೂಡಿದ್ದ ಬ್ರಹ್ಮನ ಬಳಿಗೆ ಹೋಗಿ, ದೇವೇಶನಾದ ಲೋಕಸಾಕ್ಷಿಯಾದ ಚತುರ್ಮುಖ ಬ್ರಹ್ಮನನ್ನು ಪ್ರಾರ್ಥಿಸಿದರು.

**ಲೋಕಾಃ ಸಂಕ್ಷುಭಿತಾಃ ಸರ್ವೇ ವ್ಯಾಕುಲಂ ಚ ಚರಾಚರಮ್ ।**
**ಸಮುದ್ರಾಣಾಂ ಚ ಸಂಕ್ಷೋಭಸ್ತ್ರಿದಶೇಶ ಪ್ರಕಾಶತೇ ॥೫೨॥**

**ಸೈಷಾ ವಸುಮತೀ ಕೃತ್ಸ್ನಾ ಯೋಜನಾನಾಂ ಶತಂ ಗತಾ ।**
**ಕಿಮೇತತ್ಕಿಂ ಪ್ರಭಾವೇಣ ಯೇನೇದಂ ವ್ಯಾಕುಲಂ ಜಗತ್ ।**
**ಆಖ್ಯಾತು ನೋ ಭವಾಞ್ಶೀಘ್ರಂ ವಿಸಂಜ್ಞಾಃ ಸ್ಮೇಹ ಸರ್ವಶಃ ॥೫೩॥**

**ಅಸುರೇಭ್ಯೋ ಭಯಂ ನಾಸ್ತಿ ಯುಷ್ಮಾಕಂ ಕುತ್ರಚಿತ್ಕ್ವಚಿತ್ ।**
**ಶ್ರೂಯತಾಂ ಯತ್ಕೃತೇಷ್ವೇಷ ಸಂಕ್ಷೋಭೋ ಜಾಯತೇಽಮರಾಃ ॥**

"ದೇವದೇವ! ಚತುರ್ದಶಭುವನಗಳೂ ಕ್ಷುಭಿತವಾಗುತ್ತಿವೆ. ಚರಾಚರಪ್ರಾಣಿಗಳು ವ್ಯಾಕುಲಗೊಂಡಿವೆ. ಸಮುದ್ರಗಳು ಅಲ್ಲೋಲ-ಕಲ್ಲೋಲವಾಗುತ್ತಿವೆ. ಈ ಭೂದೇವಿಯಾದರೋ ನೂರು ಯೋಜನಗಳಷ್ಟು ಕೆಳಕ್ಕೆ ಕುಸಿದು ಬಿದ್ದಿದ್ದಾಳೆ. ತ್ರಿದಶೇಶ್ವರ! ಹೀಗಾಗಲು ಕಾರಣವಾದರೂ ಏನು? ಯಾರ ಪ್ರಭಾವದಿಂದಾಗಿ ಈ ಪೃಥ್ವಿಯು ಇಷ್ಟು ವ್ಯಾಕುಲಗೊಂಡಿರುವಳು? ಇದಕ್ಕೆ ಕಾರಣವನ್ನು ನಮಗೆ ತಿಳಿಸಿ ವ್ಯಾಕುಲಗೊಂಡಿರುವ ನಮ್ಮನ್ನು ಸಂತೈಸಲು ನೀನೇ ಸಮರ್ಥನಾಗಿರುವೆ."

ಚತುರ್ಮುಖನು ದೇವತೆಗಳನ್ನು ಸಂತೈಸುತ್ತಾ ಹೇಳಿದನು :

**ಯೋಽಸೌ ಸರ್ವತ್ರಗಃ ಶ್ರೀಮಾನಕ್ಷರಾತ್ಮಾ ವ್ಯವಸ್ಥಿತಃ ।**
**ತಸ್ಯ ಪ್ರಭಾವಾತ್ಸಂಕ್ಷೋಭಸ್ತ್ರಿದಿವಸ್ಯ ಪ್ರಕಾಶತೇ ॥೫೫॥**

**ಯೈಷಾ ವಸುಮತೀ ಕೃತ್ಸ್ನಾ ಯೋಜನಾನಾಂ ಶತಂ ಗತಾ ।**
**ಸಮುದ್ಧೃತಾ ಪುನಸ್ತೇನ ವಿಷ್ಣುನಾ ಪರಮಾತ್ಮನಾ ॥೫೬॥**

**ತಸ್ಯಾಮುದ್ಧಾರ್ಯಮಾಣಾಯಾಂ ಸಂಕ್ಷೋಭಃ ಸಮಜಾಯತ ।**
**ಏವಂ ಭವನ್ತೋ ಜಾನನ್ತು ಛಿದ್ಯತಾಂ ಸಂಶಯಶ್ಚ ವಃ ॥೫೭॥**

"ಅಮರರೇ! ನಿಮಗೆ ಅಸುರರಿಂದಾಗಲೀ, ಮತ್ತಾರಿಂದಾಗಲೀ ಯಾವಾಗಲೂ ಎಲ್ಲಿಯೂ ಯಾವ ಭಯವೂ ಇಲ್ಲ. ಆದರೂ ಈ ವಿಧವಾದ ಕ್ಷೋಭೆಗೆ ಕಾರಣವನ್ನು ಹೇಳುವೆನು; ಕೇಳಿರಿ. ಸರ್ವಾಂತರ್ಯಾಮಿಯಾದ, ವೇದಾತ್ಮನಾದ, ಶ್ರೀಮಂತನಾದ, ವಿಭುವಾದ ಶ್ರೀಮನ್ನಾರಾಯಣನ ಪ್ರಭಾವದಿಂದಲೇ ಪ್ರಪಂಚದಲ್ಲಿ ಈ ವಿಧವಾದ ಕ್ಷೋಭೆಯುಂಟಾಗಿರುವುದು. ಬಹುಭಾರದಿಂದ ನೂರು ಯೋಜನಗಳಷ್ಟು ಆಳಕ್ಕೆ ಕುಸಿದು ಹೋಗಿದ್ದ ಈ ಭೂದೇವಿಯು ಪರಮಾತ್ಮನಾದ ಮಹಾವಿಷ್ಣುವಿನಿಂದ ಮೇಲಕ್ಕೆ ಎತ್ತಲ್ಪಟ್ಟಳು. ಮಹಾವಿಷ್ಣುವು ವರಾಹಾವತಾರವನ್ನು ಧರಿಸಿ ಪೃಥ್ವಿಯನ್ನು ತನ್ನ ಒಂದೇ ಕೋರೆದಾಡೆಯಿಂದ ಮೇಲೆತ್ತಿದನು. ಭೂದೇವಿಯನ್ನು ಮೇಲಕ್ಕೆ ಎತ್ತುತ್ತಿರುವ ಈ ಸಮಯದಲ್ಲಿ ಈ ವಿಧವಾದ ಕ್ಷೋಭೆಯುಂಟಾಗುತ್ತಿದೆ. ನಮ್ಮೆಲ್ಲರ ಸಂರಕ್ಷಕನಾದ ಮಹಾವಿಷ್ಣುವಿನ ಕಾರ್ಯವಿದೆಂದು ತಿಳಿದು ಆತಂಕರಹಿತರಾಗಿ ಹಿಂದಿರುಗಿರಿ. ಈ ವಿಷಯದಲ್ಲಿ ನೀವು ಸಂಶಯಪಡಬೇಕಾದ ಕಾರಣವಿಲ್ಲ."

**ಕ್ವ ತದ್ಭೂತಂ ವಸುಮತೀಂ ಸಮುದ್ಧರತಿ ಹೃಷ್ಟವತ್ ।**
**ತಂ ದೇಶಂ ಭಗವದ್ಬ್ರೂಹಿ ತತ್ರ ಯಾಸ್ಯಾಮಹೇ ವಯಮ್ ॥೫೮॥**

"ದೇವದೇವನೇ! ಈ ಅಖಂಡಬ್ರಹ್ಮಾಂಡವನ್ನೇ ಲೀಲೆಯಿಂದ ಮೇಲೆತ್ತಿರುವ, ನೀನು ಹೇಳಿದಂತಹ ಪರಮಾದ್ಭುತವಾದ ಮಹಾವರಾಹವೆಲ್ಲಿರುವುದು? ದಯಮಾಡಿ ಹೇಳು. ನಾವೂ ಅಲ್ಲಿಗೆ ಹೋಗಿ ಮಹಾವಿಷ್ಣುವಿನ ವರಾಹಾವತಾರವನ್ನು ಸಂದರ್ಶಿಸುತ್ತೇವೆ."

**ಹನ್ತ ಗಚ್ಛತ ಭದ್ರಂ ವೋ ನನ್ದನೇ ಪಶ್ಯತ ಸ್ಥಿತಮ್ ।**
**ಏಷೋಽತ್ರ ಭಗವಾಞ್ಶ್ರೀಮಾನ್ಸುಪರ್ಣಃ ಸಮ್ಪ್ರಕಾಶತೇ ॥೫೯॥**

**ವಾರಾಹೇಣೈವ ರೂಪೇಣ ಭಗವಾನ್ ಲೋಕಭಾವನಃ ।**
**ಕಾಲಾನಲ ಇವಾಭಾತಿ ಪೃಥಿವೀತಲಮುದ್ಧರನ್ ॥೬೦॥**

**ಏತಸ್ಯೋರಸಿ ಸುವ್ಯಕ್ತಂ ಶ್ರೀವತ್ಸಮಭಿರಾಜತೇ ।**
**ಪಶ್ಯಧ್ವಂ ವಿಬುಧಾಃ ಸರ್ವೇ ಭೂತಮೇತದನಾಮಯಮ್ ॥೬೧॥**

"ಬಹಳ ಸಂತೋಷ. ನೀವಲ್ಲಿಗೆ ಈಗಲೇ ಹೋಗಬಹುದು. ನಿಮಗೆ ಮಂಗಳವಾಗಲಿ. ಭೂದೇವಿಯನ್ನು ಮೇಲೆತ್ತಿ ನಂದನವನದಲ್ಲಿ ವಿಶ್ರಮಿಸಿ ಕೊಳ್ಳುತ್ತಿರುವ ಭಗವಂತನನ್ನು ಈಗಲೇ ಹೋಗಿ ಸಂದರ್ಶಿಸಿರಿ. ಸ್ವರ್ಣದಂತೆ ಸುಂದರವಾದ ರೋಮರಾಜಿಯಿಂದ ಪ್ರಕಾಶಮಾನನಾದ, ಲೋಕಭಾವನ ನಾದ, ಲೋಕಾಭಿರಾಮನಾದ ಪರಮಾತ್ಮನಿನ್ನೂ ವರಾಹರೂಪಿಯಾಗಿಯೇ ಇದ್ದು ಅಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಾನೆ. ಭೂದೇವಿಯನ್ನು ಮೇಲೆತ್ತಿದ ಆ ಮಹಾನುಭಾವನು ಕಾಲಾಗ್ನಿಗೆ ಸಮಾನವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದಾನೆ. ವರಾಹರೂಪಿಯಾದ ಮಹಾವಿಷ್ಣುವಿನ ವಕ್ಷಃಸ್ಥಳದಲ್ಲಿ ಶ್ರೀವತ್ಸವು ರಾರಾಜಿಸುತ್ತಿದೆ. ಆದುದರಿಂದ ನೀವೆಲ್ಲರೂ ಈಗಲೇ ನಂದನ ವನಕ್ಕೆ ಹೋಗಿ ಅನಾಮಯನಾದ, ಸರ್ವೇಶ್ವರನಾದ, ವರಾಹರೂಪಿಯಾದ ಮಹಾವಿಷ್ಣುವನ್ನು ಸಂದರ್ಶಿಸಿರಿ."

ಯುಧಿಷ್ಠಿರ! ದೇವತೆಗಳು ವರಾಹಮೂರ್ತಿಯ ಸಂದರ್ಶನಕ್ಕಾಗಿ ಬ್ರಹ್ಮನನ್ನೂ ತಮ್ಮ ಜೊತೆಯಲ್ಲಿಯೇ ಕರೆದುಕೊಂಡು ನಂದನವನಕ್ಕೆ ಧಾವಿಸಿದರು. ಎಲ್ಲರೂ ಬದ್ಧಾಂಜಲಿಗಳಾಗಿ ನಿಂತು ವರಾಹರೂಪಿಯಾದ, ಶ್ರೀವತ್ಸಾಂಕಿತನಾದ ಮಹಾವಿಷ್ಣುವನ್ನು ಪರಿಪರಿಯಾಗಿ ಸ್ತೋತ್ರಮಾಡಿದರು. ಮಹಾವಿಷ್ಣುವು ಸುಪ್ರೀತನಾಗಿ ದೇವತೆಗಳನ್ನು ಸಂತೈಸಿದನಂತರ ದೇವತೆ ಗಳೂ ಮತ್ತು ಋಷಿ-ಮಹರ್ಷಿಗಳೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು."

ಜನಮೇಜಯ! ವರಾಹಾವತಾರದ ಈ ಪುಣ್ಯಕಥೆಯನ್ನು ಲೋಮಶ ರಿಂದ ಕೇಳಿದನಂತರ ಪಾಂಡವರು ಸ್ವಲ್ಪವೂ ಕಾಲಕಳೆಯದೇ ಲೋಮಶರಿಂದ ನಿರ್ದಿಷ್ಟವಾದ ಮಾರ್ಗದಲ್ಲಿ ಶೀಘ್ರವಾಗಿ ಪ್ರಯಾಣಮಾಡತೊಡಗಿದರು."

ನ೪೨ನೆಯ ಅಧ್ಯಾಯವು ಮುಗಿಯಿತು.

ಐದನೆಯ ಸಂಪುಟವು ಮುಗಿಯಿತು.

ಶ್ರೀಕೃಷ್ಣಾರ್ಪಣಮಸ್ತು । ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು ।
ಓಂ ತತ್ಸತ್ ।

## ಸೂರ್ಯಾಷ್ಟೋತ್ತರ

ಈ ಸೂರ್ಯಾಷ್ಟೋತ್ತರವು ನಾಲ್ಕನೆಯ ಸಂಪುಟದಲ್ಲಿ ಅರಣ್ಯ ಪರ್ವದ ಮೂರನೆಯ ಅಧ್ಯಾಯಕ್ಕೆ ಸಂಬಂಧಿಸಿದುದು. ಪು.ಸಂ. 1893. ಈ ಪಾಠವು ಗೋರಖಪುರದ ಗೀತಾಪ್ರೆಸ್ಸಿನವರು ಪ್ರಕಟಿಸಿರುವುದರಲ್ಲಿಯೂ ಮತ್ತು ಕುಂಭಕೋಣದ ಪ್ರತಿಯಲ್ಲಿಯೂ ಇದೆ. ದಾತವ್ಯಕಾರ್ಯಾಲಯ ದವರು ಪ್ರಕಟಿಸಿರುವ ಆಂಗ್ಲಭಾಷಾಂತರದಲ್ಲಿಯೂ ಇದೇ ಪಾಠವನ್ನೇ ಅನುಸರಿಸಿದ್ದಾರೆ. ಧೌಮ್ಯರು–'ನಾಮಾಷ್ಟಶತಮಾಖ್ಯಾತಂ'–'ನೂರೆಂಟು ನಾಮಗಳು ಹೇಳಲ್ಪಟ್ಟಿವೆ'–ಎಂದು ಸುಸ್ಪಷ್ಟವಾಗಿಯೇ ಹೇಳಿರುವುದರಿಂದ ಇಲ್ಲಿರುವ ನಾಮಗಳನ್ನು ನೂರೆಂಟಾಗಿ ವಿಂಗಡಿಸಬೇಕಾಗಿದೆ. ನಾವೂ ಹೀಗೆಯೇ ಮಾಡಿ ನೂರೆಂಟು ನಾಮಗಳನ್ನು ವಿಂಗಡಿಸಿದ್ದೇವೆ.

ಪಿತಾ, ಮಾತಾ, ಪಿತಾಮಹ, ಸ್ವರ್ಗದ್ವಾರ, ಪ್ರಜಾದ್ವಾರ, ಮೋಕ್ಷ ದ್ವಾರ, ತ್ರಿವಿಷ್ಟಪ–ಇತ್ಯಾದಿ ಕೆಲವು ನಾಮಗಳು ಎರಡು ಮೂರು ನಾಮ ಗಳನ್ನು ಸೇರಿಸಿಕೊಂಡಿರುವಂತೆ ಭಾಸವಾಗುತ್ತದೆ. ಆದರೆ ಹೀಗೆ ಮಾಡದಿದ್ದರೆ 108ಕ್ಕಿಂತಲೂ ಹೆಚ್ಚು ನಾಮಗಳಾಗುತ್ತವೆ. ದಾತವ್ಯಕಾರ್ಯಾಲಯ ಪ್ರಕಟಣೆಯಲ್ಲಿ 113 ನಾಮಗಳನ್ನೇ ಕೊಟ್ಟಿದ್ದಾರೆ. ಆದರೆ ಭಂಡಾರ್ಕರ್ ಪರಿಶೋಧನಾಸಂಸ್ಥೆಯವರು ಪ್ರಕಟಿಸಿರುವ ಭಾರತದಲ್ಲಿ ಬೇರೆಯ ಪಾಠಾಂತರವಿದೆ. ಅದರಲ್ಲಿ ಈ ಸಮಸ್ಯೆಯಿಲ್ಲ. ಸರಿಯಾಗಿ 108 ನಾಮಗಳೇ ಇವೆ. ನಮ್ಮ ವಾಚಕರ ಉಪಯೋಗಕ್ಕಾಗಿ ಅದನ್ನಿಲ್ಲಿ ಪ್ರಕಟಿಸಿದ್ದೇವೆ. ನಾಲ್ಕನೆಯ ಸಂಪುಟದಲ್ಲಿ ಇದನ್ನು ಅಳವಡಿಸಲು ಸಾಧ್ಯವಾಗದೇ ಇದ್ದುದ ರಿಂದ ಈ ಸಂಪುಟದಲ್ಲಿ ಕೊಡಲಾಗಿದೆ.

**ಸೂರ್ಯೋಽರ್ಯಮಾ ಭಗಸ್ತ್ವಷ್ಟಾ ಪೂಷಾರ್ಕಃ ಸವಿತಾ ರವಿಃ ।**
**ಗಭಸ್ತಿಮಾನಜಃ ಕಾಲೋ ಮೃತ್ಯುರ್ಧಾತಾ ಪ್ರಭಾಕರಃ ॥೧॥**

**ಪೃಥಿವ್ಯಾಪಶ್ಚ ತೇಜಶ್ಚ ಖಂ ವಾಯುಶ್ಚ ಪರಾಯಣಮ್ ।**
**ಸೋಮೋ ಬೃಹಸ್ಪತಿಃ ಶುಕ್ರೋ ಬುಧೋಽಙ್ಗಾರಕ ಏವ ಚ ॥೨॥**

**ಇನ್ದ್ರೋ ವಿವಸ್ವಾನ್ದೀಪ್ತಾಂಶುಃ ಶುಚಿಃ ಶೌರಿಃ ಶನೈಶ್ಚರಃ ।**
**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸ್ಕನ್ದೋ ವೈಶ್ರವಣೋ ಯಮಃ ॥೩॥**

**ವೈದ್ಯುತೋ ಜಾಠರಶ್ಚಾಗ್ನಿರೈನ್ಧನಸ್ತೇಜಸಾಂ ಪತಿಃ ।**
**ಧರ್ಮಧ್ವಜೋ ವೇದಕರ್ತಾ ವೇದಾಙ್ಗೋ ವೇದವಾಹನಃ ॥೪॥**

**ಕೃತಂ ತ್ರೇತಾ ದ್ವಾಪರಶ್ಚ ಕಲಿಃ ಸರ್ವಾಮರಾಶ್ರಯಃ ।**
**ಕಲಾ ಕಾಷ್ಠಾ ಮುಹೂರ್ತಾಶ್ಚ ಪಕ್ಷಾ ಮಾಸಾ ಋತುಸ್ತಥಾ ॥೫॥**

**ಸಂವತ್ಸರಕರೋಽಶ್ವತ್ಥಃ ಕಾಲಚಕ್ರೋ ವಿಭಾವಸುಃ ।**
**ಪುರುಷಃ ಶಾಶ್ವತೋ ಯೋಗೀ ವ್ಯಕ್ತಾವ್ಯಕ್ತಃ ಸನಾತನಃ ॥೬॥**

**ಲೋಕಾಧ್ಯಕ್ಷಃ ಪ್ರಜಾಧ್ಯಕ್ಷೋ ವಿಶ್ವಕರ್ಮಾ ತಮೋನುದಃ ।**
**ವರುಣಃ ಸಾಗರೋಂಽಶುಶ್ಚ ಜೀಮೂತೋ ಜೀವನೋಽರಿಹಾ ॥೭॥**

**ಭೂತಾಶ್ರಯೋ ಭೂತಪತಿಃ ಸರ್ವಭೂತನಿಷೇವಿತಃ ।**
**ಮಣಿಃ ಸುವರ್ಣೋ ಭೂತಾದಿಃ ಕಾಮದಃ ಸರ್ವತೋಮುಖಃ ॥೮॥**

**ಜಯೋ ವಿಶಾಲೋ ವರದಃ ಶೀಘ್ರಗಃ ಪ್ರಾಣಧಾರಣಃ ।**
**ಧನ್ವನ್ತರಿರ್ಧೂಮಕೇತುರಾದಿದೇವೋಽದಿತೇಃ ಸುತಃ ॥೯॥**

**ದ್ವಾದಶಾತ್ಮಾರವಿನ್ದಾಕ್ಷಃ ಪಿತಾ ಮಾತಾ ಪಿತಾಮಹಃ ।**
**ಸ್ವರ್ಗದ್ವಾರಂ ಪ್ರಜಾದ್ವಾರಂ ಮೋಕ್ಷದ್ವಾರಂ ತ್ರಿವಿಷ್ಟಪಮ್ ॥೧೦॥**

**ದೇಹಕರ್ತಾ ಪ್ರಶಾನ್ತಾತ್ಮಾ ವಿಶ್ವಾತ್ಮಾ ವಿಶ್ವತೋಮುಖಃ ।**
**ಚರಾಚರಾತ್ಮಾ ಸೂಕ್ಷ್ಮಾತ್ಮಾ ಮೈತ್ರೇಣ ವಪುಷಾನ್ವಿತಃ ॥೧೧॥**

ಸೂರ್ಯ, ಅರ್ಯಮಾ, ಭಗಃ, ತ್ವಷ್ಟಾ, ಪೂಷಾ, ಅರ್ಕಃ, ಸವಿತಾ, ರವಿಃ, ಗಭಸ್ತಿಮಾನ್, ಅಜಃ, ಕಾಲಃ, ಮೃತ್ಯುಃ, ಧಾತಾ, ಪ್ರಭಾಕರಃ, ಪೃಥಿವೀ, ಆಪಃ, ತೇಜಃ, ಖಂ, ವಾಯುಃ, ಪರಾಯಣಂ, ಸೋಮಃ, ಬೃಹಸ್ಪತಿಃ, ಶುಕ್ರಃ, ಬುಧಃ, ಅಂಗಾರಕಃ, ಇಂದ್ರಃ, ವಿವಸ್ವಾನ್, ದೀಪ್ತಾಂಶುಃ, ಶುಚಿಃ, ಶೌರಿಃ, ಶನೈಶ್ಚರಃ, ಬ್ರಹ್ಮಾ, ವಿಷ್ಣುಃ, ರುದ್ರಃ, ಸ್ಕಂದಃ, ವೈಶ್ರವಣಃ, ಯಮಃ, ವೈದ್ಯುತಃ, ಜಾಠರಾಗ್ನಿಃ, ಐಂಧನಃ, ತೇಜಸಾಂ ಪತಿಃ, ಧರ್ಮಧ್ವಜಃ, ವೇದಕರ್ತಾ, ವೇದಾಂಗಃ, ವೇದವಾಹನಃ, ಕೃತಂ, ತ್ರೇತಾ, ದ್ವಾಪರಃ, ಕಲಿಃ, ಸರ್ವಾಮರಾಶ್ರಯಃ, ಕಲಾಃ, ಕಾಷ್ಠಾಃ, ಮುಹೂರ್ತಾಃ, ಪಕ್ಷಾಃ, ಮಾಸಾಃ, ಋತುಃ, ಸಂವತ್ಸರಕರಃ, ಅಶ್ವತ್ಥಃ,

ಕಾಲಚಕ್ರಃ, ವಿಭಾವಸುಃ, ಪುರುಷಃ, ಶಾಶ್ವತಃ, ಯೋಗೀ, ವ್ಯಕ್ತಾವ್ಯಕ್ತಃ, ಸನಾತನಃ,ಲೋಕಾಧ್ಯಕ್ಷಃ,ಪ್ರಜಾಧ್ಯಕ್ಷಃ,ವಿಶ್ವಕರ್ಮಾ,ತಮೋನುದಃ,ವರುಣಃ, ಸಾಗರಃ, ಅಂಶುಃ, ಜೀಮೂತಃ, ಜೀವನಃ, ಅರಿಹಾ, ಭೂತಾಶ್ರಯಃ, ಭೂತಪತಿಃ, ಸರ್ವಭೂತನಿಷೇವಿತಃ, ಮಣಿಃ, ಸುವರ್ಣಃ, ಭೂತಾದಿಃ, ಕಾಮದಃ, ಸರ್ವತೋಮುಖಃ, ಜಯಃ, ವಿಶಾಲಃ, ವರದಃ, ಶೀಘ್ರಗಃ, ಪ್ರಾಣಧಾರಣಃ, ಧನ್ವನ್ತರಿಃ, ಧೂಮಕೇತುಃ, ಆದಿದೇವಃ, ಅದಿತೇಃಸುತಃ, ದ್ವಾದಶಾತ್ಮಾ ಅರವಿಂದಾಕ್ಷಃ, ಪಿತಾ, ಮಾತಾ, ಪಿತಾಮಹಃ, ಸ್ವರ್ಗದ್ವಾರಂ, ಪ್ರಜಾದ್ವಾರಂ, ಮೋಕ್ಷದ್ವಾರಂ, ತ್ರಿವಿಷ್ಟಪಂ, ದೇಹಕರ್ತಾ, ಪ್ರಶಾನ್ತಾತ್ಮಾ ವಿಶ್ವಾತ್ಮಾ ವಿಶ್ವತೋಮುಖಃ, ಚರಾಚರಾತ್ಮಾ ಸೂಕ್ಷ್ಮಾತ್ಮಾ ಮೈತ್ರೇಣ ವಪುಷಾನ್ವಿತಃ.



ಮುಖಚಿತ್ರ : ಮಹಾಸರಸ್ವತೀದೇವಿಯದು

ಧ್ಯಾನಶ್ಲೋಕ :

ಘಣ್ಟಾಶೂಲಹಲಾನಿ ಶಂಖಮುಸಲೇ ಚಕ್ರಂ ಧನುಃ ಸಾಯಕಂ
ಹಸ್ತಾಬ್ಜೈರ್ದಧತೀಂ ಘನಾಂತವಿಲಸಚ್ಛೀತಾಂಶುತುಲ್ಯಪ್ರಭಾಮ್ ।
ಗೌರೀದೇಹಸಮುದ್ಭವಾಂ ತ್ರಿಜಗತಾಮಾಧಾರಭೂತಾಂ ಮಹಾ-
ಪೂರ್ವಾಮತ್ರ ಸರಸ್ವತೀಮನುಭಜೇ ಶುಮ್ಭಾದಿದೈತ್ಯಾರ್ದಿನೀಮ್ ॥

–ಸಪ್ತಶತೀ

ಶ್ರಿಯೈನಮಃ
ಶ್ರೀ ಗುರುಭ್ಯೋ ನಮಃ

# ತೀರ್ಥಕ್ಷೇತ್ರಗಳು

ಮಹಾಭಾರತದಲ್ಲಿ ನೂರಾರು ತೀರ್ಥಕ್ಷೇತ್ರಗಳು ಹೇಳಲ್ಪಟ್ಟಿವೆ. ಮೊದಲನೆಯದಾಗಿ : ಪುಲಸ್ತ್ಯರು ಭೀಷ್ಮನಿಗೆ ಹೇಳಿದುದನ್ನು ನಾರದರು ಯುಧಿಷ್ಠಿರನಿಗೆ ಹೇಳುತ್ತಾರೆ. ಎರಡನೆಯದಾಗಿ : ಪೂರ್ವ-ಪಶ್ಚಿಮ-ದಕ್ಷಿಣೋತ್ತರಗಳಲ್ಲಿರುವ ಪವಿತ್ರತೀರ್ಥಕ್ಷೇತ್ರಗಳನ್ನು ಧೌಮ್ಯರು ಧರ್ಮಜ ನಿಗೆ ಹೇಳುತ್ತಾರೆ. ಮೂರನೆಯದಾಗಿ : ಲೋಮಶರು ಧರ್ಮರಾಜನನ್ನೂ ಅವನ ಪರಿವಾರದವರನ್ನೂ ಕರೆದುಕೊಂಡು ತೀರ್ಥಯಾತ್ರೆಯನ್ನು ಮಾಡಿಸುತ್ತಾ ಹೋಗುವಾಗ ಆಯಾ ತೀರ್ಥಗಳ ವರ್ಣನೆ, ಮಹತ್ತ್ವ, ಅವುಗಳ ಪೂರ್ವೇತಿಹಾಸ–ಇವುಗಳೆಲ್ಲವನ್ನೂ ವಿವರಿಸುತ್ತಾ ಹೋಗುತ್ತಾರೆ. ಸುಮಾರು ಐದು ಸಾವಿರ ವರ್ಷಗಳಿಗೂ ಹಿಂದೆ ಅವರು ಹೇಳಿದ ತೀರ್ಥಕ್ಷೇತ್ರಗಳು, ಅಚ್ಚಳಿಯದೇ ಹಾಗೆಯೇ ಇವೆಯೆಂದು ಹೇಳಲಾಗುವುದಿಲ್ಲ. ಆದರೆ ಪುಷ್ಕರ, ಕುರುಕ್ಷೇತ್ರ, ಗಯೆ, ಗಂಗಾ–ಇತ್ಯಾದಿಗಳು ಯಥಾವತ್ತಾಗಿಯೇ ಇವೆ. ಕೆಲವನ್ನು ಮಾತ್ರ ನಾವಿಂದು ಗುರುತಿಸಬಹುದಾಗಿದೆ. ಅವುಗಳಲ್ಲಿ ಮುಖ್ಯವಾದ, ಈಗಲೂ ಅಚ್ಚಳಿಯದೇ ಇರುವ ಕೆಲವನ್ನು ಆಯ್ದು ವಾಚಕರಿಗೆ ಆ ಪುಣ್ಯಕ್ಷೇತ್ರಗಳ ಪರಿಚಯವನ್ನು ಮಾಡಿಕೊಡಲು ಪ್ರಯತ್ನಿಸಿದ್ದೇವೆ. ಮುಂದಿನ ಸಂಪುಟದಲ್ಲಿಯೂ ಉಳಿದ ಕೆಲವು ಮುಖ್ಯತೀರ್ಥಗಳ ಪರಿಚಯವನ್ನು ಮಾಡಿಕೊಡುತ್ತೇವೆ.

## ಪುಷ್ಕರ

ಸುಪ್ರಸಿದ್ಧವಾದ ಈ ಕ್ಷೇತ್ರವು ಪಂಚತೀರ್ಥಗಳಲ್ಲಿಯೂ ಮತ್ತು ಪಂಚಸರೋವರಗಳಲ್ಲಿಯೂ ಗಣಿಸಲ್ಪಡುತ್ತದೆ. ಪಂಚತೀರ್ಥಗಳು :

1. ಪುಷ್ಕರ, 2. ಕುರುಕ್ಷೇತ್ರ, 3. ಗಯಾ, 4. ಗಂಗೆ. 5. ಪ್ರಭಾಸ.

ಪಂಚಸರೋವರಗಳು : 1. ಮಾನಸಸರೋವರ (ಹಿಮಾಲಯದಲ್ಲಿ ಟಿಬೆಟ್ ಹತ್ತಿರವಿದೆ.) 2. ಪುಷ್ಕರ 3. ಬಿಂದುಸರೋವರ ( ಸಿದ್ಧಪುರ ) 4. ನಾರಾಯಣಸರೋವರ (ಕಚ್ಛ್) 5. ಪಂಪಾಸರೋವರ ( ಕರ್ನಾಟಕ )

ಮಾರ್ಗ :– ಪಶ್ಚಿಮ ರೈಲ್ವೆಯ ಅಹಮದಾಬಾದ್-ದೆಹಲೀ ಮಾರ್ಗದಲ್ಲಿ ಅಜಮೇರ್ ರೈಲುನಿಲ್ದಾಣವಿದೆ. ಅಲ್ಲಿಂದ ಪುಷ್ಕರವು ಏಳು ಮೈಲಿಗಳ ದೂರದಲ್ಲಿದೆ. ಅಜಮೇರಿನಿಂದ ಪುಷ್ಕರಕ್ಕೆ ಟಾಂಗಾ (ಕುದುರೆಗಾಡಿ) ಗಳೂ, ಬಸ್ಸುಗಳೂ ಹೋಗುತ್ತವೆ. ರಸ್ತೆಯೂ ಚೆನ್ನಾಗಿದೆ.

ತಂಗುದಾಣಗಳು :– ಅಜಮೇರಿನಲ್ಲಿ : 1. ರೈಲುನಿಲ್ದಾಣದ ಹತ್ತಿರವೇ ಟೇಕಮ್‌ಚಂದ್‌ಸೋನಿಯವರ ಧರ್ಮಶಾಲೆ. 2. ರೋಲಾವಲಿಗಳ ಧರ್ಮಶಾಲೆ ಮತ್ತು 3. ಶ್ರೀ ಉಮ್ಮೇದ್-ಅಜಯ ಧರ್ಮಶಾಲೆಗಳಿವೆ.

ಪುಷ್ಕರದಲ್ಲಿ :– 1. ಕಾಮಭಿವಾಲಾ ಧರ್ಮಶಾಲೆ, ವರಾಹಘಾಟ್. 2. ಬೇರೀವಾಲಾ ಧರ್ಮಶಾಲೆ, ವರಾಹಘಾಟ್ ಮತ್ತು 3. ಸೌರಿಯವರ ಧರ್ಮಶಾಲೆ, (ಶ್ರೀ ರಮಾವೈಕುಂಠಮಂದಿರದ ಹತ್ತಿರ.)

ದರ್ಶನೀಯಸ್ಥಳಗಳು :– ಪುಷ್ಕರದ ದಂಡೆಯ ಮೇಲೆ ಗೌಘಾಟ್, ಬ್ರಹ್ಮಘಾಟ್, ಕಪಾಲಮೋಚನಘಾಟ್, ಯಜ್ಞಘಾಟ್, ಬದರೀಘಾಟ್, ರಾಮಘಾಟ್ ಮತ್ತು ಕೋಟಿತೀರ್ಥಘಾಟ್–ಮುಂತಾದ ಚೆನ್ನಾಗಿ ಕಟ್ಟಲ್ಪಟ್ಟ ಸ್ನಾನಘಟ್ಟಗಳಿವೆ. ಪುಷ್ಕರಸರಸ್ಸಿನಿಂದ ಸರಸ್ವತೀನದಿಯು ಹುಟ್ಟಿ ಸಾಬರ ಮತೀ ನದಿಯೊಂದಿಗೆ ಕೂಡಿಕೊಳ್ಳುತ್ತದೆ. ಅನಂತರ ಅದನ್ನು ಲೂನೀ ನದಿಯೆಂದು ಕರೆಯುತ್ತಾರೆ.

ಮೂರು ಪುಷ್ಕರಸರೋವರಗಳಿವೆ. 1. ಜ್ಯೇಷ್ಠ (ಪ್ರಧಾನ) ಪುಷ್ಕರ, 2. ಮಧ್ಯ (ವೃದ್ಧ) ಪುಷ್ಕರ ಮತ್ತು 3. ಕನಿಷ್ಠಪುಷ್ಕರ. ಜ್ಯೇಷ್ಠ ಪುಷ್ಕರದ ಅಧಿದೇವತೆ ಬ್ರಹ್ಮನು. ಮಧ್ಯಪುಷ್ಕರದ ಅಧಿದೇವತೆ ಮಹಾವಿಷ್ಣುವು ಮತ್ತು ಕನಿಷ್ಠಪುಷ್ಕರದ ಅಧಿದೇವತೆ ರುದ್ರನು.

ಪುಷ್ಕರದ ಮುಖ್ಯ ದೇವಾಲಯವು ಬ್ರಹ್ಮದೇವನದು. ಸರೋವರದ ಹತ್ತಿರದಲ್ಲಿಯೇ ಈ ಗುಡಿಯಿದೆ. ಗುಡಿಯಲ್ಲಿ ಚತುರ್ಮುಖಬ್ರಹ್ಮದೇವರ ಬಲಭಾಗದಲ್ಲಿ ಸಾವಿತ್ರೀದೇವಿಯ ಮತ್ತು ಎಡಭಾಗದಲ್ಲಿ ಗಾಯತ್ರೀ ದೇವಿಯ ಸನ್ನಿಧಿಗಳಿವೆ. ಪಕ್ಕದಲ್ಲಿಯೇ ಒಂದು ಭಾಗದಲ್ಲಿ ಸನಕಾದಿಮುನಿಗಳ ಮೂರ್ತಿಗಳಿವೆ. ದೇವರ್ಷಿಗಳಾದ ನಾರದರ ಒಂದು ಸನ್ನಿಧಾನವಿದೆ.

ಗಜಾರೂಢನಾದ ಕುಬೇರ ಮತ್ತು ನಾರದರ ಮೂರ್ತಿಗಳಿರುವ ಮತ್ತೊಂದು ಸನ್ನಿಧಿಯೂ ಇದೆ. ಪುಷ್ಕರದ ಎರಡನೆಯ ಮುಖ್ಯದೇವಸ್ಥಾನ ಶ್ರೀ ಬದರೀನಾರಾಯಣ ದೇವಸ್ಥಾನ. ಅಲ್ಲಿಯ ಪುರಾತನವಾದ ವರಾಹ ದೇವರ ಗುಡಿಯು ಮುಸಲ್ಮಾನರ ಆಳ್ವಿಕೆಯ ಕಾಲದಲ್ಲಿ ಭಗ್ನಮಾಡಲ್ಪಟ್ಟಿತು. ಈಗಿರುವ ವರಾಹದೇವಸ್ಥಾನವು ಅನಂತರ ಕಟ್ಟಲ್ಪಟ್ಟಿರುವುದು. ಊರ ಹೊರಗಿರುವ ಆತ್ಮೇಶ್ವರ ಮಹಾದೇವಮಂದಿರವು ಅಲ್ಲಿಯ ಮೂರನೆಯ ಮುಖ್ಯಮಂದಿರ. ಕಪಾಲೇಶ್ವರ, ಅಟಪಟೇಶ್ವರ ಎಂದೂ ಕರೆಯಲ್ಪಡುವ ಆ ಗುಡಿಯೊಳಗೆ ಗುಹೆಯಂತಹ ಇಕ್ಕಟ್ಟಾದ ದಾರಿಯಲ್ಲಿ ಹೋಗಬೇಕಾಗುತ್ತದೆ.

ಮೇಲೆ ಹೇಳಿದ ದೇವಾಲಯಗಳಲ್ಲದೇ ಅಲ್ಲಿಯ ಶ್ರೀರಮಾವೈಕುಂಠ ಮಂದಿರವೂ ಬಹುಸುಂದರವಾಗಿದೆ. ಅದನ್ನು ಶ್ರೀರಂಗಜೀ ಮಂದಿರವೆಂದೂ ಕರೆಯುತ್ತಾರೆ. ಪುಷ್ಕರಸರಸ್ಸಿನ ದಂಡೆಯ ಮೇಲೆ ಇನ್ನೂ ಅನೇಕ ಮಂದಿರ ಗಳಿವೆ. ಯಾತ್ರಾರ್ಥಿಗಳು ಪುಷ್ಕರಸರಸ್ಸನ್ನು ಪ್ರದಕ್ಷಿಣೆಮಾಡುತ್ತಾರೆ. ಪ್ರದಕ್ಷಿಣೆಯ ಮಾರ್ಗದಲ್ಲಿ ಶುದ್ಧಾದ್ವೈತಮತಸಂಸ್ಥಾಪಕರಾದ ಮಹಾಪ್ರಭು ವಲ್ಲಭಾಚಾರ್ಯರ ಮಠವು ಸಿಕ್ಕುತ್ತದೆ. ಆ ಮಠವು ಸರೋವರದ ಆಚೆಯ ದಡದಲ್ಲಿದೆ. ಪುಷ್ಕರದ ಹತ್ತಿರವೇ 'ಶುದ್ಧವಾಪೀ' ಎಂಬ ಗಯಾಕುಂಡವಿದೆ. ಅಲ್ಲಿ ಜನರು ಶ್ರಾದ್ಧಾದಿಗಳನ್ನು ಮಾಡುತ್ತಾರೆ.

ಪುಷ್ಕರಸರೋವರದ ಒಂದು ಪಕ್ಕದಲ್ಲಿರುವ ಬೆಟ್ಟದ ಮೇಲೆ ಸಾವಿತ್ರೀ ದೇವಿಯ ಗುಡಿಯಲ್ಲಿ ತೇಜೋಮಯಿಯಾದ ಸಾವಿತ್ರೀದೇವಿಯ ಸುಂದರ ಮೂರ್ತಿಯಿದೆ. ಸರೋವರದ ಮತ್ತೊಂದು ಪಕ್ಕದಲ್ಲಿರುವ ಬೆಟ್ಟದ ಮೇಲೆ ಗಾಯತ್ರೀದೇವಿಯ ಗುಡಿಯಿದೆ. (ಇದು 51 ಶಕ್ತಿಪೀಠಗಳಲ್ಲೊಂದಾಗಿದೆ.) ಸತೀದೇವಿಯ ಮಣಿಬಂಧವು ಅಲ್ಲಿ ಬಿದ್ದಿತ್ತಾದ್ದರಿಂದ ಅದು ಭಾರತದ 51 ಶಕ್ತಿಪೀಠಗಳಲ್ಲಿ ಒಂದೆಂದು ಗಣಿಸಲ್ಪಟ್ಟಿದೆ.

ಪುಷ್ಕರದಿಂದ ಸ್ವಲ್ಪ ದೂರದಲ್ಲಿಯೇ ಯಜ್ಞಪರ್ವತವಿದೆ. ಯಜ್ಞ ಪರ್ವತದ ಹತ್ತಿರವೇ ಅಗಸ್ತ್ಯಾಶ್ರಮವೂ–ಅಗಸ್ತ್ಯಕುಂಡವೂ ಇವೆ. ಪುಷ್ಕರದಲ್ಲಿ ಸ್ನಾನಮಾಡಿದನಂತರ ಅಗಸ್ತ್ಯಕುಂಡದಲ್ಲಿ ಸ್ನಾನಮಾಡಬೇಕು. ಅಲ್ಲಿಗೆ ಪುಷ್ಕರಯಾತ್ರೆಯು ಪೂರ್ಣವಾದಂತೆ. ಯಜ್ಞಪರ್ವತದಲ್ಲಿ ಹುಟ್ಟಿ

ಹರಿಯುವ ಜಲಸ್ರೋತವು ಪರಮಪವಿತ್ರವೆಂದೂ, ಅದರ ದರ್ಶನವೇ ಸಮಸ್ತಪಾಪನಾಶಕವೆಂದೂ ಪರಿಗಣಿಸಲ್ಪಟ್ಟಿದೆ. ಜಲಸ್ರೋತವು ಗೋಮುಖ ದಿಂದ ಬೀಳುತ್ತದೆ. ಯಜ್ಞಪರ್ವತದ ಕೆಳಭಾಗದಲ್ಲಿ ಒಂದೆಡೆ ನಾಗ ತೀರ್ಥವೂ, ನಾಗಕುಂಡವೂ ಇದೆ. ನಾಗಪಂಚಮಿಯಂದು ನಾಗಕುಂಡದಲ್ಲಿ ಸ್ನಾನಮಾಡಿ ಹಾಲನ್ನು ನಿವೇದನಮಾಡುವುದು ಬಹಳ ಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿದೆ. ಅಲ್ಲಿ ನಾಗಕುಂಡ, ಚಕ್ರಕುಂಡ, ಸೂರ್ಯಕುಂಡ, ಪದ್ಮಕುಂಡ ಮತ್ತು ಗಂಗಾಕುಂಡಗಳಿವೆ.

ಪುಷ್ಕರಕ್ಷೇತ್ರದಲ್ಲಿ ಸರಸ್ವತೀನದಿಯ ಸ್ನಾನವು ಬಹಳ ಮುಖ್ಯ ವಾದುದು. ಅಲ್ಲಿ ಸರಸ್ವತಿಯು 'ಪ್ರಾಚೀ ಸರಸ್ವತೀ' ಎಂಬ ಹೆಸರಿನಿಂದ ಪ್ರಸಿದ್ಧಿಹೊಂದಿದೆ. 1) ಸುಪ್ರಭಾ 2) ಕಾಂಚನಾ 3) ಪ್ರಾಚೀ ನಂದಾ 5) ವಿಶಾಲಿಕಾ–ಎಂಬ ಐದು ಹೆಸರುಗಳಿಂದ ಸರಸ್ವತೀನದಿಯು ಹರಿಯುತ್ತದೆ. ಅಲ್ಲಿ ಜಾತ್ರೆಯು ಸೇರುತ್ತದೆ. ಕಾರ್ತಿಕಪೂರ್ಣಿಮೆಯಂದು ಅಲ್ಲಿ ಸ್ನಾನ ಮಾಡುವುದು ಬಹಳ ಪುಣ್ಯಪ್ರದವಾದುದು. ಹಿಂದೆ ಪುಷ್ಕರದಲ್ಲಿ ಬಹಳ ಮೊಸಳೆಗಳಿದ್ದುವು. ಈಗ ಅವುಗಳ ಕಾಟವಿಲ್ಲ. ಜ್ಯೇಷ್ಠ (ಮುಖ್ಯ ) ಪುಷ್ಕರ ದಿಂದ ಸುಮಾರು 2 ಮೈಲಿಗಳ ದೂರದಲ್ಲಿ ಮಧ್ಯ (ವೃದ್ಧ) ಪುಷ್ಕರ ಮತ್ತು ಕನಿಷ್ಠಪುಷ್ಕರಗಳಿವೆ. ಮಧ್ಯಪುಷ್ಕರದ ಸರೋವರವು ವಿಶಾಲವಾಗಿಯೂ, ಆಳವಾಗಿಯೂ ಇದೆ. ಅದರ ದಂಡೆಯಲ್ಲಿ ಒಳ್ಳೆಯ ಸ್ನಾನಘಟ್ಟವಿದೆ.

ಪುಷ್ಕರಸರಸ್ಸಿನ ಪ್ರದಕ್ಷಿಣಾಕ್ರಮವು ಅಂತರ್ವೇದೀ, ಮಧ್ಯವೇದೀ, ಪ್ರಧಾನವೇದೀ ಮತ್ತು ಬಹಿರ್ವೇದೀ–ಎಂದು ವಿಂಗಡಿಸಲ್ಪಟ್ಟಿದೆ. ಕ್ರಮ ವಾಗಿ, 6 ಮೈಲಿ, 10 ಮೈಲಿ, 24 ಮೈಲಿ ಮತ್ತು 48 ಮೈಲಿಗಳಷ್ಟು ದೂರ ಪ್ರದಕ್ಷಿಣೆಮಾಡಬೇಕಾಗುತ್ತದೆ. ಆ ಪ್ರದಕ್ಷಿಣಮಾರ್ಗದಲ್ಲಿ ಋಷಿ-ಮುನಿಗಳ ಅನೇಕಾಶ್ರಮಗಳಿವೆ. ಪುಷ್ಕರದಿಂದ ಸುಮಾರು 12 ಮೈಲಿಗಳ ದೂರದಲ್ಲಿ ಪ್ರಾಚೀಸರಸ್ವತೀ ಮತ್ತು ನಂದಾನದಿಗಳ ಸಂಗಮವಾಗುತ್ತದೆ. ಪುಷ್ಕರದ ಹತ್ತಿರವೇ ನಾಗಪರ್ವತವಿದೆ.

ಪೌರಾಣಿಕ ಕಥೆ : ಪದ್ಮಪುರಾಣದ ಪ್ರಕಾರ ಆದಿಕಾಲದಲ್ಲಿ ಪುಷ್ಕರ ತೀರ್ಥವಿರುವ ಸ್ಥಳದಲ್ಲಿ ವಜ್ರನಾಭನೆಂಬ ರಾಕ್ಷಸನು ವಾಸಿಸುತ್ತಿದ್ದನು.

ಅವನು ಬಾಲಘಾತಿಯಾಗಿದ್ದನು. ಅದೇ ಸಮಯದಲ್ಲಿ ಬ್ರಹ್ಮದೇವನ ಮನಸ್ಸಿನಲ್ಲಿ ಯಜ್ಞಮಾಡಬೇಕೆಂಬ ಇಚ್ಛೆಯುಂಟಾಯಿತು. ಭಗವಂತನಾದ ಮಹಾವಿಷ್ಣುವಿನ ನಾಭಿಕಮಲದಿಂದ ತಾನು ಪ್ರಕಟವಾದ ಸ್ಥಳಕ್ಕೆ ಹೋಗಿ, ತನ್ನ ಕೈಯ್ಯಲ್ಲಿದ್ದ ಕಮಲವನ್ನು ಎಸೆದು ವಜ್ರನಾಭನನ್ನು ಸಂಹರಿಸಿದನು. ಬ್ರಹ್ಮದೇವನ ಕೈಯಿಂದ ಕಮಲವು ಬಿದ್ದ ಸ್ಥಳದಲ್ಲಿ ಸರೋವರವೊಂದು ಉದ್ಭವವಾಯಿತು. ಅದೇ ಪುಷ್ಕರವು. ಬ್ರಹ್ಮನು–ಚಂದ್ರಾನದಿಯ ಉತ್ತರಕ್ಕೂ, ಸರಸ್ವತೀನದಿಯ ಪಶ್ಚಿಮಕ್ಕೂ, ನಂದನ ಸ್ಥಾನದ ಪೂರ್ವಕ್ಕೂ ಮತ್ತು ಕನಿಷ್ಠಪುಷ್ಕರದ ದಕ್ಷಿಣಕ್ಕೂ ಇರುವ ಮಧ್ಯವರ್ತಿಯಾದ ಕ್ಷೇತ್ರವನ್ನೇ ಯಜ್ಞವೇದಿಯನ್ನಾಗಿ ಮಾಡಿದನು. ಆ ಯಜ್ಞವೇದಿಯಲ್ಲಿಯೇ ಬ್ರಹ್ಮದೇವನು ಜ್ಯೇಷ್ಠ, ಮಧ್ಯಮ ಮತ್ತು ಕನಿಷ್ಠ ಎಂಬ ಮೂರು ಪುಷ್ಕರ ತೀರ್ಥಗಳನ್ನು ನಿರ್ಮಿಸಿದನು. ಬ್ರಹ್ಮದೇವನ ಯಜ್ಞಕ್ಕೆ ಸಮಸ್ತದೇವತೆಗಳೂ, ಋಷಿಗಳೂ ಬಂದರು. ಋಷಿಗಳು ಸುತ್ತಮುತ್ತಲಿನ ಪ್ರದೇಶಗಳಲ್ಲಿ ತಮ್ಮ ತಮ್ಮ ಆಶ್ರಮಗಳನ್ನು ಕಟ್ಟಿಕೊಂಡರು. ಭಗವಾನ್ ಶಂಕರನೂ ಕಪಾಲಧಾರಿಯಾಗಿ ಅಲ್ಲಿಗೆ ಬಂದನು. ಯಜ್ಞಾರಂಭಕ್ಕೆ ಸಾವಿತ್ರೀದೇವಿಯು ಬರುವುದು ತಡವಾಯಿತು. ಯಜ್ಞಮುಹೂರ್ತವು ಕಳೆದುಹೋಗುತ್ತಿರಲಾಗಿ, ಬ್ರಹ್ಮನು ಗಾಯತ್ರೀ ಎಂಬ ಗೋಪಕನ್ಯೆಯನ್ನು ಮದುವೆಯಾಗಿ ಯಜ್ಞವನ್ನು ಪ್ರಾರಂಭಿಸಿಬಿಟ್ಟನು. ಸಾವಿತ್ರೀದೇವಿಯು ಅನಂತರ ಬಂದು ಯಜ್ಞದಲ್ಲಿ ದೀಕ್ಷಿತಳಾಗಿ ಬ್ರಹ್ಮದೇವನ ಪಕ್ಕದಲ್ಲಿ ಕುಳಿತಿದ್ದ ಗಾಯತ್ರಿಯನ್ನು ನೋಡಿ ಕೋಪಗೊಂಡು ಹತ್ತಿರದಲ್ಲಿಯೇ ಇದ್ದ ಪರ್ವತಕ್ಕೆ ಹೋಗಿ ಅಲ್ಲಿ ಬೇರೊಂದು ಯಜ್ಞವನ್ನು ಮಾಡಿದಳು. ಆ ಸ್ಥಳದಲ್ಲಿಯೇ ಶ್ರೀ ವರಾಹಸ್ವಾಮಿಯು ಬ್ರಹ್ಮನ ಮೂಗಿನ ಹೊಳ್ಳೆಯಿಂದ ಪ್ರಕಟವಾದನು. ಮೂರು ಪುಷ್ಕರಗಳಲ್ಲದೇ–ಬ್ರಹ್ಮದೇವರು, ವರಾಹಸ್ವಾಮಿ, ಕಪಾಲೇಶ್ವರ ಶಿವ, ಪರ್ವತದ ಮೇಲೆ ಸಾವಿತ್ರಿದೇವಿ ಮತ್ತು ಬ್ರಹ್ಮದೇವನ ಯಜ್ಞದ ಪ್ರಧಾನರಾದ ಅಗಸ್ತ್ಯಮಹರ್ಷಿಗಳು–ಇವರೆಲ್ಲರೂ ಆ ಕ್ಷೇತ್ರದ ಮುಖ್ಯ ದೇವತೆಗಳು.

–––

## ನೈಮಿಷಾರಣ್ಯ

ವಾಯುಪುರಾಣಾಂತರ್ಗತವಾದ ಮಾಘಮಾಹಾತ್ಮ್ಯದ ಮತ್ತು ಬೃಹದ್ಧರ್ಮೋತ್ತರಪುರಾಣದ ಪೂರ್ವಭಾಗದ ಪ್ರಕಾರ ಈಗಲೂ ಸಹ ಆ ಕ್ಷೇತ್ರದ ಯಾವುದೋ ಒಂದು ಗುಪ್ತಸ್ಥಳದಲ್ಲಿ ಋಷಿ-ಮಹರ್ಷಿಗಳ ಸ್ವಾಧ್ಯಾಯಾನುಷ್ಠಾನಗಳು ನಡೆಯುತ್ತಿವೆ. ವರಾಹಪುರಾಣದ ಪ್ರಕಾರ ನಿಮಿಷಮಾತ್ರದಲ್ಲಿ ಭಗವಂತನಿಂದ ದಾನವರ ಸಂಹಾರವಾದುದರಿಂದ ಆ ಕ್ಷೇತ್ರಕ್ಕೆ ನೈಮಿಷಾರಣ್ಯವೆಂದು ಹೆಸರು ಬಂದಿತು. ವಾಯು, ಕೂರ್ಮ ಮುಂತಾದ ಪುರಾಣಗಳ ಪ್ರಕಾರ ಭಗವಂತನ ಮನೋಮಯಚಕ್ರದ ನೇಮಿಯು ಆ ಸ್ಥಳದಲ್ಲಿ ಬಿದ್ದುಹೋದುದರಿಂದ ಅದಕ್ಕೆ ನೈಮಿಷಾರಣ್ಯವೆಂದು ಹೆಸರಾಯಿತು.

ಮಹರ್ಷಿಗಳಾದ ಶೌನಕರು ಒಂದು ದೀರ್ಘವಾದ ಜ್ಞಾನಸತ್ರವನ್ನು ಮಾಡಬೇಕೆಂದು ಸಂಕಲ್ಪಿಸಿದರು. ಅದಕ್ಕಾಗಿ ಬ್ರಹ್ಮದೇವನನ್ನು ಆರಾಧಿಸಿದರು. ಬ್ರಹ್ಮದೇವನು ಋಷಿಗಳಿಗೆ ಒಂದು ಚಕ್ರವನ್ನು ಕೊಟ್ಟು–"ಈ ಚಕ್ರವನ್ನು ಉರುಳಿಸುತ್ತಾ ಹೋಗಿರಿ. ಎಲ್ಲಿ ಈ ಚಕ್ರದ ನೇಮಿಯು (ಚಕ್ರದ ಸುತ್ತ ಇರುವ ಬಳೆ) ಬಿದ್ದುಹೋಗುವುದೋ–ಆ ಸ್ಥಳವೇ ಪವಿತ್ರವೆಂದು ತಿಳಿದು, ಅಲ್ಲಿಯೇ ಆಶ್ರಮವನ್ನು ಕಟ್ಟಿಕೊಂಡು ಜ್ಞಾನಸತ್ರವನ್ನು ಮಾಡಿರಿ"– ಎಂದು ಅನುಗ್ರಹಿಸಿದನು. ಶೌನಕರೊಂದಿಗೆ 88 ಸಾವಿರ ಋಷಿಗಳಿದ್ದರು. ಅವರೆಲ್ಲರೂ ಸೇರಿಕೊಂಡು ಆ ಚಕ್ರವನ್ನು ಉರುಳಿಸುತ್ತಾ ಭಾರತದ ಭೂಮಿಯಲ್ಲೆಲ್ಲಾ ತಿರುಗಲು ತೊಡಗಿದರು. ಗೋಮತೀನದಿಯ ತೀರದ ಒಂದು ತಪೋವನದಲ್ಲಿ ಚಕ್ರದ ನೇಮಿಯು ಬಿದ್ದುಹೋಗಿ ಚಕ್ರವು ಭೂಮಿಯೊಳಗೆ ಪ್ರವೇಶಿಸಿತು. ಚಕ್ರದ ನೇಮಿಯು ಬಿದ್ದುಹೋದುದರಿಂದ ಆ ಸ್ಥಳಕ್ಕೆ 'ನೈಮಿಷ' ವೆಂದೇ ಹೆಸರಾಯಿತು. ಎಲ್ಲಿ ಚಕ್ರವು ಭೂಮಿಯೊಳಗೆ ಪ್ರವೇಶಿಸಿತೋ–ಆ ಸ್ಥಳಕ್ಕೆ 'ಚಕ್ರತೀರ್ಥ'ವೆಂದೇ ಹೆಸರಾಯಿತು. ಚಕ್ರತೀರ್ಥವು ಗೋಮತೀನದಿಯ ಎಡದಂಡೆಯ ಮೇಲಿದೆ. 51 ಪಿತೃಸ್ಥಾನಗಳಲ್ಲಿ ಅದೂ ಒಂದೆಂದು ಪರಿಗಣಿತವಾಗಿದೆ. ಅಲ್ಲಿ ಸೋಮವತೀ ಅಮಾವಾಸ್ಯೆಯಲ್ಲಿ ಜಾತ್ರೆಯು ನಡೆಯುತ್ತದೆ.

ಸೂತಪುರಾಣಿಕರು ನೈಮಿಷಾರಣ್ಯದಲ್ಲಿಯೇ ಶೌನಕರಿಗೆ 18 ಪುರಾಣ

ಗಳ ಮತ್ತು ಮಹಾಭಾರತದ ಕಥಾಶ್ರವಣವನ್ನು ಮಾಡಿಸಿದರು. ಬಲ ರಾಮನು ಒಮ್ಮೆ ಅಲ್ಲಿಗೆ ಬಂದಾಗ ಅವನಿಂದ ಅಕಸ್ಮಾತ್ತಾಗಿ ರೋಮಹರ್ಷಣ ಸೂತರ ಅವಸಾನವಾಯಿತು. ರೋಮಹರ್ಷಣಸೂತರ ಪುತ್ರರಾದ ಉಗ್ರಶ್ರವರಿಗೆ ಪುರಾಣಗಳ ವಕ್ತೃತ್ವವು ಬರಲೆಂದು ಬಲರಾಮನು ವರವನ್ನು ಕೊಟ್ಟನು. ಋಷಿಗಳಿಗೆ ತೊಂದರೆಕೊಡುತ್ತಿದ್ದ ಬಲ್ವಲನೆಂಬ ರಾಕ್ಷಸನನ್ನು ಕೊಂದು ಸಂಪೂರ್ಣಭಾರತದ ತೀರ್ಥಯಾತ್ರೆಯನ್ನು ಮಾಡಿ, ಬಲರಾಮನು ಪುನಃ ನೈಮಿಷಾರಣ್ಯಕ್ಕೆ ಹಿಂದಿರುಗಿ ಅಲ್ಲಿ ಯಜ್ಞಮಾಡಿದನು.

ಮಾರ್ಗ :- ಉತ್ತರ ರೈಲ್ವೇಮಾರ್ಗದಲ್ಲಿ ಬಾಲಾಮಾಊ ಜಂಕ್ಷನ್ ಸಿಗುತ್ತದೆ. ಅಲ್ಲಿಂದ ನೈಮಿಷಾರಣ್ಯಕ್ಕೆ ರೈಲ್ವೇನಿಲ್ದಾಣವು 16 ಮೈಲಿಗಳ ದೂರದಲ್ಲಿದೆ. ಬಾಲಾಮಾಊ ಜಂಕ್ಷನ್‌ನಲ್ಲಿ ರೈಲು ಬದಲಾಯಿಸಿ ನೈಮಿಷಾರಣ್ಯಕ್ಕೆ ಹೋಗುವ ರೈಲಿನಲ್ಲಿ ಪ್ರಯಾಣಮಾಡಬೇಕು.

**ದರ್ಶನೀಯ ಸ್ಥಳಗಳು :-** ನೈಮಿಷಾರಣ್ಯ ರೈಲ್ವೇನಿಲ್ದಾಣದಿಂದ ಸುಮಾರು ಒಂದು ಮೈಲಿ ದೂರದಲ್ಲಿಯೇ 'ಚಕ್ರತೀರ್ಥ'ವಿದೆ. ಆ ಸರೋವರದ ಮಧ್ಯಭಾಗದಲ್ಲಿ ಗೋಳಾಕಾರವಾಗಿರುವ ಸ್ಥಳದಲ್ಲಿ ಯಾವಾಗಲೂ ನೀರು ಉಕ್ಕುತ್ತಿರುತ್ತದೆ. ಮಧ್ಯಭಾಗದ ಗೋಳಾಕಾರವಾಗಿರುವ ಸ್ಥಳದ ಹೊರಗಡೆ ಸ್ನಾನಮಾಡುವ ಸ್ಥಳವಿದೆ. ಅದೇ ನೈಮಿಷಾರಣ್ಯದ ಮುಖ್ಯತೀರ್ಥ. ಅದರ ದಂಡೆಯಲ್ಲಿ ಅನೇಕದೇವಾಲಯಗಳಿವೆ. ಭೂತನಾಥ ಮಹಾದೇವರ ಗುಡಿಯು ಅವುಗಳಲ್ಲಿ ಮುಖ್ಯವಾದುದು. ನೈಮಿಷಾರಣ್ಯದ ಪ್ರದಕ್ಷಿಣಾಮಾರ್ಗವು 168 ಮೈಲಿಗಳಷ್ಟಾಗುತ್ತದೆ. ಪ್ರತಿವರ್ಷ ಫಾಲ್ಗುನ ಅಮಾವಾಸ್ಯೆಯಂದು ಪ್ರಾರಂಭವಾಗಿ ಚಿತ್ರಾಪೂರ್ಣಿಮೆಗೆ ಆ ಪ್ರದಕ್ಷಿಣೆಯು ಮುಗಿಯುತ್ತದೆ. ಅದು ನೈಮಿಷಾರಣ್ಯದ ದೊಡ್ಡ ಅಥವಾ ಬಹಿರ್ವೇದೀ ಪ್ರದಕ್ಷಿಣೆ. ಚಿಕ್ಕ ಅಥವಾ ಅನ್ತರ್ವೇದೀಪ್ರದಕ್ಷಿಣೆಯು 3 ಮೈಲಿಗಳಷ್ಟಾಗುತ್ತದೆ. ಆ ಪ್ರದಕ್ಷಿಣೆಯಲ್ಲಿ ನೈಮಿಷಾರಣ್ಯದ ಎಲ್ಲ ತೀರ್ಥಗಳೂ ಬರುತ್ತವೆ. ತೀರ್ಥಗಳು ಕೆಳಕಂಡಂತೆ ಇವೆ.

1. ಚಕ್ರತೀರ್ಥ–ಇದರ ಬಗೆಗೆ ಮೊದಲೇ ಹೇಳಲಾಗಿದೆ. 2. ಪಂಚ ಪ್ರಯಾಗ–ಇದೊಂದು ಸರೋವರ. ಇದರ ದಡದಲ್ಲಿ 'ಅಕ್ಷಯವಟ' ವೆಂಬ ವೃಕ್ಷವಿದೆ. 3. ಲಲಿತಾದೇವಿಯ ಗುಡಿ–ಇದು ಇಲ್ಲಿಯ ಮುಖ್ಯಗುಡಿಗಳಲ್ಲಿ

ಒಂದಾಗಿದೆ. 4. ಗೋವರ್ಧನಮಹಾದೇವಮಂದಿರ, ಕ್ಷೇಮಕಾಯಾ ದೇವೀಮಂದಿರ. 6. ಜಾನಕೀಕುಂಡ. 7. ಹನುಮಾನ್‌ಜೀಮಂದಿರ. ಕಾಶಿ–ಇದು ಒಂದು ಸರೋವರದ ದಡದಲ್ಲಿದೆ. ಅನ್ನಪೂರ್ಣೆ ಮತ್ತು ವಿಶ್ವನಾಥರ ಗುಡಿಗಳಿವೆ. ಇಲ್ಲಿ ಪಿಂಡಪ್ರದಾನವನ್ನು ಮಾಡುತ್ತಾರೆ. 9. ಧರ್ಮರಾಜಮಂದಿರ. 10. ವ್ಯಾಸ-ಶುಕದೇವರ ಸ್ಥಾನ. ಒಂದು ಗುಡಿಯಲ್ಲಿ ಒಳಗಡೆ ಶುಕದೇವರ ಮತ್ತು ಹೊರಗಡೆ ವ್ಯಾಸರ ಪೀಠ (ಸನ್ನಿಧಿ) ಗಳಿವೆ. ಹತ್ತಿರವೇ ಮನು ಮತ್ತು ಶತರೂಪೆಯರ ಮಂಟಪಗಳಿವೆ. 11. ಬ್ರಹ್ಮಾವರ್ತ–ಒಂದು ಸರೋವರ. ಇದು ಈಗ ಒಣಗಿಹೋಗಿದೆ. 12. ಗಂಗೋತ್ತರೀ–ಒಣಗಿಹೋಗಿರುವ ಸರೋವರ ; ಮರಳಿನಿಂದ ತುಂಬಿದೆ. 13. ಪುಷ್ಕರಸರೋವರ. 14. ಗೋಮತೀನದಿ. 15. ದಶಾಶ್ವಮೇಧ–ಒಂದು ಗುಡ್ಡ. ಗುಡ್ಡದ ಮೇಲೆ ದೇವಾಲಯದಲ್ಲಿ ಶ್ರೀಕೃಷ್ಣ ಮತ್ತು ಪಾಂಡವರ ಮೂರ್ತಿಗಳಿವೆ. 16. ಪಾಂಡವಕಿಲಾ–ಒಂದು ಗುಡ್ಡ. ಇದರ ಮೇಲೆ ಗುಡಿಯಲ್ಲಿ ಶ್ರೀಕೃಷ್ಣನ ಮತ್ತು ಪಾಂಡವರ ಮೂರ್ತಿಗಳಿವೆ. 17. ಸೂತ ಜೀಯವರ ಸ್ಥಾನ–ಒಂದು ಮಂದಿರದಲ್ಲಿ ಸೂತರ ಪೀಠವಿದೆ. ಅಲ್ಲಿಯೇ ರಾಧಾ-ಕೃಷ್ಣರ ಮತ್ತು ಬಲರಾಮನ ಮೂರ್ತಿಗಳಿವೆ. 18. ಶ್ರೀರಾಮ ಮಂದಿರ–ಈ ಕ್ಷೇತ್ರದಲ್ಲಿ ಶ್ರೀನಾರದಾನಂದಜೀ ಮಹಾರಾಜರ ಆಶ್ರಮವೂ ಮತ್ತು ಒಂದು ಬ್ರಹ್ಮಚರ್ಯಾಶ್ರಮವೂ ಇವೆ. ಬ್ರಹ್ಮಚಾರಿಗಳಿಗೆ ಪ್ರಾಚೀನ ಪದ್ಧತಿಯಂತೆ ಶಿಕ್ಷಣ ಕೊಡಲ್ಪಡುತ್ತದೆ. ಆಧ್ಯಾತ್ಮಿಕಸಾಧನೆಯನ್ನು ಮಾಡು ತ್ತಿರುವ ಸಾಧಕರು ಇಲ್ಲಿ ನೆಲೆಸಿರುತ್ತಾರೆ.

ಕಲಿಯುಗದಲ್ಲಿ ಎಲ್ಲ ತೀರ್ಥಗಳೂ ನೈಮಿಷಾರಣ್ಯದಲ್ಲಿಯೇ ನೆಲೆಸಿವೆ ಎಂದು ಹೇಳುತ್ತಾರೆ.

**ರುದ್ರಾವರ್ತ :** ನೈಮಿಷಾರಣ್ಯ ರೈಲ್ವೇನಿಲ್ದಾಣದಿಂದ ಸುಮಾರು 3 ಮೈಲಿಗಳ ದೂರದಲ್ಲಿ ಕಾಡಿನಲ್ಲಿದೆ. ಈ ಕೊಳದಲ್ಲಿ ಬಿಲ್ವಪತ್ರೆಗಳು ಇತರೆ ಎಲೆಗಳಂತೆ ತೇಲದೇ ಮುಳುಗುತ್ತಿದ್ದುವೆಂದು ಹಿಂದೆ ಪ್ರತೀತಿಯಿದ್ದಿತು. ಆದರೆ ಈಗ ಹಾಗೇನೂ ಇಲ್ಲ. ಕಾಡಿನಲ್ಲಿ ಕಾಲುದಾರಿಯಲ್ಲಿ ಹೋಗ ಬೇಕಾಗುವುದರಿಂದ ಯಾರಾದರೂ ಮಾರ್ಗದರ್ಶಕರನ್ನು ಕರೆದುಕೊಂಡು ಹೋಗುವುದೊಳ್ಳೆಯದು.

**ಮಿಶ್ರಕತೀರ್ಥ :-** ನೈಮಿಷಾರಣ್ಯದಿಂದ 5 ಮೈಲಿಗಳ ದೂರದಲ್ಲಿ ಸೀತಾಪುರದಿಂದ ಹರದೋಯಿಗೆ ಹೋಗುವ ಮಾರ್ಗದಲ್ಲಿ, ಸೀತಾಪುರ ದಿಂದ 13 ಮೈಲಿಗಳ ದೂರದಲ್ಲಿದೆ. ಅಲ್ಲಿಯೇ ದಧೀಚಿಕುಂಡವಿದೆ. ದಧೀಚಿ ಮಹರ್ಷಿಗಳ ಆಶ್ರಮವು ಅಲ್ಲಿಯೇ ಇದ್ದಿತೆನ್ನುತ್ತಾರೆ. ದೇವತೆಗಳ ಪ್ರಾರ್ಥನೆ ಯಂತೆ ವಜ್ರಾಯುಧಕ್ಕಾಗಿ ತಮ್ಮ ಅಸ್ಥಿಗಳನ್ನು ದಧೀಚಿಮಹರ್ಷಿಗಳು ಇಲ್ಲಿಯೇ ಕೊಟ್ಟರು. ದಧೀಚಿಮಹರ್ಷಿಗಳ ಗುಡಿಯೂ ಅಲ್ಲಿದೆ. ದಧೀಚಿ ಕುಂಡದಲ್ಲಿ ಎಲ್ಲ ತೀರ್ಥಗಳ ಜಲವೂ ಮಿಶ್ರವಾಗಿದೆಯೆನ್ನುತ್ತಾರೆ.

**ಕಾನ್ಯಕುಬ್ಜ ಮತ್ತು ಅಶ್ವತೀರ್ಥ :-** ಮಹರ್ಷಿಗಳಾದ ಋಚೀಕರು ಅಲ್ಲಿಯ ರಾಜನಾದ ಗಾಧಿಯ ಮಗಳನ್ನು ಮದುವೆಯಾಗಲಿಚ್ಛಿಸಿದರು. ಗಾಧಿರಾಜನು ಕನ್ಯಾಶುಲ್ಕರೂಪವಾಗಿ ಕಪ್ಪುಕಿವಿಗಳಿರುವ ಒಂದು ಸಾವಿರ ಕುದುರೆಗಳನ್ನು ಬೇಡಿದನು. ಋಚೀಕರು ವರುಣನನ್ನು ಪ್ರಾರ್ಥಿಸಿ ಆ ಕುದುರೆಗಳನ್ನು ಅಲ್ಲಿಯೇ ಪ್ರಕಟಪಡಿಸಿದರು. ಗಾಧಿರಾಜನ ಪುತ್ರನೇ ವಿಶ್ವಾಮಿತ್ರನು. ಋಚೀಕರ ಪುತ್ರ ಜಮದಗ್ನಿ. ಪರಶುರಾಮನೇ ಜಮದಗ್ನಿಯ ಪುತ್ರನು. ಇಲ್ಲಿ ಗೌರೀಶಂಕರ, ಕ್ಷೇಮಕರೀದೇವಿ, ಫೂಲಮತೀದೇವೀ ಮತ್ತು ಸಿಂಹವಾಹಿನೀದೇವಿಯರ ಗುಡಿಗಳಿವೆ. ಹಿಂದೆ ಕಾನ್ಯಕುಬ್ಜವು (ಕನ್ನೌಜ್) ಬಹಳ ವೈಭವಪೂರ್ಣವಾದ ನಗರವಾಗಿತ್ತು. ಗಂಗೆಯು ಅದರ ಹತ್ತಿರವೇ ಪ್ರವಹಿಸುತ್ತಿತ್ತು. ಆದರೆ ಈಗ ಗಂಗಾನದಿಯು ನಗರದಿಂದ ಸುಮಾರು 4 ಮೈಲಿಗಳ ದೂರದಲ್ಲಿ ಪ್ರವಹಿಸುತ್ತದೆ. ಕನ್ನೌಜ್‌ನಲ್ಲಿ ಕೆಲವು ಹಳೆಯ ಅವಶೇಷಗಳು ಮಾತ್ರ ನೋಡಲು ಸಿಗುತ್ತವೆ.

**ಮಾರ್ಗ :-** ಕಾನ್‌ಪುರ-ಫರೂಖಾಬಾದ್ ರೈಲ್ವೇಮಾರ್ಗದಲ್ಲಿ, ಕಾನ್‌ಪುರದಿಂದ 50 ಮೈಲಿಗಳ ದೂರದಲ್ಲಿರುವ ರೈಲ್ವೇನಿಲ್ದಾಣ.

**ಖೇರೇಶ್ವರ್ ಮಹಾದೇವ :-** ಕನ್ನೌಜ್‌ನ ದಕ್ಷಿಣಪೂರ್ವಕ್ಕೆ 38 ಮೈಲಿ ಗಳ ದೂರದಲ್ಲಿ, ಕಾನ್‌ಪುರದಿಂದ 12 ಮೈಲಿಗಳ ದೂರದಲ್ಲಿ ಮಂಧನಾ ರೈಲ್ವೇನಿಲ್ದಾಣವಿದೆ. ಅಲ್ಲಿಂದ 10 ಮೈಲಿಗಳ ದೂರದಲ್ಲಿ ರಾಜಾಪುರ ರೈಲ್ವೇ ನಿಲ್ದಾಣವಿದೆ. ರಾಜಾಪುರದಿಂದ 2 ಮೈಲಿಗಳ ದೂರದಲ್ಲಿ ಖೇರೇಶ್ವರಮಹಾ ದೇವನ ಗುಡಿಯಿದೆ. ಅದನ್ನು ಘೇರೇಶ್ವರಮಂದಿರವೆಂದೂ ಕರೆಯುತ್ತಾರೆ.

ಅದರ ಹತ್ತಿರವೇ ಅಶ್ವತ್ಥಾಮನ ಸ್ಥಾನವಿದೆ. ಖೇರೇಶ್ವರಮಹಾದೇವಲಿಂಗವು ಅಶ್ವತ್ಥಾಮನಿಂದ ಪ್ರತಿಷ್ಠೆಮಾಡಲ್ಪಟ್ಟಿದೆಯೆನ್ನುತ್ತಾರೆ. ಅಲ್ಲಿಯೇ ಒಂದು ಚತುರ್ಮುಖಶಿವಲಿಂಗವೂ ಸ್ಥಾಪಿತವಾಗಿದೆ. ಶಿವರಾತ್ರಿಯಂದು ಅಲ್ಲಿ ಜಾತ್ರೆಯಾಗುತ್ತದೆ.

**ಬಿಠೂರು :-** ಮಂಧನಾ ರೈಲ್ವೇನಿಲ್ದಾಣದಿಂದ ಬಿಠೂರಿಗೆ ಒಂದು ರೈಲ್ವೇಮಾರ್ಗವಿದೆ. ಬಿಠೂರು ರೈಲ್ವೇನಿಲ್ದಾಣದಿಂದ ಹೊರಟರೆ ಮೊದಲು ಹೊಸ ಊರು ಸಿಗುತ್ತದೆ. ಅನಂತರ ಬಿಠೂರಿನ ಹಳೆಯ ಊರು ಸಿಗುತ್ತದೆ. ಬಿಠೂರಿನಲ್ಲಿ ಗಂಗೆಯ ದಡದಲ್ಲಿ ಅನೇಕ ಘಟ್ಟಗಳಿವೆ. ಅವುಗಳಲ್ಲಿ ಮುಖ್ಯ ವಾದುದು ಬ್ರಹ್ಮಘಟ್ಟ. ಅಲ್ಲಿ ಅನೇಕದೇವಾಲಯಗಳಿವೆ. ಅವುಗಳಲ್ಲಿ ಮುಖ್ಯವಾದುದು ವಾಲ್ಮೀಕೇಶ್ವರ ಮಹಾದೇವನದು. ಗಂಗೆಯ ಘಟ್ಟದ ಸೋಪಾನದ ಮೇಲೆ ಸುಮಾರು 1 ಅಡಿ ಎತ್ತರದ ಒಂದು ಗೂಟವಿದೆ. ಅದನ್ನು ಬ್ರಹ್ಮಗೂಟವೆಂದು ಕರೆಯುತ್ತಾರೆ. ಪ್ರತಿವರ್ಷ ಕಾರ್ತಿಕಪೂರ್ಣಿಮೆ ಯಲ್ಲಿ ಜಾತ್ರೆ ನೆರೆಯುತ್ತದೆ. ಕೆಲವರು ಅದನ್ನು ಸ್ವಾಯಂಭುವಮನುವಿನ ರಾಜಧಾನಿಯೆಂದೂ, ಧ್ರುವನು ಅಲ್ಲಿಯೇ ಹುಟ್ಟಿದನೆಂದೂ ತಿಳಿಯುತ್ತಾರೆ.

**ವಾಲ್ಮೀಕಿಯ ಆಶ್ರಮ :–** ಬಿಠೂರಿನಿಂದ 6 ಮೈಲಿಗಳ ದೂರದಲ್ಲಿ, ಗಂಗೆಯಿಂದ 1 ಮೈಲಿಗಳ ದೂರದಲ್ಲಿ ಪೈಲಾರುದ್ರಪುರ ಗ್ರಾಮವಿದೆ. ಅದರ ಪುರಾತನ ಹೆಸರು 'ದ್ವೈಲವ' ಎಂದು ಹೇಳುತ್ತಾರೆ. ವಾಲ್ಮೀಕಿ ಮಹರ್ಷಿಯ ಜನ್ಮಸ್ಥಳವೇ ಅದೆಂಬುದು ಅಲ್ಲಿನ ಕೆಲವರ ಮತ. ಅಲ್ಲಿ ಪ್ರಾಚೀನವಾದ ವಾಲ್ಮೀಕಿಕೂಪವೊಂದಿದೆ. ಸೀತಾದೇವಿಯ ದ್ವಿತೀಯವನವಾಸವು ಅಲ್ಲಿಯೇ ಆಯಿತು ಮತ್ತು ಲವ-ಕುಶರ ಜನನ, ವಾಲ್ಮೀಕಿರಾಮಾಯಣದ ರಚನೆಯೂ ಅಲ್ಲಿಯೇ ಆಯಿತು–ಎಂಬುದು ಅಲ್ಲಿನ ಜನಗಳ ಮತ.

**ಬಾಹುದಾ :-** ಕೆಲವು ಆಧುನಿಕವಿಚಾರಕರು ಅವಧಪ್ರಾಂತದ ಧವಲಾ ಅಥವಾ ಧುಮೇಲಾನದಿಯೇ ಬಾಹುದಾ ಎನ್ನುತ್ತಾರೆ. ಅದು ರಾಪ್ತಿಯ ಉಪನದಿ.

## ಪ್ರಯಾಗ

ಬ್ರಾಹ್ಮೀನಪುತ್ರೀ ತ್ರಿಪಥಾಸ್ತ್ರಿವೇಣೀ
ಸಮಾಗಮೇನಾಕ್ಷತಯೋಗಮಾತ್ರಾನ್ ।
ಯತ್ರಾಪ್ಲುತಾನ್ ಬ್ರಹ್ಮಪದಂ ನಯನ್ತಿ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥

ಶ್ಯಾಮೋ ವಟೋಽಶ್ಯಾಮಗುಣಂ ವೃಣೋತಿ
ಸ್ವಚ್ಛಾಯಯಾ ಶ್ಯಾಮಲಯಾ ಜನಾನಾಮ್ ।
ಶ್ಯಾಮಃ ಶ್ರಮಂ ಕೃನ್ತತಿ ಯತ್ರ ದೃಷ್ಟಃ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥

(ಪದ್ಮಪುರಾಣ, ಉತ್ತರಖಂಡ, ೨೩ : ೩೪, ೩೫)

"ಸರಸ್ವತೀ, ಗಂಗಾ ಮತ್ತು ಯಮುನೆಯರ ಸಂಗಮವು ಎಲ್ಲಿ ಆಗುವುದೋ, ಎಲ್ಲಿ ಸ್ನಾನಮಾಡುವುದರಿಂದ ಬ್ರಹ್ಮಪದವು ಪ್ರಾಪ್ತವಾಗುವುದೋ–ಅಂತಹ ತೀರ್ಥರಾಜನಾದ ಪ್ರಯಾಗವು ಸರ್ವೋತ್ಕೃಷ್ಟವಾಗಿದೆ.

ಎಲ್ಲಿ ಶ್ಯಾಮಲವಾದ ಅಕ್ಷಯವಟವು ತನ್ನ ನೆರಳಿನಿಂದ ಮನುಷ್ಯರಿಗೆ ಸತ್ತ್ವಗುಣವನ್ನೇ ಪ್ರದಾನಮಾಡುತ್ತದೆಯೋ, ಎಲ್ಲಿ ಭಗವಾನ್ ಮಾಧವನು ತನ್ನನ್ನು ದರ್ಶನಮಾಡುವವರ ಪಾಪ-ತಾಪಗಳನ್ನು ಕತ್ತರಿಸಿಹಾಕುತ್ತಾನೆಯೋ–ಅಂತಹ ತೀರ್ಥರಾಜನಾದ ಪ್ರಯಾಗವು ಸರ್ವೋತ್ಕೃಷ್ಟವಾಗಿದೆ."

ಮೇಲೆ ಹೇಳಿರುವ ಸ್ತೋತ್ರವು

"ಸಿತಾಸಿತೇ ಸರಿತೇ ಯತ್ರ ಸಂಗತೇ ತತ್ರಾಪ್ಲುತಾಸೋ
ದಿವಮುತ್ಪತನ್ತಿ"

ಎಂಬ ಋಗ್ವೇದದ ಋಕ್ಕಿನ ಮತ್ತು ಮಹಾಭಾರತದಲ್ಲಿರುವ ಶ್ಲೋಕದ ಉಪಬೃಂಹಣವಾಗಿದೆ.

ಪ್ರಕೃಷ್ಟಂ ಸರ್ವಯಾಗೇಭ್ಯಃ ಪ್ರಯಾಗ ಇತಿ ಉಚ್ಯತೇ ।

"ಸೃಷ್ಟಿಯ ಆದಿಯಲ್ಲಿ ಬ್ರಹ್ಮನು ಇಲ್ಲಿ ಪ್ರಕೃಷ್ಟ (ಶ್ರೇಷ್ಠ) ವಾದ

ಯಜ್ಞವನ್ನು ಮಾಡಿದುದರಿಂದ 'ಪ್ರಯಾಗ'ವೆಂದು ಹೆಸರಾಯಿತು." ಇದು ಸ್ಕಾಂದಪುರಾಣವಚನ. ಪದ್ಮಪುರಾಣದಲ್ಲಿ ಪ್ರಯಾಗದ ಮಾಹಾತ್ಮ್ಯವು ಹೀಗೆ ವರ್ಣಿಸಲ್ಪಟ್ಟಿದೆ.

**ಗ್ರಹಾಣಾಂ ಚ ಯಥಾ ಸೂರ್ಯೋ ನಕ್ಷತ್ರಾಣಾಂ ಯಥಾ ಶಶೀ ।**
**ತೀರ್ಥಾನಾಮುತ್ತಮಂ ತೀರ್ಥಂ ಪ್ರಯಾಗಾಖ್ಯಮನುತ್ತಮಮ್ ॥**
**ಯತ್ರ ವಟಸ್ಯಾಕ್ಷಯಸ್ಯ ದರ್ಶನಂ ಕುರುತೇ ನರಃ ।**
**ತೇನ ದರ್ಶನಮಾತ್ರೇಣ ಬ್ರಹ್ಮಹತ್ಯಾ ವಿನಶ್ಯತಿ ॥**

**ಆದಿವಟಃ ಸಮಾಖ್ಯಾತಃ ಕಲ್ಪಾನ್ತೇಽಪಿ ಚ ದೃಶ್ಯತೇ ।**
**ಶೇತೇ ವಿಷ್ಣುರ್ಯಸ್ಯ ಪತ್ರೇ ಅತೋಽಯಮವ್ಯಯಃ ಸ್ಮೃತಃ ॥**

**ಮಾಧವಾಖ್ಯಸ್ತತ್ರ ದೇವಃ ಸುಖಂ ತಿಷ್ಠತಿ ನಿತ್ಯಶಃ ।**
**ತಸ್ಯ ವೈ ದರ್ಶನಂ ಕಾರ್ಯಂ ಮಹಾಪಾಪೈಃ ಪ್ರಮುಚ್ಯತೇ ॥**

**ಗೋಘ್ನೋ ವಾಪಿ ಚ ಚಾಂಡಾಲೋ ದುಷ್ಟೋ ವಾ ದುಷ್ಟಚೇತನಃ ।**
**ಬಾಲಘಾತೀ ತಥಾವಿದ್ವಾನ್ ಮ್ರಿಯತೇ ತತ್ರ ವೈ ಯಥಾ ॥**

**ಸ ವೈ ಚತುರ್ಭುಜೋ ಭೂತ್ವಾ ವೈಕುಂಠೇ ವಸತೇ ಚಿರಮ್ ।**
**ಪ್ರಯಾಗೇ ತು ನರೋ ಯಸ್ತು ಮಾಘಸ್ನಾನಂ ಕರೋತಿ ಚ ।**
**ನ ತಸ್ಯ ಫಲಸಂಖ್ಯಾಸ್ತಿ ಶೃಣು ದೇವರ್ಷಿಸತ್ತಮ ॥**

"ಗ್ರಹಗಳಲ್ಲಿ ಸೂರ್ಯನಂತೆಯೂ, ನಕ್ಷತ್ರಗಳ ಮಧ್ಯದಲ್ಲಿ ಚಂದ್ರನಂತೆಯೂ–ತೀರ್ಥಗಳಲ್ಲಿ ಪ್ರಯಾಗವು ಶ್ರೇಷ್ಠವೆನಿಸಿಕೊಂಡಿದೆ. ಯಾವ ಮನುಷ್ಯನು ಇಲ್ಲಿರುವ ಅಕ್ಷಯವಟವನ್ನು ಸಂದರ್ಶಿಸುತ್ತಾನೆಯೋ–ಅವನು ದರ್ಶನಮಾತ್ರದಿಂದಲೇ ಬ್ರಹ್ಮಹತ್ಯಾದಿ ಪಾತಕಗಳನ್ನು ಕಳೆದುಕೊಳ್ಳುತ್ತಾನೆ. ಈ ವಟವೃಕ್ಷವು 'ಆದಿವಟ' ಎಂದು ಕರೆಯಲ್ಪಡುತ್ತದೆ. ಕಲ್ಪಾಂತರದಲ್ಲಿಯೂ ಇದು ನೋಡಸಿಗುತ್ತದೆ. ಈ ವೃಕ್ಷದ ಎಲೆಯ ಮೇಲೆಯೇ ಭಗವಾನ್ ಮಹಾವಿಷ್ಣುವು ಶಯನಿಸಿರುತ್ತಾನೆ. (ವಟಪತ್ರಶಾಯೀ.) ಆದುದರಿಂದಲೇ ಈ ವಟವೃಕ್ಷವು ಅವ್ಯಯವೆಂದು ತಿಳಿಯಲ್ಪಡುತ್ತದೆ.

ಇಲ್ಲಿ ಭಗವಂತನು ಮಾಧವನೆಂಬ ಹೆಸರಿನಿಂದ ನಿತ್ಯವಿರಾಜಮಾನನಾಗಿದ್ದಾನೆ. ಇಲ್ಲಿನ ಭಗವಂತನ ದರ್ಶನಮಾತ್ರದಿಂದಲೇ ಮನುಷ್ಯನು ಸಕಲ

ಪಾಪಗಳಿಂದಲೂ ಮುಕ್ತನಾಗುತ್ತಾನೆ. ಗೋಹತ್ಯೆಯನ್ನು ಮಾಡಿದವನೂ, ಚಾಂಡಾಲನೂ, ಶಠನೂ, ದುಷ್ಟಚಿತ್ತನೂ, ಬಾಲಘಾತಿಯೂ, ಮೂರ್ಖನೂ–ಎಂತಹವನೇ ಆಗಲೀ–ಈ ಕ್ಷೇತ್ರದಲ್ಲಿ ಮರಣಹೊಂದಿದರೆ ಅಂತಹವನು ಚತುರ್ಭುಜಯುಕ್ತನಾಗಿ ವೈಕುಂಠಲೋಕದಲ್ಲಿ ಚಿರಕಾಲ ವಾಸಮಾಡುತ್ತಾನೆ. (ಸಾರೂಪ್ಯಮುಕ್ತಿಯನ್ನು ಹೊಂದುತ್ತಾನೆ.)

ದೇವರ್ಷಿಯೇ! ಪ್ರಯಾಗದಲ್ಲಿ ಮಾಘಮಾಸದಲ್ಲಿ ಸ್ನಾನಮಾಡಿದವನ ಪುಣ್ಯವು ಎಣಿಕೆಗೆ ನಿಲುಕದಂತಹುದು.” (ಪದ್ಮಪುರಾಣ ಉತ್ತರಖಂಡ)

ಮಹಾಭಾರತದ ವನಪರ್ವ, ಮತ್ಸ್ಯ, ಕೂರ್ಮ, ಅಗ್ನಿ, ಪದ್ಮ ಮತ್ತು ಗರುಡಪುರಾಣಗಳಲ್ಲಿಯೂ–ಪ್ರಯಾಗಮಾಹಾತ್ಮ್ಯಶತಾಧ್ಯಾಯೀ ಎಂಬ ಗ್ರಂಥದಲ್ಲಿಯೂ ಈ ಕ್ಷೇತ್ರದ ಮಾಹಾತ್ಮ್ಯವು ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ.

ಪ್ರಯಾಗವು ‘ತೀರ್ಥರಾಜ’ ವೆಂದು ಕರೆಯಲ್ಪಡುತ್ತದೆ. ಸಮಸ್ತ ತೀರ್ಥಗಳ ಅಧಿಪತಿಯೇ ಪ್ರಯಾಗ. **“ಅಯೋಧ್ಯಾ ಮಥುರಾ ಮಾಯಾ ಕಾಶಿ ಕಾಂಚೀ ಹ್ಯವನ್ತಿಕಾ । ಪುರೀ ದ್ವಾರಾವತೀ ಜ್ಞೇಯಾ ಸಪ್ತೈತಾ ಮೋಕ್ಷದಾಯಿನಃ ॥”**ಮೇಲಿನ ಶ್ಲೋಕದಲ್ಲಿ ಉಕ್ತವಾಗಿರುವ ಏಳು ಪುರಿಗಳೂ ಪ್ರಯಾಗದ ರಾಣಿಯರೆಂದು ಕರೆಯಲ್ಪಡುತ್ತಾರೆ. ಗಂಗಾ-ಯಮುನೆಯರ ಧಾರೆಯು ಸಂಪೂರ್ಣಪ್ರಯಾಗಕ್ಷೇತ್ರವನ್ನು ಪವಿತ್ರವಾದ ಮೂರು ಭಾಗಗಳನ್ನಾಗಿ ವಿಭಜಿಸುತ್ತದೆ. ಮೂರು ಭಾಗಗಳೂ ಅಗ್ನಿಯುಕ್ತವಾದ ಯಜ್ಞವೇದಿಗಳೆಂದು ತಿಳಿಯಲ್ಪಡುತ್ತವೆ. ಅವುಗಳಲ್ಲಿ ಗಂಗಾ-ಯಮುನೆಯರ ಮಧ್ಯದಲ್ಲಿರುವ ಭಾಗವು ‘ಗಾರ್ಹಪತ್ಯಾಗ್ನಿ’ ಯೆಂದೂ, ಗಂಗೆಯ ಕಡೆಗಿರುವ ಭಾಗವು (ಪ್ರತಿಷ್ಠಾನಪುರ-ಝೂಸಿ) ‘ಆಹವನೀಯಾಗ್ನಿ’ ಯೆಂದೂ ಯಮುನೆಯ ಕಡೆಗಿರುವ ಭಾಗವು (ಅಲರ್ಕಪುರ-ಅರೈಲ್) ‘ದಕ್ಷಿಣಾಗ್ನಿ’ ಯೆಂತಲೂ ತಿಳಿಯಲ್ಪಡುತ್ತವೆ. ಆಯಾ ಭಾಗಗಳಲ್ಲಿ ಪರಿಶುದ್ಧರಾಗಿ ಒಂದೊಂದು ರಾತ್ರಿ ವಾಸಮಾಡುವುದರಿಂದ ಆಯಾ ಅಗ್ನಿಗಳ ಉಪಾಸನಾಫಲವು ಪ್ರಾಪ್ತವಾಗುತ್ತದೆ.

ಪ್ರಯಾಗದಲ್ಲಿ ಪ್ರತಿಮಾಘಮಾಸದಲ್ಲೂ ಜಾತ್ರೆಯು ನೆರೆಯುತ್ತದೆ. ಇದನ್ನು ಕಲ್ಪವಾಸವೆಂದು ಕರೆಯುತ್ತಾರೆ. ಬಹಳ ಜನ ಶ್ರದ್ಧಾಳುಗಳು

ಪ್ರತಿವರ್ಷವೂ ಗಂಗೆ-ಯಮುನೆಯರ ಮಧ್ಯದಲ್ಲಿ 'ಕಲ್ಪವಾಸ' ಮಾಡುತ್ತಾರೆ. ಸೌರಮಕರಸಂಕ್ರಾಂತಿಯಿಂದ ಕುಂಭಸಂಕ್ರಾಂತಿಯವರೆಗೆ 'ಕಲ್ಪವಾಸ' ವೆಂದು ಕೆಲವರು ತಿಳಿಯುತ್ತಾರೆ. ಮತ್ತೆ ಕೆಲವರು ಚಾಂದ್ರಮಾನದ ಮಾಘಮಾಸ ಪೂರ್ಣ 'ಕಲ್ಪವಾಸ' ವೆಂದು ತಿಳಿಯುತ್ತಾರೆ. ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ಗುರುವು ವೃಷಭರಾಶಿಯಲ್ಲೂ ಸೂರ್ಯನು ಮಕರರಾಶಿಯಲ್ಲೂ ಇರುವಾಗ 'ಕುಂಭಪರ್ವ' ಅಥವಾ 'ಕುಂಭಮೇಲಾ' ಆಚರಿಸಲ್ಪಡುತ್ತದೆ. ಆಗ ಲಕ್ಷಾಂತರ ಜನ ಯಾತ್ರಿಕರು ಪ್ರಯಾಗದಲ್ಲಿ ನೆರೆಯುತ್ತಾರೆ. ಕುಂಭಪರ್ವದ ಆರು ವರ್ಷಗಳ ನಂತರ 'ಅರ್ಧಕುಂಭೀ' ಜಾತ್ರೆಯು ನೆರೆಯುತ್ತದೆ. ಆ ಸಮಯದಲ್ಲಿಯೂ ಮಾಘದಲ್ಲಿ ದೊಡ್ಡ ಜಾತ್ರೆ ನೆರೆಯುತ್ತದೆ. ಸಾಮ್ರಾಟ್ ಹರ್ಷವರ್ಧನನು ಐದು ವರ್ಷಗಳಿಗೊಮ್ಮೆ (ಎಂದರೆ ಐದೈದು ವರ್ಷಗಳ ಅಂತರದಿಂದ ಕುಂಭ ಮತ್ತು ಅರ್ಧಕುಂಭಗಳ ಸಮಯದಲ್ಲಿ) ಧರ್ಮಸಮ್ಮೇಳನಗಳನ್ನು ಕೂಡಿಸಿ ತನ್ನ ಸರ್ವಸ್ವವನ್ನೂ ದಾನಮಾಡುತ್ತಿದ್ದನೆಂದು ಇತಿಹಾಸದಲ್ಲಿ ಪ್ರಸಿದ್ಧವಾಗಿದೆ.

ಮಾರ್ಗ :- ಪ್ರಯಾಗವು ಎಲ್ಲ ಭಾಗಗಳಿಗೂ ಕೇಂದ್ರಸ್ಥಾನದಲ್ಲಿದೆ. ಇಲ್ಲಿಯ ರೈಲ್ವೇ ನಿಲ್ದಾಣಗಳು ಈ ರೀತಿ ಇವೆ : ಅಲಹಾಬಾದ್, ನೈನೀ, ಪ್ರಯಾಗ್, ಅಲಹಾಬಾದ್ ಸಿಟಿ, ಐಜಟ್ ಬ್ರಿಜ್ ಮತ್ತು ಝೂಸಿ. ಇವುಗಳಲ್ಲಿ ಅಲಹಾಬಾದ್ ನಿಲ್ದಾಣವು ಮುಖ್ಯ ಜಂಕ್ಷನ್ ಆಗಿದೆ. ಅಲ್ಲಿಯೇ ಉತ್ತರ ಮತ್ತು ಮಧ್ಯ ರೈಲ್ವೇ ಮಾರ್ಗಗಳಿವೆ. ಮುಂಬೈ-ಜಬಲ್‌ಪುರದ ಕಡೆಯಿಂದ ಬರುವವರು ನೈನೀ ನಿಲ್ದಾಣದಲ್ಲಿ ಇಳಿಯುತ್ತಾರೆ. ಆದರೆ ಹೆಚ್ಚು ಮಂದಿ ಅಲಹಾಬಾದ್ ನಿಲ್ದಾಣದಲ್ಲಿಯೇ ಇಳಿಯುತ್ತಾರೆ. ನೈನೀ ನಿಲ್ದಾಣವು ಅಲಹಾಬಾದ್ ನಿಲ್ದಾಣದಿಂದ ನಾಲ್ಕು ಮೈಲಿಗಳ ದೂರದಲ್ಲಿ ಯಮುನೆಯ ಆಚೆಯ ದಡದಲ್ಲಿದೆ. ಅಲ್ಲಿಂದ ಸಂಗಮವು ಮೂರು ಮೈಲಿಗಳಷ್ಟಾಗು ವುದು. ಆದರೆ ರಸ್ತೆಯು ಅಷ್ಟು ಚೆನ್ನಾಗಿಲ್ಲ. ಅಲಹಾಬಾದ್ ನಿಲ್ದಾಣದಿಂದ ಪೂರ್ವ ರೈಲ್ವೇಗಾಡಿಯಲ್ಲಿ ಅಯೋಧ್ಯಾ-ಫೈಜಾಬಾದ್ ಕಡೆಗೆ ಎರಡು ಮೈಲಿಗಳ ದೂರದಲ್ಲಿ ಪ್ರಯಾಗ ರೈಲ್ವೇನಿಲ್ದಾಣ ಸಿಗುತ್ತದೆ. ನಗರದ ಮಧ್ಯದಲ್ಲಿ ಪೂರ್ವೋತ್ತರ ರೈಲ್ವೆಯ ಅಲಹಾಬಾದ್ ಸಿಟಿ (ರಾಮಬಾಗ್) ನಿಲ್ದಾಣವಿದೆ. ಇವುಗಳಲ್ಲದೇ ಪ್ರಯಾಗಘಾಟ್ ನಿಲ್ದಾಣ, ತ್ರಿವೇಣಿಸಂಗಮ್

ನಿಲ್ದಾಣಗಳಿವೆ. ಆದರೆ ಅವು ಮಾಘಮಾಸದಲ್ಲಿ ಮಾತ್ರ ಕೆಲಸಮಾಡುತ್ತವೆ. ಮಾಘಮಾಸದಲ್ಲಿ ಪ್ರಯಾಗ ನಿಲ್ದಾಣದಿಂದ ಪ್ರಯಾಗಘಾಟ್ ನಿಲ್ದಾಣದ ವರೆಗೆ ಮತ್ತು ಅಲಹಾಬಾದ್ ಜಂಕ್ಷನ್‌ನಿಂದ ತ್ರಿವೇಣೀಸಂಗಮದ ನಿಲ್ದಾಣದ ವರೆಗೆ ರೈಲುಗಳು ಓಡುತ್ತವೆ.

ಅಲಹಾಬಾದ್ ನಿಲ್ದಾಣದಿಂದ ತ್ರಿವೇಣೀಸಂಗಮವು ಸುಮಾರು ನಾಲ್ಕು ಮೈಲಿಗಳಷ್ಟು ದೂರವಿದೆ.

**ತಂಗುದಾಣಗಳು :-** ಪ್ರಯಾಗದಲ್ಲಿ ಇಳಿದುಕೊಳ್ಳಲು ಅನೇಕಸ್ಥಳ ಗಳಿವೆ. ನೈನೀ, ಝೂಸಿಗಳಲ್ಲಿ ಧರ್ಮಛತ್ರಗಳಿವೆ. ಅವುಗಳಲ್ಲದೇ ಅನೇಕ ಮಠಗಳೂ, ಸಂಸ್ಥೆಗಳೂ ಇವೆ. ಅನೇಕ ಹೋಟೆಲುಗಳಿವೆ. ಕೆಲವು ಧರ್ಮಶಾಲೆಗಳ ಹೆಸರುಗಳು ಕೆಳಕಂಡಂತೆ ಇವೆ.

1. ಬಿಹಾರಿಲಾಲ್ ಕುಂಜಿಲಾಲ್ ಸಿಂಹಾನಿಯಾ ಧರ್ಮಶಾಲಾ ; ಅಲಹಾಬಾದ್ ಜಂಕ್ಷನ್ ಹತ್ತಿರ.

2. ತೇಜಪಾಲ್ ಗೋಕುಲ್‌ದಾಸ್ ಧರ್ಮಶಾಲಾ ; ಯಮುನಾ ಸೇತುವೆಯ ಹತ್ತಿರ.

3. ಗೋಮತೀ-ಬೀಬೀರಾಣಿ ಫೂಲಪುರ ಧರ್ಮಶಾಲಾ ; ಮುಟ್ಠೀ ಗಂಜ್.

4. ಬಾಬಾವಂಶೀಧರ್ ಗೋಪಾಲ್ ರಸ್ತೋಗಿ ಧರ್ಮಶಾಲಾ ; ದಾರಾಗಂಜ್.

5. ಚಮೇಲೀದೇವೀ ಧರ್ಮಶಾಲಾ ; ದಾರಾಗಂಜ್.

6. ದುಲಾರೀದೇವೀ ಧರ್ಮಶಾಲಾ ; ಘಂಟಾಘರ್ ಹತ್ತಿರ.

7. ಬುದ್ಧಸೇನ ಧರ್ಮಶಾಲಾ ; ದಾರಾಗಂಜ್.

ಪ್ರಯಾಗದಲ್ಲಿ ಮಾಡಬೇಕಾದ ಮುಖ್ಯಕರ್ಮಗಳು.

**ಪ್ರಥಮೇ ಮುಂಡನಂ ಕಾರ್ಯಂ ದ್ವಿತೀಯೇ ಶ್ರಾದ್ಧಮಾಚರೇತ್ ।**
**ತೃತೀಯೇ ವೇಣಿಕಾದಾನಂ ಚತುರ್ಥೇ ತೀರ್ಥಮಾಹರೇತ್ ॥**

ತೀರ್ಥಗಳಲ್ಲಿ ಉಪವಾಸ, ಜಪ, ದಾನ, ಪೂಜಾ-ಪಾರಾಯಣಾದಿ ಗಳನ್ನು ಮಾಡುವುದು ಬಹಳ ಶ್ರೇಷ್ಠ. ಇವುಗಳು ಎಲ್ಲ ತೀರ್ಥಕ್ಷೇತ್ರ

ಗಳಲ್ಲಿಯೂ ಮಾಡತಕ್ಕುವುಗಳೇ. ಆದರೆ ಒಂದೊಂದು ಕ್ಷೇತ್ರಕ್ಕೂ ಒಂದೊಂದು ವಿಶೇಷ ಮಹಿಮೆಯಿದ್ದಂತೆ, ಅಲ್ಲಲ್ಲಿ ಮಾಡಬೇಕಾದ ವಿಶೇಷ ಕರ್ಮಗಳೂ ಇವೆ. ಪ್ರಯಾಗದಲ್ಲಿ 'ಮುಂಡನ'ವು ಮುಖ್ಯಕರ್ಮ. ಅನ್ಯ ತೀರ್ಥಗಳಲ್ಲಿ (ತಿರುಮಲೆ [ತಿರುಪತಿ] ಯಂತಹ ಕೆಲವನ್ನು ಬಿಟ್ಟು) ಕ್ಷೌರಕರ್ಮವು ವಿಧಿಸಲ್ಪಟ್ಟಿದೆ. ತ್ರಿವೇಣೀಸಂಗಮದ ಹತ್ತಿರ ನಿರ್ದಿಷ್ಟ ಸ್ಥಾನದಲ್ಲಿ ಮುಂಡನಮಾಡಲ್ಪಡುತ್ತದೆ. ವಿಧವಾಸ್ತ್ರೀಯರೂ ಮುಂಡನ ಮಾಡಿಸಿಕೊಳ್ಳುತ್ತಾರೆ. ಸುಮಂಗಲಿಯರಿಗೆ ವೇಣೀದಾನವಿಧಿಯಿದೆ. ಸುಮಂಗಲಿಯರು ಪತಿಸಹಿತರಾಗಿ ತ್ರಿವೇಣೀಸಂಗಮದ ತೀರದಲ್ಲಿ ವೇಣೀ ದಾನದ ಸಂಕಲ್ಪಮಾಡಿ, ಅರಶಿನವನ್ನು ಹಚ್ಚಿಕೊಂಡು ತ್ರಿವೇಣಿಯಲ್ಲಿ ಸ್ನಾನಮಾಡಿ, ಅನಂತರ ಪತಿಯಿಂದ 'ವೇಣೀದಾನ'ಕ್ಕಾಗಿ ಅನುಜ್ಞೆಯನ್ನು ಪಡೆಯಬೇಕು. ಸ್ನಾನದ ಸಮಯದಲ್ಲಿ ತಲೆಗೂದಲನ್ನು ಜಡೆಹಾಕಿ ಹೆಣೆದುಕೊಂಡಿರಬೇಕು. ವೇಣಿದಾನಕ್ಕೆ ಅನುಜ್ಞೆಯನ್ನು ಕೊಟ್ಟನಂತರ ಪತಿಯು ಪತ್ನಿಯ ಹೆರಳಿನ (ಜಡೆಯ) ತುದಿಗೆ ಮಂಗಲದ್ರವ್ಯವನ್ನು ಕಟ್ಟಿ, ಕತ್ತರಿಯಿಂದ ಅಥವಾ ಚಾಕುವಿನಿಂದ ಜಡೆಯ ತುದಿಯನ್ನು ಕಟ್ಟಿರುವ ಮಂಗಲದ್ರವ್ಯದ ಸಮೇತ ಕತ್ತರಿಸಿ ಪತ್ನಿಯ ಕೈಯ್ಯಲ್ಲಿ ಕೊಡಬೇಕು. ಪತ್ನಿಯು ಆ ಎಲ್ಲವನ್ನೂ ತ್ರಿವೇಣಿಯಲ್ಲಿ ವಿಸರ್ಜಿಸಬೇಕು. ಅನಂತರ ಪುನಃ ಸ್ನಾನಮಾಡಬೇಕು.

**ತ್ರಿವೇಣೀಸ್ನಾನ :-** ಮುಂಡನದನಂತರ ತ್ರಿವೇಣೀಸ್ನಾನಮಾಡಬೇಕು. ಎಲ್ಲಿ ಗಂಗೆಯ ಶುಭ್ರಜಲವು ಯಮುನೆಯ ನೀಲಜಲದೊಂದಿಗೆ ಸೇರು ವುದೋ–ಅದೇ ಸಂಗಮಸ್ಥಾನ ; ಅಲ್ಲಿ ಸರಸ್ವತಿಯು ಗುಪ್ತಗಾಮಿನಿಯು. ಕೋಟೆಯ ದಕ್ಷಿಣದಲ್ಲಿರುವ ಯಮುನೆಯ ದಡದಲ್ಲಿ ಒಂದು ಕುಂಡವಿದೆ. ಅದನ್ನೇ ಸರಸ್ವತೀ ನದಿಯ ಸ್ಥಾನವೆಂದು ಪಂಡಾಗಳು ಹೇಳಿ ಪೂಜೆಮಾಡಿಸು ತ್ತಾರೆ. ಸಂಗಮಸ್ಥಾನವು ಬದಲಿಸುತ್ತಲೇ ಇರುತ್ತದೆ. ವರ್ಷರ್ತುವಿನಲ್ಲಿ ಗಂಗೆಯ ನೀರು ಬಿಳಿಯ ಮಣ್ಣಿನ ಬಣ್ಣವಿರುತ್ತದೆ. ಯಮುನೆಯ ನೀರು ಕೆಂಪಾಗಿರುತ್ತದೆ. ಶೀತಕಾಲದಲ್ಲಿ ಗಂಗೆಯ ನೀರು ಅತ್ಯಂತಶೀತಲವಾಗಿಯೂ ಯಮುನೆಯ ಜಲವು ಸ್ವಲ್ಪ ಉಷ್ಣವಾಗಿಯೂ ಇರುತ್ತದೆ. ಈ ಅಂತರವು ಸಂಗಮದಲ್ಲಿ ಸ್ಪಷ್ಟವಾಗಿ ಕಾಣಿಸುತ್ತದೆ. ಯಾತ್ರಿಕರು ದೋಣಿಯಲ್ಲಿ ಕುಳಿತು

ಸಂಗಮಸ್ನಾನವನ್ನು ಮಾಡುತ್ತಾರೆ. ಆದರೆ ಸ್ವಲ್ಪದೂರ ನದಿಯಲ್ಲಿ ನಡೆದು ಹೋಗಿಯೂ ಸ್ನಾನಮಾಡಬಹುದು. ಬಹಳ ಜನ ಹೀಗೆಯೂ ಮಾಡುತ್ತಾರೆ. ತ್ರಿವೇಣಿಯ ದಡದಲ್ಲಿ ಒಳ್ಳೆಯ ಸ್ನಾನಘಟ್ಟವೇನೂ ಇಲ್ಲ. ಅಲ್ಲಲ್ಲಿ ಪಂಡಾಗಳು (ಕ್ಷೇತ್ರದ ಪೂಜಾರಿಗಳು) ವೇದಿಕೆಗಳನ್ನು ನಿರ್ಮಿಸಿಕೊಂಡಿರುತ್ತಾರೆ. ಅವು ದಡದ ಮೇಲೆಯೂ, ನದಿಯ ಮಧ್ಯದಲ್ಲೂ ಇರುತ್ತವೆ. ಅವುಗಳ ಮೇಲೆ ವಸ್ತ್ರಗಳನ್ನಿಟ್ಟು ಯಾತ್ರಿಕರು ಸ್ನಾನಮಾಡಬಹುದು. ಪೂಜಾರಿಗಳ ವಿವಿಧಚಿಹ್ನೆಗಳ ಧ್ವಜಗಳು ವೇದಿಗಳ ಮೇಲೆ ಹಾರಾಡುತ್ತಿರುತ್ತವೆ. ಯಾತ್ರಿಕರು ತಮ್ಮ-ತಮ್ಮ ಸಂಪ್ರದಾಯ-ಮತಗಳ ಸ್ಥಾನಗಳನ್ನು ಸುಲಭವಾಗಿ ತಿಳಿದುಕೊಳ್ಳಬಹುದು.

**ತ್ರಿವೇಣಿಯ ಮುಖ್ಯ ದೇವಸ್ಥಾನಗಳು :**

**ತ್ರಿವೇಣೀಂ ಮಾಧವಂ ಸೋಮಂ ಭರದ್ವಾಜಂ ಚ ವಾಸುಕಿಮ್ ।**
**ವನ್ದೇಽಕ್ಷಯವಟಂ ಶೇಷಂ ಪ್ರಯಾಗಂ ತೀರ್ಥನಾಯಕಮ್ ॥**

ತ್ರಿವೇಣಿ, ಬಿಂದುಮಾಧವ, ಸೋಮೇಶ್ವರ, ಭರದ್ವಾಜ, ವಾಸುಕಿ ನಾಗ, ಅಕ್ಷಯವಟ ಮತ್ತು ಶೇಷ (ಬಲರಾಮ)–ಇವುಗಳು ಪ್ರಯಾಗದ ಮುಖ್ಯದೇವಸ್ಥಾನಗಳಾಗಿವೆ. ಅವುಗಳಲ್ಲದೇ ಇನ್ನೂ ಅನೇಕ ದೇವಸ್ಥಾನಗಳು ಪ್ರಯಾಗದಲ್ಲಿವೆ.

**ಮಾಧವ :-** ಪ್ರಯಾಗಶತಾಧ್ಯಾಯೀಗ್ರಂಥದ ಪ್ರಕಾರ ಅಕ್ಷಯವಟದ ದಕ್ಷಿಣದಲ್ಲಿ ಅಂದರೆ ಬಲಭಾಗದಲ್ಲಿ ‘‘ವೇಣೀಮಾಧವ’ ವೈಷ್ಣವಪೀಠವಿರ ಬೇಕು. ಆದರೆ ಈಗ ತ್ರಿವೇಣೀಸಂಗಮದಲ್ಲಿಯೇ ಜಲರೂಪದಲ್ಲಿ ವೇಣೀ ಮಾಧವನ ಸಾನ್ನಿಧ್ಯವಿದೆ. ಪ್ರಯಾಗದಲ್ಲಿ ಒಟ್ಟು 12 ಮಾಧವರ ಸನ್ನಿಧಿ ಗಳಿವೆ. 1. ಶಂಖಮಾಧವ (ಝೂಸಿಯಕಡೆ, ಛತನಗಾದ ಹತ್ತಿರ ಮುಂಶೀಬಾಗ್‌ನಲ್ಲಿ) 2. ಚಕ್ರಮಾಧವ (ಅರೈಲ್‌ನಲ್ಲಿ) 3. ಗದಾಮಾಧವ (ನೈನಿಯ ಒಂದು ಗುಡಿಯಲ್ಲಿ ಈ ಮೂರ್ತಿಯಿದೆ.) 4. ಪದ್ಮಮಾಧವ (ವೀಕರ್ ದೇವರಿಯಾದಲ್ಲಿ ಕೇವಲ ಸ್ಥಾನನಿರ್ದೇಶಕ ಶಿಲೆಯಿದೆ.) 5. ಅನಂತಮಾಧವ (ಅಕ್ಷಯವಟದ ಹತ್ತಿರ) 6. ಬಿನ್ದುಮಾಧವ (ಇಲ್ಲಿಯೂ ಮೂರ್ತಿಯಿಲ್ಲ. ದ್ರೌಪದೀಘಾಟ್ ಹತ್ತಿರ ಸ್ಥಾನವಿದೆ.) 7. ಮನೋಹರಮಾಧವ (ಧ್ರುವೇಶ್ವರನಾಥ ಮಂದಿರದಲ್ಲಿ ಮೂರ್ತಿಯಿದೆ.)

8. ಅಸಿಮಾಧವ (ನಾಗವಾಸುಕಿಸ್ಥಾನದ ಹತ್ತಿರವಿರಬೇಕು.) 9. ಸಂಕಷ್ಟ ಹರಮಾಧವ (ಝೂಸಿಯಲ್ಲಿ ಹಂಸತೀರ್ಥದ ಹಿಂದೆ ಸಂಧ್ಯಾವಟದ ಕೆಳಗೆ) 10. ಆದಿವೇಣೀಮಾಧವ ತ್ರಿವೇಣಿಯಲ್ಲಿ ಜಲರೂಪ 11. ಆದಿಮಾಧವ (ಅರೈಲ್‌ನಲ್ಲಿ) 12. ಶ್ರೀವೇಣೀಮಾಧವ (ದಾರಾಗಂಜ್.)

ಅಕ್ಷಯವಟ : ಪ್ರಯಾಗದ ತೀರ್ಥಗಳಲ್ಲಿ ಅಕ್ಷಯವಟವು ಬಹು ಮುಖ್ಯವಾದುದು. ತ್ರಿವೇಣೀಸಂಗಮದ ಸ್ವಲ್ಪ ದೂರದಲ್ಲಿಯೇ ಕೋಟೆಯ ಒಳಗಡೆ ಅಕ್ಷಯವಟವಿದೆ. ಹಿಂದೆ ಕೋಟೆಯ ಒಳಗಡೆ ಪಾತಾಲಪುರೀ ಗುಹೆಯಲ್ಲಿ ಒಂದು ಒಣಗಿದ ಕೊಂಬೆಯನ್ನು ನೆಟ್ಟು ಅದಕ್ಕೆ ವಸ್ತ್ರವನ್ನು ಸುತ್ತಿ ಅದನ್ನೇ 'ಅಕ್ಷಯವಟ' ಎಂದು ದರ್ಶನಮಾಡಿಸುತ್ತಿದ್ದರು. ಆದರೆ ಈಗ ಕೋಟೆಯ ಬಳಿ ಯಮುನೆಯ ದಂಡೆಯ ಹತ್ತಿರ ಅಕ್ಷಯವಟದ ಸ್ಥಾನವು ಗುರುತಿಸಲ್ಪಟ್ಟಿದೆ. ಅಲ್ಲಿ ವಾರಕ್ಕೆ ಎರಡುದಿನ ಎಲ್ಲರೂ ಅಕ್ಷಯವಟವನ್ನು ದರ್ಶನಮಾಡಬಹುದು. ಯಮುನೆಯ ದಡದ ಕಡೆಯ ಹೆಬ್ಬಾಗಿಲಿನಿಂದ ಅಲ್ಲಿಯ ತನಕ ಹೋಗಬಹುದು. ಕೋಟೆಯ ಒಳಭಾಗದಲ್ಲಿ, ಎಲ್ಲಿ ಮೊದಲು ಅಕ್ಷಯವಟದ ಸ್ಥಾನವಿದೆಯೆಂದು ಹೇಳುತ್ತಿದ್ದರೋ–ಪಾತಾಲ ಪುರೀಮಂದಿರವೆನ್ನುವ ಆ ಸ್ಥಳಕ್ಕೂ ಯಾತ್ರಿಕರು ಹೋಗುತ್ತಾರೆ. ಭೂಮಿಯ ಒಳಗಡೆಯಲ್ಲಿ ಗುಡಿಯಿರುವುದರಿಂದ ಅದಕ್ಕೆ ಪಾತಾಳಪುರೀಮಂದಿರ ಎಂದು ಹೆಸರಾಗಿದೆ. ಆ ಗುಡಿಯಲ್ಲಿರುವ ದೇವತಾಮೂರ್ತಿಗಳ ಹೆಸರುಗಳು ಈ ರೀತಿ ಇವೆ :

ಧರ್ಮರಾಜ, ಅನ್ನಪೂರ್ಣೆ, ಸಂಕಟಮೋಚನ, ಮಹಾಲಕ್ಷ್ಮೀ, ಗೌರಿ-ಗಣೇಶ, ಆದಿಗಣೇಶ, ಬಾಲಮುಕುಂದ, ಬ್ರಹ್ಮಚಾರೀ, ಪ್ರಯಾಗ ರಾಜೇಶ್ವರ ಶಿವ, ಶೂಲಟಂಕೇಶ್ವರ, ಮಹಾದೇವ, ಗೌರೀಶಂಕರ, ಸತ್ಯನಾರಾಯಣ, ಯಮದಂಡಮಹಾದೇವ, ದಣ್ಡಪಾಣಿಭೈರವ, ಲಲಿತಾ ದೇವಿ, ಗಂಗಾದೇವೀ, ಸ್ವಾಮಿಕಾರ್ತಿಕ, ಶ್ರೀನೃಸಿಂಹ, ಸರಸ್ವತೀ, ಶ್ರೀವಿಷ್ಣು, ಯಮುನಾದೇವೀ, ಶ್ರೀದತ್ತಾತ್ರೇಯ, ಗೋರಖನಾಥ, ಜಾಂಬವಂತ, ಸೂರ್ಯ, ಅನಸೂಯಾ, ವೇದವ್ಯಾಸ, ವರುಣ, ಪವನಮಾರ್ಕಂಡೇಯ, ಸಿದ್ಧನಾಥ, ಶ್ರೀ ಬಿಂದುಮಾಧವ, ಕುಬೇರ, ಅಗ್ನಿ, ದೂಧನಾಥ, ಪಾರ್ವತೀ, ಸೋಮ, ದುರ್ವಾಸ, ಶ್ರೀರಾಮ, ಲಕ್ಷ್ಮಣ, ಶೇಷ, ಯಮರಾಜ,

ಶ್ರೀಅನಂತಮಾಧವ, ಸಾಕ್ಷಿವಿನಾಯಕ, ಶ್ರೀ ಆಂಜನೇಯ. ಕೋಟೆಯ ಒಳಗೆ ಕುಲಸ್ತಂಭವಿದೆ. ಅಶೋಕನು ಆ ಸ್ತಂಭದ ಮೇಲೆಯೇ ತನ್ನ ಶಿಲಾಲೇಖನವನ್ನು ಕೆತ್ತಿಸಿರುವುದರಿಂದ ಅದಕ್ಕೆ ಅಶೋಕಸ್ತಂಭವೆಂದೇ ಹೆಸರಾಗಿದೆ. ಅದನ್ನು ನೋಡಲು ಪ್ರತ್ಯೇಕವಾದ ಅನುಮತಿಯನ್ನು ಪಡೆಯಬೇಕು.

**ಬಡೇಹನುಮಾನ್‌ಜೀ :-** ಕೋಟೆಯ ಹತ್ತಿರವೇ ಆಂಜನೇಯನ ಗುಡಿಯಿದೆ. ಅದರಲ್ಲಿ ಆಂಜನೇಯನ ಮಲಗಿರುವ ದೊಡ್ಡ ಶಿಲಾವಿಗ್ರಹ ವಿದೆ. ಮಳೆಗಾಲದಲ್ಲಿ ಆ ಸ್ಥಳವು ಜಲಮಯವಾಗಿರುತ್ತದೆ.

**ಮನಕಾಮೇಶ್ವರ :-** ಕೋಟೆಯಿಂದ ಸ್ವಲ್ಪದೂರ ಪಶ್ಚಿಮಕ್ಕೆ ಈ ಶಿವಮಂದಿರವಿದೆ. ಕೋಟೆಯಿಂದ ಯಾತ್ರಿಕರು ದೋಣಿಯಲ್ಲಿ ಹೋಗಬೇಕಾಗುತ್ತದೆ. ಮಧ್ಯದಲ್ಲಿ ಸರಸ್ವತೀಕೂಪವು ಸಿಗುತ್ತದೆ. (ಸಶೇಷ)



## ಐದನೆಯ ಪುನರ್ಮುದ್ರಣದ ಪ್ರಸ್ತಾವನೆ

ಪುನರ್ಮುದ್ರಣ ಮಾಡಬೇಕಾಗಿರುವ ಮಹಾಭಾರತದ 24 ಸಂಪುಟಗಳಲ್ಲಿ ಪರಮಾತ್ಮನ ದಯೆಯಿಂದ ಪ್ರಪ್ರಥಮವಾಗಿ ಐದನೆಯ ಸಂಪುಟದ ಪುನರ್ಮುದ್ರಣವನ್ನು ಮುಗಿಸುತ್ತಿದ್ದೇವೆ. ತಿಂಗಳಿಗೊಂದು ಸಂಪುಟವನ್ನು ಹೊರತರಬೇಕೆನ್ನುವ ಸಂಕಲ್ಪವಿದೆ. ಪರಮಾತ್ಮನ ಅನುಗ್ರಹದಿಂದ ಸತ್ಸಂಕಲ್ಪದ ಸಾಧನೆಯಾಗಬೇಕಾಗಿದೆ. ಈ ಯೋಜನೆಯನ್ನು ಪೂರ್ಣಗೊಳಿಸಬೇಕಾದರೆ ಕಡೆಯ ಪಕ್ಷ 2000 ಗ್ರಾಹಕರ ಅವಶ್ಯಕತೆಯಿದೆ. ಗ್ರಾಹಕರಾದವರು ತಮ್ಮ ಕರ್ತವ್ಯವೆಂದು ಭಾವಿಸಿ ಮತ್ತೊಬ್ಬ ಗ್ರಾಹಕರನ್ನು ಮಾಡಿಕೊಡಬೇಕು. ಆಢ್ಯರಾದವರು ಐಹಿಕ-ಆಮುಷ್ಮಿಕ ಫಲದಾಯಕವಾದ ಈ ಮಹಾಗ್ರಂಥದ ಪ್ರಕಟಣೆಗೆ ಧನಸಹಾಯ ಮಾಡಬಹುದು.

ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು. ಸಮಸ್ತ ಸನ್ಮಂಗಲಾನಿ ಭವನ್ತು.

ಶನಿವಾರ 17-4-1999 **–ಪ್ರಕಾಶಕರು**

